ಟೆಲ್ಕೋದವರ ನವನವೀನ ನಕ್ಷತ್ರವನ್ನು ನೋಡಿರಿ...

# '1210' ಶ್ರೇಣಿ

## ಟಿಎಮ್‌ಬಿ 7- ಟನ್ನರ್

## 40% ಹೆಚ್ಚು ಹೊರೆ ಸಾಗಿಸುವ ಸಾಮರ್ಥ್ಯ

ಈ ಹೊಸ ವಾಹನಗಳ ಮೂಲ ಮಾದರಿಗಳು ಸಂಪೂರ್ಣವಾಗಿ ಪರೀಕ್ಷಿಸಲ್ಪಟ್ಟವೆ ಮತ್ತು ಪ್ರತಿಯೊಂದು ವಿಧದಲ್ಲಿಯೂ ಪ್ರಮಾಣಿತವಾಗಿವೆ.

**ಹೊಸ ಟಿಎಮ್‌ಬಿಯ ವೈಶಿಷ್ಟ್ಯಗಳು:**

**ಹೆಚ್ಚಿನ 'ಹೆವಿ ಡ್ಯೂಟಿ'ಯ ಎದುರಿನ ಮತ್ತು ಹಿಂದಿನ ಆಗ್ಸ್‌ಲ್ ಅಸೆಂಬ್ಲಿಗಳು** ಅಧಿಕ ಹೊರೆ ಸಾಗಿಸಲು ಸಮರ್ಥವಾಗುವಂತೆ ರಚಿಸಲ್ಪಟ್ಟವೆ.

**ಹೊಸ ಸ್ಟಿಯರಿಂಗ್ ಅಸೆಂಬ್ಲಿ:** ಮಾರ್ಗಗಳ ಧಕ್ಕೆಗಳಿಂದ (ಶಾಕ್‌ಗಳಿಂದ) ರಕ್ಷಿಸಿ, 'ಡ್ರೈವಿಂಗ್' ಸುಖಕರವಾಗುವಂತೆ ಮಾಡಲು ಯುನಿವರ್ಸಲ್ ಜ್ಯಾಂಟ್‌ನೊಡನೆ ಜೋಡಿಸಲಾಗಿದೆ.

**ಹೈಪಾಯ್ಡ್ ಗಿಯರ್‌ಗಳು:** ಅಧಿಕ 'ಟೂಥ್ ಕಾಂಟೇಕ್ಟ್'ಗಾಗಿ. ಅದರಿಂದ ದೀರ್ಘ ಕಾಲ ಬಾಳಿಕೆ ಬರುತ್ತದೆ. ಮತ್ತು ಸಂಚಾಲನೆಯಲ್ಲಿ ನೆಮ್ಮದಿಯುಂಟಾಗುತ್ತದೆ.

**ಇತರ ತಾಂತ್ರಿಕ ವೈಶಿಷ್ಟ್ಯಗಳು:**

**ಹೊಸ ಛಾಸಿಸ್ ಫ್ರೇಮ್** ತಟ್ಟು ಕರ್ಷಕ ಶಕ್ತಿಯುಳ್ಳ ವಿಶಿಷ್ಟ ಉಕ್ಕಿನದ್ದು.

**ಎದುರಿನ ಮತ್ತು ಹಿಂದಿನ ಹೊಸ ಸ್ಪ್ರಿಂಗ್‌ಗಳು:** ಹೆಚ್ಚು ಅಗಲ, ಹೆಚ್ಚು ದಪ್ಪ ಮತ್ತು ಹೆಚ್ಚು ಭಾರವಾಗಿರುವಂತಹದು.

**ಓಎಮ್ 312 ಡೀಸೆಲ್ ಇಂಜಿನ್:** ಸಾವಿರಾರು ಸಂತೃಪ್ತ ಗ್ರಾಹಕರಿಂದ ಲಕ್ಷೋಪಲಕ್ಷ ಮೈಲುಗಳಲ್ಲಿ ಉಪಯೋಗಿಸಲ್ಪಟ್ಟು, ಪರೀಕ್ಷಿಸಲ್ಪಟ್ಟು, ಪ್ರಮಾಣಿತವಾದುದು.



**ಟಾಟಾ**
**ಮರ್ಸಿಡಿಸ್-ಬೆಂಜ್**






ನಮ್ಮೆಲ್ಲ ಗ್ರಾಹಕರಿಗೆ
ದೀಪಾವಳಿಯ
ಶುಭಾಶಯಗಳು

## ಎಂ. ಜಿ. ಆಟೋಮೋಬೈಲ್ಸ

ಆಟೋಮೋಬೈಲ್ ಎಂಜಿನಿಯರರು ಹಾಗೂ ಕೋಚ ಬಿಲ್ಡರರು
ಪಟೇಲನಗರ, ಬಳ್ಳಾರಿ
ಬಳ್ಳಾರಿ ಹಾಗೂ ರಾಯಚೂರು ಜಿಲ್ಲೆಗಳಿಗೆ ಡೀಲರರು

ಸರ್ವರಿಗೂ ದೀಪಾವಳಿಯ
ನಮ್ಮ ಹೃತ್ಪೂರ್ವಕ ಶುಭಾಶಯಗಳು !



# ಸ್ವದೇಶಿ ಟೈಪ್ ಫೌಂಡ್ರಿ

ಇಂಡಸ್ಟ್ರಿಯಲ್ ಎಸ್ಟೇಟ್. ಬೆಂಗಳೂರು-10

ಪ್ರಧಾನ ಕಛೇರಿ : ಚಿಂತಾದ್ರಿಪೇಟೆ. ಮದರಾಸು

ಶಾಖೆಗಳು : ಹೈದರಾಬಾದ—ಎರ್ನಾಕುಲಂ

•—•—•

**ನಮ್ಮಲ್ಲಿ**

ಮಣಿ ನೂತನ ಕನ್ನಡ, ಮೋನೋ ಕನ್ನಡ ಮತ್ತು
ಹಳೇ ಕನ್ನಡ ಇಂಗ್ಲೀಷ್ ಬುಕ್ ಫೇಸ್,
ತಮಿಳು ಟೈಪ್‌ಗಳನ್ನು ಥಾಮ್ಸನ್
ಯಂತ್ರಗಳ ಸಹಾಯದಿಂದ
ಯೋಗ್ಯ ಬೆಲೆಯಲ್ಲಿ ಕ್ಯಾಸ್ಟ್ ಮಾಡಿಕೊಡುತ್ತೇವೆ.

ವಿವರಗಳಿಗೆ ಇಂದೇ ಬರೆಯಿರಿ :

## SWADESHI TYPE FOUNDRY

Industrial Estate BANGALORE-10

ನಮ್ಮ ಗ್ರಾಹಕರಿಗೆ ದೀಪಾವಳಿಯ ಅಭಿನಂದನೆಗಳು



# H. P. C. ಚಿತ್ರ ಮಂದಿರ

(ಮಲೆನಾಡಿನ ಭವ್ಯ ಚಿತ್ರಮಂದಿರ)

ಬಾಲರಾಜ ಅರಸ ರಸ್ತೆ, ಶಿವಮೊಗ್ಗ



- ಎಲ್ಲಾ ತರಗತಿಯಲ್ಲಿಯೂ ಸುಖಾಸನಗಳು
- R. C. A. ಸೌಂಡ ಸಿಸ್ಟಮ್ ಇಂಪಾದ ಧ್ವನಿ
- ನಿರ್ಮಲ ವಾತಾವರಣ

ಇವು ನಿಮಗೆ ಉತ್ತಮ ಮನರಂಜನೆಯನ್ನೊದಗಿಸುತ್ತವೆ

ಮಾಲೀಕರು :

## H. P. C. ಮೋಟಾರ ಸರ್ವಿಸಸ್ ಶಿವಮೊಗ್ಗ

ಶಿವಮೊಗ್ಗ-ಭದ್ರಾವತಿಗಳಿಗೆ ನೇರ ಸಂಪರ್ಕ ಕಲ್ಪಿಸುವ ಆಧುನಿಕ ಸಾರಿಗೆ ಸಂಸ್ಥೆ ಇದೊಂದೇ. ಶಿವಮೊಗ್ಗದಿಂದ ಬಿರೂರು, ಚಿಕ್ಕಮಗಳೂರು, ದಾವಣಗೆರೆ, ಕತ್ತಲಗೆರೆ, ಕುಂದೂರು ಮೊದಲಾದ ಪ್ರಮುಖ ಕೇಂದ್ರಗಳಿಗೆ ನೇರ ಸಂಪರ್ಕವಿರುತ್ತೆ. ಮುಂಚಿತವಾಗಿ ತಿಳಿಸಿದಲ್ಲಿ " ಸ್ಪೆಷಲ್ ಬಸ್ " ವ್ಯವಸ್ಥೆ ಮಾಡಲಾಗುವುದು






ದೀಪಾವಳಿಯ
ಶುಭಾಶಯಗಳು

ಸುಪ್ರಸಿದ್ಧವಾದ

# ಸೊವರಿನ್
## ಹಂಚುಗಳನ್ನೇ

ಉಪಯೋಗಿಸಿರಿ!



ಸೊವರಿನ್ ಟಾಯಿಲ್ ವರ್ಕ್ಸ್, ಮಂಗಳೂರು.

# ಹುತ್ರೇಶ ಮೋಟಾರ್ ಸರ್ವೀಸ್

○ ○ ○ ○



**ಬೊಂಬಾಯಿ, ಪೂನಾ, ಹುಬ್ಬಳ್ಳಿ** ಕಡೆಯಿಂದ ದಕ್ಷಿಣ ಕನಡ್ನ ಜಿಲ್ಲೆಯ **ಕುಂದಾಪುರ, ಕೋಟೇಶ್ವರ, ಬ್ರಹ್ಮಾವರ, ಉಡುಪಿ, ಕಾಪು, ಮಂಚಕಲ್, ಮೂಲ್ಕಿ, ಮಂಗಳೂರು** ಮೊದಲಾದ ಊರುಗಳಿಗೆ **ಹರಿಹರ** ರೈಲ್ವೆ ಸ್ಟೇಷನ್ನಿನಿಂದ ಸೀದಾ ಹೋಗುವ ವ್ಯವಸ್ಥೆ ಇರುತ್ತದೆ ಮತ್ತು **ಮಂಗಳೂರು, ಕುಂದಾಪುರ, ಉಡ್ಪಿ** ಕಡೆಯಿಂದ ಬರುವ ಪ್ರಯಾಣಿಕರಿಗೆ **ಹರಿಹರದಲ್ಲಿ "ರೈಲು ಕನೆಕ್ಷನ್"** ಕೊಡುವ ವ್ಯವಸ್ಥೆ ಇರುತ್ತದೆ. ಪ್ರಯಾಣಿಕರು ಇದರ ಲಾಭ ಪಡೆದು ನಮ್ಮ ಬಸ್ಸಿನಲ್ಲೇ ನೇರ ಪ್ರಯಾಣ ಕೈಕೊಳ್ಳುವದರ ಮೂಲಕ ಸಹಕರಿಸಬೇಕಾಗಿ ವಿನಂತಿ.

○ ○ ○ ○

ಆಫೀಸು:
**ಶಿವಮೊಗ್ಗೆ**

ಮಾಲೀಕರು:
**ಹುತ್ರೇಶ ಮೋಟಾರ್ ಸರ್ವೀಸ್**



**ಭವ್ಯ ಭಾರತದ ಭಾಗ್ಯ
ಸಂಕೇತವೇ ದೀಪಾವಳಿ**

# ನೆಲ್ಲಿ ಲಾಡ್ಜ
ಬಿ. ಹೆಚ್. ರೋಡು, ಶಿವಮೊಗ್ಗ

# ಕೈಲಾಸ ಭವನ
ದುರ್ಗಿ ಗುಡಿ - ಶಿವಮೊಗ್ಗ

ಅಚ್ಚುಕಟ್ಟಾದ ವಸತಿಗೃಹ
ವಿನಯಶೀಲ ನೌಕರವರ್ಗ
ಉತ್ತಮದರ್ಜೆ ಫಲಹಾರಮಂದಿರ
ಇವೆಲ್ಲವೂ ನಿಮಗೆ
ಆನಂದವೀಯುವವು




# ತಲೆನೋವಿನಿಂದ

## ನಿಶ್ಚಿತ ಹಾಗೂ

## ನಿಶ್ಚಿಂತ ಉಪಶಮನ

ಅನಾಸಿನ್ ಅಷ್ಟು ಪರಿಣಾಮಕಾರಿಯಾಗಿರಲು ಕಾರಣವೇನೆಂದರೆ ಅದು ಬಲು ಬೇಗ, ಸಂಪೂರ್ಣ ಉಪಶಮನವನ್ನು ನೀಡುವ—ಡಾಕ್ಟರರ 'ಪ್ರಿಸ್ಕ್ರಿಪ್‌ಶನ್'ನಂತಹ—ಔಷಧಗಳ ಸಮ್ಮಿಶ್ರಣವಾಗಿದೆ.


ನೋವನ್ನು ಶೀಘ್ರವಾಗಿ ಉಪಶಮನಗೊಳಿಸಲು ಅನಾಸಿನ್‌ನಲ್ಲಿ ಘಟಕಗಳ ಒಂದು ಅಪೂರ್ವ ಮಿಶ್ರಣವಿದೆ.


ಅನಾಸಿನ್ ತಲೆನೋವಿಗೆ ಸಾಮಾನ್ಯ ಕಾರಣವಾದ ನರಗಳ ಬಿಗಿತವನ್ನು ಉಪಶಮನಗೊಳಿಸುತ್ತದೆ.


ಅನಾಸಿನ್ ಶೀತದಿಂದ ಮತ್ತು ಇನ್‌ಫ್ಲುಯೆಂಜಾದಿಂದ ಬರುವ ಜ್ವರವನ್ನು ಕಡಿಮೆಗೊಳಿಸಲು ನೆರವಾಗುತ್ತದೆ.


ಅನಾಸಿನ್ ನೋವಿನೊಡನೆ ಹೆಚ್ಚಾಗಿ ಬರುವ ನಿರುತ್ಸಾಹವನ್ನೂ ಆಯಾಸವನ್ನೂ ಹೋಗಲಾಡಿಸುತ್ತದೆ.






# ಅನಾಸಿನ್

## ಬಹಳ ಒಳ್ಳೆಯದು ಏಕೆಂದರೆ ಅದು 4 ವಿಧಗಳಲ್ಲಿ ಪರಿಣಾಮವನ್ನುಂಟುಮಾಡುತ್ತದೆ

*Registered User:* GEOFFREY MANNERS & CO. LTD.

|| ಶ್ರೀ ಗುರು ಪ್ರಸನ್ನ ||

ಫೋನ 2475 ತಂತಿ : Rava Mills

ದೀಪಾವಳಿಯ ಶುಭಾಶಯುಗಳು



ಚಕ್ರ  ಛಾಪ



● ತಾಜಾ ಗೋದಿಹಿಟ್ಟು ● ತಾಜಾ ಹೋಳಿಗೆ ಹಿಟ್ಟು
● ತಾಜಾ ಮೈದಾ ● ತಾಜಾ ರವಾ (ಸೂಜಿ)

ಇವುಗಳನ್ನೇ ಉಪಯೋಗಿಸಿರಿ.

ತಯಾರಕರು :

M/s A. R. ತಾವರಗೇರಿ & R. K. ಬೆಲ್ಲದ

ರೋಲರ್ಸ ಫ್ಲೋರಮಿಲ್ಸ ( ಬೊಮ್ಮಾಪೂರ ), ಹುಬ್ಬಳ್ಳಿ.

---

 ದೀಪಾವಳಿಯ ಶುಭಾಶಗಳು. 

ಶಿವಮೊಗ್ಗಯಿಂದ ಸುಪ್ರಸಿದ್ಧ ಯಾತ್ರಾ ಸ್ಥಳ ಹಾಗೂ ಪುಣ್ಯ ಕ್ಷೇತ್ರಗಳಾದ ಶೃಂಗೇರಿ, ಕೂಡಲಿ, ಕಳಸ ಮೊದಲಾದವುಗಳಿಗೂ, ಪ್ರಸಿದ್ಧ ವ್ಯಾಪಾರಿ ಕೇಂದ್ರಗಳಾದ ಹೊನ್ನಾಳಿ ದಾವಣಗೇರಿ, ಚಿತ್ರದುರ್ಗ, ಚನ್ನಗಿರಿ ಕರಿಕೆರೆ ( Via ಶಿವನಿ ರೇಲ್ವೆ ಸ್ಟೇಶನ್ ) ಮೊದಲಾದವುಗಳಿಗೆ ನೇರ ಸಂಪರ್ಕ ಕಲ್ಪಿಸುವ ದಕ್ಷ ಸಾರಿಗೆ ಸಂಸ್ಥೆ.

ಮುಂಚಿತವಾ ತಿಳಿಸಿದಲ್ಲಿ "ಸ್ಪೇಶಲ್ ಬಸ್"
ವ್ಯವಸ್ಥೆ ಕಲ್ಪಿಸಲಾಗುತ್ತ.

ಇಂದೇ ಸಂಪರ್ಕ ಬೆಳಸಿ :-

ಉದಯ ಮೋಟಾರ್ ಟ್ರಾನ್ಸ್‌ಪೋರ್ಟ್

ಬಿ.ಎಚ್.ರಸ್ತೆ, ಶಿವಮೊಗ್ಗಾ.

---

 ದೀಪಾವಳಿಯ ಶುಭಾಷಯುಗಳು

ಶಿವಮೊಗ್ಗ ನಗರದ ಕೇಂದ್ರಸ್ಥಳದಲ್ಲಿ ನವೀನ ಮಾದರಿಯ
ಉತ್ಕೃಷ್ಟ ಹಾಗೂ ಆರೋಗ್ಯದಾಯಕ
ತಿಂಡಿತಿನಸುಗಳಿಗೆ

ಲಕ್ಷ್ಮೀ ಭವನ

ಬಿ. ಎಚ್. ರಸ್ತೆ-ಕರ್ನಾಟಕ ಸಂಘದ ಎದುರು ಭಾಗ
ಶಿವಮೊಗ್ಗ.

---



ದೀಪಾವಳಿಯ
ಶುಭಾಶಯಗಳು !



ಎಂ. ಬಿ. ಟಿ.

( ಅತ್ಯಂತ ಹಿರಿಯ ಸರಕು ಸಾಗಾಣಿಕೆದಾರರು )

ಪ್ರಧಾನ ಕಚೇರಿ :: ಮದ್ರಾಸ್-1

ಇವರು ತಮ್ಮದೇ ಆದ ಸುಮಾರು ಇನ್ನೂರಕ್ಕಿಂತಲೂ ಮೇಲ್ಪಟ್ಟ ಶಾಖೆಗಳ ಮೂಲಕ ದೇಶದ ಎಲ್ಲಾ ಭಾಗಗಳಿಂದ ಶ್ರೇಷ್ಠ, ಸುರಕ್ಷಿತ ಮತ್ತು ಮಿತವ್ಯಯದಿಂದ ಸರಕು ಸಾಗಾಣಿಕೆ ಮಾಡುತ್ತಿದ್ದಾರೆ. . . .

ಮೈಸೂರು ರಾಜ್ಯದಲ್ಲಿ ನಮ್ಮ ಶಾಖೆಗಳು :

ಮಂಗಳೂರು. ಮಡಿಕೇರಿ. ಕುಶಾಲನಗರ. ಮೈಸೂರು, ಹರಿಹರ, ದಾವಣಗೆರೆ. ಶಿವಮೊಗ್ಗ, ಭದ್ರಾವತಿ, ಹುಬ್ಬಳ್ಳಿ, ಬೆಳಗಾಂವಿ, ಬಾಗಲಕೋಟೆ. ರಾಯಚೂರು. ಬಳ್ಳಾರಿ, ಹೊಸಪೇಟೆ.

ಪ್ರಾದೇಶಿಕ ಕಛೇರಿ :

14. 2ನೇ ಮೆಯಿನ್ ರೋಡ್.
ಹೊಸ ತರಗುಪೇಟೆ,
ಬೆಂಗಳೂರು - 2

ನಿಮ್ಮ ಶಿಸ್ತೇ ಭಾರತದ ಬಲ

ದೀಪಾವಳಿಯ ಹಾರ್ದಿಕ ಶುಭಾಶಯುಗಳು

## ಸುಪ್ರಸಿದ್ಧ ಕಿರ್ಲೋಸ್ಕರ ಕಂಪನಿಯಲ್ಲಿ ತಯಾರಾದ ಕಿರ್ಲೋಸ್ಕರ್ ಇಲೆಕ್ಟ್ರಿಕ್ ಮೋಟಾರುಗಳು

## 5 H. P. ಇಂಡಿಯಾಮನ್ ಡಿಜೆಲ್ ಇಂಜನ್ನುಗಳು ಮುತ್ತು ಪಂಪು ಸೆಟ್ಟುಗಳು



ನಮ್ಮಲ್ಲಿ ತಯಾರಿ ಸಂಗ್ರಹದಲ್ಲಿ ಸಿಗುತ್ತವೆ. ಅಲ್ಲದೇ ಮೈಸೂರ ಸರಕಾರದಿಂದ ಮನ್ನಣೆ ಪಡೆದ 'ತಗಾಯಿ' ವ ಹಾಯರ್ ಪರ್ಚೇಜ ಮೇಲೆ ಸಿಗುತ್ತವೆ. ಧಾರವಾಡ, ಬೆಳಗಾವಿ, ಕಾರವಾರ, ವಿಜಾಪುರ ಮತ್ತು ರಾಯಚೂರು (ಇಂಜನ್ನು ಮಾತ್ರ) ಜಿಲ್ಲೆಗಳ ಅಧಿಕೃತ ಹಂಚಿಕೆಗಾರರು ಇದಲ್ಲದೆ "ಮೈಕೊ" ಕಂಪನಿಯ ಇಂಧನಗಳು, ಫಿಟರ್ ಫಿಲ್ಟಿಂಗ್ ಇಂಜನ್ ವ ಬಿಡಿಭಾಗಗಳು "ಜ್ಯೋತಿ" ವ್ಹರ್ಟಿಕಲ್ ಟರ್ಬಾಯಿನ್ ಪಂಪುಗಳು, "ಟಾಟಾ" ಒಕ್ಕಲುತನೋಪಕರಣಗಳು. ತಾಡಪತ್ರಿಗಳು, ಎಲ್ಲ ಬಗೆಯ "ಎಂಜಿನ್" ಇಲೆಕ್ಟ್ರಿಕ್ ವ ಮಶಿನರಿ ಬಿಡಿಭಾಗಗಳು, ಹಾರ್ಡವೇರ ಸಾಮಾನುಗಳು ತಯಾರಿ ಸಂಗ್ರಹದಲ್ಲಿ ಸಿಗುತ್ತವೆ.

ಹಾಗೂ ಕ್ರಿಮಿಕೀಟಕಗಳಿಂದ ನಿಮ್ಮ ಬೆಳೆಗಳ ಸಂರಕ್ಷಣೆಗಾಗಿ ಸುಪ್ರಸಿದ್ಧ ಶಾ ವಾಲೇಶ ಕಂ. ಲಿ. ಮದ್ರಾಸ ಇವರ ಸ್ಪ್ರೇಯರುಗಳು. ಮತ್ತು ಡಸ್ಟರುಗಳಿಗಾಗಿ ಧಾರವಾಡ ಜಿಲ್ಹೆಯ ಅಧಿಕೃತ ಹಂಚಿಕೆಗಾರರು.

— ಹೆಚ್ಚಿನ ಮಾಹಿತಿಗಾಗಿ ಬರೆಯಿರಿ ಇಲ್ಲವೆ ಭೆಟ್ಟಿಯಾಗಿರಿ —

# ವಿಜಯ ಇಂಜನಿಯರಿಂಗ ಆ್ಯಂಡ್ ಮಶಿನರಿ ಕಂಪನಿ

ಕೊಪ್ಪೀಕರ ರೋಡ ಹುಬ್ಬಳ್ಳಿ (ಫೋನ: 2194)

---



- ದಿಪಾವಳಿಯ ಶುಭಾಶಯುಗಳು -



## ಯಾವಾಗಲೂ 'ಪ್ರಭಾತ' ಬ್ರ್ಯಾಂಡಿನ

## ಮಾಲನ್ನೇ ಉಪಯೋಗಿಸಿರಿ

ಎಲ್ಲ ತರದ ಅವಲಕ್ಕಿ, ಗೋದಿ ರವಾ ಮತ್ತು ಹಿಟ್ಟು, ಗೋವಿನಜೋಳದ ರವಾ ಮತ್ತು ಹಿಟ್ಟು, ಇಡ್ಲಿ, ಮತ್ತು ಚಪಾತಿ ಸಲುವಾಗಿ ಸ್ಪೇಶಲ್ ಗೋವಿನಜೋಳದಲ್ಲಿ ತಯಾರ ಮಾಡಿದ ಹಿಟ್ಟು ಬೇಸನ್ ಮತ್ತು ಶುದ್ಧ ಕಡ್ಲೆ ಹಿಟ್ಟು

ಇವುಗಳಿಗಾಗಿ ಬರೆಯಿರಿ

- ತಯಾರಕರು -

# ಶಾ ಫೇಲಾಭಾಯಿ ದೇವಜಿ ಮತ್ತು ಕಂಪನಿ

ನ್ಯೂ ಕಾಟನ್ ಮಾರ್ಕೇಟ, ಹುಬ್ಬಳ್ಳಿ ಫೋನ-3267

ಫೋನ:- 76 ದಲಾಲ ಮಾರ್ಕೆಟ ಧಾರವಾಡ ನಂ 1

INDEX TO ADVERTISERS
( Contd. )

| | |
|---|---|
| Omsun Engineering Co. | xii |
| M. B. T. Service | xiii |
| Udaya Motor Serviee | xiii |
| Laxmi Bhavan | xiii |
| Suresh Eng. Co., | x |
| Kolhapur Auto Works | x |
| A. R. Tavargere & R. K. Bellad – Roller Flour Mills | xiii |
| R. L. Ekbote | x |
| Sangameshwar Publicity | xvi |
| Vinayak Rice & Oil Mills | xvi |
| Durga Lodge | xvi |
| Kale's Transport Service | xi |
| Sha Ghelabhai Devichand | xvi |
| Kraft Productions | xv |
| Vijaya Eng. & Mach. Co. | xvi |
| Geoffrey Manners & Co. | ix |
| Hotel Panchashila | xvi |

# ಮೈಸೂರು ಸರಕಾರದ ರೇಷ್ಮೆಗಳು



## ಮೈಸೂರು ಸರಕಾರದ ರೇಷ್ಮೆಗಳು

ಅತ್ಯಂತ ನಯ ಹಾಗೂ
ಆಕರ್ಷಣೀಯ ಮತ್ತು
ವಿವಿಧ ವರ್ಣರಂಜಿತ ಛಾಯೆಗಳಲ್ಲಿ

ಅವು ಎಲ್ಲೆಡೆಯಲ್ಲಿಯೂ ಫ್ಯಾಶನ್‌ದ ಆಯ್ಕೆಯಾಗಿವೆ




## ಮೈಸೂರು ಗವ್ಹರ್ನಮೆಂಟ ಸಿಲ್ಕ ವೀವ್ಹಿಂಗ ಫ್ಯಾಕ್ಟರಿ

ಮಾನಥೋಡೀ ರಸ್ತೆ—ಮೈಸೂರು-೪

**ಶೋ ರೂಮ್ :**
ಗುಪ್ತಾ ಮಾರ್ಕೆಟ,
ಕೆಂಪೇಗೌಡಾ ರೋಡ,
ಬೆಂಗಳೂರು-೯

## ಮೈಸೂರು ಸಿಲ್ಕ ಪ್ಯಾಲೇಸ

ಲೂಜ ಕಾರ್ನರ,
೯೨, ರಾಯಪೇಟ್ಟಾ ಹೈ ರೋಡ,
ಮೈಲಾಪೂರ. ಮದ್ರಾಸ-೪.



ನಮ್ಮ ಅಸಂಖ್ಯಾತ ಗ್ರಾಹಕರಿಗೆ
ದೀಪಾವಳಿಯ ಶುಭಾಶಯಗಳು

ದಿನದಿಂದ ದಿನಕ್ಕೆ ಹೆಚ್ಚುತ್ತಿರುವ ಬೇಡಿಕೆಯೇ
ನಮ್ಮ ಬೀಡಿಗಳ ಜನಪ್ರಿಯತೆಯ
ಹೆಗ್ಗುರುತು.




ಮಂಗಳೂರು
ನಿಯೋ ಸುಭಾಸ್
ಬೀಡಿಗಳು
ತಯಾರಿಕೆಯ
ವೈಶಿಷ್ಟ್ಯದಲ್ಲಿ
ಪ್ರಸಿದ್ಧಿ ಹೊಂದಿವೆ.

ತಯಾರಕರು:—

## ಮಂಗಳೂರು
## ನಿಯೋ ಸುಭಾಸ್ ಬೀಡಿ ವರ್ಕ್ಸ್

ಮಿಶನ್ ಹೈಸ್ಕೂಲ್ ರಸ್ತೆ, ಮಂಗಳೂರು. (ದ. ಕನ್ನಡ)

ಮಾಲಕರು

ಎನ್.ರಾಮ ಭಕ್ತಾ ಎಂಡ್ ಸನ್ಸ್
ಮಂಗಳೂರು. ದ. ಕ.

ಸ್ಥಾಪನೆ: 1932
Tel: "NEO SUBAS"

Phone:
Factory: 3993
Resi: 4963
Shop: 3413

MANGALORE NEO
SUBHAS BEEDI WORKS
Mission High School Road
MANGALORE

ಏಜಂಟರು ಇಲ್ಲದ ಕಡೆಯಲ್ಲಿ ಏಜಂಟರು
ಬೇಕಾಗಿದ್ದಾರೆ.



ನಮ್ಮೆಲ್ಲ ಗ್ರಾಹಕರಿಗೆ ಹಾಗೂ
ಹಿತೈಷಿಗಳಿಗೆ ದೀಪಾವಳಿಯ
ಶುಭಾಯಗಳು

# ವಸಂತ ಸ್ಟುಡಿಯೋ

ಕ್ಲಬ್ ರೋಡ...... ಹುಬ್ಬಳ್ಳಿ.
ಫೋಟೋ ಹಾಗೂ ಸಿನೆ ಆರ್ಟಿಸ್ಟ್ಸ

ಲಗ್ನ, ಉಪನಯನ, ಹುಟ್ಟು ಹಬ್ಬ ಮತ್ತು
ಯಾವುದೇ ಸಮಾರಂಭಗಳಲ್ಲಿ ಉತ್ಕೃಷ್ಟ
ಫೋಟೋಗಳಿಗಾಗಿ ಸಂದರ್ಶಿಸಿರಿ
ಮತ್ತು ಕಲರ ಮೂವ್ಹಿ
ಫಿಲ್ಮ ತೆಗೆದುಕೊಡು
ವದು ನಮ್ಮ
ವೈಶಿಷ್ಟ್ಯ.

ದೀಪಾವಳಿಯು ಸರ್ವರಿಗೂ
ಸುಖಪ್ರದವಾಗಲಿ



ಒಕ್ಕಲುತನದ ಅಭಿವೃದ್ಧಿಗಾಗಿ ಹಾಯಸ್ಪೀಡ
ಕೋಲ್ಡ ಸ್ಟಾರ್ಟ ಒಳ್ಳೇ ಆಕರ್ಷಕ
ಹಾಗು ಬಲಿಷ್ಠವಾದ



SARJA
M-2
ಸರ್ಜಾ
ಎಂ-೨

೫ ಎಚ್. ಪಿ. ಡಿಜೇಲ್ ಆಯಿಲ್ ಎಂಜಿನುಗಳು
ಹಾಗೂ ಪಂಪಿಂಗ ಸೆಟ್ಟುಗಳು
* ಮೈಸೂರು ರಾಜ್ಯದಾದ್ಯಂತ ಏಜಂಟರು ಬೇಕಾಗಿದ್ದಾರೆ *

ಉತ್ಪಾದಕರು:—

## ಅನಿಲ್ ಇಂಜಿನಿಯರಿಂಗ ವರ್ಕ್ಸ

ಶಿವಾಜಿ ಉದ್ಯಮನಗರ, ಕೊಲ್ಹಾಪುರ

## ದೀಪಾವಳಿಯ ಅಭಿನಂದನೆಗಳು

# ನಮ್ಮೆಲ್ಲ ಗ್ರಾಹಕರಿಗೂ ಹಿತಚಿಂತಕರಿಗೂ

## ದೀಪಾವಳಿಯು ಸುಖಪ್ರದವಾಗಲಿ




# ದತ್ತಾತ್ರಯ ಕೃಷ್ಣ ಸಾಂಡು ಬ್ರದರ್ಸ್, ಚೇಂಬೂರ ಪ್ರಾ. ಲಿ.,

ಚೇಂಬೂರ, ಮುಂಬಯಿ-೭೧

---

## ನಿಮ್ಮ ಠೇವುಗಳ ಮೇಲೆ ೮% ಬಡ್ಡಿ ಪಡೆಯಿರಿ



ರಜಿಸ್ಟರ ಆಫೀಸ ದುರ್ಗದಬೈಲ, ಹುಬ್ಬಳ್ಳಿ. | ತಂತಿ ಕುಬೇ | ಫೋನ: 1:2

# ದಿ ಬ್ಯಾಂಕ ಆಫ್ ಕರ್ನಾಟಕ ಲಿಮಿಟೆಡ್

| ಶೆಡ್ಯೂಲ್ಡ ಬ್ಯಾಂಕ |

ಶಾಖೆಗಳು:— ಬೆಳಗಾವಿ. ಬನಹಟ್ಟಿ, ಜಮಖಂಡಿ, ಧಾರವಾಡ. ಕುಂದಗೋಳ, ನವಲಗುಂದ, ಗದಗ, ವಿಜಾಪೂರ. ದಾಂಡೇಲಿ. ತಾಳಿಕೋಟಿ. ಮಹಾಲಿಂಗಪುರ, ಹಾಗೂ ನ್ಯೂಕಾಟನ್ ಮಾರ್ಕೆಟ, ಹುಬ್ಬಳ್ಳಿ

— ಬ್ಯಾಂಕಿನ ಶಾಖೆಯೊಂದನ್ನು ನವಲಗುಂದ (ಜಿ. ಧಾರವಾಡ)ದಲ್ಲಿ ಶೀಘ್ರದಲ್ಲಿಯೇ ತೆರೆಯಲಾಗುತ್ತದೆ —

**ಠೇವುಗಳು ಒಂದು ಕೋಟಿಗೂ ಮಿಕ್ಕಿವೆ.**

ಗದಗ ಶಾಖೆಯಲ್ಲಿ ಸೇಫ ಡಿಪಾಜಿಟ ವಾಲ್ಟದ ವ್ಯವಸ್ಥೆ ಯಿದೆ.

ಎಲ್ಲ ಬಗೆಯ ಬ್ಯಾಂಕಿನ ವ್ಯವಹಾರವನ್ನು ಕೈಕೊಳ್ಳಲಾಗುತ್ತಿದೆ.

— ಇತರ ವಿವರಗಳಿಗೆ ರಜಿಸ್ಟರ್ಡ ಕಚೇರಿಯಾಗಲಿ ಇಲ್ಲವೇ ನಿಮ್ಮ ಸಮೀಪದ ಶಾಖೆಗಳೊಡನೆ ಸಂಪರ್ಕ ಬೆಳೆಸಿರಿ. —

ದೀಪಾವಳಿಯು ಸರ್ವರಿಗೂ ಸುಖಶಾಂತಿ ಸಮೃದ್ಧಿದಾಯಕವಾಗಲಿ



# INDUSTRIAL ACCESSORIES CO.

2, Residency Road Bangalore-25

**Distributors & Stockists :**

Drills, Taps, Reamers, Milling-Cutters, Carbide Tippea Tools, Grinding Wheels and Other Workshop requirements.

**Tel. NO. 24121 & 24122 Ext. 2**

---

ರಾಯಿಸ್ ಪ್ಲ್ಯಾಂಟ್ಸ,
ಪ್ಯಾಡಿ ಡ್ರಾಯರ್ಸ,
ಮತ್ತು
ಅವಲಕ್ಕಿ ಮಶೀನ
ಇದರ ಬಿಡಿಬಾಗಗಳ
ತಯಾರಕರು



*Manufacturers:*

# B. D. GHODKE & Sons

Mechanical Engineers

**Old-Hubli**
**Dist; Dharwar**
**(Mysore State)**





---

ದೀಪಾವಳಿಯು ನಮ್ಮ
ಗ್ರಾಹಕವೃಂದಕ್ಕೆಲ್ಲ ಸುಖಪ್ರದವಾಗಲಿ



ರಾಜ್ಯಸರಕಾರದಿಂದ ತಗಾಯಿ ಮೇಲೆ
ಮಂಜೂರಾದ

## ಕಿಸಾನ

ಎಂಜಿನ್
ಪಂಪಿಂಗ ಸೆಟ್
೫ ಎಚ್. ಪಿ.



ಮೈಸೂರು ರಾಜ್ಯದಾದ್ಯಂತ ಎಜಂಟರು ಬೇಕಾಗಿದ್ದಾರೆ

ಉತ್ಪಾದಕರು:—

## ಮೆ. ಸಾವಂತ ಆಯಿಲ್ ಇಂಜಿನ ವರ್ಕ್ಸ

9376/8 ಶಿವಾಜಿ ಉದ್ಯಮನಗರ
ಕೊಲ್ಹಾಪುರ

---



*With Best Compliments From*

# TECHNO CRAFTS

*Manufacturers of*

## Commutators and Transformers

*Three phase and single phase from Miliwatts to 16 KVA*

**Address:**

**2, Residency Road BANGALORE-25**

Tel No .8669




ಸ್ವಾತಂತ್ರ್ಯಜ್ಯೋತಿಯು
ಸದಾ ಬೆಳಗುತ್ತಿರಲಿ

ಬೆಂಗಾಲ್ ಎಲೆಕ್ಟ್ರಿಕಲ್ಸ್
ಬೆಂಗಳೂರು-3

---

## ದಿ ಸೆಂಟ್ರಲ್ ಕರ್ನಾಟಕ ಮೋಟರ ಸರ್ವಿಸ್ ಶಿವಮೊಗ್ಗಾ

ಫೋನ್ ನಂ. 316, 422

ನಮ್ಮ ಸರ್ವಿಸುಗಳು ನಿಯಮಿತಕಾಲಕ್ಕೂ ಸುಖಕರವಾದ ಪ್ರವಾಸಕ್ಕೂ ಯೋಗ್ಯವಾಗಿರುವ "ಎಕ್ಸ್‌ಪ್ರೆಸ್" ಹುತ್ತೂ ಸರ್ವಿಸುಗಳು ಕರ್ನಾಟಕದಲ್ಲಿ ಹೆಸರುವಾಸಿಯಾಗಿವೆ.

| | | | |
|---|---|---|---|
| ಶಿವಮೊಗ್ಗಾ - ಬಳ್ಳಾರಿ ಮಾರ್ಗ ಚಿತ್ರದುರ್ಗ | ಎಕ್ಸ್‌ಪ್ರೆಸ್ | ಶಿವಮೊಗ್ಗಾ - ಹರಿಹರ- ದಾವಣಗೆರೆ | |
| | | ಸಾಗರ- ಎಣ್ಣೆ ಹೊಳೆ | |
| ಜೋಗ, ಮಂಗಳೂರು | " | ಶಿವಮೊಗ್ಗಾ - ಭಟ್ಕಳ | ಎಕ್ಸ್‌ಪ್ರೆಸ್ |
| ಹರಿಹರ- ಆಗುಂಬೆ | " | ಸಾಗರ- ಭಟ್ಕಳ | |
| ಶಿವಮೊಗ್ಗಾ - ಶೃಂಗೇರಿ | " | ಸಾಗರ- ಶಿಕಾರಿಪುರ | |
| ಆಗುಂಬೆ- ಹರಿಹರ | " | ಸಾಗರ- ಆನವಟ್ಟಿ | |
| ಶಿವಮೊಗ್ಗಾ - ಕುಂದಾಪುರ- ಭದ್ರಗಿರಿ | | ಸಾಗರ- ಸುಂಣದಕೊಪ್ಪ | |
| ಭದ್ರಾವತಿ- ಸಾಗರ- ಜೋಗ | " | ಶಿವಮೊಗ್ಗಾ - ಸೊರಬ- ಸಾಗರ | |
| ಶಿವಮೊಗ್ಗಾ - ಧರ್ಮಸ್ಥಳ | ಎಕ್ಸ್‌ಪ್ರೆಸ್ | | |

— ಪ್ರಯಾಣಿಕರು ಎಂದಿನಂತೆ ಪ್ರೋತ್ಸಾಹಿಸಬೇಕಾಗಿ ವಿನಂತಿ —

ವ್ಯವಸ್ಥಾಪಕರು: ದಿ ಸೆಂ. ಕ. ಮೊ. ಸ ಲಿ., ಶಿವಮೊಗ್ಗಾ

---

ನಮ್ಮ ವೀರ ಜವಾನರು ರಾಷ್ಟ್ರದ ಗಡಿಗಳಲ್ಲಿ
ಭಾರತದ ಕೀರ್ತಿಧ್ವಜ ಮೆರೆಸುತ್ತಿದ್ದಾರೆ!

●

ಆನಂದ ಟೈಪ್ ಫೌಂಡ್ರಿಯವರು
ನಾಡಿನ ಮೂಲೆ ಮೂಲೆಗಳಲ್ಲೂ
ಮುದ್ರಣಾಕ್ಷರಗಳ
ಜಯಭೇರಿ ಹೊಡೆಯುತ್ತಿದ್ದಾರೆ !!

ವಿಲಾಯತಿಯಿಂದ ಬಂದ ಮುದ್ರಣಾಕ್ಷರಗಳು ಮಾತ್ರವೇ
ಉತ್ತಮವಾಗಿರುತ್ತವೆಯೆಂಬ ಅಂಧಶ್ರದ್ಧೆಯನ್ನು
ದೂರಮಾಡಿ ನಾವೂ ಅಷ್ಟೇ ಉತ್ಕೃಷ್ಟವಾದ
ಮುದ್ರಣಾಕ್ಷರಗಳನ್ನು ತಯಾರಿಸಬಲ್ಲೆವೆಂಬುದನ್ನು
ಸಿದ್ಧಮಾಡಿ ತೋರಿಸುವ
ಕನ್ನಡ ನಾಡಿನ ಏಕಮೇವ ಸಂಸ್ಥೆಯೆಂದರೆ

# ಆನಂದ ಟೈಪ್ ಫೌಂಡ್ರಿ

## ಕೊಪ್ಪೀಕರ ರೋಡ, ಹುಬ್ಬಳ್ಳಿ

ದೊಡ್ಡ ಆರ್ಡರೇ ಆಗಲಿ, ಚಿಕ್ಕ ಆರ್ಡರೇ ಆಗಲಿ,
ಎಲ್ಲಕ್ಕೂ ಸಮನಾಗಿ ಲಕ್ಷ್ಯವಿತ್ತು ಸಮಯಕ್ಕೆ ಸರಿಯಾಗಿ
ಕರಾರುವತ್ತಾಗಿ ಪೂರೈಕೆಮಾಡುವದು
ಈ ಸಂಸ್ಥೆಯ ವೈಶಿಷ್ಟ್ಯ.

ನೆನಪಿರಲಿ,
**ಆನಂದ** ಟೈಪುಗಳೆಂದರೆ
ಇಮ್ಮಡಿ ಸೌಂದರ್ಯ!
ಮುಮ್ಮಡಿ ಅಚ್ಚುಕಟ್ಟು !!
ನಾಲ್ಮಡಿ ಬಾಳಿಕೆ !!!

●

ಬೆಳಕಿನ ಹಬ್ಬವಾದ ದೀಪಾವಳಿಯ ಈ ಶುಭಪ್ರಸಂಗದಲ್ಲಿ
ಜನರ ಜ್ಞಾನಜ್ಯೋತಿಯನ್ನು ಬೆಳಗುವ
ಮುದ್ರಣಾಕ್ಷರಗಳನ್ನು ಇನ್ನೂ ಹೆಚ್ಚಾಗಿ
ನಾಡಿಗೆ ನೀಡುವದಾಗಿ ಈ ಸಂಸ್ಥೆ ಪ್ರತಿಜ್ಞೆ ಮಾಡುತ್ತಿದೆ.

ದೀಪಾವಳಿ ಪ್ರತಿ ಮನೆಯನ್ನು ಬೆಳಗಲಿ!
ಆನಂದ ಟೈಪು ಪ್ರತಿ ಮುದ್ರಣಾಲಯವನ್ನು ಪ್ರವೇಶಿಸಲಿ !!



ತಮ್ಮ
**N. A. V. Naidu**
Proprietor

# INDEX TO ADVERTISERS


| Name of Advertisers | Page No. |
|---|---|
| Anantarao A Jadhav & Co., | 40 |
| Anil Engieering works | 4 |
| Arwade S. B. & Co., | vii |
| A. V. R. A. & Co., | 43 |
| Anand Type Foundry | 7 |
| Ashok Hotel | iii |
| Bengal Electricals | 7 |
| Bank of Karnatak | 5 |
| Bharat Home Ind. | 178 |
| Bhoote Glass Traders | 130 |
| Bank of India | 107 |
| Basaweshvar Wvg. Mills | 125 |
| Bangalore Type Foundry | 74 |
| C. C. Coffee Co., | 159 |
| Cubbon Park Restaurant | 174 |
| C. Gurushiddappa & Co. | 55 |
| Castophene Mfg. Co. | 19 |
| Carona Sahu & Co., | 111 |
| Chalgeri Utensils | 69 |
| C. K. M. S. | 7 |
| D. P. & Co., | 179 |
| Dr. Budur Shankarappa | 65 |
| Diamond Textiles | 68 |
| Diamond Engg. Works | 3 |
| Davangere Cotton Mills | 147 |
| D. Darashaw & Co., | 177 |
| Dhanalaxmi safe Co., | 181 |
| Generel Machinery & Co | 47 |
| Geeta Traders | 46 |
| Gourishankar Trading Co., | 15 |
| Ganesh Talkies | 16 |
| Ghodke Bros., | v |
| Ghoodke B. D. & Sons | 6 |
| Hombanna Rachappa Betur | 19 |
| Hotel Gokul | 108 |
| Habib Meharwade | 109 |
| Habib K. Y. & Co. Saw Mills | 105 |
| Hire Morab Gram Seva Sangha | 115 |
| Hirekerur Tal. A. P. M. C. | 121 |
| Huligol V. S. | 10 |
| Huttesh Motor Service | vi |
| H. P. C. Chitra Mandir | iv |
| Industrial & Accessories Co. | 6 |

| Name of Advertisers | Page No. |
|---|---|
| Joshi K. A. & Co., | 77 |
| Janata Mill Stores | 77 |
| Jupiter Radio | 18 |
| Jai Hind Leather Works | 115 |
| Jawahar Eng. Works | 2 |
| K. G. Kallappa | 175 |
| Kottureshwar Lorry Transport | 74 |
| Karnatak Homoeopathic College | 59 |
| Keshawalal & Co., | 21 |
| Kirloskar Bros., | vii |
| Karnatak Eng. Works | 177 |
| Kampli R. N. & Co. | 3 |
| Klick & Co. | viii |
| Manjunath Trading Co. | 149 |
| Mallikarjun & Co., | 64 |
| Maya Engg. Co. | 38 |
| Mahendra Perfumery | 112 |
| Mysore Govt. Silk Wvg. Factory | 1 |
| Mysore Silk Hand Loom Wvrs. Sy. | 48 |
| Mysore Coffee Supplies Co. | 110 |
| Mysore State Co-Op. Union | 99 |
| Mysore Tea Supply Co., | 177 |
| Mysore State Cotton Hondloom Wvrs. Sy. | 119 |
| M. G. Automobiles | i |
| MeenaxiLodge | 126 |
| M. Jabi & S. Jaratarghar & Co | 180 |
| Modern Hindu Hotel | 182 |
| Menezes & Cia | 3 |
| N. Raichur's Suma Publictiy | 78 |
| Nutan Maharatshtra Eng. Co. | 61 |
| New Ashok Kala Graha | 92 |
| Navajieevan Handloom Ind. | 127 |
| New Bemco Eng. Works | 14 |
| National Flag Perfumery Works | 112 |
| Navajeevan Dispensary | 180 |
| Neo Subhas Beedi Works | 4 |
| Nelli Lodge | vi |
| Patil Wvg. Work | 74 |
| P. K. Mills | 28 |
| Pangal Nayak Bank | 118 |
| Paisons Cffee Co., | 135 |

| Name of Advertisers | Page No. |
|---|---|
| Pearl & Co. | 178 |
| Phadake S. G. & Sons | 114 |
| Prabhu Hotel | 13 |
| Patanwala E. S. | 9 |
| Parekh Metal Corp. | vii |
| Porwal & Co. | 178 |
| Premier Traders | 124 |
| Premier Automobles Ltd | 23 |
| Patil B. F. & Bros. | 2 |
| Ravi Vegetables Oil Mills | 143 |
| Raja Parfumery Works | 51 |
| Raja Rajeshwari Soap Works | 183 |
| Sri Ganesar Textile Mills | 139 |
| Shri Sainath General Agency | 68 |
| Shamnur Sangappa | 175 |
| Shamnur Kallappa | 60 |
| Sangameshwar Trading Co. | 1/2 |
| Soverin Tile Works | vi |
| Steel Wire Furniture | 8 |
| Surgical & Pharma. Works | 165 |
| Savant Oil Engine Works | 6 |
| Shettar K. V. & Co. | 82 |
| Shankar Pharmacy | 71 |
| Shri Vithal Prasadik Wvg. Mills | 89 |
| Seth Usman Gani | 86 |
| Sri Krishna Handloom Ind, | 94 |
| Sri Ram Wvg. Works | 122 |
| Shanmur Murigeppa | 32 |
| Swastik Millgin Stores | 92 |
| Sovereign Beedi Factory | 184 |
| Suvarna Mandir | 178 |
| Sathe Biscuit & Chocolate Co. | 177 |
| Shesh & Co. | 182 |
| Satyaprakash Agencies | 10 |
| Supratik & Co. | 2 |
| Sri Ram Oil & Roller Flour Mills | 181 |
| Sandu Bros. D. K. | 5 |
| Siddeshwar & Co. | ii |
| Swadeshi Type Foundry | iv |
| Triveni Handloom Work | 64 |
| Telegraphie Trg. Centre | 116 |
| Tanners & Leathers Workers | 8 |
| Techno Craft | 6 |
| Uchgaonkar Iron Works | 87 |
| Vivekanand Hand Loom Ind. | 90 |
| Vicco Laboratories | 123 |
| Vysya Bank | ii |
| Vijaya Sweetmeat Mart | 24 |
| Vasant Studio | 4 |
| Venkatesh Cloth Stores | 3 |

*Cover Pages*

Last Cover :
M/s. Prabhat & Co.

Second Cover :
M/s. Larsen & Toubro

Third Cover :
M/s. Mafatlal Group of Mills

# ಚಿತ್ರವನ್ನು ಪೂರ್ತಿಗೊಳಿಸಿರಿ

ಬಣ್ಣವು ಕಲಾಕೃತಿಯಾಗಲು ಕೊನೆಯ ಒಪ್ಪಿನ ಸ್ಪರ್ಶವು ಬೇಕು. ಅದೇ ಪ್ರಕಾರ ಅಂತಸ್ಥ ಸೌಂದರ್ಯವು ಸ್ಫುಟವಾಗಿ ತುಂಬು ಲಾವಣ್ಯವನ್ನು ಪ್ರಕಟಗೊಳಿಸಲು ಯೋಗ್ಯ ಸೌಂದರ್ಯ ಪೋಷಣೆ ಬೇಕು.








ಅಫಘಾನ ಸೌಂದರ್ಯ ಸಾಧನಗಳು

ಚಿತ್ರವನ್ನು ಪೂರ್ತಿಗೊಳಿಸುತ್ತವೆ

ಹಾಗೂ

ನಿಮ್ಮ ಹುದುಗಿದ ಸೌಂದರ್ಯವನ್ನು

ಪೂರ್ಣ ಸ್ಫುಟಗೊಳಿಸಲು ನೆರವಾಗುತ್ತವೆ.

## ಅಫಘಾನ ಸ್ನೋ

## ಸೌಂದರ್ಯ ಸಾಧನಗಳು

ಈ. ಎಸ್. ಪಾಟನವಾಲಾ

ಮುಂಬಯಿ - ೭೭



ದೀಪಾವಳಿಯ ಶುಭಸಂದೇಶಗಳು

# ಪರಿವಿಡಿ


| | | ಪುಟ |
|---|---|---|
| ನಮ್ಮ ನುಡಿ | | ೧೧ |
| ಪರಮಾತ್ಮನ ಅನುಸಂಧಾನ | ಜೋಳುಸಾವಿರಮಠದ ಜಗದ್ಗುರುಗಳು | ೧೨ |
| ಚಂದಿರ ಮತ್ತು ಮುದ್ದಂಚೆ (ಕವನ) | ಪು. ತಿ. ನರಸಿಂಹಾಚಾರ್ | ೧೫ |
| ನೆಲತಾಯಿ (ಕವನ) | ಆರ್. ಬಿ. ಇಬ್ರಾಹಿಮಪೂರ | ೧೬ |
| ನೂರು ವರುಷ ಕರ್ಮ ಮಾಡುತ್ತಲೇ ಇರಬೇಕು | ರಂಗನಾಥ ದಿವಾಕರ | ೧೭ |
| ಅಪಘಾತ (ಕಥೆ) | ಯಶವಂತ ಚಿತ್ತಾಳ | ೨೦ |
| ಬೆಳಕಿನ ಹಬ್ಬ (ಕವನ) | ಬಿ. ಎಚ್. ಶ್ರೀಧರ | ೨೫ |
| ರಸನಿಮಿಷಗಳು | ಕೃಷ್ಣಮೂರ್ತಿ ಪುರಾಣಿಕ | ೨೬ |
| ಧರ್ಮರಾಯ (ಕಥೆ) | ಕೃಷ್ಣಮೂರ್ತಿ ಕಿತ್ತೂರ | ೨೯ |
| ವಿಷವಧು (ಕವನ) | ಚಿದಂಬರ ದೀಕ್ಷಿತ | ೩೩ |
| ಅಂದು ಇಂದು ಚಂದು (ಕಥೆ) | ವರದರಾಜ ಹುಯಿಲಗೋಳ | ೩೪ |
| ನಾಳೆ ಅನ್ನದವರ ಮನೆ ಹಾಳು (ಹರಟೆ) | ರಾವ್‌ಬಹದ್ದೂರ್ | ೪೧ |
| ಲಾರಿಸೇನ (ಹರಟೆ) | ರಾಘವೇಂದ್ರ ಇಟಗಿ | ೪೫ |
| **ಬಾಲಪ್ರಪಂಚ** | | |
| ನನ್ನ ಮರಿಗೊಂದು ಕರೆ (ಕವನ) | ಬಿ. ಎಚ್. ರಾಘವೇಂದ್ರ | ೪೯ |
| ಕನ್ನಡದೇವಿ ( " ) | ಎನ್. ವಿಶ್ವರೂಪಾಚಾರ್ಯ | |
| ಅಕ್ಕನ ಮಗಳು | ವಿದ್ಯಾ ಪುರಾಣಿಕ | ೫೦ |
| ಓ ಹಿಮಾಲಯ (ಕವನ) | ಬಸನಗೌಡ ಹ. ಬಾಳನಗೌಡ್ರ | ೫೧ |
| ಗರ್ವ ಒಳ್ಳೆಯದಲ್ಲ (ಕಥೆ) | ಪ್ರ. ರಂ. ಫಂಡರಿ | ೫೨ |
| ಸಮಜೋಡಿ (ನಾಟಕ) | ಜಿ. ಜಿ. ಹೆಗಡೆ | ೫೬ |
| ಆ ಬಾರಿಯ ಘಟನೆಯಿಂದ (ಕಥೆ) | ಶ್ರೀಮತಿ ಲಲಿತ ರಾಮಣ್ಣ | ೬೨ |
| ಕೊನೆಯ ಕ್ರಾಂತಿ | ಹ. ರಾ. ಪುರೋಹಿತ | ೬೬ |
| ಮಂತ್ರಿಗಳಿಗೊಂದು ಪೆನ್ಷನ್ (ಕವನ) | ಬ್ರಜೇಂದ್ರ ಬಿ. ನಾಗನಾದ | ೭೦ |
| ನಯನಳ ದೀಪಾವಳಿ (ಕಥೆ) | ಶ್ರೀಮತಿ ಆನಂದಿ ಸದಾಶಿವರಾವ್ | ೭೨ |
| ಹತಾಶ (ಕವನ) | ಚಂದ್ರಶೇಖರ ಪಾಟೀಲ | ೭೫ |
| ಮುಕ್ತೇಶ್ವರನ ಸಾನ್ನಿಧ್ಯದಲ್ಲಿ | ಪಂಚಾಕ್ಷರಿ ಹಿರೇಮಠ | ೭೬ |
| ಬೇಸರ (ಕಥೆ) | ಶಾಂತಿನಾಥ ದೇಸಾಯಿ | ೭೯ |
| ಹಾಲುಂಡಿ ಕಾಕ್ಸನ್ (ಕವನ) | ಶ್ರೀನಿವಾಸ ಕುಲಕರ್ಣಿ | ೮೪ |
| ವರ್ಷಭವಿಷ್ಯ | ಶ್ರೀಕೃಷ್ಣಶಾಸ್ತ್ರಿ ಭಿಡೆ | ೮೫ |
| ಹರನೆಂಬುದೇ ಸತ್ಯ, ಸತ್ಯವೆಂಬುದು ಹರನು | ಜಿ. ಡಿ. ನಾಡಕರ್ಣಿ | ೯೨ |
| ವಧುವಲ್ಲರಿ (ಚಿತ್ರಗಳಲ್ಲಿ) | | ೧೦೧ |
| ಕಣ್ಣುತೆರೆ ಆಯೂಬ (ಕವನ) | ದ. ಅ. ಕೆರೂರ | ೧೦೫ |
| ಎರಡು ಮನೆಗಳನಡುವೆ (ಕಥೆ) | ಗೀತಾ ಕುಲಕರ್ಣಿ | ೧೦೬ |
| ನಮಗೆ ಶತ್ರುಗಳಿರಲಿ (ಹರಟೆ) | ಗೀತಾ ದೇಸಾಯಿ | ೧೦೭ |
| ಸಂಸ್ಕೃತ ಕವಿಗಳ | | |
| ವಿಚಿತ್ರ ಉಪನಾಮಗಳು | ಪಂಡರಿನಾಥಾಚಾರ್ಯ ಗಲಗಲಿ | ೧೧೭ |
| **ಚಿತ್ರ ಪ್ರಪಂಚ** | | |
| ಕನ್ನಡ ಚಲಚಿತ್ರೋದ್ಯಮ | | |
| ಅಂದು ಇಂದು ಮುಂದು | ಸಿ. ಕೆ. ನಾಗರಾಜರಾವ್ | ೧೨೧ |
| ನಾನು ಬಳುಕುವ ಮೈಯವಳಾಗಿದ್ದೇನೆ | ಪದ್ಮಿನಿ | ೧೨೮ |
| ನಿಜಜೀವನ ಕಲಾಜೀವನ | ಕಲ್ಯಾಣಕುಮಾರ | ೧೩೧ |
| ನಾನು ಹಾಸ್ಯ ನಟಿಯಾದದ್ದು | ಆರ್. | ೧೩೨ |
| ನನ್ನ ಪ್ರೀತಿಯ ದೀಪಾವಳಿ | | ೧೩೩ |
| ಚಲಚಿತ್ರಗಳು-ಜನಜೀವನವು | | ೧೩೪ |
| ಭಾವ (ಸಾಮಾಜಿಕ ಕಾದಂಬರಿ) | ಶ್ರೀಮತಿ | ೧೩೬ |



# ಕರ್ಮವೀರ

ಸಂಸ್ಥಾಪನೆ: ೧೫ ಫೆಬ್ರುವರಿ ೧೯೨೧



ದೀಪಾವಳಿ ಸಂಚಿಕೆ ೧೯೬೫

| ಸಹಾಯಕ ಸಂಪಾದಕರು : | ಸಂಪಾದಕರು : | ಚಿತ್ರಕಾರರು : |
|---|---|---|
| ಎಸ್. ವಿ. ಪಾಟೀಲ | ರಂಗನಾಥ ದಿವಾಕರ | ಟಿ. ಕೆ. ರಾವ್ |


## ನಮ್ಮ ನುಡಿ

ದೀಪಾವಳಿ ದುಷ್ಟ ಮರ್ದನೆ, ಶಿಷ್ಟ ಪರಿಪಾಲನದ ಸಾಂಕೇತಿಕ ಹಬ್ಬವಾಗಿದೆ. ಈ ಸಲ ಈ ಸಂಕೇತ ಇನ್ನಷ್ಟು ಯಥಾರ್ಥವಾಗಿ ಪರಿಣಮಿಸಿದೆ. ಅಂದು ಪುರಾಣ ಕಾಲದಲ್ಲಿ ಶ್ರೀಕೃಷ್ಣ ಪರಮಾತ್ಮ ನರಕಾಸುರನನ್ನು ವಧಿಸಿದ; ವಾಮನ ಬಲಿಚಕ್ರವರ್ತಿಯನ್ನು ಮರ್ದಿಸಿದ. ಈ ದುಷ್ಟನಿಗ್ರಹದ ಸಂಕೇತವಾಗಿಯೇ ಪ್ರತಿ ವರುಷವೂ ದೀಪಾವಳಿಯನ್ನು ಸಂಭ್ರಮದಿಂದ ಆಚರಿಸಲಾಗುತ್ತಿದೆ. ಈ ಸಲ ಭಾರತವು ಈ ದುಷ್ಟ ನಿಗ್ರಹ ಕಾರ್ಯವನ್ನು ಯಶಸ್ವಿಯಾಗಿಯೇ ನೆರವೇರಿಸಿದೆ. ಆದರೆ ಇಷ್ಟೇ ಈ ದುಷ್ಟ ಹಿಂದಿನವರಂತೆ ಸುಲಭವಾಗಿ ಮರ್ದನಗೊಳ್ಳುವದಿಲ್ಲ. ರಾವಣನ ಕಂಠಗಳು ಮತ್ತೆ ಮತ್ತೆ ಚಿಗಿವಂತೆ ಇವನು ಚಿಗುರಿಕೊಂಡು ಏಳುತ್ತಾನೆ. ಆದಕ್ಕಾಗಿ ಅವನನ್ನು ಸಂಪೂರ್ಣವಾಗಿ ತಲೆಯೆತ್ತದಂತೆ ಮಾಡಲು ಶಾಶ್ವತವಾದ ಮರ್ದನ ಕ್ರಮಗಳುಬೇಕು. ಭಾರತ ಸರಕಾರವು ಅವನ್ನೀಗ ನಿಯೋಜಿಸುತ್ತಿರುವುದು. ಭಾರತೀಯರು ಅವಕ್ಕೆ ಹೃತ್ಪೂರ್ವಕವಾಗಿ ಬೆಂಬಲ ನೀಡಬೇಕು. ಅಂದರೆ ದೀಪಾವಳಿ ಹಬ್ಬವನ್ನು ನಿರಾಡಂಬರವಾಗಿ ಸರಳ ರೀತಿಯಲ್ಲಿ ಆಚರಿಸಬೇಕು; ಉಳಿತಾಯವನ್ನು ರಾಷ್ಟ್ರೀಯ ರಕ್ಷಣೆಗಾಗಿ ತೊಡಗಿಸಬೇಕು. . .

ಓದುಗರ ಕೈಸೇರಿರುವ ಈ ದೀಪಾವಳಿ ಸಂಚಿಕೆ ಕರ್ಮವೀರದ ಹದಿನೆಂಟನೆಯ ದೀಪಾವಳಿ ಸಂಚಿಕೆಯಾಗಿರುವುದು. ಪ್ರತಿ ಸಲದಂತೆ ಈ ಸಲವೂ ಆದನ್ನು ಸರ್ವಾಂಗ ಸುಂದರಗೊಳಿಸಲು ನಾವು ಹವಣಿಸಿದ್ದೇವೆ. ಈ ಸಲದ ಬರೆಹಗಾರರಲ್ಲಿ ಮಹಿಳೆಯರು ಹೆಚ್ಚಾಗಿರುವುದು ಒಂದು ವೈಶಿಷ್ಟ್ಯವಾಗಿದ್ದರೆ, ತರುಣ ಬರೆಹಗಾರರು ಹೆಚ್ಚಿರುವುದು ಇನ್ನೊಂದು ವೈಶಿಷ್ಟ್ಯವಾಗಿರುವುದು. 'ವಧುವಲ್ಲರಿ' ನಾಡಿನ ವಿವಿಧ ಭಾಗಗಳ ವಧು ವಿಶೇಷಗಳ ಪರಿಚಯವನ್ನು ಮಾಡಿಕೊಡುವುದು. ಬಾಲಪ್ರಪಂಚ ಚಿತ್ರಪ್ರಪಂಚಗಳು ಎಳೆಯರನ್ನು ಚಿತ್ರರಸಿಕರನ್ನು ಅನುಪಮವಾಗಿ ರಂಜಿಸುವವು. ಅಲ್ಲದೆ ಒಂದು ಪೂರ್ಣ ಕಾದಂಬರಿಯನ್ನು ಕೊಡಲಾಗಿರುವುದು . . . . . . . . . . . . . .

ಈ ಸಂದರ್ಭಕ್ಕಾಗಿ ಅಂದವಾದ ಮುಖಚಿತ್ರವನ್ನು ಒದಗಿಸಿದ ಕಲಾವಿದ ಶ್ರೀ ಎನ್. ಸಿ. ದೇಸಾಯಿ ಅವರಿಗೆ, ಸಕಾಲಕ್ಕೆ ಲೇಖನಗಳನ್ನು ಒದಗಿಸಿದ ನಮ್ಮ ಲೇಖಕ ಬಳಗಕ್ಕೂ, ಈ ಸಂಚಿಕೆಯನ್ನು ಸರ್ವಾಂಗಸುಂದರವಾಗುವಂತೆ ಮಾಡಲು ಸಹಾಯ–ಸಹಕಾರ ನೀಡಿದವರಿಗೂ, ಅದೇ ರೀತಿ ಜಾಹೀರಾತು ಕೊಟ್ಟು ಸಹಕರಿಸಿದ ಜಾಹೀರಾತುದಾರರಿಗೂ ನಮ್ಮ ಕೃತಜ್ಞತೆಗಳು. . .

ದೀಪಾವಳಿಯ ಈ ಶುಭ ಸಂದರ್ಭವು ನಮ್ಮ ಓದುಗರಿಗೂ, ಇನ್ನಿತರರಿಗೂ ಮಂಗಳದಾಯಕವಾಗಿ ಪರಿಣಮಿಸಲಿ. . . . . . . . . . . .



# ಪರಮ ಆತ್ಮನ ಅನುಸಂಧಾನ!



ಮೂರುಸಾವಿರ ಮಠದ ಜಗದ್ಗುರುಗಳು

ಶಿವಯೋಗಮಂದಿರದ ಅಡುಂಬೋಲದಲ್ಲಿ ಜೀವನದ ಮೊದಲ ದಿನಗಳನ್ನು ಪಟುವಾಗಿ ನಿರ್ವಹಿಸಿದ ನಮಗೆ, ಶಿವಭಜನೆ, ಶಿವಪೂಜೆ, ಸ್ವಾಧ್ಯಾಯ, ಸುಶ್ರವಣ, ಯೋಗಸಾಧನೆಗಳಲ್ಲಿ ತಲ್ಲೀನವಾಗುವದು ಸಹಜವಾಗಿ ಬೆಳೆದುಬಂದಿದೆ. ಬಾಲ್ಯಾವಸ್ಥೆಯನ್ನು ದಾಟಿ ಪ್ರೌಢಾವಸ್ಥೆಗೆ ಬರುವ ಹೊತ್ತಿಗೆ ಕಾಶೀ ವಿದ್ಯಾಪೀಠದಲ್ಲಿ ಉಚ್ಚವ್ಯಾಸಂಗ ಪಡೆಯುವ ಭಾಗ್ಯ ಲಭಿಸಿದ ಬಳಿಕ ಆನುಷಂಗಿಕವಾಗಿ ಕಲಕತ್ತೆಯ ಹತ್ತಿರ ದಕ್ಷಿಣೇಶ್ವರದಲ್ಲಿ ಸ್ವಾಮಿ ರಾಮಕೃಷ್ಣ ಪರಮಹಂಸರ ಜೀವನದ **ಒಲವು ನಿಲವುಗಳನ್ನು** ಅರಿತುಕೊಳ್ಳುವ ಹವ್ಯಾಸವೂ ಜೊತೆಗೆ ದಿಗ್ದಿಗಂತದಲ್ಲಿ ಧಾರ್ಮಿಕ ವಿಜಯಧ್ವಜವನ್ನು ಯಶಸ್ವಿಯಾಗಿ ಹಾರಿಸಿದ ವೀರಸಂನ್ಯಾಸಿ ವಿವೇಕಾನಂದರ ವಿಚಾರಗಳನ್ನು ತಿಳಿದುಕೊಳ್ಳುವ ಪ್ರವೃತ್ತಿಯೂ ಬೆಳೆದುಬಂದಿತು. ರಾಮಕೃಷ್ಣ ಮಿಶನ್ನಿನವರು ಜಗತ್ತಿನ ಹಲವಾರು ಕಡೆಗಳಲ್ಲಿ ನಡೆಯಿಸಿದ ಮಠಮಾನ್ಯಗಳು, ಪುಸ್ತಕ ಪ್ರಕಾಶನದ ಕಾರ್ಯ, ಪ್ರಚಾರವೈಖರಿ ನಮ್ಮ ಮನ ಸೆಳೆದಂತೆ, ಸ್ವಚ್ಛತೆ ಶಿಸ್ತು, **"ಕಾಯಕವೇ ಕೈಲಾಸ"** ಎಂಬ ಬಸವಣ್ಣನವರ ತತ್ತ್ವಗಳನ್ನು ಅಳವಡಿಸಿಕೊಂಡ ಪಾಂಡಿಚೇರಿಯ ಶ್ರೀ ಅರವಿಂದಾಶ್ರಮವನ್ನು ನೋಡಬೇಕೆಂಬ ಬಯಕೆಯಾಯಿತು(೧೯೫೫-೫೬).

ಸ್ವಾಮಿ ವಿವೇಕಾನಂದರು ಒಂದೆಡೆ ಹೇಳುವಂತೆ- "ಒಂದು ಗುರಿ ಸಾಧನೆಗೆ ಒಂದು ವಿಶಿಷ್ಟ ಮಾರ್ಗವನ್ನು ನಾವು ಅನುಸರಿಸಬೇಕಾಗಿ ಬರುತ್ತದೆ. ಈ ಮಾರ್ಗ ಕಾಲ, ದೇಶ, ವ್ಯಕ್ತಿಗೆ ತಕ್ಕಂತೆ ಬದಲಾಗುವದು. ಆದರೆ ಗುರಿ ಮಾತ್ರ ಬದಲಾಗುವದಿಲ್ಲ. ಸಂನ್ಯಾಸಿಯ ಗುರಿ ತನ್ನ ಆತ್ಮನ ಮೋಕ್ಷ ಮತ್ತು ಜಗತ್ತಿನ ಹಿತ. ಇದನ್ನು ಸಾಧಿಸುವದಕ್ಕೆ ಕಾಮ—ಕಾಂಚನಗಳ ತ್ಯಾಗ ಅತ್ಯಾವಶ್ಯಕ. ತ್ಯಾಗವೆಂದರೆ ಎಲ್ಲಾ ಸ್ವಾರ್ಥ ಸಾಧನೆಗಳ ಸಮೂಲನಾಶ." ಎಂಬ ಮಾತನ್ನು ನೆನಸಿಕೊಂಡು, ಕಾಶಿಯಲ್ಲಿ ಓದುತ್ತಿದ್ದಾಗ, ನಮ್ಮ ಗುರುಗಳಾದ ಲಿಂ. ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಗುರುಸಿದ್ಧರಾಜಯೋಗೀಂದ್ರ ಮಹಾಸ್ವಾಮಿಗಳವರ ಕರೆ ಬಂದು, ಶ್ರೀಮಠದ ಪೀಠಕ್ಕೆ ಬರುವ ಮಹದ್ಭಾಗ್ಯವೂ ಲಭಿಸಿತು. ೧೯೫೮ ರಲ್ಲಿ ಪಟ್ಟಾಭಿಷಿಕ್ತರಾದ ಬಳಿಕ ಯೋಗ ಭೋಗದ ಭೂಮಿಕೆ ತುಸು ಆಚೆಗಾದರೂ, ನಮ್ಮ ಮನಃಸಂತೃಪ್ತಿಗಾಗಿ ರಚಿಸುತ್ತಿದ್ದ ಸಾಹಿತ್ಯ, ಸಂಸ್ಕೃತಿ ಸಂವರ್ಧನೆಗೆ ಅಲ್ಪವಿರಾಮ ದೊರೆತರೂ, ಮನದಲ್ಲಿ ಮಾತ್ರ ಪರಿಪೂರ್ಣ ಮಾನವತೆಯನ್ನು ಹೊಂದಬೇಕು ಎಂಬ ಆಕಾಂಕ್ಷೆ ಒಳಗೊಳಗೇ ಪುಟಿದೇಳುತ್ತಿತ್ತು. ಮಠದ ಕಾರಭಾರವನ್ನು ನಿರ್ವಹಿಸುವದರ ಜೊತೆಗೆ, ಕನ್ನಡ ನಾಡಿನ ಜನಜೀವನಕ್ಕೆ ಉಪಯುಕ್ತವಾಗಬಲ್ಲ ರೀತಿಯಲ್ಲಿ ಸಮಾಜ ಸುಧಾರಣೆಗೆ ಪ್ರಯತ್ನಿಸಬೇಕು, ವೈಜ್ಞಾನಿಕ ಮನೋಭೂಮಿಕೆಯಲ್ಲಿಯೂ ಧಾರ್ಮಿಕ ಜಾಗ್ರತಿಯನ್ನು ಮುನ್ನಡೆಯಿಸಬೇಕು ಎಂಬ ಹಂಬಲುಳ್ಳ ನಮಗೆ, ಸ್ವಾಭಾವಿಕವಾಗಿ ಶ್ರೀ ಅರವಿಂದರ ಸಾಹಿತ್ಯದ ಮೇಲೆ ಅಭಿರುಚಿ ಹುಟ್ಟಿತು. ಸತ್ಯವನ್ನು ಮತ್ತೊಬ್ಬರ ಬಾಗಿಲಿಗೆ ಒಯ್ಯುವದರಲ್ಲಿ ತಮಗೆ ಏನೂ ವಿಶ್ವಾಸವಿಲ್ಲ ಎಂದು ಶ್ರೀ ಅರವಿಂದರು ಒಂದೆಡೆಗೆ ಉಸುರಿದ್ದಾರೆ. ಶೂನ್ಯಸಂಪಾದನೆಯಲ್ಲಿ ಪ್ರಭುದೇವರು ಹಾಗು ಬಸವಣ್ಣನವರ ಆಧ್ಯಾತ್ಮದ ನಿಲುವು ಕೂಡ ಅದನ್ನೇ ಸಾರಿ ಹೇಳಿರುವದು ಕೂಡ ತುಂಬ ಅರ್ಥಗರ್ಭಿತವಾಗಿದೆ.

**"ಧ್ಯಾನಮೌನವೆಂಬ ಶಸ್ತ್ರವ ಹಿಡಿಯಲರಿಯದೆ, ಅಹಂಕಾರದ ಧಾರೆಯ ಮೊನೆಯಲಗೆಂಬ ಶಸ್ತ್ರವ ಹಿಡಿದು ಕೆಟ್ಟೆನಯ್ಯಾ"- ಬಸವಣ್ಣ "ಅಹಂಕಾರವೆಂಬ ಅಲಗ ಹಿಡಿದು ಮಾಡುವ ಭಕ್ತಿ ತನ್ನನೆ ಇರಿವುದು ಗುಹೇಶ್ವರನೆಂಬ ಹಗೆಯ ಗೆಲುವರೆ ಅರಿವೆಂಬ ಅಲಗ ಅವಧಾನ ತಪ್ಪದೆ ಹಿಡಿಯಬೇಕು ನೋಡಾ ಬಸವಣ್ಣ"** —ಪ್ರಭುದೇವರು

ಸಾಧಕನಾದವನು ದೇವದೇವನ ಇರವನ್ನು ಅರಿಯಲು ಮೌನ ತಪಸ್ವಿಯಾಗಿ ಜೀವನ ಸಾಗಿಸಬೇಕು. ಲಿಂಗಾಂಗ ಸಾಮರಸ್ಯದ ಮಧುರ ಫಲವನ್ನು ಸವಿಯಬೇಕೆನ್ನುವವರು ಅಹಂಕಾರ-ಮಮಕಾರಗಳನ್ನು ಬಿಡಬೇಕಲ್ಲದೆ, ನಿಜದ ನೆಲೆಯನ್ನು ತಿಳಿಯಲು ಧ್ಯಾನ-ಮೌನವನ್ನು ಆಶ್ರಯಿಸಬೇಕು ಎಂಬ ಮಾತು ಸ್ಫುಟವಾದಂತೆ, ಶ್ರೀ ಅರವಿಂದರು ಪಾಂಡಿಚೇರಿಯ ತಮ್ಮ ಆಶ್ರಮದಲ್ಲಿ ಅದನ್ನು ಇಂದಿಗೂ ಜೀವಂತವಾಗಿ ನಡೆಯಿಸಿರುವದನ್ನು ಕಣ್ಣಾರೆ ಕಾಣಬೇಕೆಂಬ ಕುತೂಹಲ. ಶ್ರೀ ತಾಯಿಯವರ ಸಮಾಗಮವಾಗುವ ಅಮೃತಗಳಿಗೆಗೆ ತವಕಬಡುತ್ತಿರುವಂತೆ, ಅವರಿಂದ ಬರಬೇಕೆಂಬ ಪ್ರೀತಿಯ ಕರೆ ಬಂದುದು ನಮಗೆ ಹರ್ಷಪುಳಕಿತರಾಗುವಂತಾಯಿತು. ಅನುಭವ ಶ್ರೀಮಂತವಾಗುವ ಪರ್ವಕಾಲ ಸನ್ನಿಹಿತವಾಯಿತು.

## ಅಮೃತ ಗಳಿಗೆ ಬಂದಿತು!

ಶ್ರೀ ಅರವಿಂದರು ಇರುವ ವರೆಗೆ ಶ್ರೀ ತಾಯಿಯವರು ಒಂದು ನಾಣ್ಯದ ಎರಡು ಮುಖಗಳಂತೆ ಅನ್ಯೋನ್ಯವಾಗಿ ನಡೆದುಕೊಂಡು ಬಂದರು. ಶ್ರೀ ಅರವಿಂದರು ಸಮಾಧಿಸ್ಥರಾದ ಬಳಿಕ ಶ್ರೀ ಅರವಿಂದರ ಚಿಚ್ಛಕ್ತಿಯೂ, ತಾಯಿಯವರ ಕಾರುಣ್ಯವೂ, ಶ್ರೀ ತಾಯಿಯವರಲ್ಲೇ ಸಮನ್ವಯಗೊಂಡಿವೆ. ಯಾಕೆಂದರೆ ಶ್ರೀ ಅರವಿಂದರೇ ಒಂದೆಡೆಗೆ ಹೇಳುವಂತೆ "ವಿಶ್ವಾತೀತ ಅನುಗ್ರಹವನ್ನು ಕಾರ್ಯದಲ್ಲಿ ತರಲೆಂದೇ ಮಾತೆಯ ಶರೀರಧಾರಣೆಯಾಗಿರುವದು". ನಾವು ಅವರ ಅನುಸಂಧಾನದಲ್ಲಿದ್ದ ಮೂರು ನಿಮಿಷಗಳು ಮೂರು ಯುಗದ ಶಾಂತಿಯನ್ನು ತಂದುಕೊಡುವಂತಹದು. ಅವರ ಪ್ರೀತಿ—ವಿಶ್ವಾಸದ ಮಂದಸ್ಮಿತ ನಗೆ, ನಮ್ಮ ಮನಸ್ಸನ್ನು ಸೂರೆಗೊಂಡಿತು. ಶ್ರೀ ತಾಯಿಯವರ ಶಕ್ತಿ ಅಪಾರವಾಗಿದೆ. ಅನುಪಮವಾಗಿದೆ. ತಮ್ಮ ಇಚ್ಛಾಶಕ್ತಿ ಮಾತ್ರದಿಂದಲೇ ಇಡೀ ಅರವಿಂದಾಶ್ರಮದಲ್ಲಿರುವ ಸಾಧಕ—ಸಾಧಿಕೆಯರ ಅವರ ಮಕ್ಕಳು ಮರಿಗಳ ಪರಿಪೋಷಣೆಗೈಯುವದು ಸಣ್ಣ ಮಾತಲ್ಲ! ಶ್ರೀ ಅರವಿಂದರ ನಿರ್ಯಾಣಾನಂತರ ಆಶ್ರಮವು ಜೀವವಿಲ್ಲದ ಮಠದಂತೆ ಹಾಳುಬೀಳುವದೆಂದು ಹಲವರಿಗೆ ಅನಿಸಿದ್ದಿತು. ಆದರೆ ಇಂದಿಗೂ ಅದು ಬದಿಗೆಯ

ಲೇಖಕರು :
ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು
**ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು**
ಮೂರುಸಾವಿರ ಮಠ, ಹುಬ್ಬಳ್ಳಿ

ಚಂದ್ರನಂತೆ ಬೆಳೆಯುತ್ತಿರುವದು ಶ್ರೀ ಮಾತೆಯವರ ಕರ್ತೃತ್ವಶಕ್ತಿಗೆ ನಿದರ್ಶನವಾಗಿದೆ.

ಅರವಿಂದಾಶ್ರಮದಲ್ಲಿ, ಶಿವಯೋಗಮಂದಿರದಲ್ಲಿರುವಂತೆ ಆಧ್ಯಾತ್ಮದ ಪರಿಸರದಲ್ಲಿ ಜಗತ್ತಿನ ವ್ಯಾಪಾರಗಳೆಲ್ಲವೂ ಸಾಂಗೋಪಾಂಗವಾಗಿ ಜರುಗಬೇಕೆಂಬ ಅಭಿಲಾಷೆ ಮೈವೆತ್ತು ನಿಂತಿದೆ. ಅರವಿಂದರ ಶರಣ ಜೀವನ ಶ್ರೀ ಮಾತೆಯವರ ಆಧುನಿಕ ಅಕ್ಕಮಹಾದೇವಿಯ ಜೀವನ ಅಲ್ಲಿ ಕಾಣಸಿಗುವವು.

ಶ್ರೀ ಅರವಿಂದರ ಸಮಾಧಿಯ ಹತ್ತಿರ ಹೋದಾಗ, ನಮಗೆ ಅನುಪಮವಾದ ಅನುಭವವಾಯಿತು. ಅದು ಅವರ್ಣನೀಯ ಸೃಷ್ಟಿಸೌಂದರ್ಯದ ಮಡಿಲಲ್ಲಿ ಯೋಗಿರಾಜನು ಇಂದಿಗೂ ಜೀವಂತವಾಗಿ ವಿಹರಿಸುವನೆಂಬ ಅನುಭವ ನಮ್ಮದಾಯಿತು. ಶ್ರೀ ಅರವಿಂದರ ಸಮಾಧಿಯಿಂದ ಸಹಸ್ರ ನಾಲಗೆಗಳನ್ನು ಹೊತ್ತು ಅಗ್ನಿ ಮೇಲೇಳುವಂತೆ ಕಾಣುವದಲ್ಲದೆ, ಪ್ರತಿಯೊಬ್ಬರ ಅಂತರಾತ್ಮನಲ್ಲಿ ಅದು ಪ್ರವೇಶಿಸಿ ಜ್ವಲಿಸುವಂತೆ ಅನುಭವವುಂಟಾಗುತ್ತದೆ. ಅವರ ಅಸ್ತಿತ್ವವು ಶ್ರೀ ತಾಯಿಯವರ ದೇಹಕಾಂತಿಯಲ್ಲಿ ಸೇರಿ ಸುತ್ತಲಿನ ವಾತಾವರಣದಲ್ಲಿ ಹಬ್ಬಿಹೋದಂತಿದೆ.

ಶ್ರೀ ಅರವಿಂದಾಶ್ರಮದ ಆಗು—ಹೋಗುಗಳಿಗೆಲ್ಲ ಕಾರಣೀಭೂತರಾದ ಯೋಗಿರಾಜರು ಜನಜೀವನದ ದೃಷ್ಟಿಯಿಂದ ಪಂಚತ್ವದಲ್ಲಿ ಲೀನವಾಗಿರಬಹುದು. ಆದರೆ ಇಂದು ಜಗತ್ತಿನ ಆಧ್ಯಾತ್ಮಿಕ ಅನುಭಾವಿಗಳ ಹೃದಯಮಂದಿರದಲ್ಲಿ ಪ್ರೀತಿಯಿಂದ ನೆಲಸಿ, ಪ್ರಪಂಚದ ಸನ್ಮಂಗಳಕ್ಕೆ ಹಾದಿ ಮಾಡಿಕೊಟ್ಟಿರುವರು.

## ಅರವಿಂದರ ಅನುಭವ-ಶರಣರ ಅನುಭಾವ

ನಿಮಗೆ ಭಗವಂತನಂತೆ ಆಗುವದಿದ್ದರೆ ಆತನೊಬ್ಬನನ್ನೇ ಪ್ರೀತಿಸಿರಿ. ಇತರ ಪ್ರೇಮವು ಆ ಪ್ರೇಮದೆದುರಿಗೆ ಎಷ್ಟು ನೀರಸ, ಮಂದ, ಬಲಹೀನವೆಂಬುದನ್ನು ಭಗವಂತನೊಡನಿರುವ ಪ್ರೇಮಸಂಬಂಧದ ಉತ್ಕಟ ಆನಂದವನ್ನು ಅನುಭವಿಸಿ ಅರಿತವನೇ ಬಲ್ಲ ಎಂದು ಶ್ರೀ ಅರವಿಂದರು ಹೇಳುತ್ತಾರೆ.

ಪ್ರಭುದೇವರು ಆ ಪರಮಾತ್ಮನ ಇರುವಿಕೆಯನ್ನು ಅದೆಷ್ಟು ರಸವತ್ತಾಗಿ ಮೆರುಗುಕೊಟ್ಟು ಹೇಳಿದ್ದಾರೆ ಆಲಿಸೋಣ.

"ಆದಿ ಅನಾದಿ ಇಲ್ಲದಂದು;
ಹುಮ್ಮು ಬಿಮ್ಮುಗಳಿಲ್ಲದಂದು;
ಸುಳಾರ ನಿರಾಳವಿಲ್ಲದಂದು,
ಶೂನ್ಯ ನಿಶ್ಶೂನ್ಯವಿಲ್ಲದಂದು,
ಸಚರಾಚರವೆಲ್ಲಾ ರಚನೆಗೆ ಬಾರದಂದು
ಗುಹೇಶ್ವರನೊಬ್ಬನೇ ಇದ್ದೆಯಲ್ಲ ಇಲ್ಲದಂತೆ"

ದೇವಮುಹೂರ್ತ, ಸಂಕಲ್ಪಸಿದ್ಧಿ ಅಥವಾ ಸಾಕ್ಷಾತ್ಕಾರ ಏನು ಬೇಕಾದರೂ ಕರೆಯಿರಿ. ಅದನ್ನು ನಿತ್ಯಜೀವನದಲ್ಲಿ ಅಳವಡಿಸಿಕೊಳ್ಳುವ ಗುರಿ ದಾರಿಯ ಬಗೆಗೆ ಶ್ರೀ ಅರವಿಂದರು ಹೀಗೆ ಹೇಳಿದ್ದಾರೆ. ತಮ್ಮ ದಿವ್ಯಜೀವನ (the Life Divine) ಎಂಬ ಮಹಾ ಗ್ರಂಥದಲ್ಲಿ "ವಿಕಾಸಶೀಲ ಪ್ರಕೃತಿಯು ಹಡಬಡಿಸುತ್ತಿರುವದು ಆತ್ಮಶೋಧನೆಗಾಗಿ, ಆತ್ಮಜ್ಞಾನದ ಜಾಗ್ರತಿಗಾಗಿ, ಆತ್ಮದ ನಮ್ಮೊಳಗಿನ ಅಂತರಾತ್ಮದ ಆವಿರ್ಭಾವಕ್ಕಾಗಿ ಮತ್ತು ಅದರ ಸ್ವಯಂಜ್ಞಾನದ ಸ್ವಸಾಮರ್ಥ್ಯದ ಅಲ್ಲದೆ ಅದರ ಮೂಲ ಸ್ವಸಾಧನೀಯತೆಯ ಮುಕ್ತಿಗಾಗಿ. ಇದಲ್ಲದೆ ಸಮಗ್ರ ವಿಕಾಸವೇ ಒಂದು ಸಿದ್ಧತೆಯಾಗಿರುವ ಹೆಜ್ಜೆ ಅದಾಗಿದೆ. ಬುದ್ಧಿಮತ್ತೆ ಮತ್ತು ಪ್ರಾಣಶಕ್ತಿಗಳು ಎಳೆತದ ಒಂದಾನೊಂದು ತುದಿಯನ್ನು ತಲುಪುವಂಥ ಬಿಂದುವನ್ನು ಸಕ್ರಿಯ ಮಾನಸಿಕ ಹಾಗು ಪ್ರಾಣಿಕ ವಿಕಾಸವು ಮುಟ್ಟಿದಾಗ ಮಾನವ ದೆಸೆಯ ಪ್ರತಿ ಸಂದುಕಟ್ಟಿನ ಸಮಯದಲ್ಲೆಲ್ಲ ಹೆಚ್ಚು ಹತ್ತಿರವಾದ ಹೆಜ್ಜೆ ಅದು, ಮತ್ತು ಆಗ ಬುದ್ಧಿಮತ್ತೆ, ಪ್ರಾಣಶಕ್ತಿ ಇವು ಅಸಫಲತೆಯ ಮಬ್ಬಿನಾಳಕ್ಕೆ ಅಥವಾ ವಿಕಾಸರಹಿತ ಜಡ ಸುಷುಪ್ತಿಗೆ ಮರಳಿ ಕುಸಿದುಬೀಳುವದಾಗಲಿ, ಮುಳುಗಿ ಹೋಗುವದಾಗಲಿ ಇಲ್ಲವೆ ಯಾವು ದರೆದುರು ತಾವು ಹಗರಣಗೊಳ್ಳುತ್ತಿರುವೆವೋ ಆ ತೆರೆಯೊಳಗಿಂದ ನಮ್ಮ ದಾರಿಯನ್ನು ಸೀಳಿಕೊಳ್ಳುವದಾಗಲಿ ಅಗತ್ಯ. ಇಲ್ಲಿ ಅವಶ್ಯವಿರುವ ಸಂಗತಿ ಎಂದರೆ ಈ ಬದಲಾವಣೆಯ ದರ್ಶನದ ಬಗೆಗೆ ಮನುಕುಲದಲ್ಲಿ ಹಲಕೆಲವರಾದರೂ ಅನುಭವಿಸಿದ, ಒಂದು ಒಲವು, ಅದರ ತೀರ ಅಗತ್ಯದ ಒಂದು ಅನಿಸಿಕೆ, ಅದರ ಸಾಧ್ಯತೆಯ ಪ್ರತೀತಿ, ಅದನ್ನು ನಮ್ಮಲ್ಲಿ ಸಾಧ್ಯಗೊಳಿಸುವ ಮತ್ತು ಅದಕ್ಕೆ ಮಾರ್ಗವನ್ನು ಕಂಡುಕೊಳ್ಳುವ ಸಂಕಲ್ಪ. ಈ ಒಲವು ಇಲ್ಲದಿಲ್ಲ. ಅದು ಮಾನವನ ಜಗದ್ವೆಸೆಯಲ್ಲಿನ ಗಂಡು ಸಮಯದ ಒತ್ತಡದಿಂದಾಗಿ ಅಭಿವೃದ್ಧಿಗೊಳ್ಳಬೇಕು. ಪಾರಾಗುವಿಕೆ ಇಲ್ಲವೆ ಪರಿಹಾರದ ಅವಶ್ಯಕತೆ, ಆಧ್ಯಾತ್ಮಿಕ ಪರಿಹಾರವನ್ನುಳಿದರೆ ಇನ್ನಾವ ಉಪಾಯವೇ ಇಲ್ಲೆಂಬ ಅನಿಸಿಕೆ, ಇವು ಬೆಳೆದು ಬರಲೇಬೇಕು ಮತ್ತು ಬಿಕ್ಕಟ್ಟಿನ ಪರಿಸರದ ಒತ್ತಡದಲ್ಲಿ ಹೆಚ್ಚು ಖಂಡಿತವಾಗತಕ್ಕದ್ದು. ಸಕ್ರಿಯಲ್ಲಿನ ಆ ಕೂಗಿಗೆ ಭಾಗವತ ಸದ್ವಸ್ತುವಿನಲ್ಲಿ ಮತ್ತು ದಿವ್ಯ ಪ್ರಕೃತಿಯಲ್ಲಿ ಯಾವಾಗಲೂ ಒಂದು ಪ್ರತ್ಯುತ್ತರವಿರಲೇಬೇಕು."

'ಮನಮಗ್ನಯೋಗ' ದಿಂದ "ಮನೋಲಯಯೋಗ"ದ ಕಡೆಗೆ ತಿರುಗಿಸುವ ಪ್ರಭುದೇವರ ಈ ಅನುಭಾವದ ವಚನವನ್ನು ಪರಾಮರ್ಶಿಸುವಾ.

"ಕರ್ಪುರದ ಗಿರಿಯ ಉರಿ ಹಿಡಿದ ಬಳಿಕ
ಇದ್ದಿಲುಂಟೇ?
ಮಂಜಿನ ಶಿವಾಲಯಕ್ಕೆ ಬಿಸಿಲ ಕಳಸವುಂಟೇ?
ಕೆಂಡದ ಗಿರಿಯ ಅರಗಿನ ಬಾಣದಲೆಚ್ಚರೆ
ಬಳಿಕ ಮರಳಿ ಬಾಣವನರಸಲುಂಟೇ?
ಗುಹೇಶ್ವರ ಲಿಂಗವನರಿದ ಬಳಿಕ ದೇವರೆಂದು
ಅರಸಲುಂಟೇ ಸಿದ್ಧರಾಮಯ್ಯಾ."

ಉರಿ ಮತ್ತು ಕರ್ಪುರಗಳ ಸಂಯೋಗದಿಂದ ಎರಡೂ ಅಲ್ಲದ ಒಂದು ನಿಲವು ಸಿದ್ಧಿಸುತ್ತದೆ. ಬೆಳಗಿನಲ್ಲಿ ಬೆಳಗು ಅಡಗಿದಂತೆ ಆಗುವ ಈ ಶೂನ್ಯತತ್ತ್ವದ ಪೂರ್ಣ ಅರಿವು ಮಾಡಿಕೊಳ್ಳುವದೇ ಮಾನವಜೀವನದ ಪರಮೋದ್ದೇಶ; ಅದನ್ನೇ ಶ್ರೀ ನಿಜಗುಣ ಶಿವಯೋಗಿಗಳು ರಾಗ, ತಾಳ, ಲಯಬದ್ಧವಾದ ಈ ಸುಂದರ ಕವನದಲ್ಲಿ ಅದೆಷ್ಟು ಮನಮೋಹಕವಾಗಿಯೂ ಚಿತ್ತಾಕರ್ಷಕವಾಗಿಯೂ ಹೇಳಿದ್ದಾರೆ ನೋಡಿರಿ.

"ಜ್ಯೋತಿ ಬೆಳಗುತಿದೆ ವಿಮಲ ಪರಂಜ್ಯೋತಿ
ಬೆಳಗುತಿದೆ.

ಮಾತು ಮನಂಗಳಿಂದತ್ತತ್ತ ಮೀರಿದ
ಸಾತಿಶಯದ ನಿರುಪಾಧಿಕ ನಿರ್ಮಳ ||೨||

ಶಿವಧರ್ಮನಾಳವೆಂತೆಂಬ ಕಂಭದ ಮೇಲೆ
ಸುವಿವೇಕ ಹೃದಯಾಬ್ಜ ಪ್ರಣತೆಯೊಳು
ಸವೆಯದ ಸದ್ಭಕ್ತಿ ರಸತೈಲ ತೀವಿದ
ಪ್ರವಿಮಳ ಕಳೆಯೆಂಬ ಬತ್ತಿವಿಡಿದು ದಿವ್ಯ ||೧||

ಮುಸುಗಿಹ ವಿಷಯದ ಪತಂಗ ಬಿದ್ದುರುಳೆ ತಾ
ಹುಸಿಬಂದಿ ಯೆಂಬ ಕತ್ತಲೆಯಳಿಯೆ
ಉಸಿರಿ ಸುಜ್ಞಾನ ಪಂಚೋಟಿ ಮಹಾಪ್ರಭೆ
ಪಸರಿಸಿ ಮಾಯಾ ಕಾಳಿಕ ಘೋರ್ಧನುಪಮ ||೩||

ಪ್ರತಿಮಾಕಾರದ ಗುಣಪೂರಿತನು ಮುಟ್ಟದೆ
ಗಣನೆಗತೀತಾರ್ಥವನೆ ತೋರುವ
ಅಣುಮಾತ್ರ ಚಲನೆಯಿಲ್ಲದ ಮೋಕ್ಷ ಚಿಂತಾ
ಮಣಿಯೆನಿಸುವ ಶಂಭುಲಿಂಗವೆ ತಾನಾದ ||೪||

ಶ್ರೀ ಅರವಿಂದರ ಅನುಭವವಾಣಿಗೂ ಶರಣರ ಅನುಭಾವವಾಣಿಗೂ ಒಂದು ಬಗೆಯ ಹೊಂದಿಕೆಯನ್ನು ಇಲ್ಲಿ ಕಾಣುತ್ತೇವೆ.

ಇಂತಹ ಶ್ರೀ ಅರವಿಂದರ ಅನುಭವಾಮೃತ ಇಂದಿನ ಜಗತ್ತಿಗೆ ತಾರಕಮಂತ್ರವಾಗಿದೆ. ಶ್ರೀ ತಾಯಿಯವರು ಈ ಜ್ಞಾನಧ್ಯಾನೋಹವನ್ನು ಮುಂದುವರಿಸಿಕೊಂಡು ಬಂದಿರುವ ಮಹಾಶಕ್ತಿಯಾಗಿದ್ದಾರೆ, ಭಾರತದ ಭವಿತವ್ಯಕ್ಕೆ ಇದು ಅವಶ್ಯವಾಗಿ ಬೇಕು. ಯಾಕೆಂದರೆ ಜಗತ್ತಿನ ವಿವಿಧ ಜನಾಂಗಗಳ ಯೋಗಕ್ಷೇಮ ಇದರಲ್ಲಡಗಿದೆ.

## ಭಾರತದ ಉಜ್ವಲ ಭವಿತವ್ಯ

ಇಂದು ನಾವು ರಾಷ್ಟ್ರದ ಧರ್ಮವನ್ನು ಮೈಗೂಡಿಸಿಕೊಳ್ಳಬೇಕಾಗಿದೆ, ಸ್ವದೇಶವೇ ನಮ್ಮ ತಾಯಿ. ನಾವೆಲ್ಲ ಆ ತಾಯಿಯ ಮಕ್ಕಳು ಎಂಬ ಭಾವನೆಯು ಸರ್ವತ್ರ ಜಾಗ್ರತವಾಗದೆ ಬಂಧುಭಾವವುಂಟಾಗದು. ಸ್ವದೇಶಪ್ರೇಮದ ತಳಹದಿಯು ಮಾತೆಯ ಪೂಜೆಯಿಂದ ಹಾಕಲ್ಪಡಬೇಕು. ಭಾರತಮಾತೆಗೆ ಆತ್ಮಾರ್ಪಣ ಮಾಡುವ ಮಾರ್ಗವನ್ನು ಸ್ವೀಕರಿಸುವದರಲ್ಲಿಯೇ ನಮ್ಮ ದೇಶದ ಉದ್ಧಾರವಿದೆ. ಇದನ್ನು ಶ್ರೀ ಅರವಿಂದರು ಅಲೀಪುರ ಜೇಲಿನಲ್ಲಿದ್ದಾಗಲೇ ಕಂಡುಕೊಂಡು ಹೇಳಿರುವದು ಇವತ್ತಿಗೂ ಗಮನಾರ್ಹವಾಗಿದೆ. "ನಮ್ಮಲ್ಲಿ ರಾಷ್ಟ್ರೀಯತ್ವವಿಲ್ಲ; ಇಲ್ಲವೆ ಸರ್ವತ್ರ ಐಕ್ಯದ ಅಭಾವ ಕಂಡುಬರುವದಕ್ಕೆ ನಮ್ಮೊಳಗಿನ ಮಾತೃದರ್ಶನದ ಅಭಾವವೇ ಕಾರಣ. ನಮ್ಮಲ್ಲಿ ಅದೆಷ್ಟೋ ರಾಷ್ಟ್ರಪುರುಷರು ಆಗಿಹೋದರಾದರೂ ಅವರಾರಿಗೂ ಸಂಪೂರ್ಣ ಭಾರತಮಾತೆಯ ದರ್ಶನವಾಗಿರಲಿಲ್ಲ." ಈ ಅವಗುಣದ ಪರಿಹಾರ ಮಾರ್ಗವನ್ನೂ ಅವರು ಅಂದೇ ಉಸುರಿದ್ದಾರೆ. "ಭಾರತಮಾತೆಗಾಗಿ ಅದೆಂಥ ತ್ಯಾಗವನ್ನು ಸಹ ಮಾಡಲಿಕ್ಕೆ ಸಿದ್ಧವಾದ ದಿನವೇ ಪರಸ್ಪರರೊಳಗಿನ ಭಿನ್ನಭಾವ ಅಳಿದು ಬಂಧುಭಾವವು ಉದಯಿಸುತ್ತದೆ. ನಮ್ಮ ನಮ್ಮ ಪ್ರಾಂತಿಕ ಭಾಷೆಗಳನ್ನು ಹಾಗೆಯೇ ಉಳಿಸಿಕೊಂಡು ಹಿಂದಿಯನ್ನು ಸರ್ವದೇಶ ಭಾಷೆಯೆಂದು ಭಾವಿಸಿದರೆ ನಾವು ನಮಗಡ್ಡವಾಗುವ ಭೇದಭಾವದ ಗೋಡೆಗಳನ್ನು ಸಹಜವಾಗಿ ದೂರಗೊಳಿಸಲಿಕ್ಕೆ ಬರುತ್ತದೆ. ಆಗ ಹಿಂದು—ಮುಸಲ್ಮಾನ ಭೇದ ಉಳಿಯದು" ಭಾರತದ ಭವ್ಯ ಭವಿತವ್ಯದಲ್ಲಿ ಮಾನವ ಜನಾಂಗದ ಯೋಗಕ್ಷೇಮವಡಗಿದೆ ಎಂದು ನಿರ್ದಿಷ್ಟವಾಗಿ ತಿಳಿದುಕೊಂಡ ಶ್ರೀ ಅರವಿಂದರು ಮಾನವ ಜನಾಂಗಕ್ಕೆ ಹೇಳಿದ ಸಂದೇಶವು ಬಹು ವಿಚಾರಪೂರ್ಣವಾಗಿದೆ.

"ಆಳಾದರೇನು ಅರಸಾದರೇನು
ಆನಂದ ಭೋಗದಲ್ಲಿ
ಬಾಳಾದರೇನು ಹಾಳಾದರೇನು
ಈ ಪೂರ್ಣಯೋಗದಲ್ಲಿ"

ಸತ್ಯಂ ಶಿವಂ ಸುಂದರಂ





# ಚಂದ್ರದೇವರು ಮತ್ತು ಮುಚ್ಚಂಜೆ

೧

ಬಳಿಕಾತ ಕದಿರಾಂತನಂ ಪೇಲೆ ನೆತ್ತಿಯೊಳಗೆ
ಜೊನ್ನದವಿಸರವಂ ಮುಕ್ಕುಳಿಪನಂ ಗಳಿಗೆಗಳಿಗೆ
ಕಂಡನಾ ಧೀರ ಹೊಳೆಯುತಿಹನಂ ಬಾನಿನೊಳಗೆ
ಮಲಿದಾಡುತಿಹ ಬಿದೆಯಗೂಳಿಯೊಲು ಗೊಟ್ಟಿಯೊಳಗೆ

೨

ಜಗವಿದರ ಪಾಪಗಳ ನಾಶಗೈವವನಂ
ಆ ಹಿರಿಯ ಕಡಲನೇ ಹೆಚ್ಚಿಸುತ್ತಿಹನಂ
ಸರ್ವ ಭೂತಂಗಳನು ಪೊರೆಸುತ್ತಲಿಹನಂ
ಕಂಡ ವಿಜಯಂಗೈವ ಕುಳಿರ ಕದಿರವನಂ

ಆವ ಕಳೆ ಭೂಮಿಯೊಳಗೆ ಭೂಧರಧೊಳಿಹುದೋ
ಆವ ಕಳೆ ಬೈಗಿನೋಳ್ಗ ಸಾಗರದೊಳಿಹುದೋ
ಆವ ಕಳೆ ನೀರಿನೊಳು ತಾವರೆಯೊಳಹುದೊ
ಆ ಕಳೆಯೆ ಮೆರೆಯುತಿದೆ ಚಂದ್ರನೊಳಹೊ

೩

ಬೆಳ್ಳಿ ಪಂಜರದಲ್ಲಿ ಹಂಸವೆಂತಂತೆ
ಮಂದರದ ಕಂದರದಿ ಸಿಂಗವೆಂತಂತೆ
ಮದಿಸಿದಾನೆಯ ಮೇಲೆ ವೀರನೆಂತಂತೆ
ಶಶಿಯು ಮುಂಬರದೊಳಗೆ ಹೊಳೆದನೆಂತಂತೆ

೪

ಕೊರೆವ ಜಲಬಿಬ್ಬನಿಯ ಕೆಸರ ನೀಗುತಲಿ
ರವಿ ಕರವ ಪಿಡಿಯುತ ತಮವ ನೀಗುತಲಿ
ಇಂಬುಗೊಳೆ ಕಳೆಯುಸಿರಿ ಕೊಳೆಯ ತೊಳೆಯುತಲಿ
ಚಂದ್ರದೇವರು ಹೊಳೆವ ಮೊಲದ ಕುರುಹಿನಲಿ

೫

ಬಂಡೆ ಪೋಗಡೆ ನಿಲ್ಲುತೆಂತಾ ಮೃಗೇಂದ್ರ
ಹಿರಿಯ ಹುಯಿಲೊಳು ನುಗ್ಗುತೆಂತಾ ಗಜೇಂದ್ರ
ರಾಜ್ಯ ಕೈಸೇರುವಂದೆಂತಾ ನರೇಂದ್ರ
ಅಂತೆ ಹೊಳಪಾನುತ್ತ ಬಲುಮೆರೆವ ಚಂದ್ರ

೬

ಮೂಡುತಿಹ ಚಂದ್ರಮನ ಬೆಳಕಿನಿಂ ಕಳೆಯೆ ದೋಷ
ಎದ್ದು ರಕ್ಕಸರು ತಿಂಬ ಮಾಂಸದಿಂ ಬೆಳೆಯೆ ದೋಷ
ಹೆಂದುಳ್ಳಿ ಹೆಂಗಳಿಂದೇರುತಿರೆ ಚಿತ್ತದೋಷ
ದಿವ್ಯ ಕಳೆಯಿಂಮೆರೆದನಂದು ಪ್ರದೋಷ

(ವಾಲ್ಮೀಕಿ ರಾಮಾಯಣದಿಂದ)

—ಪು. ತಿ. ನರಸಿಂಹಾಚಾರ್

# ನೆಲತಾಯಿ





೧

ಮುಗಿಲು ಮೋಡದ ಮೇಲೆ ಏಳು ಬಣ್ಣದ ಬಿಲ್ಲು
ಮೂಡಿ ಕರಗಿತು ಹೊತ್ತು ಮುಳುಗುತ್ತಲೆ !
ದಿಕ್ಕು ದಿಕ್ಕನು ಸುತ್ತಿ ಮುಟ್ಟಿ ಹೇಳಿತು ಗಾಳಿ—
ಕತ್ತಲೊಳು ಮೋಡ, ಹೆತ್ತಳು ಮಿಂಚನು.

೨

ಬಯಕೆ ಉಸಿರನುಗರೆದು ತಂಪುಕಾಣದೆ ತಾಯಿ
ಬತ್ತಲಲೆ ಮಲಗಿರಲು ರಾಮ! ರಾಮ!!
ತಾಯೊಲವಿನಾತಂಪು ಕಾಣಲಾರದೆ ಬೀಜ.
ಹುಟ್ಟುತೊಟ್ಟಿಲನರನೆ ಅಳುತಲಿತ್ತು.

೩

ಕಾರ್ಮುಗಿಲಿನೊಡಲಿಂದ ಮಿಸುನಿಗರ್ಭವ ಸೀಳಿ
ಸಿಡಿಲು ಸಿಡಿಯಿತು. ತಾಯೊಲವನರಸಿ
ಉಸಿರುಗಟ್ಟಿದ ನೆಲಕೆ ದಾಳಿಇಕ್ಕಲು ಗಾಳಿ
ನೆಲ ಮುಗಿಲು ತುಂಬಿರಲು ಕೆಂಪು ಧೂಳಿ !

೪

ಅಡ್ಡ ಮಳೆ ಬಿದ್ದು ಏಳು ಹೋಳಾದರೂ
ನೆಲದೆದೆಗೆ ಇಳಿದಿತ್ತು ತಾಯಿಕರುಣೆ ;
ಸತ್ತ ಮಕ್ಕಳನೆಲ್ಲ ಬಚ್ಚಿಟ್ಟು ಮಣ್ಣೊಳಗೆ
ಮಸಣವೂ ಹೆರಿಗೆ ಮನೆ ಈಗವಳಿಗೆ !

೫

ಓ ತಾಯೆ, ಬಂದಿಹೆನು ಆಸೆಗಡಲನು ಹೊತ್ತು :
ಕಲ್ಲು ಮನಸನು ಮಾಡಿ ತಳ್ಳಬೇಡ
ನಿನ್ನ ಮೈ ರಕುತವೇ ನನ್ನ ಮೈಯೊಳಗಿರಲು
ನಿನ್ನ ಕರುಣೆಯ ಹರಕೆ ಇರಿಸು ಎನಗೆ

—ರಾಘವೇಂದ

# ನೂರು ವರುಷ ಕರ್ಮ ಮಾಡುತ್ತಲೇ ಬಾಳಬೇಕು



ರಂಗನಾಥ ದಿವಾಕರ

## ಅಖಂಡ ಕರ್ಮ

ನಾನೊಮ್ಮೆ ಕರ್ಮಕ್ಕೆ, ಕ್ರಿಯೆಗೆ, ಪ್ರವೃತ್ತಿಗೆ ಬೇಸತ್ತು ಕರ್ಮರಹಿತವಾದ ನಿವೃತ್ತಿಯ, ಪೂರ್ಣ ವಿಶ್ರಾಂತಿಯ ಶೋಧವನ್ನು ಮಾಡಲು ಹೊರಟೆನು. ಅದು ನನಗೆ ಎಲ್ಲಿಯೂ ಸಿಕ್ಕಲಿಲ್ಲ. ನಿವೃತ್ತಿ, ವಿಶ್ರಾಂತಿ, ನಿದ್ರೆ ಇವು ಕೂಡ ಒಂದು ಬಗೆಯ ಕರ್ಮವೇ ಎಂಬುದು ಪ್ರತೀತಿಗೆ ಬಂದಿತು. ಇಷ್ಟೇ ಅಲ್ಲ, ಸಾವು ಕೂಡ ಒಂದು ಕ್ರಿಯೆಯೇ ಇರುವದು, ಎಂಬುದನ್ನು ಮನಗಂಡೆನು. ಕ್ರಿಯಾರಹಿತ ನಿವೃತ್ತಿಯಾಗಲಿ ಕರ್ಮರಹಿತ ಶಾಂತಿಯಾಗಲಿ, ಇವು ಕಾಲ್ಪನಿಕ ವಸ್ತುಗಳು. ಇವುಗಳಿಗೆ ಯಥಾರ್ಥ ಅಸ್ತಿತ್ವವಿಲ್ಲ. ಅಂತರ್‌ಜೀವನದಲ್ಲಿ, ಬಹಿರ್‌ಜಗತ್ತಿನಲ್ಲಿ ಇವು ಎಲ್ಲೆಲ್ಲಿಯೂ ಕಂಡುಬರುವದಿಲ್ಲ. ಇವುಗಳನ್ನು ಹುಡುಕಾಡುವುದೆಂದರೆ ಮೃಗಜಲದ ಅಥವಾ ಬಿಸಿಲ್ಗುದುರೆಯ ಬೆನ್ನು ಬಿದ್ದಂತೆ. ಅದು ವ್ಯರ್ಥ.

ಜೀವನವೆಂಬುದು ಸರ್ವಥಾ ಕರ್ಮಮಯ ಇರುವದು. ಪೂರ್ವಜೀವನ, ಪುನರ್ಜೀವನ ಇವು ಇರಲಿ ಬಿಡಲಿ. ಪ್ರತಿಕ್ಷಣವೂ ನಮ್ಮ ಅನುಭವಕ್ಕೆ ಬರುವ ಈ ಲೋಕದ ಜೀವನವನ್ನು ಪರೀಕ್ಷಿಸಿದರೆ ಅದು ಅಖಂಡ ಕರ್ಮಮಯವೇ ಇರುವದು. ಜೀವನದೊಳಗಿಂದ ಕರ್ಮವನ್ನು ವಜಾ ಹಾಕಿದರೆ ಜೀವನವೇ ಶೂನ್ಯವಾಗಿ ಬಿಡುವದು, ಕರ್ಮೇಂದ್ರಿಯಗಳನ್ನು ಸ್ಥಿರವಿರಿಸಿ ಜ್ಞಾನೇಂದ್ರಿಯಗಳನ್ನು ಏಕಾಗ್ರೀಕರಿಸಿ ಧ್ಯಾನಶಕ್ತಿಯಿಂದ ಸಮಾಧಿಯ ಶಾಂತಸುಖವನ್ನು ಅನುಭವಿಸುವ ಅಭ್ಯಾಸ ಮಾಡಿದರೂ ಅದು ಕೂಡ ಕ್ರಿಯೆಯೇ ಇರುವದು. ಅದೊಂದು ಸೂಕ್ಷ್ಮವಾದ ಚಿದ್ವ್ಯಾಪಾರವೇ ಸೈ.

ಈ ರೀತಿ ತಿಳಿದೂ ತಿಳಿಯದೆ, ಎಚ್ಚರಿರುವಾಗ ಎಚ್ಚರಿಲ್ಲದಿರುವಾಗ, ಬೇಕಾಗಿ ಬೇಕಾಗದೆ ನಾವು ಕ್ರಿಯಾಶೀಲರಾಗಿಯೇ ಇರುವೆವು. ಶಾಂತಿ, ಸುಖ, ಆನಂದ, ಸಂತೋಷ, ಸಮಾಧಾನ ಇವೆಲ್ಲವೂ ಕ್ರಿಯಾಯುಕ್ತ ಸ್ಥಿತಿಗಳೇ ಹೊರತು ಕ್ರಿಯಾರಹಿತ ಅಥವಾ ಕ್ರಿಯಾಶೂನ್ಯ ಸ್ಥಿತಿಗಳಲ್ಲ. ಕ್ರಿಯೆ ಎಂಬುದರಲ್ಲಿ ಅನಂತ ಪರ್ಯಾಯಗಳಿರಬಲ್ಲವು. ಆದರೆ ಕ್ರಿಯಾ ಅಥವಾ ಕರ್ಮರಾಹಿತ್ಯ ಎಂಬುದು ಒಂದು ಭ್ರಮ.

ಈ ಭ್ರಮೆಯು ಏಕೆ ಹುಟ್ಟಿತು? ನಾವು ಅದಕ್ಕೆ ಏಕೆ ಬಲಿಯಾಗಿರುವೆವು! ಎಂಬುದು ಪ್ರಸ್ತುತ ವಿಷಯವಲ್ಲ. ಆದುದರಿಂದ ಅದನ್ನು ಈಗ ಪರಿಶೀಲಿಸುವದಿಲ್ಲ.

## ಅಖಂಡ ಕರ್ಮದ ಸಾಕ್ಷಿ

ಕರ್ಮದ ಅಥವಾ ಕ್ರಿಯೆಯ ಸಾತತ್ಯದ ಬಗ್ಗೆ, ಅದರ ಅನಾದಿ ಅನಂತತ್ವದ ಬಗ್ಗೆ ಅಖಂಡ ಕರ್ಮಾನುಭವವನ್ನು ಕುರಿತು ಪೂರ್ವಿಕರು ಬೇಕಾದಷ್ಟು ಬರೆದಿದ್ದಾರೆ, ಹೇಳಿದ್ದಾರೆ. ವಿಶ್ವ, ವಿಶ್ವಾಂತರ್ಗತವಾದ ಪ್ರತಿ ವಸ್ತು ಕರ್ಮ ಮೂಲಕವೆ ಅಸ್ತಿತ್ವದಲ್ಲಿದೆ. ಅಣು ಪರಮಾಣುಗಳು, ಕಣ ಕಣಗಳು ಕೂಡ ಚಲಾಯಮಾನವಿರುವವು ಎಂದು ಗ್ರೀಕ್ ತತ್ತ್ವಜ್ಞನಾದ ಪಾಯಥೆಗೊರಾಸನು ಹೇಳಿರುವನು. ಗ್ರಹಮಂಡಲಗಳಲ್ಲಿರುವ ಚಟುವಟಿಕೆಗಳಷ್ಟೆ ಕ್ರಿಯೆಗಳು ಪ್ರತಿ ಪರಮಾಣುವಿನಲ್ಲಿಯೂ ನಡೆದಿವೆ ಎಂದು ವಿಜ್ಞಾನಿಗಳು ಸಾರಿರುವರು. ಅಸ್ತಿತ್ವವೆಂದರೊಂದು ಅನಂತ ಕ್ರಿಯಾಮಾಲೆ ಎಂದು ಪ್ರಸಿದ್ಧ ಆಂಗ್ಲ ಲೇಖಕನಾದ ಕಾರ್ಲಾಯಿಲನು ಒಡನುಡಿದಿರುವನು. ಯಾವ ಪ್ರಾಣಿಯೂ ಒಂದು ಕ್ಷಣ ಸಹ ಕ್ರಿಯಾರಹಿತ- ಅಕರ್ಮಕೃತ್ ಇರಲಾರದು ಎಂದು ಗೀತೆ ಪ್ರಮಾಣಮಾಡಿರುವದು.

ಕರ್ಮದ ಈ ಅನಂತತ್ವ, ಅಖಂಡತ್ವ, ಸಾತತ್ಯ ಇತ್ಯಾದಿ ಗುಣಗಳನ್ನು ಹೇಳುವಾಗಲೆ ಯಾರೂ ಕರ್ಮವನ್ನು ತಪ್ಪಿಸಲಾರರು. ನಿಜವಾಗಿಯೂ ಇದು ಬಿಡಲಾರದ ಕರ್ಮ ಎಂಬುದನ್ನೂ ಜ್ಞಾನಿಗಳು ನಮಗೆ ಹೇಳಿದ್ದಾರೆ. ನಾವು ಕರ್ಮವನ್ನು ಬಿಡಲಾರೆವು, ಕರ್ಮವು ನಮ್ಮನ್ನು ಬಿಡಲಾರದು. ಇವೆರಡೂ ಎಡೆಬಿಡದೆ ಅಂಟಿಕೊಂಡಿರುವ ನಂಟು ಎಂದರೆ ತಪ್ಪಾಗಲಿಕ್ಕಿಲ್ಲ'

## ಕರ್ಮಬಂಧನ

ಜಾಣರು ಈ ಅಂಟುನಂಟಿನಲ್ಲಿರುವ ಇನ್ನೊಂದು ಗುಣವನ್ನು ಹೇಳುವರು. ಅದೇನೆಂದರೆ, ಕರ್ಮವು ಬಂಧನಕಾರಿಯು: ಕ್ರಿಯೆಗೆ ಪ್ರತಿಕ್ರಿಯೆ ಕಟ್ಟಿಟ್ಟಂತೆ. ಕರ್ಮಚಕ್ರದಲ್ಲಿ ನಾವೆಲ್ಲರೂ ಸಿಕ್ಕಿಕೊಂಡಿದ್ದೇವೆ ಅದರೊಳಗಿಂದ ಪಾರಾಗುವದು ಸಾಧ್ಯವೇ ಇಲ್ಲ. ಅಸ್ತಿತ್ವವೇ ಒಂದು ಕರ್ಮ. ಅಂದ ಬಳಿಕ ಅಸ್ತಿತ್ವವೇ ಬೇಡಾದವರು ಕರ್ಮದಿಂದ ಮುಕ್ತರಾಗಬಲ್ಲರು! ಆದರೆ ಅಸ್ತಿತ್ವದಲ್ಲಿ ವಸ್ತುವಿಗೆ ನಾಶವೇ ಇಲ್ಲ: ಪರಿವರ್ತನೆ. ಪಲ್ಲಟ, ಪರ್ಯಾಯರೂಪ ಇವು ಇವೆ, ನಾಶವಿಲ್ಲ' ಹೀಗಿರುವಾಗ 'ಕರ್ಮಬಂಧನ' ಎಂಬುದರ ಅರ್ಥವೇನು ?

ಅಸ್ತಿತ್ವದಲ್ಲಿದ್ದುದೆಲ್ಲ ಕರ್ಮಕ್ಕೆ ಒಳಗು. ಅಂದ ಬಳಿಕ ಪರಮಾತ್ಮನು, ವಿಶ್ವಾತ್ಮನು ಕೂಡ ಕರ್ಮಕ್ಕೆ ಒಳಗು. ಪರಮಾತ್ಮನ ಅಸ್ತಿತ್ವ ಹಾಗೂ ಅವನು ಕರ್ಮಕ್ಕೆ ಒಳಗಾಗಿರುವದು ಇವು ಏಕಕಾಲಕ್ಕೆ ಇರುವ ಮಾತುಗಳು. ಈ ಅಂಟುನಂಟನ್ನು ಬಿಡಿಸುವದೇ ಸಾಧ್ಯವಿಲ್ಲ. ಅಥವಾ ಕರ್ಮದ ಅಸ್ತಿತ್ವದಿಂದಲೇ ಪರಮಾತ್ಮನ ಅಸ್ತಿತ್ವ ಸಿದ್ಧವಾಗುವದು ಎಂದು ಹೇಳಿದರೂ ಸರಿಯೇ. ಇದನ್ನು ತಿಳಿದುಕೊಂಡರೂ 'ಕರ್ಮಬಂಧನ'ದ ಸ್ವರೂಪ ಗೊತ್ತಾಗುವದಿಲ್ಲ.

"ನಾನು ಈ ಕರ್ಮವನ್ನು ಮಾಡಿದ್ದೇನೆ, ಈ ಕರ್ಮದ ಫಲಾಫಲಗಳನ್ನು ನಾನು ಭೋಗಿಸುತ್ತೇನೆ," ಎಂಬ ಅಹಂ ಮೂಲಕವಾದ ಭಾವನೆಗಳೇ ಈ ಕರ್ಮಬಂಧನ ಎಂಬುದಕ್ಕೆ ಕಾರಣ, 'ಕ್ರಿಯೆ-ಪ್ರತಿಕ್ರಿಯೆ'ಯ ನ್ಯಾಯದಿಂದ ಕರ್ಮಚಕ್ರವು ನಡೆದೇ ಇರುವದು. ಆ ಮೂಲಕ ಕರ್ಮವಿಪಾಕವನ್ನು, ಕರ್ಮಫಲವನ್ನು ಯಾರೂ ತಪ್ಪಿಸಲಾರರು. ಅದು ವಿಧಿ, ಬ್ರಹ್ಮಲಿಖಿತ ಗಾಳಿ ಸುಳಿವಂತೆ, ನೀರು ಹರಿದಂತೆ, ಅದು ಸ್ವಭಾವಸಿದ್ಧ. ಅದು ಕರ್ಮಬಂಧನವಲ್ಲ, ಕರ್ಮದ ಸರಪಳಿಯಲ್ಲಿಯ ಒಂದು ಕೊಂಡಿ ಹಿಂದಿನ ಮುಂದಿನ ಕೊಂಡಿಗಳಿಂದ ಅದು ಕೀಲಿಸಿದ್ದು. ಅದಕ್ಕೆ 'ಬಂಧನ' ಎಂಬ ಹೆಸರು ಸಲ್ಲದು. ಅಹಂಭಾವಯುಕ್ತವಾದ ಜೀವ. ಇದು ನನ್ನದು ತನ್ನದು ಎಂಬ ಭಾವನೆಗಳಿಂದ ಯುಕ್ತವಾದ ಚಿತ್ತಕ್ಕೆ, ವ್ಯಕ್ತಿಮಾತ್ರಕ್ಕೆ ಮಾತ್ರ 'ಕರ್ಮಬಂಧನ' ಎಂಬುದು ಇರಬಲ್ಲದು. ಅರ್ಥಾತ್ ಅಹಂಭಾವ, ಆಸಕ್ತಿ, ಫಲಾಶೆ, ಮಹತ್ವಾಕಾಂಕ್ಷೆ ಇವೇ ಕರ್ಮಬಂಧನದ ಬೀಜಗಳು.

## ಮುಕ್ತಿ

ಕರ್ಮದಿಂದ ಯಾರೂ ಮುಕ್ತರಾಗಲಾರರು. ಆದರೆ ಕರ್ಮಬಂಧನದಿಂದ ಮುಕ್ತರಾಗಬಹುದಾದ ಶಕ್ತಿ ಜೀವಗಳಲ್ಲಿದೆ. ಆದುದರಿಂದಲೆ ಕೆಸರಿನಲ್ಲಿ ಬೆಳೆದ ಕಮಲದಂತೆ, ಆಕಾಶದಲ್ಲಿ ಸುಳಿವ ಗಾಳಿಯಂತೆ ನಿರ್ಲಿಪ್ತರಿರುವದು ಸಾಧ್ಯ ಎಂದು ಹೇಳಲಾಗುವದು. ಅಹಂಭಾವಶೂನ್ಯರಾಗಿ, ಫಲಾಶೆ ಬಿಟ್ಟು, ಪರಮಾತ್ಮಾರ್ಪಣ ಬುದ್ಧಿಯಿಂದ, ವಿಶ್ವದಲ್ಲಿ, ಸಂಸಾರದಲ್ಲಿ ವಿಹರಿಸುವವರು ಕರ್ಮಬಂಧನದಿಂದ ಮುಕ್ತರಾಗಬಲ್ಲರು. ಮುಕ್ತರಿರಬಲ್ಲರು.

ಸ್ವತಃ ಪರಮಾತ್ಮನು ಅನಾದಿಯಿಂದ, ಸತತ ಕರ್ಮಪ್ರವರ್ತಕನಾಗಿದ್ದರೂ ಅವನು ಕರ್ಮಬಂಧನದಿಂದ ಮುಕ್ತನು, ನಿತ್ಯಮುಕ್ತನು,

ಅವನ [illegible] [illegible] [illegible] ಪವರಿಂದ, ಏಕಮೇವಾದ್ವಿತೀಯನಿರುವದರಿಂದ 'ಅಹಂ' ಎಂಬುದಕ್ಕೆ ಆಸ್ಪದವೇ ಇಲ್ಲ!

## ಜೀವಗಳ ಮುಕ್ತಿ

ಇನ್ನು ಅಹಂಭಾವಕ್ಕೆ ಒಳಗಾದ ವ್ಯಕ್ತಿಯು ಕರ್ಮಬಂಧನದಿಂದ ಮುಕ್ತನಾಗಬೇಕಾದರೆ ಪರಮಾತ್ಮನಂತೆಯೇ ಅಹಂಭಾವಶೂನ್ಯನಾಗಲಿಕ್ಕೆ ಬೇಕು. ಕರ್ಮಬಂಧನದಿಂದ ಮುಕ್ತನಾಗಲಿಕ್ಕೆ ಮಾನವನಿಗೆ ಅದೊಂದೇ ಹಾದಿ. ಅರ್ಥಾತ್ ಪರಮಾತ್ಮಪ್ರವರ್ತಿತ ಅಥವಾ ವಿಶ್ವಾತ್ಮಪುರಸ್ಕೃತ ಕರ್ಮಚಕ್ರದಲ್ಲಿ ಸಿಕ್ಕಿಕೊಂಡಿದ್ದರೂ ವ್ಯಕ್ತಿಯು ತನ್ನ ಅಹಂಭಾವವನ್ನು ಪೂರ್ಣ ಬಿಟ್ಟು ಇದು ಪರಮಾತ್ಮನ ಕರ್ಮಚಕ್ರ, ಅದರಲ್ಲಿ ನಾನು ಕೇವಲ ನಿಮಿತ್ತಮಾತ್ರನಾಗಿ ವರ್ತಿಸುತ್ತಿರುವೆ, ಎಂಬ ಭಾವನೆಯನ್ನು ಸ್ಥಿರೀಕರಿಸುತ್ತ ಹೋದ ಮಟ್ಟಿಗೆ ಅವನು ಕರ್ಮಬಂಧನದಿಂದ ಮುಕ್ತನಾಗಬಲ್ಲನು. ವ್ಯಕ್ತಿಗೆ ದೇಹಮನಾದಿಗಳ ಸಂವಿತ್ತು ಇರುವವರೆಗೆ ಈ ಸಿದ್ಧಿ ಸಿಕ್ಕುವದು ದುರ್ಲಭ. ಈ ವಿಶ್ವ, ವಿಶ್ವದಲ್ಲಿಯ ಅನಂತ ಕ್ರಿಯಾಮಾಲೆ ಇವೆಲ್ಲ ವಿಶ್ವಾತ್ಮನ ಕರ್ಮಮಯ ಲೀಲಾಜಾಲ, ಇದರಲ್ಲಿ ತಾನೊಂದು ಕ್ಷುದ್ರ ಯಂತ್ರವತ್ ನಡೆದಾಡುವ ಪಾತ್ರ ಎಂಬ ಭಾವನೆಯಿಂದ ವರ್ತಿಸುತ್ತ ಹೋಗುವದೇ ಈ ಧ್ಯೇಯದ ಸಾಧನಮಾರ್ಗ.

ಕರ್ಮ ಬೇರೆಯಲ್ಲ ಶಕ್ತಿ ಬೇರೆಯಲ್ಲ. ಶಕ್ತಿ ಸೂಕ್ಷ್ಮ ರೂಪ, ಕರ್ಮ ಸ್ಥೂಲ ರೂಪ. ವಿಶ್ವದ ಲೀಲೆ ಬೇರೆಯಲ್ಲ, ಪರಮಾತ್ಮ ಬೇರೆಯಲ್ಲ. ಪರಮಾತ್ಮನೆ ಶಕ್ತಿ, ವಿಶ್ವಲೀಲೆಯೇ ಕರ್ಮ. ವ್ಯಕ್ತಿ ವಿಶ್ವರಂಗದ ಒಂದು ಪಾತ್ರ. ಇದನ್ನು ಅರಿತು, ಆ ಅರಿವಿನಲ್ಲಿ ಬೆರೆತು, ಆ ಬೆರಿಕೆಯಲ್ಲಿ ತನ್ನನ್ನು ಮರೆತು, ಆ ಮರವಿನ ಕೊನೆಯ ಮೊನೆಯಲ್ಲಿ ಕುಣಿ ಕುಣಿದಾಡುವ, ನಲಿ ನಲಿದಾಡುವ ಲೀಲಾಯೋಗವನ್ನು ಆಚರಿಸುವವನಿಗೆ ಅದೆಲ್ಲಿಯ ಕರ್ಮಬಂಧನ?

ಆದರೆ ಅವನು ಕರ್ಮವನ್ನು ಮೀರುವನೆ? ಇಲ್ಲ, ಸರ್ವಥಾ ಇಲ್ಲ. ಕರ್ಮವನ್ನು ಯಾರೂ ಮೀರಲಾರರು; ಯಾರೂ ಬಿಡಲಾರರು. ಕರ್ಮವನ್ನು ಯಾರೂ ಬಿಡಬಾರದು. ಅನಂತ ಶಕ್ತಿಶಾಲಿ ವಿಶ್ವಾತ್ಮನು ಅನಂತ ಕರ್ಮಗಳನ್ನು ನಿರಂತರ ಮಾಡುತ್ತಿರುವಾಗ ಅವನ ಅಣ್ವಂಶನಾದ ಜೀವನು ಕರ್ಮವನ್ನು ಬಿಡುವ ಬಗೆ ಯಾವದು?

ಆದುದರಿಂದಲೆ ವಿಶ್ವವೆಲ್ಲ ಪರಮಾತ್ಮನ ನಿವಾಸಸ್ಥಾನ ಎಂದು ಹೇಳಿ, ವಸ್ತುಗಳನ್ನೆಲ್ಲ ತ್ಯಾಗಭಾವದಿಂದ ಪ್ರಸಾದರೂಪವಾಗಿ ಭೋಗಿಸಬೇಕು, ಎಂದು ವಿಧಿಸಿ ಈಶಾವಾಸ್ಯೋಪನಿಷತ್ತು ಕರ್ಮಬಂಧನದಿಂದ ಮುಕ್ತವಾಗುವ ಮಾರ್ಗವನ್ನು ಸ್ಪಷ್ಟವಾಗಿ ಹೇಳಿದೆ:

ಕರ್ಮವನ್ನು ಮಾಡುತ್ತಲೆ ಈ ಲೋಕದಲ್ಲಿ ನೂರು ವರುಷ ಸರಿಯಾಗಿ ಬಾಳುವ ಸಂಕಲ್ಪವನ್ನು ಮಾಡಬೇಕು. ಈ ಸಂಸಾರವನ್ನು ಗೆಲ್ಲುವ ಮಾರ್ಗ ಇದೊಂದೇ. ಈ ರೀತಿ ನಡೆದರೆ ಕರ್ಮಲೇಪವಾಗದು, ಕರ್ಮಬಂಧನವು ಬಾಧಿಸದು.

ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್|

ಈ ರೀತಿ ವರ್ತಿಸಿದರೆ, "ನ ಕರ್ಮ ಲಿಪ್ಯತೇ ನರೇ," ಕರ್ಮವು ಬಂಧನಕಾರಿಯಾಗುವುದಿಲ್ಲ, ಕರ್ಮದ ಲೇಪವಾಗುವುದಿಲ್ಲ, ಮನುಷ್ಯನು, ಆಯಾ ವ್ಯಕ್ತಿಯು 'ಪದ್ಮಪತ್ರ ಮಿವಾಂಭಸಾ' ಇರಬಲ್ಲನು; ನೀರಿನಲ್ಲಿಯೇ ಬೆಳೆದ ಕಮಲದಲಕ್ಕೆ ನೀರಿನ ಬಾಧೆ ಎಂಬುದು ಇರುವುದಿಲ್ಲ.

## ಮುಕ್ತಿಯ ಹಲವು ಮಾರ್ಗಗಳು

ಮುಕ್ತಿ ಎಂದರೆ ಸಾವಿನ ನಂತರ ಮುಟ್ಟತಕ್ಕ ಒಂದು ಸ್ಟೇಶನ್ ಅಥವಾ ಊರಲ್ಲ. ಅದೊಂದು ಚಿತ್ ಸ್ಥಿತಿ: ಬದುಕಿರುವಾಗಲೇ ಪಡೆಯತಕ್ಕ ಚಿತ್ತದ ಚಿದ್ಗತಿ, ಚಿದವಸ್ಥೆ.

ಕರ್ಮ ಬಿಡಲಾಗದು: ಯಾಕಂದರೆ ಅದು ನಿರಂತರವಿರುವ ಅವಸ್ಥೆ. ಅದು ವ್ಯಕ್ತಿಕೃತವಲ್ಲ. ಅದು ವಿಶ್ವಕೃತ. ಕರ್ಮಬಂಧನವು ವ್ಯಕ್ತಿಕೃತ; ಯಾಕಂದರೆ 'ನಾನು ನನ್ನದು' ಎಂಬ ಅಹಂಭಾವದ ಮೂಲಕ ಅದು ಆಗಂತುಕವಾಗಿ ಹುಟ್ಟಿದುದು. ಆ ಬಂಧನವನ್ನು ಹೋಗಲಾಡಿಸಿ, ಆ ಕರ್ಮಲೇಪವನ್ನು (ನ ಲಿಪ್ಯತೇ) ತಪ್ಪಿಸಿ ಕರ್ಮಬಂಧನದಿಂದ ಮುಕ್ತವಿರುವ ಒಂದು ಮಾರ್ಗವನ್ನು ಈಶಾವಾಸ್ಯವು ಹೇಳಿದಂತಾಯಿತು. ಇತರ ಮಾರ್ಗಗಳೇನಾದರೂ ಇವೆಯೋ?

ತತ್ತ್ವತಃ ಒಂದೇ ಮಾರ್ಗ. ಆದರೆ ಅದರಲ್ಲಿ ಪರ್ಯಾಯಗಳಿವೆ ಎನ್ನಬಹುದು.



# ಕರ್ಮ ಸಮಾಧಿ ಹಾಗೂ ಇತರ ಸಮಾಧಿಗಳು

ಗೀತೆಯಲ್ಲಿ ಮೂರನೆಯ ಅಧ್ಯಾಯದಲ್ಲಿ ಎಲ್ಲವೂ 'ಬ್ರಹ್ಮ' ಎಂದು ಹೇಳಿ 'ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮಸಮಾಧಿನಾ' ಎಂದು ಹೇಳಲಾಗಿದೆ. ಬ್ರಹ್ಮ ಕರ್ಮದಲ್ಲಿ ಆತ್ಯಂತಿಕತನ್ಮಯತೆ ಪಡೆದವನಿಗೆ ಬ್ರಹ್ಮ ಕರ್ಮಸಮಾಧಿ ಸಾಧ್ಯ. ಧ್ಯಾನಸಮಾಧಿ, ಭಾವಸಮಾಧಿ ಯಂತೆ ಅವುಗಳಷ್ಟೇ ಸತ್ಯವಾದುದು, ಅನುಭವಿಸಲಿಕ್ಕೆ ಬರುವಂಥ ಜೀವವಸ್ಥೆ ಅದು, ಎಂದು ಗೀತೆ ಸಾರಿದೆ!

ಇನ್ನೊಂದೆಡೆಗೆ ಗೀತೆಯು ಅರ್ಜುನನಿಗೆ, ನೀನು ನಿಮಿತ್ತಮಾತ್ರನಾಗಿ ನಿನ್ನ ಪಾಲಿಗೆ ಬಂದ ಕರ್ಮ ವನ್ನು ಮಾಡು, ಎಂದು ಹೇಳಿದ್ದಾನೆ. ಹಾಗೆ, ಆ ವೃತ್ತಿಯಿಂದ ವಿಶ್ವಕರ್ಮದ ನಿಜಸ್ವರೂಪವನ್ನರಿತು 'ತಾನು ಕರ್ತನಲ್ಲ' ಎಂಬ ನಂಬಿಗೆಯಿಂದ, ನಿಷ್ಠೆ ಯಿಂದ ಕರ್ತವ್ಯಕರ್ಮವನ್ನು ಮಾಡಿದರೆ ಕರ್ಮವು ಬಂಧನಕಾರಿಯಾಗಲಾರದು. ಅದು ಕೂಡ ಒಂದು ಮುಕ್ತಿಪಥ.

ಇದೇ ರೀತಿ, ವಿಶ್ವಶಕ್ತಿ ಎಂಬುದು, ವಿಶ್ವಾತ್ಮ ನೆಂಬುದು 'ಪುರುಷವಿಧವು' ಎಂಬ ಭಾವನೆಯಿಂದ ಪುರುಷೋತ್ತಮನಿಗೆ ಸರ್ವಸಮರ್ಪಣೆ ಮಾಡಿ ವರ್ತಿಸಿ ದರೆ ಅವನು ಸರ್ವಪಾಪಗಳಿಂದ ಅರ್ಥಾತ್ ಕರ್ಮ ಬಂಧನದಿಂದ ಸಹ ಭಕ್ತನನ್ನು ಮುಕ್ತಮಾಡುವನು. ಇದೇ ಗೀತೆಯಲ್ಲಿ ಕೊಟ್ಟ ಪರಮಾತ್ಮನ ಆಶ್ವಾಸನ, ಭರವಸೆ, ವಚನ!

ಇನ್ನು ಒಂದು ಮಾರ್ಗವುಂಟು. ಕರ್ಮಜಾಲ, ಕರ್ಮ ಚಕ್ರ ಎಂಬುದು ನಿರಂತರವಾಗಿ ಸರ್ವಸ್ವವನ್ನೂ ವ್ಯಾಪಿಸಿದೆ. ಈ ಕರ್ಮವು 'ನನ್ನನ್ನು' ಕೂಡ ವ್ಯಾಪಿ ಸಿದೆ, ಬಂಧಿಸಿದೆ ಎಂದು ತಿಳಿದು 'ನಾನು ಬದ್ಧನು' 'ನಾನು ಸುಖಿಯು,' 'ನಾನು ದುಃಖಿಯು' ಎಂದು ನಾನು ತೊಳಲಾಡುತ್ತಿದ್ದೇವೆ. ಆದರೆ ಆ ರೀತಿ ತೊಳ ಲಾಡುವ 'ನನ್ನನ್ನು' ನಾನು ನೋಡುತ್ತೇನೆ! ಅಂದ ಬಳಿಕ ತೊಳಲಾಡುವ ಅಥವಾ ಕರ್ಮದಿಂದ ಬದ್ಧವಾದ ನಾನು ಹಾಗೂ 'ಕರ್ಮಬದ್ಧನನ್ನನ್ನು' ನೋಡುವ 'ನಾನು' ಬೇರೆ ಬೇರೆ ಇದ್ದೇವೆ. ಹೀಗೆಯೇ ಅರಸುತ್ತ ಹೋದಲ್ಲಿ 'ನಾನು' ಎಂಬುದು ಶುದ್ಧ ಸಾಕ್ಷಿರೂಪ ಮಾತ್ರ ಉಳಿಯುವದು. ಅದು ಬದ್ಧ ಸ್ಥಿತಿಯಲ್ಲಿರದೆ ಸಿದ್ಧಸ್ಥಿತಿಯಲ್ಲಿದ್ದ ವಸ್ತು! ಅಸಾಮಾನ್ಯ ಅನುಭವ. ಆದರೆ ಇದನ್ನು ಮನುಷ್ಯನ ಚಿತ್ತವು ಪಡೆಯಬಲ್ಲದು. ಈ ಮಾತನ್ನು ಹಲವಾರು ವ್ಯಕ್ತಿಗಳು ಮಾಡಿ ತೋರಿಸಿರುವರು. ಇದರಲ್ಲಿ ಇಂದ್ರ ಜಾಲವೇನೂ ಇಲ್ಲ. ಅಭ್ಯಾಸದಿಂದ, ಸಾಧನದಿಂದ, ದೃಢನಿಶ್ಚಯದಿಂದ, ಸತತ ಪ್ರಯತ್ನದಿಂದ ಇದೆಲ್ಲವೂ ಸಾಧ್ಯ.

ಸಾರಾಂಶವೇನಂದರೆ ಕರ್ಮದಿಂದ ಮುಕ್ತನಾಗುವ ಹವ್ಯಾಸ ವ್ಯರ್ಥ, ಅದು ಅಸಾಧ್ಯ. ಸತತಕರ್ಮ ಇದೇ ಅಸ್ತಿತ್ವದ ಕುರುಹು. ಕರ್ಮಬಂಧನ ಇದು ಆಗಂತುಕ. ಅದರಿಂದ ಮುಕ್ತಿ ಸಾಧ್ಯ, ಅವಶ್ಯ.



ಆ ಮನೆಯ ಮೇಲೆ ಕತ್ತಲು ಹೊತ್ತಿಗೆ ಮೊದಲೇ ಇಳಿದಿತ್ತು.

ದೇವದಾರು ಜಾತಿಯ ಎತ್ತರವಾದ ಮರಗಳು ಬೆಳೆದು ನಿಂತ ಹಿತ್ತಿಲಲ್ಲಿ ಬೆಳಕು ಯಾವಾಗಲೂ ತುಸು ಕಡಿಮೆಯೇ. ಅದರಲ್ಲೂ ಈ ಹೊತ್ತು ಮಧ್ಯಾಹ್ನದಿಂದಲೂ ಒಂದೇ ಸವನೆ ಸುರಿಯುತ್ತಿದ್ದ ಮಳೆ ಈಗಷ್ಟೇ ತುಸು ಹೊಳವಾಗಿದ್ದರೂ ಮೇಲೆ ಕವಿದ ಮೋಡದ ಮುಸುಕು ಇನ್ನೂ ಸರಿದಿರಲಿಲ್ಲ. ಹನಿ ಸಿಡಿಸುತ್ತ ನಿಂತ ಮರಗಳ ಟೊಂಗೆಗಳಲ್ಲಿ ಒದ್ದೆ ಮುದ್ದೆಯಾಗಿ ಕುಳಿತ ಕಾಗೆಗಳು ವಿಚಿತ್ರ ಸ್ವರದಲ್ಲಿ ಕಾವ್ ಗುಡುತ್ತಿದ್ದವು. ಅರ್ಧ ಮುರಿದು ಬಿದ್ದ ಇದಿರಿನ ಪಾಗಾರದ ಹತ್ತಿರ ಆಲದ ಮರದ ಆಸರೆ ಪಡೆದ ಮುದಿ ಆಕಳೊಂದು ಮಳೆ ನಿಂತರೂ ಹಂದಾಡದೇ ಆಗೀಗ ಅಂಭಾಂ ಎಂದು ದನಿ ಎತ್ತುತ್ತಿತ್ತು. ಮನೆಯ ಹಿಂದುಗಡೆ, ನೆರೆ ಬಂದು ಕಪ್ಪಾದ ಸಮುದ್ರದ ನೀರು

---

ಕತೆಗಾರ:

**ಯಶವಂತ ಚಿತ್ತಾಲ**

---

ಏರೇರಿ ಬಂದು ಹಿತ್ತಿಲ ಗೋಡೆಗೆ ಅಪ್ಪಳಿಸುತ್ತ ಘೋಸೋಳ್ ಎಂದು ಗರ್ಜಿಸುತ್ತಿತ್ತು.

ನೀಲಿ ಬಣ್ಣದ ಗಣ ವೇಷಧಾರಿಯಾದ ಪೋಲಿಸ್ ಕಾನ್‌ಸ್ಟೇಬಲ್ ಒಬ್ಬ ಮನೆಯ ಇದಿರಿನ ರಸ್ತೆಯಲ್ಲಿ ಆಚೆ ಈಚೆ ಯಾರದೋ ಮನೆಯನ್ನು ಹುಡುಕುವವನಂತೆ ನೋಡುತ್ತ ಅಲೆದಾಡಿ ಹಿತ್ತಲ ಗೇಟಿನಲ್ಲಿ ಬಂದು ನಿಂತು ಆ ಮನೆಯ ಕಡೆಗೇ ನೋಡಹತ್ತಿದ.

ಮನೆ ತೀರ ಹಳೆತಾದದ್ದು. ಮನೆಯ ಮಾಲಕ ಒಬ್ಬ ಪಾರಸಿಯರಂತೆ. ಅರ್ಧ ಮನೆಯನ್ನು ಬಾಡಿಗೆಗೆ ಕೊಟ್ಟು ಉಳಿದರ್ಧದಲ್ಲಿ ತನ್ನೆಲ್ಲ ಸಾಮಾನು ಇಟ್ಟು ಬೀಗ ಹಾಕಿ ಈಗ ಲೋಣಾವಲಾದಲ್ಲೋ ಇನ್ನೆಲ್ಲೋ ಬಂಗಲೆ ಹಿಡಿದು ಕೊನೆಯ ದಿನದ ಹಾದಿ ನೋಡುತ್ತಿದ್ದಾನಂತೆ. ಹೆಂಡತಿಯಿರಲಿಲ್ಲ, ಮಕ್ಕಳು ಮರಿಗಳಿರಲಿಲ್ಲ. ಸುತ್ತಲಿನ ಮನೆಗಳಿಂದ ದೂರವಾದ ಆ ಹಿತ್ತಿಲಲ್ಲಿ ಒಂಟಿಯಾಗಿ ನಿಂತ ಆ ಮನೆಯಂತೇ ತೀರ ಮುದುಕ.

ಗೇಟಿನಲ್ಲಿ ನಿಂತ ಪೋಲೀಸ್ ಅನುಮಾನಿಸುತ್ತ ಹಿತ್ತಿಲು ಸೇರಿದ. ಜಗಲಿಯ ಮೇಲೆ ಕುಳಿತವರ ಲಕ್ಷ್ಯ ಸೆಳೆಯಲೆಂಬಂತೆ ಆಲದ ಮರದಡಿಯಲ್ಲಿ ನಿಂತ ದನದತ್ತ ಕೈಯಲ್ಲಿದ್ದ ಬಡಿಗೆಯನ್ನೆತ್ತಿ ಹಚಾ ಎಂದ. ಒದ್ದೆಯಾಗಿ ಕುಳಿತ ಕಾಗೆಯೊಂದು ಕಾವ್‌ಗುಡುತ್ತ ಹಾರಿ ಹೋಯಿತು. ದನ ಹಂದಾಡಲಿಲ್ಲ.

ಮನೆಯಲ್ಲಿ ಅದಾಗಲೇ ಕತ್ತಲೆಯಾಗಿದ್ದರೂ ದೀಪ ಹಚ್ಚಿರಲಿಲ್ಲ. ಮಾತಿನ ಭರದಲ್ಲಿ ಜಗಲಿಯ ಮೇಲೆ ಕುಳಿತವರು ದೀಪ ಹಚ್ಚುವುದನ್ನೇ ಮರೆತಂತಿತ್ತು. ಮನೆಗೆ ಹಿರಿಯಳಾದ ಮುದುಕಿಯೊಬ್ಬಳು ಹೇಳುತ್ತಿದ್ದ ಅವಳ ಹಳೆಯ ನೆನಪುಗಳ ಕತೆಯನ್ನು ಕೇಳುವುದರಲ್ಲಿ ಅವಳ ಮೂವರು ಸೊಸೆಯರು, ಅಂದು ಬೆಳಗ್ಗೆ ಪರವೂರಿನಿಂದ ಬಂದ ಕಿರಿಯ ಸೊಸೆಯ ಅಣ್ಣ– ನೀಲಕಂಠ ಇವರೆಲ್ಲ ತನ್ಮಯರಾಗಿದ್ದರು. ಹೇಳುತ್ತ ಹೇಳುತ್ತ ಮಾತು ತನ್ನ ಮೂವರು ಮಕ್ಕಳಿಗೆ ಗಂಡ. ಸುರೇಶ, ಸುಭಾಷ, ಸುಧಾಕರರೆಂದು– 'ಸು'ದಿಂದ ಆರಂಭವಾಗುವ ಹೆಸರುಗಳನ್ನೇ ಏಕೆ ಇಟ್ಟರು ಎಂಬ ವಿಷಯಕ್ಕೆ ಬರುತ್ತಲೇ ಕಿರಿಯ ಸೊಸೆ ಖುಕ್ ಎಂದಳು. "ಅಣ್ಣನೊಬ್ಬನಿಗೆ ಈ ಕತೆ ಹೇಳುವುದುಳಿದಿತ್ತು." ಎಂದಾಗ ಉಳಿದವರೂ ಸುಖವಾಗಿ ನಕ್ಕರು.

ಅಂಗಳದಲ್ಲಿ ಬಂದು ತಲುಪಿದ ಪೋಲೀಸ್ ಖರ್ ಎಂದು ಗಂಟಲು ಸಡಲಿಸಿದ. 'ಪೋಲೀಸ್!' ಎಂಬ ಉದ್ಗಾರದೊಂದಿಗೆ ಎದ್ದು ನಿಂತ ಹಿರಿಯ ಸೊಸೆ ಸ್ವಿಚ್ಚನ್ನೊತ್ತಿ ದೀಪ ಹಚ್ಚಿದಳು. ದೀಪ ಹಚ್ಚುವ ಹೊತ್ತಿಗೆ ಹೇಳದೇ ಕೇಳದೇ ಮನೆ ಬಾಗಿಲಿಗೆ ಬಂದ ಪೋಲೀಸನನ್ನು ಕಂಡದ್ದೇ ಜಗಲಿಯ ಮೇಲಿನವರೆಲ್ಲರೂ ದಂಗು ಬಡೆದು ಕುಳಿತರು. ಕಾನ್‌ಸ್ಟೇಬಲನೂ ಅಧೀರ ಹೆಜ್ಜೆ ಇಡುತ್ತ ಹತ್ತಿರ ಬಂದು ಜಗಲಿಯ ಮೇಲಿನ ಗಂಡಸಿಗೆ ಸ್ವಲ್ಪ ಕೆಳಗಿಳಿದು ಬರುವಂತೆ ಕೈಸನ್ನೆ ಮಾಡಿದ. ಅವನಿಗೆ ಅದರರ್ಥವಾಗದೆ, "ನಿನಗಿಲ್ಲಿ ಏನು ಕೆಲಸ? ಯಾರ ಮನೆ ಬೇಕು?" ಎಂದು ಕೇಳಿದ. ಒಳಗೆ ಹುಟ್ಟಿದ ದುಗುಡದಿಂದಲೋ ಏನೋ ದನಿಯಲ್ಲಿಯ ರಭಸ ಅಪೇಕ್ಷೆಗಿಂತ ದೊಡ್ಡದಾಗಿತ್ತು. ಗಂಟಲು ಸರಿಪಡಿಸಿಕೊಳ್ಳುತ್ತ "ಎಸ್. ವಿ. ಕುಲಕರ್ಣಿಯವರ ಮನೆ ಇದೇ ಅಲ್ಲವೇ?" ಎಂದು ಕೇಳಿದ

"ರಾಮಃ ರಾಮಾ ಇದು ಹೇಗಾಯಿತೊ ?"



ಪೋಲೀಸನ ಪ್ರಶ್ನೆಗೆ "ಹೌದು" ಎಂದರು ಜಗಲಿಯ ಮೇಲಿನವರೆಲ್ಲರೂ, ಹ್ಞಾರಿದಂತೆ- ಏಕಕಾಲಕ್ಕೆ. "ನಿಮಗೊಂದು ಬಹಳ ಕೆಟ್ಟ ಸುದ್ದಿ ತಂದಿದ್ದೇನೆ. ದಯಮಾಡಿ ನನ್ನ ಜತೆ ಸಿಟೀ ಮೊರ್ಗ್‌ಗೆ- (City Morgue- ಶವಾಲಯಕ್ಕೆ) ಬರುತ್ತೀರಾ?"

"ಮೊರ್ಗ್‌ಗೆ? ಯಾಕೆ? ಯಾರು...?"

"ಎಸ್. ವಿ. ಕುಲಕರ್ಣಿಯವರು ಟ್ರೇನ್ ಅಪಘಾತದಲ್ಲಿ..." ಕಾನ್‌ಸ್ಟೇಬಲನ ಮುಂದಿನ ಮಾತನ್ನು ಜಗಲಿಯ ಮೇಲಿದ್ದ ಚೀತ್ಕಾರ ಮುಳುಗಿಸಿತ್ತು. "ರಾಮ ರಾಮಾ! ಇದು ಹೇಗಾಯಿತೋ?" ಎಂದು ಕೇಳುತ್ತ ಮುದುಕಿ ಮೂರ್ಛೆ ಹೋಗುತ್ತಿದ್ದುದನ್ನು ನೋಡಿ ಅವಳತ್ತ ಧಾವಿಸಿದ ಮೂವರೂ ಸೊಸೆಯರು ಏಕಕಾಲಕ್ಕೆಂಬಂತೆ ಕೇಳಿದ- 'ಯಾವ ಎಸ್. ವಿ. ಕುಲಕರ್ಣಿ- ಗೊತ್ತಿದೆಯೆ?' ಎಂಬ ಪ್ರಶ್ನೆಗೆ ಪೋಲೀಸ್ ಕಕ್ಕಾವಿಕ್ಕಿಯಾದ. ಉತ್ತರಿಸಲಿಲ್ಲ.

ಕಾನ್‌ಸ್ಟೇಬಲನ ಜೊತೆಗೆ, ಸತ್ತವನ ಗುರುತು ಹಿಡಿಯಲೆಂದು ಶವಾಲಯಕ್ಕೆ ಹೊರಟ ನೀಲಕಂಠ ಕಾನ್‌ಸ್ಟೇಬಲನನ್ನು ಕೇಳಿದ, "ಅವನನ್ನು (ಸತ್ತವನನ್ನು) ನೀನು ನೋಡಿದ್ದೀಯಾ?"

"ಇಲ್ಲ ರಾಯರೆ, ಇನ್ಸ್‌ಪೆಕ್ಟರರು ನಿಮ್ಮ ವಿಳಾಸ ಕೊಟ್ಟು ಕರೆದುಕೊಂಡು ಬಾ ಎಂದು ಹೇಳಿದರು. ಬಂದೆ. ನಿಮಗವನು ತಮ್ಮನಾಗಬೇಕೆ?"

"ಇಲ್ಲ. ಇಲ್ಲಿ ಮೂವರೂ ಅಣ್ಣ ತಮ್ಮಂದಿರ ಹೆಸರು ಎಸ್. ವಿ. ಕುಲ್ಕರ್ಣಿ ಎಂದೇ. ಅವರಲ್ಲಿ ಕಿರಿಯವರು ನನಗೆ ಭಾವನಾಗಬೇಕು." ಮನೆಯ ಸೊಸೆಯರು ಆಗ ಕೇಳಿದ ಪ್ರಶ್ನೆಯ ಅರ್ಥ ಈಗ ಆಯಿತೆನ್ನುವಂತೆ, 'ಓ! ಹೀಗೋ?" ಎಂದ ಪೋಲೀಸ್.

ಯಾರಿರಬಹುದು? — ಸುರೇಶ? ಸುಭಾಷ? ನನ್ನ ಭಾವ ಸುಧಾಕರ್... ಅಲ್ಲ ಅಲ್ಲ ಅಲ್ಲ... ಇನ್ನೂ ಕಂಡಿರದ ಶವಕ್ಕೆ ಈವರೆಗೂ ಮಾತನಾಡುತ್ತಿದ್ದ ಜೀವಂತ ವ್ಯಕ್ತಿಗಳ ಹೆಸರನ್ನೀಯಲು ನೀಲಕಂಠನ ಮನಸ್ಸು ಒಪ್ಪಲಿಲ್ಲ. ಇನ್ನೂ ಹೆಸರು ಪಡೆಯದೇ, ಮೂವರಲ್ಲೊಬ್ಬನಾಗಿಯೂ 'ಯಾರೋ' ಆಗಿದ್ದವನ ಸಾವು ಅರ್ಥವಾಗುತ್ತಿರಲಿಲ್ಲ; ಜೀವ ಹಿಂಡುತ್ತಿದ್ದರೂ ಕಂಬನಿ ಬರುತ್ತಿರಲಿಲ್ಲ.

"ಇಂತಹನೇ ಎಂದು, ಇದೇ ಮನೆಯವನೆಂದು ನಿಮಗೆ ಹೇಗೆ ತಿಳಿಯಿತು?" ಎಂದು ನಡಗುವ ದನಿಯಲ್ಲಿ ನೀಲಕಂಠ ಕೇಳಿದ ಪ್ರಶ್ನೆಗೆ, ಕಾನ್‌ಸ್ಟೇಬಲ್, "ಅದೆಲ್ಲ ನನಗೆ ತಿಳಿಯದು ಸರ್...ಕಿಸೆಯಲ್ಲಿ ಟ್ರೇನ್ ಪಾಸು ಗೀಸು ಇದ್ದಿತ್ತೇನೋ. ಟ್ಯಾಕ್ಸಿ ಹತ್ತೋಣ ಅಲ್ಲವೇ?" ಎಂದ. ಟ್ಯಾಕ್ಸಿ ಹತ್ತಿ ಹೊರಟಾಗ ಸತ್ತವನು ಯಾರಿರಬಹುದೆಂಬ ಪ್ರಶ್ನೆ ಪಡಪಡವೆ ಕಾಡ ಹತ್ತಿತು. ಯಾರಾದರೇನಂತೆ ಎಂತಹ ರತ್ನದಂತಹ ಹುಡುಗರು! ಎಷ್ಟೊಂದು ಅನ್ಯೋನ್ಯ ಪ್ರೀತಿಯಿಂದ ಇದ್ದವರು! ತಾಯಿಗೆ ಪಾಪ ಇಂದು ಸಂಜೆ ಮಾತನಾಡುವಾಗ ತನ್ನ ಮಕ್ಕಳ ಗುಣಗಳನ್ನು ಎಷ್ಟೊಂದು ಹೊಗಳಿದರೂ ತೃಪ್ತಿಯಾಗುತ್ತಿರಲಿಲ್ಲ... ಶವಾಲಯ ಸಮೀಪಿಸುತ್ತಿದ್ದಂತೆ ಮಾತ್ರ ಮನಸ್ಸಿನ ಒಳಗೆಲ್ಲೋ ಸಣ್ಣ ದನಿಯೊಂದು, ದೇವರೇ, ಅವನು ನನ್ನ ಭಾವನಲ್ಲದಿರಲೀ–ಸುಧಾಕರನಲ್ಲದಿರಲೀ ಎನ್ನುತ್ತಿತ್ತು.

## ೨

ಪೋಲೀಸ್ ಹಾಗೂ ನೀಲಕಂಠ [illegible] ಕೆಲ ಹೊತ್ತಿನ ಮೇಲೆ ಜಗಲಿಯ ಮೇಲೆ ಮೂರ್ಛೆ

ಹೋದ ಮೇಲೂ ಕಿರಿಯ ಸೊಸೆಯ ತೊಡೆಗೆ ತಲೆ ಯಾನಿಸಿ ಮಲಗಿದಲ್ಲೇ ಮೆಲ್ಲನೆ ಚೇತರಿಸಹತ್ತಿದಳು. ಅದನ್ನು ನೋಡಿ ಕಿರಿಯ ಸೊಸೆಯರಿಬ್ಬರೂ ತಮ್ಮ ತಮ್ಮ ಕೋಣೆ ಸೇರಿ ಮಂಚದ ಮೇಲೊರಗಿದರು. ಆಗಿನಿಂದಲೂ ಜೋಳವಾಗಿದ್ದ ಮಳೆಯು ತಿರುಗಿ ಬರುವ ಲಕ್ಷಣ ತೋರಿತು. ಹಿತ್ತಲ ಗಡಿಯಲ್ಲಿ ನಿಂತ ಆಕಳು ಎಂದೋ ಹೊರಟುಹೋಗಿತ್ತು. ಹೊತ್ತು ಮುಳುಗಿ ಬಹಳ ಹೊತ್ತಾಗಿರದಿದ್ದರೂ ಹಿತ್ತಲಲ್ಲಿ ಆಗಲೇ ದಟ್ಟ ಕತ್ತಲೆ ನೆಲಸಿತ್ತು. ಮಳೆಯ ಬರವನ್ನು ಕಾಯುತ್ತ ತೇವಗೊಂಡ ಗಾಳಿಯಲ್ಲೆಲ್ಲ ಕೆರಳಿದ ಸಮುದ್ರದ ಉದ್ವೇಷ ತುಂಬಿತು. "ಯಾರಾದರೂ ಬಂದರೇನೆ?" ಎಂದು ಅತ್ತೆ ಹಲಬುತ್ತ ಕೇಳಿದ ಪ್ರಶ್ನೆಗೆ ಸೊಸೆಯ ಮೈಮೇಲೆ ಮುಳ್ಳು ನಿಂತವು: ಮೂವರಲ್ಲಿ ತನ್ನ ಗಂಡ-ಸುರೇಶನೇ ಉಳಿದವರಿಗಿಂತ ಮೊದಲು ಬರುತ್ತಾನೆ. ದಿನವೂ ಬರುವ ಹೊತ್ತಿಗೆ ಬಂದರೆ ಇನ್ನೈದು ಮಿನಿಟುಗಳಲ್ಲೇ ಬರಬೇಕಲ್ಲವೆ?" ಎಂದು ಮನಸ್ಸಿನಲ್ಲಿದ್ದ ಪ್ರಶ್ನೆಗೂ ಅತ್ತೆ ಕೇಳಿದ ಪ್ರಶ್ನೆಗೂ ಸರಿ ಜೋಡಿಯಾಗಿತ್ತು. ಮರುಕ್ಷಣ ಏನನ್ನೊ ನೆನೆದು ಜೀವ ನಡುಗಿತು. ಆಗ ತಾನು ಹತ್ತಿರದವನಾರೋ ಸತ್ತನೆಂಬುದರ ಆಘಾತದಿಂದ ಚೇರಿದರೂ ಹೊತ್ತು ಹೋದಂತೆ ಹೆಸರು ಗೊತ್ತಿಲ್ಲದವನ ಸಾವು ಅರ್ಥವಾಗದಲ್ಲ ಎನ್ನುವ ವಿಚಿತ್ರ ಸ್ಥಿತಿಯಲ್ಲಿ ಮನಸ್ಸು ದುಃಖಪಡುವ ಶಕ್ತಿಯನ್ನೇ ಕಳಕೊಂಡಿತ್ತು. ಆದರೀಗ ಗಂಡ ಬರುವ ಹೊತ್ತು ಸಮೀಪಿಸಿದಂತೆ ಸಮೀಪಿಸುತ್ತಿದೆ ಎಂಬುದರ ಅರಿವು ಬಂದಂತೆ ಮನಸ್ಸು ಒಮ್ಮೆಲೇ ಚೇತರಿಸಿ ಸತ್ತವನಿಗೆ ಹೆಸರು ಕೊಡು ಎಂದು ಆಹ್ವಾನಿಸಿದಾಗ ಎದೆ ಝಲ್ ಎಂದು ನಡುಗಿತು. ಸುರೇಶ್...? ಬಿಡ್ತು ಬಿಡ್ತು. ಅಯ್ಯೋ ದೇವರೇ ಅವರಲ್ಲದಿರಲೀ ಅವರಲ್ಲದಿರಲೀ...ಅಂದರೆ ಸತ್ತವನು ಸುಧಾಕರ...? ಬೇಡ ಬೇಡ ಪಾಪ ಮೊನ್ನೆ ಮೊನ್ನೆ ಲಗ್ನವಾದವ. ಹೆಂಡತಿ ತುಂಬಿದ ಬಸುರಿ. ಇಂದೇ ಅವಳ ಅಣ್ಣ ಚೊಚ್ಚಲು ಹೆರಿಗೆಗೆ ತವರಿಗೆ ಕರೆದೊಯ್ಯಲು ಬಂದಿದ್ದಾನೆ. ಹಾಗಾದರೆ ಸುಭಾಷ್... ಛೇ ಛೇ ಅದು ಹೇಗಾದೀತು? ಮುತ್ತಿನಂತಹ ಹುಡುಗ. ಮೈದುನರಲ್ಲೇ ನನ್ನ ಮುದ್ದಿನವನಲ್ಲವೆ? ಬೇಡ. ಯಾರು ಯಾರೂ ಸಾಯುವುದು ಬೇಡ ದೇವರೇ... ಅಹಾ ಅದೆಲ್ಲ ಕನಸಿನ ಮಾತಾಯಿತು. ಈಗಂತೂ ಒಬ್ಬವನು ಸತ್ತಿದ್ದಾನಲ್ಲ. ಅತ ಸು... ಮೂಲೆಯಲ್ಲಿ ಹಲ್ಲಿಯೊಂದು ಲೊಚಗುಟ್ಟಿತು. ಒಳಗಿನ ಕೋಣೆಯಲ್ಲಿ ಮಗು ಅತ್ತ ದನಿ ಕೇಳಿಸಿ "ವಾಸಂತಿ ಎದ್ದಳೇನೋ, ಹೋಗಿ ನೋಡು?" ಎಂದು ಅತ್ತೆ ಹೇಳಿದಾಗ "ವಾಸಂತಿ ಅಲ್ಲ. ರಾಜು. ಶಾಂತಾ (ಸುಭಾಷನ ಹೆಂಡತಿ) ಇದ್ದಾಳೆ ಒಳಗೆ ಎಂದಳು. ಅವಳ ಲಕ್ಷ್ಯವೆಲ್ಲ ಕತ್ತಲೆ ತುಂಬಿದ ಕಂಪೌಂಡಿನ ಗೇಟಿನ ಮೇಲೇ ಇತ್ತು. ಎದೆ ಡಬ ಡಬ ಎನ್ನುತ್ತಿತ್ತು. ದೂರ—ಕಂಪೌಂಡಿನ ಗೋಡೆಯ ಆಚೆಯ ರಸ್ತೆಯಲ್ಲಿ ಕೆಂಪು, ಬಿಳಿಯ—ಕಣ್ಣು ಕುಕ್ಕಿಸುವಂತ ದೀಪಗಳನ್ನು ಹೊತ್ತ ಬಸ್ಸು, ಕಾರುಗಳ ಸತತ ಓಡಾಟ ನಡೆದಿತ್ತು. ಗೇಟಿನಲ್ಲಿ ಯಾರೋ ಹೊಕ್ಕದರ ಸುಳಿವು ಹತ್ತಿ ಗಂಡನಿರಬಹುದೇ? ಎಂಬ ಕಾತರದ ಹಿಂದೆಯೇ ಬಂದ ಅವನಲ್ಲದಿದ್ದರೆ ಎಂಬ ಭೀತಿಯಿಂದ ಕಣ್ಣುಗಳನ್ನು ಗಟ್ಟಿಯಾಗಿ ಮುಚ್ಚಿಕೊಂಡಳು. ಬಂದವನು ಯಾರಾದರೇನಂತೆ ? ಸುರೇಶನದಿಲ್ಲದ್ದರೆ ನಿನ್ನ ಮುದ್ದಿನ ಮೈದುನ ಸುಭಾಷನಿರಬಹುದು. ಇಲ್ಲ, ತುಂಬಿದ ಚೊಚ್ಚಲು ಬಸುರಿಯ ಗಂಡ ಸುಧಾಕರನಿರಬಹುಹು. ಇದೋ ಹತ್ತಿರ ಹತ್ತಿರ ಬರುತ್ತಿದ್ದಾನೆ. ಹೆಜ್ಜೆ ಕೇಳಿಸುತ್ತಿಲ್ಲವೆ? ಕಣ್ತೆರೆದು ನೋಡಲ್ಲ; ಅವಳ ಎದೆ ಡಬ ಡಬ ಎಂದಿತು. ಇವರೇ ಬರುವ ಹೊತ್ತು ಬಂದವರು ಇವರೇ ಆಗಲೀ ದೇವರೇ... ಆಗಲೀ ದೇವರೇ...ಬಂದವನು ಜಗಲಿಯ ಮೆಟ್ಟಿಲುಗಳನ್ನೇರಿ ಸುಮಾ॰॰ ಹೀಗೇಕೆ? ಅಮ್ಮನಿಗೆ ಮೈ ಸರಿಯಿಲ್ಲವೆ?" ಎಂದು ಕೇಳಿದಾಗ ತನ್ನ ಕಿವಿಗಳನ್ನೇ ನಂಬದೆ ಎಲ್ಲಿ ಚೀರೇನೊ ಎಂಬ ಭೀತಿಯಿಂದೆಂಬಂತೆ ತನ್ನ ಕೈಗಳಿಂದ ತನ್ನದೇ ಬಾಯಿ ಮುಚ್ಚಿಕೊಂಡ ಕಣ್ಣು ತೆರೆಯುವ ಹೊತ್ತಿಗೇ ಅತ್ತೆ ದಢಬಡಿಸಿ ಎದ್ದು ಕುಳಿತು "ಸುರೇಶಾ ಬಂದೆಯಾ?" ಎಂದು ಕೇಳಿದವಳೇ "ಹೋ॰॰" ಎಂದು ಅಳಹತ್ತಿದಳು. ಹೆಂಡತಿಯಿಂದ ಸುದ್ದಿ ತಿಳಿದಾಗ ಯಾವ ಎಸ್. ವಿ. ಕುಲಕರ್ಣಿ ಎಂದು ಕೇಳಲಿಲ್ಲವೇ ಎಂದು ಹೆಂಡತಿಯ ಮೇಲೆ ಕೆರಳಿ ಒದರಾಡಿದ, ಸುರೇಶ. "ಯಾರಾದರೇನಂತೆ ಮಗೂ. ಇಬ್ಬರೂ ನಿನ್ನ ತಮ್ಮಂದಿರೇ ಅಲ್ಲವೇ?" ಎಂದು ತಾಯಿ ಕೇಳಿದಾಗ ಏಟು ಬಿದ್ದವನಂತೆ, "ಹೌದೌದು. ನಾನೂ ಅಲ್ಲಿ ಹೋಗಿ ಬರುತ್ತೇನೆ." ಎಂದವನೇ ಬಂದ ಹಾಗೇ ಮನೆಯ ಹೊರಗೆ ಬಿದ್ದ. ಹೆಸರು ಗೊತ್ತಿಲ್ಲದವನ ಸಾವಿನ ಅಸಂಬದ್ಧತೆಯಿಂದ ಕೆರಳಿ ಕೇಳಿದ ತನ್ನ ಪ್ರಶ್ನೆಯ ಅರ್ಥ ಈಗಾಯಿತೆನ್ನುವಂತೆ ಹಳಹಳಿಸುತ್ತ ತನಗನ್ನ ಬೇಕಾದದ್ದು ಹಾಗಲ್ಲವೇ ಅಲ್ಲ. ಸುಭಾಷನಾಗಲೀ ಸುಧಾಕರನಾಗಲೀ ಇಬ್ಬರೂ ತಮ್ಮಂದಿರಲ್ಲವೆ? ಎಂದುಕೊಳ್ಳುತ್ತ ಟ್ಯಾಕ್ಸಿ—ಹತ್ತಿದ. ಶವಾಲಯದತ್ತ ನಡೆಸಲು ಹೇಳಿ ದಿಗ್ಭ್ರಾಂತನಂತೆ ಕುಳಿತ, ಅಳಲಿಲ್ಲ. ಅಳಬೇಕೆಂದೆನಿಸಿದರೂ ಅಳು ಬರಲಿಲ್ಲ.

೩

"ನೀವು ನನ್ನ ಕೋಣೆಯಲ್ಲಿ ಹೋಗಿ ಮಲಗಿರಿ. ಇಲ್ಲಿ ತಂಪು ನೆಲದ ಮೇಲೆ ಯಾಕೆ?" ಎಂದುದಕ್ಕೆ "ಇಲ್ಲ ನಾ ಇಲ್ಲೇ ಬಿದ್ದಿರುತ್ತೇನೆ" ಎಂದು ಅತ್ತೆ ಏಳಲು ಒಪ್ಪದಿರಲು ಸುರೇಶನ ಹೆಂಡತಿ—ಸುಮತಿ ಬಚ್ಚಲು ಮನೆಗೆ ಹೋಗಿ ಬರುತ್ತೇನೆಂದು ಹೇಳಿ ಅತ್ತ ನಡೆದಳು. ಬಚ್ಚಲು ಮನೆಯಿಂದ ಹಿಂತಿರುಗಿ ಬರುವಾಗ ತಾನು ಏನು ಮಾಡುತ್ತಿದ್ದೇನೆ ಎಂಬುದರ ಅರಿವು ಬರುವ ಮೊದಲೇ ಸುಭಾಷನ ಹೆಂಡತಿಯ ಕೋಣೆಯ ಕದ ತಟ್ಟಿದಳು. ಒಳಗಿನಿಂದ ಬಿಕ್ಕಳಿಕೆ ಕೇಳಿಸಿತೇ ಹೊರತು ಕದ ತೆರೆಯಲಿಲ್ಲ. ತನಗೆ ಇದೀಗ ಅನ್ನಿಸುತ್ತಿದ್ದ—ಹೇಗಾದರೂ ತನ್ನ ಗಂಡ ಹಿಂತಿರುಗಿ ಬಂದನಲ್ಲ ಎಂಬ ಬಿಡುಗಡೆಯ ಭಾವನೆಯ ಹೊಟ್ಟೆಯಲ್ಲೇ ಪರ್ಯಾಯವಾಗಿ ಸತ್ತವನು ಉಳಿದ ಇಬ್ಬರಲ್ಲಿ ಒಬ್ಬ ಎಂಬುದರ ಬಗ್ಗೆ ಸುಖವಿದ್ದುದರ ಅರಿವು ಬಂದು ತನ್ನ ಬಗ್ಗೆ ತಾನೇ ಜಿಗುಪ್ಸೆಪಟ್ಟು ಸುಮತಿ ಲಗುಬಗೆಯಿಂದ ಅತ್ತೆಯ ಹತ್ತರ ಬಂದು ಸೇರಿದಳು.

ಸುರೇಶ ಬಂದುದರ ಸುಳಿವು ಹತ್ತಿದ ಕೂಡಲೇ ತನ್ನ ಮನಸ್ಸಿನ ಕಳವಳ ಇಮ್ಮಡಿಸಿ ಬಾಯಿಂದ ಹೊರಬಿದ್ದ ಬಿಕ್ಕಳಿಕೆಯ ಅರ್ಥ ಈಗ ಆಯಿತೆನ್ನುವಂತೆ ಸುಭಾಷನ ಹೆಂಡತಿ ಶಾಂತಾ ಅಸ್ವಸ್ಥಗೊಂಡು ಹಾಸಿಗೆಯಲ್ಲಿ ಎದ್ದೇ ಕುಳಿತಳು. ಸತ್ತವನು ತನ್ನ ಗಂಡನಲ್ಲದಿರಲೀ ದೇವರೇ ಎಂಬ ತನ್ನ ಪ್ರಾರ್ಥನೆಯ ಅರ್ಥ ಪರ್ಯಾಯವಾಗಿ ಸತ್ತವನು ಸುರೇಶ ಇಲ್ಲವೇ ಸುಧಾಕರನಾಗಲಿ ಎಂದಾಗುವದಿಲ್ಲವೇ ? ಸುರೇಶ ಮನೆಗೆ ಬಂದನೆಂದರೆ ಸತ್ತವನು ಸುಭಾಷನಾಗುವ ಸಂಭವ ಹೆಚ್ಚಿತಲ್ಲವೇ ? ಸತ್ತವನು ಇಬ್ಬರಲ್ಲೊಬ್ಬ: ಸುಭಾಷ ಇಲ್ಲವೇ ಸುಧಾಕರ ! ಶಾಂತಾಳ ಮೈಮೇಲೆ ಮುಳ್ಳು ನಿಂತವು. ಸುಧಾಕರ? ಬಿಡ್ತು ಬಿಡ್ತು. ಅದು ಆಗಬಾರದು ದೇವರೇ. ತುಂಬಿದ ಬಸುರಿ. ಇಂದೇ ತವರಿಗೆ ಕರೆದೊಯ್ಯಲು ಅಣ್ಣ ಬಂದ ಖುಶಿಯಲ್ಲಿ ಏಷ್ಟೊಂದು ಹರಟಿದ್ದಳು ಹುಡುಗಿ. ಪಾಪ ಈಗ



"ಹೌದೌದು ನಾನೂ ಅಲ್ಲಿಗೆ ಹೋಗಿ ಬರುತ್ತೇನೆ"



"ಬೇಡ ಬೇಡ ದೇವರೆ ಬದುಕಿಸು"

ಎಷ್ಟೊಂದು ಹೆದರಿ ಮುದ್ದೆಯಾಗಿದ್ದಾಳೋ. ಹತ್ತಿರ ಹೋಗಿ ಕೂಡ್ರೋಣ ಎಂದರೆ ನನ್ನ ಹೊಟ್ಟೆಯಲ್ಲೇ ಎದ್ದ ಈ ಕಲಮಲ: ಸತ್ತವನು ಸುಭಾಷನೇ ಆಗಿದ್ದರೆ... ಬೇಡ ಬೇಡ ದೇವರೇ ಅವರನ್ನು ಬದುಕಿಸು... ಹಾಗಾದರೆ ನೀನು ಪ್ರಾರ್ಥಿಸುತ್ತಿದ್ದದ್ದು ಸುಧಾಕರನೇ ಸಾಯಲಿ ಎಂದು? ಸುಭಾಷನೋ? ಸುಧಾಕರನೋ? ಸುಭಾಷನೋ? ಸುಧಾಕರನೋ? ... ಸುತ್ತಿಗೆಯ ಪೆಟ್ಟುಗಳಂತೆ ಒಂದರ ಹಿಂದೊಂದು ಬಂದು ನೋಯಿಸುತ್ತಿದ್ದ ಈ ಪ್ರಶ್ನೆಗಳ ಆಘಾತವನ್ನು ತಡೆಯಲಾಗದೇ ಶಾಂತಾ ಕೋಣೆಯ ಕದ ತೆರೆದು ಹೊರಜಗಲಿಗೆ ಬಂದಳು— ಅತ್ತೆ, ಸುಮತಿ ಕುಳಿತಲ್ಲಿಗೆ. ಅದಾಗ ಅಂಗಳದಲ್ಲಿ ಹೆಜ್ಜೆಯ ಸದ್ದು ಕೇಳಿಸಿ, "ಯಾರು ಬಂದರೇ?" ಎಂದು ತಾಯಿ ಕೇಳಿದ ಪ್ರಶ್ನೆಗೆ, ಜಗಲಿಯ ಮೆಟ್ಟಲು ಏರುತ್ತಿದ್ದವನು, "ನಾನು ಸುಭಾಷನಮ್ಮಾ" ಎಂದದ್ದನ್ನು ಕೇಳಿದ್ದೇ ಒಳಗಿನ ಕೋಣೆಯಲ್ಲಿ ಮೈಯನ್ನೆಲ್ಲ ಕಿವಿಯಾಗಿಸಿ ಮಲಗಿದ ಸುಧಾಕರನ ಹೆಂಡತಿ ಸೀತಾ, "ಅಯ್ಯೋ ನನ್ನ ರಾಜಾ ऽऽ" ಎಂದು ಚೀರಿದಳು. ಶಾಂತಾ, ಸುಮತಿ ಅತ್ತ ಧಾವಿಸಿದರು. ಇವಾವುದರ ಅರ್ಥವೇ ಆಗದೆ ಸುಭಾಷ ಅಪ್ರತಿಭನಾಗಿ ನಿಂತ. "ಅಯ್ಯೋ ಮಗೂ ऽऽ ಸುಧಾಕರ ನಮ್ಮನ್ನು ಬಿಟ್ಟು ಹೋದನಲ್ಲೋ ऽऽ." ಎಂದು ಅವನ ತಾಯಿ ಅಳಹತ್ತಿದಳು. "ಇದೆಂತಹ ದುರ್ಧರ ಪ್ರಸಂಗ ತಂದನಪ್ಪಾ ದೇವರು! ಹೆಂಡತಿ ತುಂಬಿದ ಬಸುರಿ! ಟ್ರೇನ್ ಅಪಘಾತ ऽऽ ಎಂದನಲ್ಲೋ ಆಗ ಬಂದ ಆ ಯಮದೂತನಂತಹ ಪೋಲೀಸ. ನೀಲಕಂಠ, ಸುರೇಶ ಎಲ್ಲ ಅಲ್ಲೇ ಹೋಗಿದ್ದಾರೆ ಮಗೂ ऽऽ. ನೀನು ಸ್ವಲ್ಪ ಒಳಗೆ ಹೋಗು. ಬಸುರಿ ಹುಡುಗಿ— ಏನು ಮಾಡಿಕೊಂಡಾಳೋ ನೋಡು. ಅಬ್ಬಬ್ಬ! ಕೈಕಾಲುಗಳೆಲ್ಲ ಸೋತು ಬರುತ್ತಾವಲ್ಲೋ. ನಾಳೆಯಿಂದ ಎಂಟು ದಿನ ರಜೆ ತೆಗೆದುಕೊಳ್ಳುತ್ತೇನೆ ನೀಲಕಂಠನಿಗೆ ಮುಂಬಯಿ ತೋರಿಸುತ್ತೇನೆ ಎಂದಿದ್ದನಪ್ಪ ऽऽ..." ತಾಯಿ ಹಲುಬಿಯೇ ಹಲುಬಿದಳು.

ಬದುಕಿ ಉಳಿದ ಇಬ್ಬರ ಹೆಸರುಗಳೇ ಸಾವನ್ನಪ್ಪಿದವನ ಹೆಸರನ್ನೂ ನಿಶ್ಚಯಿಸಿದ್ದುವು. ಆಗಿನಿಂದಲೂ ಬೆಸುಗೆ ಇರದೇ [illegible], ಅಸಂಬದ್ಧವಾದ [illegible] ಈಗ [illegible] ನಿಶ್ಚಿತ ರೂಪ, ಆಕಾರಗಳನ್ನು ಪಡೆದು, ನೆನೆಹುಗಳ ಸರಪಳಿಯನ್ನೇ ತೆರಳಿಸುತ್ತ ಮನೆಯವರ ಕಣ್ಣ ಮುಂದೆ ನಿಂತಿತು. ಆಗಿನಿಂದ ಕಣ್ಣಂಚಿನವರೆಗೆ ಬಂದೂ ಹೊರಗೆ [illegible] ನಿಂತ ದುಃಖ ಈಗ ಮೊದಲೊಮ್ಮೆ ಕೋಡಿವರಿದು ಹರಿಯಹತ್ತಿತು: ಮನೆಗೆ ಮನೆಯೇ ಸುಧಾಕರನನ್ನು ನೆನೆಯುತ್ತ ಕಂಬನಿಗರೆಯ ಹತ್ತಿತು...

ಸಂಜೆಯಿಂದಲೂ ತಡೆಗಟ್ಟಿನಿಂತ ಮಳೆಯು ಈಗ ಧಾರೆ ಹಿಡಿದು ಸುರಿಯಹತ್ತಿತ್ತು. ಚಿತ್ರಲು ತುಂಬ ಎದ್ದ ಕಪ್ಪೆಗಳ ಒದರಾಟ ಮನೆಯ ಮೇಲೆ ನೆಲಸಿದ ಕರಾಳತೆಯನ್ನು ಹೆಚ್ಚಿಸಿತ್ತು. ಹೆದರುತ್ತ, ಹೆದರಿಸುತ್ತ ಕತ್ತಲೆ ದಟ್ಟವಾಗಹತ್ತಿತ್ತು. ಹೊಯ್ಯುತ್ತಿದ್ದ ಮಳೆಯಲ್ಲೇ ತಪ ತಪನೆ ತೊಯ್ಯುತ್ತ ಓಡೋಡಿ ಬಂದ ವ್ಯಕ್ತಿಯೊಂದು ಜಗಲಿ ಸೇರಿ "ಅಮ್ಮಾ ऽऽ" ಎಂದು ಕರೆದಿತು. ಅರೆ! ಇದೇಕೆ ಮುಂದಿನ ಬಾಗಿಲು ತೆರೆದಿದ್ದೂ ಜಗಲಿಯ ಮೇಲೆ ಯಾರದೂ ಸುಳಿವಿಲ್ಲ? ಒಳಗೆ ಅಳುವ ದನಿಯಲ್ಲವೆ? ಸೀತೆ ಸುಖವಾಗಿದ್ದಾಳೆ ತಾನೆ? ಮಳೆಯ ಸದ್ದಿನಲ್ಲಿ ತಾನು ಬಂದದ್ದು ತಿಳಿದಿರಲಿಕ್ಕಿಲ್ಲವೆಂದು ಬಗೆದು ಇನ್ನೊಮ್ಮೆ "ಅಮ್ಮಾ ऽऽ" ಎಂದು ದನಿ ಏರಿಸಿ ಕರೆಯುತ್ತ ಒದ್ದೆಯಾದ ಬೂಟು ತೆಗೆಯ ಹತ್ತಿದ. "ಅರೆ! ನಮ್ಮ ಸುಧಾಕರನ ದನಿಯಲ್ಲವೆ!" ಸೀತೆಯ ಕೋಣೆಯಲ್ಲಿದ್ದವರೆಲ್ಲ ದಡಬಡಿಸಿ ಹೊರಗೆ ಬಂದರು: ಸುಭಾಷ, ಸುಮತಿ, ಶಾಂತಾ, ಅಮ್ಮ ಅವರೆಲ್ಲರ ಹಿಂದೆ ತನ್ನ ಸೀತೆ! ಒಳಗಿದ್ದವರ ಮೆರವಣಿಗೆಯೇ ಹೊರಗೆ ಬಂದು ಜಗಲಿಯ ಮೇಲೆ ನಿಂತ ಸುಧಾಕರನನ್ನು ಸುತ್ತುಗಟ್ಟಿ ತಮ್ಮ ಕಣ್ಣುಗಳನ್ನು ತಾವೇ ನಂಬದವರಂತೆ "ನೀನೂ ऽऽ?" ಎಂದರು. ಸುಭಾಷ ಹತ್ತಿರ ಬಂದು ಅವನ ಒದ್ದೆಯಾದ ಬಟ್ಟೆಗಳನ್ನೂ ಲೆಕ್ಕಿಸದೇ "Oh! my darling brother" ಎಂದು ಅಪ್ಪಿಕೊಂಡು ಬಿಟ್ಟ. ಅಮ್ಮ, ಅತ್ತಿಗೆಯರೆಲ್ಲ "ಆಯುಷ್ಯವಂತನಾಗಿ ಬಾಳಪ್ಪ. ಜೀವದ ಮೇಲೆ ಎಂತಹ ಕುತ್ತು ಇತ್ತೋ. ಹೀಗೆ ಕೆಟ್ಟ ಸುದ್ದಿ ಬಿದ್ದಾದರೂ ಪರಿಹಾರವಾಯ್ತು. ಮಳೆಯಲ್ಲಿ ಪೂರ ನೆನೆದೆಯಲ್ಲೋ. ಮೊದಲು ಬಟ್ಟೆ ಬದಲಿಸು" ಎಂದರು. ಸೀತೆಯಿಂದ ಮಾತ್ರ ಮಾತೇ ಹೊರಡಲಿಲ್ಲ. ಮೂಲೆಯಲ್ಲಿಯ ಖುರ್ಚಿಯೊಂದರಲ್ಲಿ ಕೊಸರಿ ಸದ್ದು ಮಾಡದೇ ಅಳಹತ್ತಿದಳು.

ಅತ್ತಿಗೆಯಿಂದ ನಡೆದುದರ ವಿವರಗಳು ತಿಳಿದದ್ದೇ ಸುಧಾಕರ ಚಿಗಿದು ಬಿದ್ದವನಂತೆ, "ಅರರೇ! ಹಾಗಾದರೆ ಅಪಘಾತಕ್ಕೆ ಸಿಕ್ಕವನು ರಾಮಕೃಷ್ಣನಲ್ಲ ತಾನೇ?" ಎಂದ ಅತೀವ ದುಃಖದ ದನಿಯಲ್ಲಿ.

"ಯಾರು? ಮೊನ್ನೆ ಇಲ್ಲಿ ಬಂದು ಹೋದ ನಿನ್ನ ಗೆಳೆಯನೆ?"

"ಹೌದಮ್ಮಾ, ಇಂದೇ ನನ್ನ ಆಫೀಸಿಗೆ ಬಂದಿದ್ದ. ನಾಳೆಯಿಂದ ನಾನು ರಜೆ ಪಡೆದಿದ್ದೇನೆ. ನೀಲಕಂಠ ಬಂದಿದ್ದಾನೆ ಎಂದೆಲ್ಲ ಹೇಳುತ್ತ, ನನ್ನ ಫರ್ಸ್ಟ್ ಕ್ಲಾಸ್ ಟ್ರೇನ್ ಪಾಸು ಮಾತ್ರ ಹಾಳಾಗುತ್ತದೆ ನೋಡು. ಇನ್ನೂ ಹದಿನೈದು ದಿನಗಳೂ ಆಗಿಲ್ಲ ತೆಗೆಯಿಸಿ ಎಂದಾಗ 'ಅರೆ! ಹಾಗಾದರೆ ನನಗೆ ಕೊಡಲ್ಲ. ಆರಾಮವಾಗಿ ಎಂಟುದಿನ ನಿನ್ನ ಹೆಸರಿನಲ್ಲಿ ಫರ್ಸ್ಟ್ ಕ್ಲಾಸ್ ಕಂಪಾರ್ಟಮೆಂಟಿನ ಸುಖಪಡೆಯುತ್ತೇನೆ' ಎಂದ. ನಾನು, ಬೇಡ. ಅದು ಕಾಯದೆಗೆ ವಿರುದ್ಧ ಎಂದರೂ ನೂ ಕೇಳದೇ ಹೋಗೋ ಹೆದರ್ಪುಕ್ಕ. ಇದರಲ್ಲಿ ಮೋಸವೇನೂ ಇಲ್ಲವಲ್ಲ. ಹೇಗಾದರೂ ಹಣ ತುಂಬಿದಿದೆಯಾ. ರೇಲ್ವೇಯವರಿಗೇಕೆ ಪುಕ್ಕಟೆ ಬಿಡಬೇಕು ಎಂದು ಹೇಳಿ ಒಯ್ದಿದ್ದ. ಕಿಸೆಯಲ್ಲಿ ನನ್ನದೇ ಪಾಸು ಇತ್ತೇನೋ. ಎಂತಲೇ ಸತ್ತವನು ನಾನೇ ಎಂದು ತಿಳಿದರೋ ಏನೋ ಪೋಲೀಸಿನವರು. ಅರರೇ!" ಎಂದು ಸುಧಾಕರ ತನ್ನ ಗೆಳೆಯನಬಗೆಗೆ ಹಳಹಳಿಸಿದ.

ಮಧ್ಯರಾತ್ರಿಯ ಹೊತ್ತಿಗೆ ಮನೆಗೆ ಹಿಂತಿರುಗಿ ಬಂದ ಸುರೇಶ, ನೀಲಕಂಠರಿಂದ ತಿಳಿದಿತ್ತು, ಸುಧಾಕರನ ಸಂಶಯವೇ ಸರಿಯಾಗಿತ್ತು ಎಂದು. ಸತ್ತವನು ಅವನ ಗೆಳೆಯ ರಾಮಕೃಷ್ಣನೇ ಆಗಿದ್ದ. ಕಿಸೆಯಲ್ಲಿ ಸಿಕ್ಕ ಸುಧಾಕರನ ಪಾಸಿನ ಬಗ್ಗೆ ಪೋಲೀಸ್ ಅಧಿಕಾರಿಗಳಲ್ಲಿ ಕ್ಷಮೆಯಾಚಿಸಿ ಅದನ್ನು ಹಿಂದೆಪಡೆಯಲು ತುಂಬ ಕಷ್ಟವಾಯಿತಂತೆ. ಹಾಗೇ. ಅಲ್ಲಿಂದ ರಾಮಕೃಷ್ಣನ ಮನೆಯವರಿಗೆ ಸುದ್ದಿ ಮುಟ್ಟಿಸಿ, ಹೆಣವನ್ನು ಅವರ ತಾಬೆಗೆ ಕೊಡಿಸಿ ತಿರುಗಿ ಬರಲು ಇಷ್ಟು ರಾತ್ರಿಯಾಯಿತಂತೆ.

ಗೆಳೆಯನ ಸಾವನ್ನು ನೆನೆದು ಸುಧಾಕರನೊಬ್ಬನೇ ಅಂದು ರಾತ್ರಿ ಅತ್ತ— ಬಸುರಿ ಹೆಂಡತಿಯ ಸಂತೈಸುವ ಅಪ್ಪುಗೆಯಲ್ಲಿ.

ಮರುದಿನ ಬೆಳಗ್ಗೆ, ರಾತ್ರಿಯಿಡೀ ಸುರಿದ ಮಳೆಯಿಂದ ಸ್ವಚ್ಛವಾದ ಆ ಚಿತ್ರಲಲ್ಲಿ ಬಹಳ ದಿವಸಗಳಿಂದ ಮೋರೆ ತೋರಿಸಿರದ ಅರಿಸಿಣ ಬಣ್ಣದ ಸ್ವಚ್ಛ ಬಿಸಿಲು ಇಳಿದು ಬಂದಿತ್ತು. ಮನೆಯ ಸೊಸೆಯರೆಲ್ಲ ಗೆಲುವಿನಲ್ಲೇ ಎದ್ದು ಮನೆಗೆಲಸದಲ್ಲಿ ಉತ್ಸಾಹದಿಂದ ನಿರತರಾದರು. ಆದರೆ ಇಡಿಯ ದಿನ ಒಬ್ಬರನ್ನೊಬ್ಬರು ಮಾತನಾಡಿಸುವ ಮನಸ್ಸಾಗಲೀ ತಮ್ಮ ಮೈದುನರತ್ತ ನೋಡುವ ಧೈರ್ಯವಾಗಲೀ ಒಬ್ಬರಿಗೂ ಆಗಲಿಲ್ಲ. ಭಾವಲೋಕದಲ್ಲಿ ಆಗ ನೆಲಸಿದ ಗೆಲುವಿನ ಎಳೆಬಿಸಿಲಿನಲ್ಲಿ ರಾತ್ರೆ ಅನುಭವಿಸಿದ್ದರ ನೆನಪು ಇನ್ನೂ ಉದ್ದನ್ನ ನೆರಳು ಚಾಚಿತ್ತು.!

---

# ಬೆಳಕಿನ ಹಬ್ಬ

೧

ಓಹೋಹೋ ಬೆಳಕು ಬೆಳಕು
    ದೀಪ ದೀಪ ದೀಪ !
ತೇಜಸ್ಸಿನ ಹಳಕೆಲ್ಲಾ
    ಹಂತಿಯಾದ ರೂಪ !
ಜ್ಯೋತಿರ್ಮಯ ಮನೆಯೆಲ್ಲಾ
    ಮನ ದೀಪಸ್ತೂಪ !
ಸಪ್ತ ಸಾಗರಗಳ ದಾಟಿ
    ಹೋಹ ಘೃಣಿಕಲಾಪ !
    ಗಗನ ರತ್ನದೀಪ—
ಬಹುವಾಯ್ತೇ ಭೂಮಿಯಲ್ಲಿ ?
    ಹೋಯ್ತೆ ನೈಶಪಾಪ ?

೨

ವಿಶ್ವವ್ಯಾಪ್ತಿಯ ಹೊಂದಿದ
    ಬಲೀಂದ್ರ ಬಲಿದಾನ—
ಅನ್ನವಾಯ್ತು, ಚಿನ್ನವಾಯ್ತು,
    ಸಂಸ್ಕೃತಸಂತಾನ !
ಈರ್ ಮೂರ್ ಸಾಸಿರ ಕಾಲ
ಉಳಿದ ನೆನಹು ದೀಪಜಾಲ !
    ನೀಲಜಲ!
    ಹಸಿರು ನೆಲ !
    ಕದಿರಹೊಲ !
    ಬಲಿಯ ಫಲ
ಕೃಷೀಂದ್ರ ಕುಲ ಜಿಕ್ಕಿದ,
    ನಾಗರಿಕತೆಗಿಕ್ಕಿದ !

೩

ಭೂಮಿತಾಯಿ ಎಂದ ಕಾಲ,
ಬಾನು ತಂದೆ ಎಂದ ಕಾಲ—
    ಕಳೆಯಿತು,
    ಅಳಿಯಿತು;
ಬೆಲೆವೆಣ್ಣನಕಿಳಿಸಲಿಳೆಯ
    ವಿಧಿವಿಧಾನ,
ಅನ್ಯಾನ್ಯವ ಸಿರಿಯೆನೆ ಜನ
    ಬುದ್ಧಿಹೀನ,
ಓ ಹೋ ಹೋ ಬಂದುದೇನು ?
    ದರ ದರ !
ಅನ್ನ ಮಾರುವವರ ಕರ
    ತಸ್ಕರ !
ದೀಪೋತ್ಸಾಹವ ಬೆಳೆಸುವ
    ಎಣ್ಣೆ ಕೂಡ ತತ್ಪರ !
ಮರುಗಬೇಕು ಮರ ಮರ !
ಮಳೆಗಾಲದ ಬಡವರ!
ಸಂಪಾದನೆಗೀ ಕರ !



೪

ಆದರೂ ಅದೇನೊ ಲೀಲೆ
    ಕಲಹ, ಕದನ, ಹೊಟ್ಟೆಕಿಚ್ಚೆ—
ಅದರಲ್ಲೂ ಪ್ರತ್ಯಾಶೆಯ
    ದೀಪ ದೀಪ ದೀಪ !
ಒಂದುಗಳಿಗೆ ಮಾನವತೆಯ
    ಅಮೃತರಸದ ಲೇಪ !
ಆನಂದದ ಸೆಲೆಯ ತೋರಿ
    ಏಕಭಾವದಲ್ಲಿ
ಭಾರತರಥ ಸಾಗಲೆಂಬ
    ಸದ್ಭಾವನೆಯಲ್ಲಿ
ಲೀನವಾಗದಿರದು ನಾಡು;
    ಸದಾಶಯದ ಮಿಂಚು
ಮೂಡದಿರದು ಮುಂಡಕ್ಕಿಯ
    ಹಂಚುವಾಗ! ಸಂಜು
ಭಾರತಮಾತೆಯು ಮಾಡಿದ
    ಲಕ್ಷ್ಮಿಪೂಜೆಯ ಹೊಂಚು !
ಅದೇ ದೀಪಶಕ್ತಿ, ಅದೇ
    ದಾನ, ಅದೇ ತ್ಯಾಗ !
ಅದೇ ನಂದಾದೀಪವರ್ಧ-
    ಸಾಮ್ಯವಮರ ಯೋಗ !

—ಬಿ. ಎಚ್. ಶ್ರೀಧರ

# ರಸನಿಮಿಷಗಳು

**ಕೃಷ್ಣಮೂರ್ತಿ ಪುರಾಣಿಕ**

ಗೋಕಾಕ

ಗೆಳೆಯರಾದ ಶ್ರೀ ಎಸ್. ವಿ. ಪಾಟೀಲ ಅವರು 'ಕರ್ಮವೀರ'ದ ದೀಪಾವಳಿ ಸಂಚಿಕೆಗಾಗಿ ಓದುಗರೊಡನೆ ಅನುಭವಿಸಿದ ನನ್ನ ರಸನಿಮಿಷಗಳಲ್ಲಿ ಕೆಲವನ್ನು ಬರೆಯಲು ಸಾಧ್ಯವೇ ? ಎಂದು ಕೇಳಿದ್ದಾರೆ, ಬರೆಯಬೇಕೆಂದು ವಿಧಿಸಿದ್ದಾರೆ. ಬಹುಶಃ ಕಾರವಾರ ಸಮ್ಮೇಲನದಲ್ಲಿ ನಾವಿಬ್ಬರೂ ಒಂದೇ ಕೋಣೆಯಲ್ಲಿ ಇದ್ದಾಗ ನನ್ನ ಸ್ನೇಹಿತರು, ಅಭಿಮಾನಿಗಳು ತೋರುತ್ತಿದ್ದ ಅಭಿಮಾನವನ್ನು ಪ್ರತ್ಯಕ್ಷ ನೋಡಿಯೇ ಇವನ್ನು ಕೇಳಿರಬೇಕು.

ನನ್ನ ಅಪರಂಪಾರ ಓದುಗ ಬಳಗವು ನನ್ನ ಜೀವನದಲ್ಲಿ ಹೊಸ ಬೆಳಕನ್ನೇ ತೋರುತ್ತಲಿದೆ. ಮಾನವ ಜೀವಿತದಲ್ಲಿರುವ ಸಹಾನುಭೂತಿ, ಕಾರುಣ್ಯಗಳ ಬೆಲೆ ಏನೆಂಬುದನ್ನು ನನಗೆ ತೋರಿಸಿಕೊಟ್ಟಿದೆ. ಸಾಹಿತ್ಯ ಶಾರದೆ ಅನುಗ್ರಹಿಸಿದ ವರಪ್ರಸಾದವಿದು. ನಾಡಿನ ಎಲ್ಲ ಕಡೆಯಿಂದಲೂ ನನಗೆ ಕಾಗದಗಳು ಬರುತ್ತಿವೆ, ಪ್ರಶ್ನೆಗಳನ್ನು ಕೇಳುತ್ತಾರೆ. ಅತ್ಯಂತ ಆತ್ಮೀಯವಾದ ಸಂಗತಿಗಳನ್ನು ತಿಳಿಸುತ್ತಾರೆ. ನನ್ನ ಯೋಗಕ್ಷೇಮದಲ್ಲಿ ತಮ್ಮ ದುಗುಡದುಮ್ಮಾನಗಳನ್ನೂ ತಿಳಿಸುತ್ತಾರೆ. ನನ್ನ ಸೋದರಿಯರು ಹೆಣ್ಣುಜೀವಕ್ಕೆ ಸಂಬಂಧಿಸಿದ ಅನೇಕ ಹೃದಯಸ್ಪರ್ಶಿ ಪ್ರಶ್ನೆಗಳನ್ನು ಕೇಳಿ ನನ್ನನ್ನು ವಿಚಾರದಲ್ಲಿ ತೊಡಗಿಸುತ್ತಾರೆ.

'ಜನಪ್ರಿಯತೆ'ಯನ್ನು ಹೊತ್ತುಕೊಂಡ ಹೆಗಲಿನ ಹೊಣೆ ಅದೆಷ್ಟು ದೊಡ್ಡದೆಂಬುದನ್ನು ನಾನು ತಿಳಿಯುವಂತಾಗಿದೆ. ನನ್ನನ್ನು ಅತ್ಯಂತ ಸೂಕ್ಷ್ಮವಾಗಿ ನೋಡುವ ಗೆಳೆಯರಿದ್ದಾರೆ. ಉತ್ಸಾಹದಿಂದ ಬೆನ್ನು ತಟ್ಟುವ ಹಿರಿಯರಿದ್ದಾರೆ. ಕಂಡಲ್ಲಿ ಪಾದ ಹಿಡಿದು ಮುಜಿಯುವ ಅಭಿಮಾನಿ ಕಿರಿಯರಿದ್ದಾರೆ. ಎಚ್ಚರಿಕೆಯ ಗಂಟೆಯನ್ನು ತಿಳಿಸುವ ಬಳಗದವರಿದ್ದಾರೆ. ನನ್ನ ಅವಿರತವಾದ ಕೆಲಸವನ್ನು ಮೆಚ್ಚಿದ ಸಂಪಾದಕರಿದ್ದಾರೆ. ನನ್ನ ಸಾಹಿತ್ಯಸೃಷ್ಟಿಯನ್ನು ಹೊಗಳುವವರೂ ಇದ್ದಾರೆ. ತೆಗಳುವವರು ತಮ್ಮ ಬಾಯಿಯನ್ನೂ ತೆರೆದಿದ್ದಾರೆ.

ನನ್ನ ಮೇಲೆ ಮಾತ್ಸರ್ಯ ತೋರುತ್ತಿರುವ ನಡೆದು ಬಂದ ದಾರಿಯವರು ನನಗೆ ಉಪಕಾರವನ್ನೇ ಮಾಡುತ್ತಾರೆ. ನನ್ನ ಪಂತಕ್ಕೆ ಬಾರದ ಕೆಲವು ರೆಕ್ಕೆಗಳು ಕೊಟರುತ್ತಲೂ ಇವೆ. ಇದೇ ಜೀವನದ ಸ್ವಾರಸ್ಯ.

ನನ್ನ ಓದುಗರೇ ನನ್ನ ಸಮರ್ಥರಾದ ವಿಮರ್ಶಕರು, ಜೀವನವನ್ನು ತೆರೆದು ತೋರಿಸುವ ಶ್ರೀ ಸಾಮಾನ್ಯರೇ ನನ್ನ ಸ್ಫೂರ್ತಿಯ ನೆಲೆ. ಅಡ್ಡ ದಾರಿಯ ವಿಮರ್ಶಕಾರರು ಪಾಂಡಿತ್ಯ ಪ್ರದರ್ಶನಕ್ಕಾಗಿ ಬುದ್ಧಿಯ ಬಾಗ ಹಾಕಬಹುದು. ಆದರೆ ಸಾಹಿತ್ಯ ಸೃಷ್ಟಿ ಹೃದಯಕ್ಕೆ ಸಂಬಂಧಿಸಿದ್ದು. ಜೀವನದಲ್ಲಿ ಪ್ರದರ್ಶನ ದೃಷ್ಟಿಗಿಂತ ದರ್ಶನ ದೃಷ್ಟಿಯೇ ಮೇಲೆಂದು ನನ್ನ ಅಭಿಪ್ರಾಯ. ಹೃದಯವಂತಿಕೆ ಬರಹಗಾರನ ಅಮೃತಪುರಿ. ಈ ಹೊಸ ನೆಲೆಯಲ್ಲಿ ನಾನು ಮನಸ ಸೋಕ್ತವಾಗಿ ಈಜಿದ್ದೇನೆ. ಸಂತೋಷ ಪಟ್ಟಿದ್ದೇನೆ.

ಅಂಥ ಒಂದೆರಡು ರಸನಿಮಿಷಗಳನ್ನು ಹೇಳುವದ ಸದ್ಯದ ನನ್ನ ಕರ್ತವ್ಯವಾಗಿದೆ.

ಅಂದು ಹುಬ್ಬಳ್ಳಿಯಲ್ಲಿ ಎರಡು ಗಂಟೆಗೆ ನನ್ನ ಕಾರ್ಯಕ್ರಮವಿದ್ದಿತು. ನಾನು ಒಂದು ಗಂಟೆಗೆ ಧಾರವಾಡದ ಬಸ್ ನಿಲ್ದಾಣದಲ್ಲಿಳಿದಾಗ ಅಲ್ಲಿ ಅಪರಂಪಾರವಾದ ಜನಸಮೂಹ ನೆರೆದಿತ್ತು. ಸಿದ್ಧಾರೂಢ ಸ್ವಾಮಿಯ ಜಾತ್ರೆಗಾಗಿ ಹುಬ್ಬಳ್ಳಿಗೆ ಹೋಗಬೇಕಾದ ಜನ ಅವರು. ನನಗೆ 'ಕ್ಯೂ' ಪ್ರವೇಶವೂ ಸಾಧ್ಯವಿರಲಿಲ್ಲ. ನಾನು ಮುಂದುಗಾಣದೆ ನಿಂತಾಗ ಒಬ್ಬ ಖಾಕಿಧಾರಿಯಾದ ಯುವಕನು ಬಂದು "ನಮಸ್ಕಾರ ಸರ್. ನಿಮಗೆ ಹುಬ್ಬಳ್ಳಿಗೆ ಹೋಗಬೇಕಾಗಿದೆಯೇನು ?" ಎಂದು ಕೇಳಿದನು, 'ಆದರೆ ಹೇಗೆ ಹೋಗುವುದು ?' ನಾನು ನಿರಾಶೆಯಿಂದಲೇ ಆ ಅಪಾರ 'ಕ್ಯೂ'ವನ್ನು ನೋಡುತ್ತ ಹೇಳಿದೆ. 'ಓ' ಅದಕ್ಕೇನು ಬನ್ನಿರಿ ಎಂದು ನನ್ನನ್ನು ಕರೆದುಕೊಂಡುಹೋಗಿ ಮುಂದಿನ ಬಸ್ಸಿನಲ್ಲಿ ಕುಳ್ಳಿರಿಸಿದನು. ನನಗೆ ಅಚ್ಚರಿಯಾಯಿತು. ನನಗೆ ಪರಿಚಯವಿಲ್ಲದ ಯುವಕನೊಬ್ಬನು ಈ ಉಪಕಾರಮಾಡಿದ್ದ...

"ಸರ್ ! ಚಹ ಕುಡಿಯುತ್ತೀರಾ ?"

"ಆದರೆ..."

"ನಾನು ನಿಮ್ಮ ಶಿಷ್ಯರಲ್ಲಿ ಒಬ್ಬ ಸರ್!"

"ಅಂದರೆ..."

"ನಾನು ನಿಮ್ಮ ಕಾದಂಬರಿಗಳ ಆರಾಧಕ ನಿಮ್ಮ ಶಿಷ್ಯರಲ್ಲಿ ಕಂಡಕ್ಟರರು ಬಹಳ ಜನರಾಗಿದ್ದಾರೆ ಸರ್!"

"ಆದರೆ ನನ್ನ ಶಿಷ್ಯರಲ್ಲಿ ಡೆಪ್ಯುಟಿ ಕಮಿಶನರರೂ ಇದ್ದಾರೆ ತಮ್ಮಾ !"

ನಾನು ಆತ್ಮಪ್ರೌಢಿಮೆಯನ್ನು ವಿಜೃಂಭಿಸಿದೆ.

"ಆದರೆ ಅದರಿಂದ ನಮಗೆ ಏನು ಪ್ರಯೋಜನ ಸರ್?" ಎಂದು ಅವನೆಂದ ಮಾತು ನನಗೆ ನಿಜ ವೆನ್ನಿಸಿತು.

* * * *

'ವಿಧಾನ ಸೌಧ'ದ ತಮ್ಮ ಕೋಣೆಯಲ್ಲಿ ಮಂಡಿತರಾದ ಗೆಳೆಯರಾದ ಶ್ರೀ ಸಿದ್ದಯ್ಯ ಪುರಾಣಿಕ ಅವರು ಇನ್ನೊಬ್ಬ ಅಧಿಕಾರಿಯ ಮುಂದೆ ನನ್ನ ಬಗೆಗೆ ಹೇಳುತ್ತ ಈ ಮಾತನ್ನು ಹೇಳಿದರು.

'ಅನೇಕ ಜನರು ನನ್ನನ್ನು ನೀವು ಕೃಷ್ಣಮೂರ್ತಿ ಪುರಾಣಿಕರಿಗೆ ಏನಾಗಬೇಕು? ಎಂದು ಆಗಾಗ ಕೇಳುತ್ತಾರೆ. ನನಗೆ ಅಭಿಮಾನವೆನ್ನಿಸುತ್ತದೆ. 'ಅವರು ನನ್ನ ಅಣ್ಣ' ಎಂದು ಹೇಳುತ್ತೇನೆ' ಎಂದರು. ಅವರ ಬಂಧು ಅನ್ನದಾಸಯ್ಯನವರೂ ಇದೇ ಮಾತನ್ನು ಹೇಳಿದಾಗ ನನಗಾದ ಅಭಿಮಾನ ಅಷ್ಟಿಷ್ಟಲ್ಲ. ನಿಮ್ಮ ಬಂಧುವಾಗುವ ಯೋಗ್ಯತೆ ನನಗೆ ಸಾಮಾನ್ಯವೆ ?" ಎಂದಾಗ ಸಿದ್ದಯ್ಯನವರ ಸಾತ್ವಿಕ ಪ್ರತಿಭೆಯ ತೇಜ ಇಮ್ಮಡಿಸಿದಂತಾಯಿತು. ಈ ಜಿವಾಳದ ಸಂದರ್ಭದಲ್ಲಿ ನಾನು ನಡೆದಂಥ ನಡೆಯನ್ನು ನೆನೆಗಲೂ ನನ್ನ ಹೃದಯ ನಾಲಗೆಯನ್ನು ಚಾಚಿ ಚಪ್ಪರಿಸುತ್ತದೆ.

ನನ್ನ ಅಭಿಮಾನಿಗಳು ತೋರಿಸುತ್ತಿರುವ ಈ ವಿಮಾನಯೋಗವು ಸಾಹಿತ್ಯ ಶಾರದೆ ಕೊಟ್ಟ ಪ್ರಸಾದವಾಗಿರುವ ಅನೇಕ ಸಂದರ್ಭಗಳನ್ನು ನಾನು ಆಗಾಗ ನೆನೆಯುತ್ತಲೇ ಇರುತ್ತೇನೆ.

ಒಮ್ಮೆ ಧಾರವಾಡದಿಂದ ಬಂದ ಡಾ. ಎಮ್. ಜಿ. ಪಂಚಾಕ್ಷರಪ್ಪನವರೊಡನೆ ವಿಜ್ಞಾನದ ಆಗಾಧತೆಯ ಬಗ್ಗೆ ಮಾತನಾಡುತ್ತ ಹೋಗುತ್ತಿರುವಾಗ ಒಬ್ಬನು ನಮ್ಮನ್ನು ತಡೆದು "ಪುರಾಣಿಕ ಸಾಹೇಬರೆ ! ನೀವು ದಿನಾ ಒಂದು ಕಾದಂಬರಿ ಯಾಕೆ ಬರೆಯಬಾರದು ?" ಎಂದು ಕೇಳಿ ನನ್ನ ಪಾದ ಮುಟ್ಟಿ ನಮಸ್ಕರಿಸಿದರು.

ಕರ್ನಾಟಕ ವಿಶ್ವವಿದ್ಯಾಲಯದ 'ಡಾಕ್ಟರ್' ಪ್ರೊ ಸರರಾದ ಪಂಚಾಕ್ಷರಪ್ಪನವರು ಈ ದೃಶ್ಯವನ್ನು ನೋಡಿದರು.

"ನನ್ನ M. Sc. Ph. D. ಜ್ಞಾನಕ್ಕೂ, ಸಾಹಿತ್ಯ ಪ್ರೇಮಕ್ಕೂ ಇರುವ ವ್ಯತ್ಯಾಸವನ್ನು ತಿಳಿದುಕೊಂಡೆ. ಏನು ಜನಪ್ರಿಯತೆ ನಿಮ್ಮದು?"

ಎಂದಾಗ ಅವರ ಹೃದಯ ಅರಳಿ ನಿಂತು ಕಣ್ಣು ಕುಣಿಕೆಯಲ್ಲಿ ನೀರಾಡಿದುದನ್ನು ನೋಡಿದಾಗ ನನ್ನ ಹೃದಯ ಕಾಸಾರದಲ್ಲಿ ಮಧುರ ರಸವಾಹಿನಿಯ ತರಂಗವೇ ಎದ್ದಂತಾಯಿತು.

* * * *

'ಕುಲವಧು' ಕಾದಂಬರಿಯ ಆಧಾರದ ಮೇಲೆ ಚಿತ್ರೀಕರಿಸಿದ ಅದೇ ಹೆಸರಿನ ಚಿತ್ರದ 'ಪ್ರಿವ್ಯೂ' ಸಮಾರಂಭಕ್ಕೆ ನಾನು ನನ್ನ ಸೌಭಾಗ್ಯವತಿಯೊಡನೆ ಹೊರಟಿದ್ದೆ. ಎರಡನೆಯ ವರ್ಗದ ಡಬ್ಬಿಯಲ್ಲಿ ತೆಲುಗು ಪ್ರದೇಶದವರಂತೆ ಕಾಣುವ ಕುಟುಂಬವೊಂದು ಮೊದಲೇ ಕುಳಿತಿತ್ತು. ಅದೇ ದಿನ ಬೆಂಗಳೂರಿನ 'ಸಂಯುಕ್ತ-ಕರ್ನಾಟಕ'ದಲ್ಲಿ ಬಂದ 'ಕುಲವಧು' ಜಾಹೀರಾತನ್ನು ನೋಡಿದ ಅವರು ಹಿಗ್ಗಿದರು.

"ನಾನು ನಾಳೆ ಹೋಗಬೇಕಣ್ಣ ! 'ಕುಲವಧು' ನೋಡಲಿಕ್ಕೆ." ಕಾಲೇಜದಲ್ಲಿ ಅಭ್ಯಾಸ ಮಾಡುತ್ತಿದ್ದ ಅವರ ಮಗಳು ಹೇಳಿದಳು.

"ಕುಲವಧು ಓದಿದ್ದೀಯೇನಮ್ಮ?" ತಂದೆ ಅವಳನ್ನು ಕೇಳಿದ.

"ಹತ್ತು ಸಾರೆಯಾದರೂ ಓದಿರಬೇಕು."

"ನೀವು ಓದೀರೇನರಿ?" ತಂದೆ ಸುಮ್ಮನೆ ಕುಳಿತ ನನ್ನನ್ನು ಕೇಳಿದ.

ನನ್ನ ಹೆಂಡತಿ ಈ ಪ್ರಶ್ನೆಯನ್ನು ಕೇಳಿ ಮುಗುಳು ನಗೆ ನಕ್ಕಳು. ನಾನು ಸುಮ್ಮನಿರಲು ಕಣ್ಸನ್ನೆ ಮಾಡಿದೆ.

"ನಾನೇ...?"

"ಏನು ಕಾದಂಬರೀರಿ ಅದು. ಆ ಕೃಷ್ಣಮೂರ್ತಿ ಭೆಟ್ಟಿಯಾದರೆ..."

"ಏನು ಮಾಡಬೇಕೆಂದು ಮಾಡಿದ್ದೀರಿ?

"ಅವರು ಉಪಯೋಗಿಸುವ ಲೆಕ್ಕಣಿಕೆ ಯಾವುದು......ಎಂದು ಕೇಳಬೇಕೆಂದು ಮಾಡಿದ್ದೇನೆ ಇರಲಿ ಹೇಗೂ ಬೆಂಗಳೂರಿಗೆ ಹೊರಟಿದ್ದೀರಿ. 'ಕುಲವಧು' ನೋಡಿಕೊಂಡೇ ಹೋಗಿರಿ."

"ನಾನು ಸಾಮಾನ್ಯವಾಗಿ ಸಿನೇಮಾಗಳಿಗೆ......"

"ಕುಲವಧು ಕಾದಂಬರಿಯೂ ಅಲ್ಲ, ಸೀನೆಮಾನೂ

ಅಲ್ಲ. ಅದೊಂದು ಜೀವನದ ರಸ ಜೀನು. ನಾನು ಹೇಳುವಂತೆ ಕೇಳಿರಿ. ಮೊದಲು ಕಾದಂಬರಿ ಓದಿರಿ..."

ಆ ಹೊತ್ತಿಗೆ ಆ ತರುಣಿಗೆ ಏನೋ ಸಂದೇಹ ಬಂದಿರಬೇಕು. ನನ್ನ ಹೆಂಡತಿಯೊಡನೆ ಏನೋ ಪಿಸು ಮಾತು ಆಡಿದಳು......

"ನಾನು ಕಾದಂಬರಿಗಳನ್ನು ......"

"ಅಣ್ಣ ಅವರು ಕಾದಂಬರಿ ಓದುವವರಲ್ಲ: ಬರೆಯುವವರು. ಏನಣ್ಣ! ಇವರ ಪರಿಚಯ ನಿಮಗೆ ಸಿಗಬಾರದೆಂದರೆ. ಇವರೇ ಕೃಷ್ಣಮೂರ್ತಿ ಪುರಾಣಿಕರು" ಎಂದಾಗ ಅವನ ಮುಖದಲ್ಲಿ ತುಂಬಿನಿಂತ ಹೃದಯವಂತಿಕೆಯ ಸಂತೃಪ್ತಿ ಭಾವವು ನೋಡುವಂತಿತ್ತು. ಈ ಸಂದರ್ಭವು ಜೀವನ ರಹಸ್ಯದ ಇನ್ನೊಂದು ತೊಳೆಯನ್ನು ಬಿಡಿಸಿ ತೋರಿದಂತಾಯಿತು.

ಒಮ್ಮೆಯಂತೂ ಒಬ್ಬರು ನನ್ನ ಕಾದಂಬರಿಗಳಲ್ಲಿ ಐದು ಕಾದಂಬರಿಗಳನ್ನು ಕೊಂಡುತಂದು ನನ್ನ ಮಗಳಿಗೆ ಕೊಟ್ಟು 'ಓದುವದಾದರೆ ಇವರ ಕೃತಿಗಳನ್ನೆ ಓದಿತಿ' ಎಂದಾಗ ನಾವಿಬ್ಬರೂ ನಕ್ಕ ನಗೆ ಇನ್ನೂ ನನ್ನ ಕಣ್ಣಂಚಿನಲ್ಲಿ ಹನಿಯನ್ನು ಕಾಣಿಸುತ್ತದೆ.

ಇನ್ನೊಂದು ಸಂದರ್ಭದಲ್ಲಿ ನಾನು 'ಸ್ಲೀಪರ ಕೋಚ್', ನಲ್ಲಿ ಬೆಂಗಳೂರಿನಿಂದ ಬರುತ್ತಿರುವಾಗ ಹಾವೇರಿಯವರೊಬ್ಬರು ತಮ್ಮ ಗೆಳೆಯನಮುಂದೆ ಹೇಳುತ್ತಿದ್ದರು.

"ಭಪ್ಪರೆ ಮಗನ! ಬರೆದರ ಬರೀಬೇಕು ಇಂಥಾ ಕಾದಂಬರಿ. ಈ ಮಗನ ಕಾದಂಬರಿ ಓದಿದರ..."

ನಾನು ನನ್ನ ಮುಖದಮೇಲೆ ಚಾದರನ್ನು ಎಳೆದುಕೊಂಡು ನಗಹತ್ತಿದೆ. ಆ ಬಿರುದು ಎಷ್ಟು ಸಂತೋಷದಾಯಕವಾಗಿತ್ತು.

ಮಣಿಪಾಲ ಸಾಹಿತ್ಯ ಸಮ್ಮೇಲನದ ಸಂದರ್ಭದಲ್ಲಿ ನಾನು ಒಂದು ದಿನ ಮೊದಲೇ ಹೋಗಿದ್ದೆ. ಶ್ರೀ ಕೃಷ್ಣ ದರ್ಶನವನ್ನು ಮೊದಲನೆಯ ದಿನ ತೀರಿಸಿಕೊಂಡು ಧನುರ್ಮಾಸದ ಊಟವನ್ನು ಮಠದಲ್ಲಿ ಮಾಡಬೇಕೆಂದು ನನ್ನ ಪತ್ನಿಯ ಅಭಿಲಾಷೆಯಾಗಿತ್ತು. ಶ್ರೀ. ಕು. ಶಿ. ಹರಿದಾಸಭಟ್ಟರು ಈ ಏರ್ಪಾಡಿಗಾಗಿ ನಮ್ಮನ್ನು ಶ್ರೀ. ಕೌಲಗಿ ಶೇಷಾಚಾರ್ಯರಿಗೆ ಒಪ್ಪಿಸಿದರು. ಶ್ರೀ ಕೃಷ್ಣ ದರ್ಶನದಿಂದ ಕೃತಾರ್ಥರಾದ ನಾವು ಸ್ವಾಮಿಗಳ ಪಂಕ್ತಿಯಲ್ಲಿಯೇ ಊಟಕ್ಕೆ ಕುಳಿತೆವು. ಊಟದ ಮಧ್ಯದಲ್ಲಿ ಸ್ವಾಮಿಗಳು ಶ್ರೀ. ಶೇಷಾಚಾರ್ಯರಿಗೆ ಹೇಳಿದರು "ಪುರಾಣಿಕರ ಆತಿಥ್ಯ ನೋಡಿಕೊಳ್ಳಿ!!" ಈ ಮಾತನ್ನು ಕೇಳಿ ನನ್ನ ಹತ್ತಿರ ಕುಳಿತ ಒಂದು ವ್ಯಕ್ತಿ ಹಿಡಿದ ತುತ್ತನ್ನು ಹಿಡಿದಲ್ಲಿಯೇ ನಿಲ್ಲಿಸಿ ನನ್ನನ್ನು ನೋಡುತ್ತ "ನೀವು ಕೃಷ್ಣಮೂರ್ತಿ ಪುರಾಣಿಕರೆ?" ಎಂದು ಕೇಳಿತು. ನಾನು ಗೋಣು ಅಲ್ಲಾಡಿಸಿದೆ. ಹೀಗೆ ಕೇಳಿದ ವ್ಯಕ್ತಿ ಜಯತೀರ್ಥ ರಾಜಪುರೋಹಿತರು. ಆ ಭಾಗದ ಅಸಿಸ್ಟೆಂಟ ಕಮೀಶನರರು. ಕನ್ನಡ ಸಾಹಿತ್ಯದ ಅಭಿಮಾನಿಗಳು. ಸ್ವತಃ ಬರಹಗಾರರು. "ನಮ್ಮ ಕೆಲಸ ಮುಗಿದಂತಾಯಿತು ಪುರಾಣಿಕರೆ! ನಿಮ್ಮನ್ನು ನೋಡುವದೇ ನಮ್ಮದೊಂದು ಮುಖ್ಯ ಉದ್ದೇಶವಾಗಿತ್ತು" ಎಂದದ್ದು ಕೃತಕವಾಗಿರಲಿಲ್ಲ. ಅವರ ಪತ್ನಿ, ಮಗಳು ಎಲ್ಲರೂ ನಮ್ಮನ್ನು ನೋಡಿಕೊಂಡ ರೀತಿಯಲ್ಲಿ ನಾನು ಅವರಲ್ಲಿ ಅಡಕವಾಗಿದ್ದ ಸಂಸ್ಕಾರವನ್ನು ಕಾಣುವಂತಾಯಿತು. ತಮ್ಮ ಕಾರಿನಲ್ಲಿ ಮಲ್ಪೆಗೆ ಕರೆದುಕೊಂಡು ಹೋಗಿ ಸಮುದ್ರಸ್ನಾನವಾಡಿಸಿ, ಶಿವಮೊಗ್ಗೆಯಲ್ಲಿ ಸತ್ಕರಿಸಿದ ನೆನಹು ನನ್ನಲ್ಲಿ ಜೀವ ಜೀವನ ಮಹತಿಯಲ್ಲಿ ನಂಬಿಗೆಯನ್ನೇ ಮೂಡಿಸಿತು. ಇಂದಿಗೂ ಶ್ರೀ ಜಯತೀರ್ಥರಾಜಪುರೋಹಿತರು ನನ್ನ ಬಳಗದವರಾಗಿದ್ದಾರೆ.

ಕಾದಂಬರಿ ಶಾರದೆ ನನಗೆ ಇಂಥ ಬಳಗದವರನ್ನು ಸಾಕಷ್ಟು ದಯಪಾಲಿಸಿದ್ದಾಳೆ. ಕಿರಿಯರು ತಂದೆಯಂತೆ ನನ್ನನ್ನು ಗೌರವಿಸುತ್ತಾರೆ. "ಮಣ್ಣಿನ ಮಗಳು" "ಬೆವರಿನ ಬೆಲೆ"ಗಳನ್ನು ಓದಿದ ಗೋವಿಂದ ಗೌಡರು ಮಗನನ್ನು ಬೀಸಾಯಕ್ಕೆ ಹಚ್ಚಿದ್ದಾರೆ. "ಭಾಗೀರಥಿ" "ಮುತ್ತೈದೆ"ಗಳನ್ನು ಓದಿ ಅಭಿಮಾನತಾಳಿದ ಬಿ. ಸುಂದರೇಶ್ವರರ ಮಗಳು ಚಿ. ಮೈಥಿಲಿ ಈಗಲೂ ನನ್ನ ಮಗಳಾಗಿ ಬರೆಯುತ್ತಿದ್ದಾಳೆ. ಮೊನ್ನೆ ಮೊನ್ನೆ ಅವಳ ಪತ್ರ ಪರದೇಶದಿಂದಲೂ ಬಂದಿದೆ. ಗಂಗಾವತಿಯ ಜಯರಾಮಾಚಾರ್ಯ ಸರಜೋಶಿ ಅವರಿಗೆ ನನ್ನ ಕಾದಂಬರಿಗಳಿಂದ ಯಾವ ಬೆಳಕು ಕಂಡಿತೋ ನನ್ನನ್ನು ಶ್ರೀರ್ಘಸ್ವರೂಪರೆಂದು ಕರೆಯುತ್ತ ವರುಷಕ್ಕೊಮ್ಮೆ ಬಂದು ಹೋಗುತ್ತಾರೆ. ಸಾಗರದಸಾಹಿತಿ ಶ್ರೀನಿವಾಸ ಉಡುಪ ನನ್ನನ್ನು ಚಿಕ್ಕಪ್ಪನೆಂದೇ ಸಂಬೋಧಿಸುತ್ತಾನೆ. ಈ ಸಾಹಿತ್ಯದ ನನ್ನ ಬಳಗ ನನ್ನ ಜೀವನದಲ್ಲಿ ರಸದೀವಾಗಿ ನನ್ನ ಅಂತರಂಗದ ಧ್ವನಿಯೊಂದು ಮೊರೆಗುಕೊಡುತ್ತಲಿದೆ.



" ಹೇಳಿದಂತೆ ಕೇಳಿರಿ ಮೊದಲು ಕಾದಂಬರಿ ಓದಿರಿ"

ಬೆಂಗಳೂರಿಗೆ ಮೊದಲ ಸಲ ಬಂದಾಗ ನನಗೆ ಚಿ. ಮೈಥಿಲಿಯನ್ನು ಕಾಣಬೇಕಾಗಿತ್ತು. ವಿಳಾಸದಿಂದ ಹುಡುಕುವದು ಸಾಧ್ಯವಿರಲಿಲ್ಲ. ನನ್ನ ಈ ಅವಸ್ಥೆಯನ್ನು ನನ್ನ ಗೆಳೆಯರಾದ ಶ್ರೀ ಕೌಜಲಗಿ ಮಹಾದ್ವಾರರವರಿಗೆ ಹೇಳಿದಾಗಲಾದರೂ ಈ ಚಮತ್ಕಾರವೇನೆಂದು ತಿಳಿಯಲೆಂದೋ ಏನೋ ನನ್ನೊಡನೆ ಬಂದರು. ಮನಸ್ಸಿಕ್ಕಿತು.

"ಓ! ಚಿಕ್ಕಪ್ಪನವರು" ಎಂದು ಮೈಥಿಲಿ ನುಡಿದಾಗ ನನ್ನ ಕಣ್ಣು ತುಂಬಿತು. ಇದನ್ನು ಕೌಜಲಗಿಯವರು ನೋಡಿದಾಗ ಅವರ ಕಣ್ಣಲ್ಲಿಯೂ ಈ ಸವಿ ಹನಿದುಂಬಿತ್ತು.

ಸಾಹಿತ್ಯ ಶಾರದೆ ನನ್ನನ್ನು ತಿದ್ದುತ್ತಿರುವ ಈ ರೀತಿ ಅನೇಕ ಸಂಪರ್ಕಗಳನ್ನು ತರುತ್ತದೆ. ಒಂದೊಂದು ಒಂದೊಂದು ತರ ಸುಮಧುರ ಪೂಜ್ಯ.

ಇಂಥ ಒಂದು ಸಂದರ್ಭದಲ್ಲಿ ಗೆಳೆಯರಾದ ಶ್ರೀ ಕೊರಟಿ ಶ್ರೀನಿವಾಸರಾಯರು "ಕನ್ನಡ ಸಾಹಿತಿಗಳಲ್ಲಿ ನಿಮ್ಮ ರೀತಿ ಸುಮಧುರವಾಗಿದೆ. ಇದು ಹೊಟ್ಟೆಕಿಚ್ಚಿನ ಧನಕಿಯೂ ತಿಳಿಯದು" ಎಂದಾಗ ನನ್ನ ಹೃದಯ ಕಡೆದಂತಾಯಿತು.

ಈ ಜನಾನುರಾಗದ ಬಾಂಧವ್ಯದಲ್ಲಿ ನನ್ನ ಹೃದಯ ಹಿಗ್ಗುತ್ತಲೇ ಇರುತ್ತದೆ. ಅದು ಹಾಗೇ ಸಾಗಲೆಂದೇ ನನ್ನ ಮನೀಷೆಯಾಗಿದೆ. ಈ ರಸವಾಹಿನಿ ಬತ್ತಬಾರದಲ್ಲ!,

ಒಂದು ಸಂದರ್ಭದಲ್ಲಿ ಬೆಂಗಳೂರಿನ ನನ್ನ ಅಭಿಮಾನದ N. M. C. ಯಲ್ಲಿ ತಂಗಿದಾಗ ಹೊಟ್ಟೆ ಶೂಲೆಯಿಂದ ಬಳಲುತೊಡಗಿದುದನ್ನು ಡಾ. ಮೋಹನ ಅಕ್ಕಾ ಅರಿತುಕೊಂಡು (ಅವನಿಗೆ N.M.C. ಯಿಂದ ಯಾರೋ Phone ಮಾಡಿ ತಿಳಿಸಿದ್ದರಂತೆ) ನನ್ನನ್ನು ಅವರ ಡಾಕ್ಟರ ಕಡೆಗೆ ಕರೆದುಕೊಂಡು ಹೋದಾಗ ಡಾಕ್ಟರಿಗಾದ ಸಂತೋಷ ಅಷ್ಟಿಷ್ಟಲ್ಲ ಅವರು ನನ್ನನ್ನು ಕೋಣೆಗೆ ಕರೆದುಕೊಂಡು ಹೋಗಿ ನನ್ನ ಬಲಗೈಯನ್ನು ತೆಗೆದುಕೊಂಡು ಒಂದೇಸವನೇ ನೋಡತೊಡಗಿದರು.

"ನನ್ನ ಹೊಟ್ಟೆ ನೋಯುತ್ತಿದೆ ಡಾ. ರೈ ಅವರೆ ಅದರೆ ನನ್ನ ಕೈಗೆ ಏನೂ ಆಗಿಲ್ಲ" ಎಂದೆ.

"ನಿಮ್ಮ ಹೊಟ್ಟೆಯನ್ನು ನೋಡುವದು ಇದ್ದೇ ಇದೆ. ಆದರೆ ನಿಮ್ಮ ಹಸ್ತರೇಖೆ ಸಿಗುವದು ಅಪರೂಪ" ಎಂದು ದುರ್ಬಿನಿಯನ್ನು ತೆಗೆದುಕೊಂಡು ಬಂದರು.

ಅಷ್ಟು ಅಭಿಮಾನ ನನ್ನ ಭವಿಷ್ಯದ ಬಗ್ಗೆ ಅಷ್ಟು ಉತ್ಸುಕತೆ ಅವರಿಗೆ.

ನನ್ನ ಮಗಳು ಗೌರಿ ಮೈ ಸುಟ್ಟುಕೊಂಡಾಗ ಬಂದ ಸಾವಿರಾರು ಕಾಗದಗಳಲ್ಲಿ ಮಿಡಿಯುತ್ತಿರುವ ಅನುಕಂಪವು ನನ್ನನ್ನು ಮೂಕನನ್ನಾಗಿ ಮಾಡಿತು.

ಈ ಪರಸ್ಪರ ಪ್ರೀತಿಯ ರಸಬುಗ್ಗೆಯ ಕಾರಂಜಿಯಲ್ಲಿ ಮಿಂದು ಧನ್ಯನಾಗಿದ್ದೇನೆ. 'ಪ್ರೀತಿ ರಸವೇ ಮೈದೋರಿತಣ್ಣ! ಇದು ಬರಿ ಬೆಳಗಲ್ಲೋ ಅಣ್ಣಾ, ಎನ್ನುವಂತಾಗಿದೆ. ಈ ರಸನಿಮಿಷಗಳ ಕೆರೆಯ ತೆರೆಗಳಲ್ಲಿ ಈಜಾಡಿದ ಈ ಮನಸ್ಸಿಗೆ.

ಒಮ್ಮೆ ಗುಂಟಕಲ್ ಮಾರ್ಗವಾಗಿ ಬೆಂಗಳೂರಿಗೆ ಹೊರಟಿದ್ದೆ. ಬಳ್ಳಾರಿಯಿಂದ ತುಸು ಶ್ರೀಮಂತರೆಂಬಂತೆ ಕಾಣುವ ಒಂದು ಕುಟುಂಬವು ನಾನು ಕುಳಿತ ಡಬ್ಬಿಯಲ್ಲಿಯೇ ಬಂದಿತು. ನಾನು ತಲೆಗೆ ಟೊಪ್ಪಿಗೆಯನ್ನು ಹಾಕಿಕೊಂಡು ಹಾಗೇ ಒರಗಿದ್ದೆ. ಬಂದ ಎಲ್ಲರ ಕೈಯಲ್ಲಿಯೂ ನನ್ನ ಬೇರೆ ಬೇರೆ ಕಾದಂಬರಿ



‹ನನಗೆ ಅಭಿಮಾನವೆನಿಸಿದರೂ ಸಂಕೋಚವೆನಿಸತೊಡಗಿತು›

ಗಳಿದ್ದವು. ನನಗೆ ಅಭಿಮಾನವೆನಿಸಿದರೂ ಸಂಕೋಚವೆನಿಸತೊಡಗಿತು.

"ಮತ್ತೆ ಯಾರ ಪುಸ್ತಕಗಳನ್ನು ಕೊಂಡಿರಿ?

"ಮತ್ತಾರದು ಕೊಳ್ಳುವದು. ?

"ಒಮ್ಮೆ ಎಲ್ಲ ಪುಸ್ತಕಗಳನ್ನು ಕೊಂಡುಬಿಡಿರಿ

"ಮತ್ತೆ ಕಾದಂಬರಿ ಓದಿದರೆ......

"ಇವನ ಕಾದಂಬರಿಗಳು ಕಾದಂಬರಿಗಳೇನು !

ಇನ್ನು ನನ್ನ ಮೇಲೆ ಗದೆ ಬರುವದೆಂದು ಕೇಳಿದ ನಾನು ಮುಖವನ್ನು ಆ ಕಡೆಗೆ ಹೊರಳಿಸಿ ಟೊಪ್ಪಿಗೆಯನ್ನು ತೆಗೆದು ಕೆಳಗಿಟ್ಟೆ. ಎದುರುಗಿನ ಹಿರಿಯರು ನನಗೆ ಕೇಳಿದರು.

"ಯಾವ ಊರಿನಿಂದ ಆಯಿತು ಆಗಮನ?

"ಗೋಕಾಕದಿಂದ.

"ಯಾವ ಗೋಕಾಕ? ಪುರಾಣಿಕನ ಗೋಕಾಕವೇನು?

"ಅಂದರೆ?"

"ಗೋಕಾಕದಲ್ಲಿ ಪುರಾಣಿಕನ ಪರಿಚಯವಿದೆಯೇನು ತಮಗೆ ?"

"ಯಾವ ಪುರಾಣಿಕ ? ಕೆ. ಬಿ. ಪುರಾಣಿಕನೋ? ಕೃಷ್ಣಮೂರ್ತಿ ಪುರಾಣಿಕನೊ ?" ನಾನೇ ಬೇಕೆಂದೇ ಕೇಳಿದೆ.

"ಅಂದರೆ ಇಬ್ಬರು ಪುರಾಣಿಕರು ಇರುವರೇನು?"

"ಹೌದು ಒಬ್ಬರು ಮಾಸ್ತರರು, ಇನ್ನೊಬ್ಬರು ಸಾಹಿತಿಗಳು.

'ಹಾಗಾದರೆ ಸಾಹಿತಿಗಳನ್ನು ನೀವು ಬಲ್ಲಿರಾ?" ಎಂದಾಗ ನನಗೆ ತುಸು ನಗೆ ಬಂದಿತು.

"ತುಸು ಗೊತ್ತಿದೆ."

"ಅವರಿಗೆ ನನ್ನ ನಮಸ್ಕಾರ ಹೇಳಿರಿ."

'ನಿಮ್ಮ ಅಂದರೆ...?"

'ನನ್ನ ಹೆಸರಿಗೇನು ಬೆಲೆ. ಓದುಗ ಎಂದು ಹೇಳಿದರೆ ಸಾಕು" ಎಂದರು.

'ಅವಶ್ಯವಾಗಿ ಹೇಳುತ್ತೇನೆ.' ಎಂದು ಹೇಳಬಾರದೆ ಅವರೆ ಬೆಂಗಳೂರ ಸ್ಟೇಶನಿನ ಮೇಲೆ ಗಂಟ್ಟು ರಟ್ಟಾಯಿತು. ಶೈಲಶ್ರೀ ನಿರ್ಮಾಪಕರಾದ ಎ. ಸಿ. ನರಸಿಂಹಮೂರ್ತಿಯವರು ನನ್ನನ್ನು ಸ್ವಾಗತಿಸಲು ಬಂದವರು "ನಮಸ್ಕಾರ ಕೃಷ್ಣಮೂರ್ತಿ ಪುರಾಣಿಕರಿಗೆ" ಎಂದಾಗ ಅವರು ಓಡಿ ಬಂದು

'ನೀವು ಅವರಿಗೆ ನಮಸ್ಕಾರ ಹೇಳಲುಕಾರಣವಿಲ್ಲ ಇದೋ ನಿಮಗೆ ನನ್ನ ನಮನ ಎಂದರು.

ನಾನು ಅವರನ್ನು ಮುಗುಳುನಗೆಯಿಂದ ನೋಡುವಂತಾಯಿತು.

ಇಂಥ ರಸಾನುಭವಗಳ ಮಾಲೆಯನ್ನು ಪೋಣಿಸಿದಷ್ಟು ಹೂವುಗಳು ಇನ್ನೂ ಉಳಿಯುತ್ತವೆ. ಎಲ್ಲಿ ಆತ್ಮಶ್ಲಾಘನೆಯ ಅಂಚಿನಲ್ಲಿ ಮುಗ್ಗರಿಸುವೆನೊ ಎಂಬ ಹೆದರಿಕೆಯೂ ಆಗುತ್ತದೆ.

ಕೊನೆಯದಾಗಿ ಈ ನಾಡಿನ ಶ್ರೇಷ್ಠ ಕಲಾವಿದೆಯಾದ ನನ್ನ ಕಾದಂಬರಿಗಳ ಓದುಗರಾದ ಶ್ರೀಮತಿ ಪಂಢರಿಬಾಯಿಯವರು ಮದ್ರಾಸದಲ್ಲಿ ನನ್ನನ್ನು ಬರಮಾಡಿಕೊಂಡು ಕಾದಂಬರಿಗಳ ವಸ್ತುವಿನ್ಯಾಸದ ಬಗ್ಗೆ ಚರ್ಚೆ ಮಾಡಿ ವಿಠ್ಠಲ ಮಂದಿರದಲ್ಲಿ ಪೂಜ್ಯತೆಯೇ ಮೈವೆತ್ತು ನಿಂತಂತೆ ಹೇಳಿದ ಮಾತುಗಳು ನನಗೆ ಸ್ಫೂರ್ತಿದಾಯಕವಾಗಿವೆ. ಅವರ ಸರಳ ಸಾದಾಜೀವನದಲ್ಲಿ ಆಳವಾಗಿ ಮೂಡಿ ಬಂದ ಡಿಗಳನ್ನೇ ಅವರು ಬರೆದು ತಿಳಿಸಿದ್ದಾರೆ"...ತಮ್ಮ ಒಂದೊಂದು ಪುಸ್ತಕವನ್ನು ಓದುವಾಗಲೂ ನನ್ನ ಸ್ಮರಿಯದೆ ತಮಗೆ ನನ್ನ ಹೃತ್ಪೂರ್ವಕಆನಂದ ಭಾಷ್ಪದೊಂದಿಗೆ ಪ್ರಣಾಮಗಳು ಸೇರಿರುತ್ತವೆ. ವಿವೇಕ ಸತ್ಸಹವಾಸ, ಆತ್ಮವಿಚಾರದೊಂದಿಗೆ ಹೆಜ್ಜೆ ಹೆಜ್ಜೆಗೂ ಸವಿಗನಸುಗಳ ಕಂಡು ಮನದಲ್ಲಿ ಉತ್ತಮ ವಿಚಾರಗಳು ತುಂಬಿ, ಶುದ್ಧವಾದ ಹೃದಯಾಕಾಶದಲ್ಲಿ ಕೆಟ್ಟ ನಡತೆಯ ಕಗ್ಗತ್ತಲೆಯ ಸೋಂಕಿಲ್ಲದೆ, ಪವಿತ್ರ ಭಾವನೆಗಳ ಬೆಳದಿಂಗಳಲ್ಲಿ ಸಸ್ಯ ಬೀಜವನ್ನು ಬಿತ್ತಿ ವಿವೇಕದ ಮರವಾಗಿ ಧರ್ಮದ ಫಲವನ್ನು ಹೊರಹೊಮ್ಮುವಂಥ ಉತ್ತಮ ಕೃತಿಗಳನ್ನು ಬರೆದ ತಮಗೆ ಇನ್ನೂ ಹೆಚ್ಚಿನ ಗ್ರಂಥಗಳನ್ನು ಬರೆಯಲು ಸಕಲ ಸಂಪದದೊಂದಿಗೆ ದೀರ್ಘಾಯುಸ್ಸನ್ನು ಕೊಡಲೆಂದು ಶ್ರೀದೇವರಲ್ಲಿ ಬೇಡುತ್ತೇನೆ..." ಈ ಮಾತುಗಳು ರಸದೊರತೆಯಾಗಿ, ಈಗಲೂ ನನ್ನ ಕಣ್ಣುಗಳನ್ನು ತೋಯಿಸುತ್ತವೆ. ಶ್ರೀಮತಿ ಪಂಢರಿಬಾಯಿಯವರ ತಂದೆ ನನ್ನ ‹ಹಬ್ಬದ ಬಳ್ಳಿ' ಯನ್ನು ಕೈಯಲ್ಲಿ ಹಿಡಿದುಕೊಂಡು ಹರಸಿದ ಧನ್ಯತೆಯನ್ನು ಮರೆಯಲಾರೆ. ಈ ಪವಿತ್ರಾತ್ಮನು ನನಗೆ ನೀಡಿದ ಮಹಾಸ್ವಾಮಿಗಳಾದ ನಿತ್ಯಾನಂದರ ಚಿತ್ರಪಟವು ಈಗಲೂ ನನ್ನ ಕೋಣೆಯಲ್ಲಿ ವಿರಾಜಮಾನವಾಗಿದೆ. ಅದನ್ನು ನೋಡಿದಾಗ ಜೀವನ ನನ್ನಲ್ಲಿ ಹೊಸ ಎಚ್ಚರವನ್ನು ಕೊಟ್ಟಂತಾಗುತ್ತದೆ.

ನನ್ನ ಓದುಗ ಬಳಗವು ನನಗೆ ಕೊಡುತ್ತಿರುವ ಸ್ಫೂರ್ತಿ ರಸಬುಗ್ಗೆಯಾಗಿ ಹೃದಯದ ಕಾರಂಜಿಗಳಾಗಿವೆ. ಒಂದೊಂದು ಒಂದು ತರ, ಸುಮಧುರ.



# ಧಿಪರ್ದ್ಧಾಯ

ಕೃಷ್ಣಮೂರ್ತಿ ಕಿತ್ತೂರ (ಹಾವೇರಿ)

ನಾನು ಆ ಸಲ ಭಾಷಣದ ಆಮಂತ್ರಣವನ್ನು ತಪ್ಪಿಸುವಂತೆಯೇ ಇರಲಿಲ್ಲ. ಬೈಲೂರಿನ ವಾಚನಾಲಯದವರು ಏರ್ಪಡಿಸಿದ ಸಾಹಿತ್ಯೋತ್ಸವಕ್ಕೆ ಬರಲೇಬೇಕೆಂದು, ಕಾರ್ಯದರ್ಶಿ ಆಗಲೇ ನಾಲ್ಕು ಪತ್ರ ಬರೆದುದಲ್ಲದೆ ಸ್ವತಃ ಬಂದು ನನ್ನನ್ನು ಒತ್ತಾಯದಿಂದ ಒಪ್ಪಿಸಿದರು. ನನ್ನ ವ್ಯವಸಾಯದಲ್ಲಿದ್ದುಕೊಂಡು ಇಂಥ ಭಾಷಣಗಳನ್ನು ತಪ್ಪಿಸಿಕೊಳ್ಳುವುದು ಸಾಧ್ಯವೇ? ಭಾಷಣವೇ ನಮ್ಮ ಉದ್ಯೋಗವಾಗಿರುವಾಗ ಕಾಲೇಜಿನ ಒಳಗೇನು, ಕಾಲೇಜಿನ ಹೊರಗೇನು ಎಂದುಕೊಂಡು ಒಪ್ಪಿ ನಾನು ಆ ದಿನ ಬೈಲೂರಿಗೆ ಹೋಗಿದ್ದೆ.

ನನ್ನ ಭಾಷಣ ಸಾಯಂಕಾಲ ಐದು ಗಂಟೆಗೆ ಆರಂಭ ಎಂದಿತ್ತು. ೬-೩೦ಕ್ಕೆ ಅಲ್ಲಿಂದ ಹಾವೇರಿಗೆ ತಿರುಗಿ ಬರಲು ಕೊನೆಯ ಬಸ್ಸಿತ್ತು. ಅದನ್ನು ತಪ್ಪಿಸಕೂಡದೆಂಬ ನನ್ನ ಒಂದೇ ಒಂದು ಕರಾರಿಗೆ ಕಾರ್ಯದರ್ಶಿಗಳೂ ಒಪ್ಪಿಕೊಂಡಿದ್ದರು. ಆದರೆ ಪಾಪ, ಅವರಾದರೂ ಏನು ಮಾಡಬೇಕು? ಅವರು ಕಾರ್ಯಕ್ರಮವನ್ನೇನೋ ಸರಿಯಾಗಿ ಐದಕ್ಕೆ ಆರಂಭಿಸಿದರು. ಕಾರ್ಯಕ್ರಮವೆಂದರೆ ನನ್ನ ಭಾಷಣವಷ್ಟೇ ಏನು? ನಾಡಗೀತೆ, ಸ್ವಾಗತಗೀತೆ, ಅತಿಥಿಗಳ ಸ್ವಾಗತ, ಪರಿಚಯ, ಮಾಲಾರ್ಪಣೆ ಮೊದಲಾದುವೆಲ್ಲ ಯಥಾಸಾಂಗವಾಗಿ ಮುಗಿದು, ನಾನು ಭಾಷಣಕ್ಕೆ ತೊಡಗುವಾಗಲೇ ಆರು ಹೊಡೆದು ಹೋಗಿತ್ತು! ಆರೂ ಮೂವತ್ತರ ಬಸ್ಸನ್ನು ಹಿಡಿಯಬೇಕಾದರೆ ನಾನು ಹತ್ತೇ ನಿಮಿಷದಲ್ಲಿ ನನ್ನ ಭಾಷಣವನ್ನು ಮುಗಿಸಬೇಕಾಗಿತ್ತು.

ಜನರು ಏನೇ ತಿಳಿದರೂ ಅಡ್ಡಿಯಿಲ್ಲ, ಕೊನೆಯ ಬಸ್ಸನ್ನು ತಪ್ಪಿಸಿಕೊಳ್ಳದಂತೆ ಬೇಗನೇ ಮುಗಿಸಬೇಕೆಂದು ನಾನು ಭಾಷಣವನ್ನು ಆರಂಭಿಸಿದೆ. ಆರಂಭ ನನ್ನ ಕೈಯಲ್ಲಿತ್ತು, ಆದರೆ ಮುಕ್ತಾಯ ಮಾತ್ರ ನನ್ನನ್ನು ಮೀರಿತ್ತು. ನನ್ನ ಭಾಷಣ ಅಖಂಡ ಒಂದೂವರೆ ತಾಸಿನ ವರೆಗೆ ಆಯಿತೆಂದು ಕೊನೆಯಲ್ಲಿ ತಿಳಿದಾಗ, ನಾನೇ ದಂಗಾಗಿ ಹೋದೆ.

ಅಂದು ನಾನು ಕುಮಾರವ್ಯಾಸನು ಚಿತ್ರಿಸಿದ ಕರ್ಣನ ಪಾತ್ರವನ್ನು ಕುರಿತು ಮಾತನಾಡಿದೆ. ಆ ಹಳ್ಳಿಯ ಜನಕ್ಕೆ ವಿಷಯ ಹೇಗೆ ಹಿಡಿಸೀತೋ ಎಂದು ಸಂಶಯಗೊಂಡಿದ್ದ ನನಗೆ ಆ ಜನರು ನನ್ನ ಭಾಷಣವನ್ನು ಕೇಳುತ್ತ ಕುಳಿತ ರೀತಿಯಿಂದಲೇ ಅವರ ಮೆಚ್ಚುಗೆ ಅರ್ಥವಾಯಿತು. ಬಹುಶಃ ಆದರಿಂದ ಉತ್ತೇಜಿತನಾದ ನಾನು ಭಾಷಣವನ್ನು ತುಸು ವಿಸ್ತೃತವಾಗಿಯೇ ಲಂಬಿಸಿರಬೇಕು.

ತನ್ನ ಯಾವ ತಪ್ಪೂ ಇಲ್ಲದೆ ಜೀವನದ ಉದ್ದಕ್ಕೂ ಕರ್ಣ ಹೇಗೆ ವಿಧಿಯನ್ನು ಎದುರಿಸಬೇಕಾಯಿತು ಎಂಬುದನ್ನು ನಾನು ಹಲವಾರು ಉದಾಹರಣೆಗಳಿಂದ ವಿವರಿಸಿದೆ. ಅವನ ಗುಣಗಳೇ ಹೇಗೆ ಅವನಿಗೆ ಮಾರಕವಾದುವೆಂಬುದು ಅವಲೋಕಿಸಬೇಕಾದ ವಿಷಯ. ಬಾಲ್ಯದಿಂದಲೇ ಆತ ದಾನಶೂರನಾದ. ಮುಂದೆ ಕೃಷ್ಣನಿಗೆ "ನಿನ್ನಯ ಧೀರರ್ಯವರ ನೋಯಿಸೆನು ರಾಜೀವಸಖ ನಾಣೆ" ಎಂದು ಮಾತುಕೊಟ್ಟ. ತಾಯಿ ಕುಂತಿ ಬಂದು "ಹೋದ ಬಾಣವ ಮರಳಿ ತೊಡದಿರು" ಎಂದು ಕೇಳಿದರೆ ಅದಕ್ಕೂ "ಪಸಾದ"ವೆಂದ. ಯುದ್ಧರಂಗದಲ್ಲಿ ಅವಸಾನ ಸನ್ನಿಹಿತವಾದಾಗ ಬ್ರಾಹ್ಮಣವೇಷದಿಂದ ಬಂದ ಕೃಷ್ಣ ಕುಂಡಲಗಳನ್ನು ಕೇಳಿದರೆ, ತನ್ನ ಹೃದಯದಲ್ಲಿಯ ಅಮಲ ಗಂಗಾ ಜಲದಿಂದಲೇ ಧಾರೆಯೆರೆದು ಅವನ್ನು ಕೊಟ್ಟುಬಿಟ್ಟ. ಎಂಥ ತ್ಯಾಗ!

"ಕೊಟ್ಟ ಭಾಷೆಗೆ ಮರಳಿ ಬಾಣವ ತೊಟ್ಟನೇ." ಎಂದು ಹಲವಾರು ಬಗೆಯಲ್ಲಿ ಕರ್ಣನನ್ನು ಅಮರಗಣವೂ ಹೊಗಳಿತಷ್ಟೇ! ಇಂಥ ಕರ್ಣನ ಕಡುಬಾಗ, ಔದಾರ್ಯಗಳಿಗೆ ಪ್ರತಿಫಲವು ದೈವದ ವಿರೋಧವಲ್ಲದೆ ಇನ್ನೇನಿತ್ತು? ಆದನ್ನೂ ಆತ ಆನಂದದಿಂದ, ಧೈರ್ಯದಿಂದ ಎದುರಿಸಿದ ರೀತಿ ಎಂಥವರೂ ಮೆಚ್ಚುವಂಥದು ಎಂದು ಮುಂತಾಗಿ, ಅಲ್ಲಲ್ಲಿ ಕವಿಯ ಮಾತುಗಳನ್ನೇ ಎತ್ತಿ ಹೇಳಿ ನನ್ನ ಭಾಷಣವನ್ನು ಮುಗಿಸಿದೆ.

ಕರ್ಣನ ದೈವದುರ್ವಿಪಾಕದ ಕಥೆ ಜನರಿಗೆಲ್ಲ ಹಿಡಿಸಿತೆಂದು ಕಾಣುತ್ತದೆ. ಯಾಕೆಂದರೆ ಅವರೆಲ್ಲ ಸಾಕಷ್ಟು ಚಪ್ಪಾಳೆ ತಟ್ಟಿದರು.

ಸಭೆಯಲ್ಲಿ ಶಾಂತತೆ ನೆಲೆಸಿದ ಮೇಲೆ ಅಧ್ಯಕ್ಷರು ಸಮಾರೋಪ ಭಾಷಣಕ್ಕಾಗಿ ಎದ್ದು ನಿಂತರು, ಅವರು ನಿಂತ ರೀವಿ, ಅವರ ಧ್ವನಿಯಲ್ಲಿಯ ನಡುಕದಿಂದ ಅವರೂ ಕೂಡ ಕರ್ಣನ ಕಥೆಯಿಂದ ಭಾವೋದ್ವೇಗಗೊಂಡಿದ್ದರೆಂಬುದು ಸ್ಪಷ್ಟವಿತ್ತು. ಆದರೂ ಅವರು ಒಂದರೆನಿಮಿಷದಲ್ಲಿ ಸಾವರಿಸಿಕೊಂಡು, ಸಮಯೋಚಿತ ಮಾತುಗಳನ್ನೇ ಆಡಿದರು.

"ಛೇ, ಹಾಗೇಕೆ ಅನ್ನುವಿರಿ? ನೀವು ಸಂತೋಷದಿಂದ ನಮ್ಮ ತಪ್ಪು ಕ್ಷಮಿಸಿದರೆ ನಮಗೂ ಸಂತೋಷ" ಎಂದರವರು ಅತಿ ವಿನಯದಿಂದ.

ಅವರ ವಿನಯ ಆದರಗಳಿಗೆ ಮಾರುಹೋದ ನಾನು. "ಹಾಗೇ ಆಗಲಿ" ಎಂದೆ ಮನಃಪೂರ್ವಕವಾಗಿ.

ಇಷ್ಟರಲ್ಲಿ ನಮ್ಮ ಸುತ್ತುಮುತ್ತು ಜನರ ಒಂದು ಗುಂಪೇ ನೆರೆದಿತ್ತು. ರಾಮರಾಯರು ಅವರಲ್ಲಿಯ ಕೆಲವರ ಪರಿಚಯ ಮಾಡಿಕೊಟ್ಟರು. ನಾನು ನಸುನಗುತ ಕೈಮುಗಿದೆ. ಅವರೆಲ್ಲರೂ ನನ್ನ ಭಾಷಣವನ್ನು ಮೆಚ್ಚಿ ಒಂದೆರಡು ಮಾತು ಹೇಳುತ್ತಿದ್ದರು. ಕೊನೆಗೆ ಅದನ್ನು ಕೇಳಿ ಕೇಳಿ ನನಗೆ ಸಾಕು ಎನ್ನಿಸುವಂತಾಯಿತು.

ಅಂತೂ ಕೊನೆಗೊಮ್ಮೆ ಈ ಹೊಗಳಿಕೆಯ ಕಿರುಗಣೆಯಿಂದ ನಾನು ತಪ್ಪಿಸಿಕೊಂಡೆ. ಅಂದು ನನ್ನ ಬೀಡಾರ ಶ್ರೀಮಂತ ರಾಮರಾಯರಲ್ಲಿಯೇ ಎಂದು ಬಹುಶಃ ಮೊದಲೇ ನಿಶ್ಚಯವಾಗಿತ್ತೆಂದು ಕಂಡಿತು. ನಾವು ಅವರ ಮನೆಗೆ ಬರುವಷ್ಟರಲ್ಲಿ ಅವರ ಭವ್ಯ

ಆಗಲೇ ಎಂಟುಹೊಡೆದು ಹೋಗಿತ್ತು. ಬಸ್ಸಿನ ಪ್ರಶ್ನೆಯೇ ಉಳಿದಿರಲಿಲ್ಲ. ಬಸ್ಸನ್ನು ತಪ್ಪಿಸಿಕೊಂಡಿದ್ದಕ್ಕಾಗಿ ನಾನು ಬಹಳೇ ಚಡಪಡಿಸುತ್ತಿದ್ದೆ. ಅದನ್ನು ಬಹುಶಃ ಗುರುತಿಸಿದ ಶ್ರೀಮಂತ ರಾಮರಾಯರು–ಅಧ್ಯಕ್ಷರು–ನನ್ನನ್ನು ಕುರಿತು,

"ಕ್ಷಮಿಸಬೇಕು. ನಿಮಗೆ ಬಸ್ಸು ತಪ್ಪಿತು. ನಾಳೆ ಬೆಳಗ್ಗೆ ಸರಿಯಾಗಿ ಎಂಟಕ್ಕೇ ಒಂದು ಬಸ್ಸಿದೆ. ನೀವು ಒಂಬತ್ತರ ಒಳಗೇ ಮನೆಯಲ್ಲಿರುವಿರಿ. ಈ ದಿನ ನೀವು ನಮ್ಮೂರಿನಲ್ಲೇ ಇರಬೇಕೆಂದು ಯೋಗಾಯೋಗವಿದೆ.." ಎಂದರು.

ನನಗೆ ಬೇರೆ ಮಾತನಾಡಲು ಅಸ್ಪದವೇ ಇರಲಿಲ್ಲ. ನಾನು "ಆಯ್ತಲ್ಲ, ಇನ್ನು ನೀವು ಹೇಳಿದಂತೆಯೇ ಕೇಳೋದು" ಎಂದೆ, ಮನಸ್ಸಿನಲ್ಲಿಯ ಕಳವಳವನ್ನು ಮುಚ್ಚಿಕೊಳ್ಳುತ್ತ.

ವಾದ ಮನೆಯ ಪಡಸಾಲೆಯಲ್ಲಿ ಪೆಟ್ರೋಮ್ಯಾಕ್ಸ ದೀಪ ಝಗಝಗಿಸುತ್ತಿತ್ತು.

ಬಟ್ಟೆ ಬದಲಾಯಿಸಿ ಕೈಕಾಲು ಮುಖ ತೊಳೆದುಕೊಂಡು ಇನ್ನೊಮ್ಮೆ ಜಪಾಪಾನ ಮಾಡಿದ ನಂತರ ನಾನು ಪಡಸಾಲೆಯಲ್ಲಿಯ ದಿಂಬಿಗೊರಗಿ ತುಸು ಕಾಲು ಚಾಚಿದೆ. ಅದನ್ನು ಕಂಡು ರಾಮರಾಯರು,

"ತುಸು ವಿಶ್ರಾಂತಿ ತೆಗೆದುಕೊಳ್ಳಿರಿ. ಇನ್ನರ್ಧ ಗಂಟೆಯ ನಂತರ ಊಟ ಮಾಡೋಣ" ಎಂದರು.

ನಾನು "ನಿಮಗೆಲ್ಲ ಇಲ್ಲದ ತೊಂದರೆ..." ಎಂದೆ

"ಛೇ ಛೇ ಹಾಗೆನ್ನಬೇಡಿರಿ. ನಮಗೇನು ತೊಂದರೆ ಬಂತು? ಊರಿಗೆ ಕಳಿಸಲಾರದೆ ನಾವೇ ನಿಮಗೆ ತೊಂದರೆ ಕೊಟ್ಟಂತಾಯಿತು" ಎಂದರು.

ತೊಂದರೆಗಿಂತ ನನಗೆ ನಿಜವಾಗಿಯೂ ಸಂಕೋಚವೇ ಹೆಚ್ಚಾಗಿತ್ತು. ಎಂದೂ ಪರಿಚಯವಿಲ್ಲದವನ

ಮನೆಗೆ ಹೋಗಿ, ಅವರಿಂದ ಆದರಾತಿಥ್ಯ ಮಾಡಿಸಿಕೊಳ್ಳಲು ಸಂಕೋಚವಲ್ಲದೆ ಇನ್ನೇನು ವಿವರಿಸಬೇಕು ಅದಕ್ಕೇ ನಾನು ಪ್ರವಾಸಕ್ಕೆ ಹೋಗುವ ಸಂದರ್ಭ ಬಂದಾಗ, ಆ ದಿನವೇ ನನ್ನನ್ನು ತಿರುಗಿ ಊರಿಗೆ ಕಳುಹಬೇಕೆಂದು ಕರಾರು ಹಾಕುತ್ತೇನೆ.

ಅರ್ಧ-ಮುಕ್ಕಾಲು ಗಂಟೆಯ ನಂತರ ರಾಯರು ನನ್ನನ್ನು ಊಟಕ್ಕೆ ಎಬ್ಬಿಸಿದರು. ನಾವಿಬ್ಬರಲ್ಲದೆ ಒಬ್ಬ ೧೦—೧೨ ವರ್ಷದ ಹುಡುಗನೂ ನಮ್ಮ ಜೊತೆಗೆ ಊಟಕ್ಕೆ ಕುಳಿತಿದ್ದ.

"ಇವನು ನಿಮ್ಮ ಮಗನೋ?" ನಾನು ರಾಯರನ್ನು ಕೇಳಿದೆ.




"ಇವ? ಹೂಂ, ನಮ್ಮ ಬಳಗದವ. ನಮ್ಮಲ್ಲೇ ಇದ್ದಾನೆ. ಇಲ್ಲೇ ಇಂಗ್ಲೀಷ ಶಾಲೆಗೆ ಹೋಗುತ್ತಾನೆ." ಎಂದರು.

"ನಿಮಗೆ ಮಕ್ಕಳು? ಎಂದು ಕೇಳಬೇಕೆಂದವನು ಕೇಳಲಾರದೆ ಹಾಗೇ ತಡೆದೆ. ಬಹುಶಃ ಅವರು ಅದನ್ನು ಊಹಿಸಿರಬಹುದು.

"ನನಗೆ ಇಬ್ಬರು ಗಂಡು ಮಕ್ಕಳು, ಒಬ್ಬಳು ಮಗಳು. ಮಗಳು ಲಗ್ನವಾಗಿ ಗಂಡನ ಮನೆಗೆ ಹೋಗಿದ್ದಾಳೆ. ಹುಡುಗರು ನಿಮ್ಮ ಕಾಲೇಜಿನಲ್ಲೇ ಕಲಿಯುತ್ತಿದ್ದರು" ಎಂದರವರು.

"ಈಗ?"

"ಹಿರಿಯವನು ಎಂ. ಬಿ. ಬಿ. ಎಸ್ ಎರಡನೆಯ ವರ್ಷ ಓದುತ್ತಾನೆ. ಸಣ್ಣವನು ಕಾಲೇಜು ಹಿಡಿಸದೆ ಮುಂಬಯಿಯಲ್ಲಿ ಜೆ. ಜೆ. ಸ್ಕೂಲಿನಲ್ಲಿ ಚಿತ್ರಕಲೆ ಅಭ್ಯಾಸಕ್ಕೆ ಹೋಗಿ ಎರಡು ವರ್ಷವಾಯಿತು... ಏನು ಹುಡುಗರ ಮನಸ್ಸೋ? ನಾನಂತೂ ಯಾವುದಕ್ಕೂ ಒತ್ತಾಯ ಮಾಡುವುದಿಲ್ಲ, ನೋಡಿರಿ. ಅವನಿಗೆ ಅದರಲ್ಲಿ ತುಸು ಗತಿಯೂ ಇದೆಯೆನ್ನಬಹುದು. ಮೊನ್ನೆ ಆತನ ಒಂದು ಚಿತ್ರಕ್ಕೆ ಏನೋ ಪ್ರೈಝು ಬಂದಿದೆಯಂತೆ... ಆ ಚಿತ್ರವನ್ನೂ ಕಳಿಸಿದ್ದಾನೆ. ಊಟವಾದ ಮೇಲೆ ತಮಗೆ ತೋರಿಸುತ್ತೇನೆ." ಎಂದು ಹೇಳಿ ಮುಗಿಸುವಷ್ಟರಲ್ಲಿ, ಅವರ ಪತ್ನಿಯವರು ಪುರಿ ಬಡಿಸಲು ಬಂದರು.

"ಮಾತಿನಲ್ಲಿ ನೀವು ಊಟಕ್ಕೆ ಕುಳಿತಿದ್ದನ್ನೇ ನಾನು ಮರೆತು ಬಿಟ್ಟೆ" ಎಂದು ರಾಯರು ನನಗೆ ನಾಲ್ಕು ಬಿಸಿ ಬಿಸಿ ಪುರಿಗಳನ್ನು ಹಾಕಿಸಿದರು.

ನನ್ನ ಸಲುವಾಗಿಯೇ ಅಂದು ವಿಶೇಷ ಪಕ್ವಾನ್ನವಾಗಿತ್ತು. ಪಾಯಸ, ಪುರಿ-ಬಾಸುಂದಿ, ಬಟಾಟೆ ಪಲ್ಯ, ಕೊಬ್ಬರಿ ಚಟ್ನಿ, ಸಂಡಿಗೆ, ಹಪ್ಪಳ...ಎಲ್ಲಾ ಒಂದಕ್ಕಿಂತ ಒಂದು ರುಚಿ.

"ಅಡಿಗೆ ಬಹಳೇ ರುಚಿಯಾಗಿದೆ" ಎಂದೆ ನಾನು. ಆಗ ರಾಯರು ಸಂಕೋಚವಿಲ್ಲದೆ ತಮ್ಮ ಹೆಂಡತಿಯನ್ನು ಹೊಗಳುತ್ತ,

"ಅವಳ ಕೈಯ ಅಡಿಗೆ ಎಂದರೆ ಸಾಕ್ಷಾತ್ ನಳಪಾಕ. ಅವಳ ಕೈಯೂ ಸಣ್ಣದಲ್ಲ! ಅದಕ್ಕೇ ವಾಪಿಷ್ಟು ಕೊಬ್ಬಿರುವುದು" ಎಂದು ನಕ್ಕರು.

ನಾನು ಮುಗುಳುನಗುತ್ತ "ಇಲ್ಲ, ನಿಜವಾಗಿಯೂ ಅಡಿಗೆ ಬಹಳೇ ಚೆನ್ನಾಗಿದೆ" ಎಂದು ಹೇಳಿ, ಅವರ ಹೆಂಡತಿಯ ಕಡೆಗೆ ನೋಡಿದೆ:

ಗಂಡನು ಪರರ ಮುಂದೆ ಈ ರೀತಿ ತನ್ನನ್ನು ಹೊಗಳಿದ್ದು ಬಹುಶಃ ಅವರಿಗೆ ಸೇರಲಿಲ್ಲವೆಂದು ನನಗನ್ನಿಸಿತು. ಯಾಕೆಂದರೆ ಅವರ ಮುಖದಲ್ಲಿ ಹರ್ಷವಾಗಲಿ, ಕೃತಕ ಕೋಪವಾಗಲಿ ಯಾವುದೂ ಕಂಡು ಬರಲಿಲ್ಲ. ಆ ಮಾತೇ ತಮಗೆ ಅರ್ಥವಾಗಿಲ್ಲ ಎಂಬಂತೆ ಅವರು ನಿಂತುಕೊಂಡಿದ್ದರು!

ರಾಯರ ಆಗ್ರಹದಿಂದಾಗಿ ನಾನು ಹೊಟ್ಟೆ ಬಿರಿಯುವಂತೆ ಉಣ್ಣಬೇಕಾಯಿತು. ಅವರ ಪತ್ನಿ ಸದಾ ಕಾಲ ಗಂಡನ ಕಡೆಗೇ ಗಮನವಿಟ್ಟು, ಅವರ ಕಣ್ಸನ್ನೆಯ ಮೇರೆಗೆ ಬಡಿಸುತ್ತಿದ್ದರು. ಬಡಿಸುವುದರಲ್ಲಿ-ರಾಯರು ಹೇಳಿದಂತೆ- ಅವರ ಕೈ ಬಹಳೇ ಧಾರಾಳ. ನನ್ನ ಎಲೆಗೆ ಬಂದಾಗ ಮಾತ್ರವಲ್ಲ. ತಮ್ಮ ಪತಿಗೂ ಹಾಗೇ, ಆ ಹುಡುಗನಿಗೂ ಹಾಗೇ.

ನಾನು ಬಾಸುಂದಿಯ ನಾಲ್ಕನೆಯ ಬಟ್ಟಲನ್ನು ಖಾಲಿ ಮಾಡಿ, ಇನ್ನು ಮಾತ್ರ ಏನೂ ಬೇಡಪ್ಪ ಎಂದುಕೊಳ್ಳುತ್ತಿರುವಾಗ, ಅವರು ಮತ್ತೆ ಬಡಿಸಬಂದರು.

ನಾನು ಬಟ್ಟಲ ಮೇಲೆ ಕೈಯಿಟ್ಟು "ಸಾಕ್ರೀ" ಎಂದೆ. ಅವರು ಹಾಗೇ ನಿಂತದ್ದನ್ನು ಕಂಡು ನಾನು ಮತ್ತೆ "ಇಲ್ಲ. ನನಗೆ ನಿಜವಾಗಿಯೂ ಸಾಕು" ಎಂದೆ.

ಅವರು ಮಾತನಾಡದೆ ಹಾಗೇ "ಇನ್ನು ಸ್ವಲ್ಪಾದರೂ ತೆಗೆದುಕೊಳ್ಳಿರಿ" ಎಂಬಂತೆ ನಿಂತಿದ್ದರು.

ರಾಯರು "ಬರಾಬ್ಬರಿ. ನಿಮಗೆ ಸಾಕಾದ ನಂತರ ಇನ್ನೂ ತುಸು ಹಾಕಿದರೇನೇ ಅವಳಿಗೆ ತೃಪ್ತಿ" ಎಂದರು ನಗುತ್ತ.

"ಬೇಡ್ರಿ ರಾಯರೇ, ನಾಳೆಯಾದರೂ ನನಗೆ ಊರಿಗೆ ಹೋಗಬೇಕಲ್ಲ?" ಎಂದೆ.

"ಇಲ್ಲ ತೆಗೆದುಕೊಳ್ಳಿರಿ. ಇಲ್ಲವಾದರೆ ಅವಳಿಗೆ ಸಮಾಧಾನವೇ ಇಲ್ಲ" ಎಂದರು ರಾಯರು,

ನಾನು ಅವರ ಪತ್ನಿಯ ಕಡೆಗೆ ಮುಖವೆತ್ತಿ ನೋಡಿದೆ. ಅವರ ಆ ಪ್ರಸನ್ನ ಮುಖದಲ್ಲಿ ದೈನ್ಯಭಾವವಿತ್ತು. ನನ್ನ ಕೈ ಬಟ್ಟಲಿನಿಂದ ತಾನೇ ಹಿಂದೆ ಸರಿಯಿತು. ಬಟ್ಟಲ ತುಂಬ ಬಾಸುಂದಿ ಸುರಿದು ಹೋದರವರು.

ರಾಯರ ಪತ್ನಿಯನ್ನು ಕಂಡರೆ ಯಾರ ಮನಸ್ಸು ಪ್ರಸನ್ನವಾಗುವಂತಿತ್ತು. ಮಧ್ಯ ವಯಸ್ಸು ಮೀರಿದ್ದರೂ ಮುಖದಲ್ಲಿಯ ತೇಜಸ್ಸು, ತೃಪ್ತಭಾವ, ಗೆಲುವು- ಇವನ್ನೆಲ್ಲ ಮೀರಿಸುವ ಆ ವಾತ್ಸಲ್ಯಪೂರ್ಣ ದೃಷ್ಟಿ ಯಾರನ್ನೂ ಆಕರ್ಷಿಸುವಂತಿತ್ತು. ನಾನು ಊಟದಲ್ಲಿ ಸುಮಾರು ಅರ್ಧ ತಾಸಾದರೂ ವೇಳೆ ಕಳೆದಿರಬಹುದು. ಆದರೆ ಅವರು ಒಂದು ಮಾತನ್ನೂ ಆಡಿದುದನ್ನು ನಾನು ಗಮನಿಸಲಿಲ್ಲ. ತುಸು ಗಂಭೀರ ಪ್ರಕೃತಿಯ ಅವರು ಹೆಚ್ಚು ಮಾತನಾಡದೆ, ಅದನ್ನೆಲ್ಲ ತಮ್ಮ ಪತಿಗೇ ಕೊಟ್ಟಿರಬೇಕು.



'ಅವರ ಹರಟೆ ನಡೆದೇ ಇತ್ತು"

ಅಂತೂ ಊಟ ಮುಗಿದರೂ ರಾಯರ ಮಾತು ಮುಗಿಯಲಿಲ್ಲ. ಊಟವಾದ ನಂತರ ಎಲೆ-ಅಡಿಕೆ ಹಾಕಿಕೊಳ್ಳುತ್ತ ಅವರ ಕೋಣೆಯಲ್ಲಿ ಕುಳಿತಾಗಲೂ ಅವರ ಹರಟೆ ನಡೆದೇ ಇತ್ತು. ಅದನ್ನು ಕೇಳಲು ಹಿತವಾಗಿಯೂ ಇತ್ತು. ನಾನು ಮಧ್ಯೆ ಮಧ್ಯೆ ಒಂದು ಮಾತನ್ನಾಡಿ, ಒಂದು ಪ್ರಶ್ನೆ ಹಾಕಿ, ಒಮ್ಮೆ ಉದ್ಗಾರ ತೆಗೆದು ಮತ್ತೆ ಅವರನ್ನೇ ಹೆಚ್ಚಾಗಿ ಮಾತ ನಾಡಲು ಬಿಟ್ಟು ಕುಳಿತಿದ್ದೆ. ಕಾಂಗ್ರೆಸು, ರಾಜಕಾರಣ, ಸಮಾಜ. ಸಾಹಿತ್ಯ, ಕಲೆ ಹೀಗೆ ಹಲವಾರು ವಿಷಯ ಗಳ ಬಗ್ಗೆ ನಮ್ಮ ಹರಟೆ ನಡೆಯಿತು. ಅವರಿಗೆ ಇಂಗ್ಲಿಷ ಮತ್ತು ಕನ್ನಡ ಸಾಹಿತ್ಯಗಳೆರಡರಲ್ಲೂ ವಿಶೇಷ ಆಸಕ್ತಿಯಲ್ಲದೆ ಪರಿಶ್ರಮವೂ ಉಂಟೆಂದು ನಾನು ಕಂಡುಕೊಂಡೆ. ಪುಸ್ತಕಗಳಿಂದ ತುಂಬಿದ ಮೂರು ನಾಲ್ಕು ಕಪಾಟುಗಳೇ ಅವರ ಕೋಣೆಯಲ್ಲಿ ಕಂಡವು.

ಕೊನೆಯಲ್ಲಿ ನಾನು "ಅಂತೂ ಇಂಥ ಸಣ್ಣ ಊರಿ ನಲ್ಲಿದ್ದುಕೊಂಡೇ, ನೀವು ಇಷ್ಟೆಲ್ಲ ಓದಿಕೊಂಡಿದ್ದೀ ರಲ್ಲ?" ಎಂದೆ.

ಅವರು ಕ್ಷಣಕಾಲ ತಡೆದು "ನಿಜವಾಗಿ ಹೇಳ ಬೇಕೆಂದರೆ ನಾನು ಪುಸ್ತಕಗಳನ್ನೆಲ್ಲ ಕೊಂಡದ್ದಾಗಲಿ, ಏನಾದರೂ ತುಸು ಓದಿದ್ದಾಗಲಿ ಹೆಚ್ಚಾಗಿ ಧಾರವಾಡ ದಲ್ಲಿ ಕಲಿಯುತ್ತಿದ್ದಾಗಲೇ. ಆನಂತರ ಊರಲ್ಲಿ ಒಮ್ಮೆ ಸೆಟಲ್ ಆದ ಮೇಲೆ ಆ ಕಡೆಗೆ ಲಕ್ಷ ಹಾಕಲು ಆಗಿಯೇ ಇಲ್ಲ. ಯಾರೋ! ನಿಮ್ಮಂಥ ಓದಿದವರು ಬಂದಾಗ, ಆ ಎಲ್ಲ ನೆನಪು ಮರುಕಳಿಸಿ, ಅವರಿಗೆ ಬೇಸರವಾದೀತೆಂಬುದನ್ನೂ ಮರೆತು ನಾನೇ ಬಡಬಡಿ ಸುತ್ತೇನೆ" ಎಂದರು.

"ಅಂದರೆ ನಿಮ್ಮ ಶಿಕ್ಷಣ...?" ಎಂದು ನಾನು ಅರ್ಧಕ್ಕೇ ತಡೆದೆ. ಎಲ್ಲಿಯ ವರೆಗೆ ಆಗಿದೆ-ಎಂದೇ ನನಗೆ ಕೇಳಬೇಕಾಗಿತ್ತು.

"ಹೂಂ, ಧಾರವಾಡ ಕರ್ನಾಟಕ ಕಾಲೇಜಿನಲ್ಲಿಯೇ ಆಗಿದೆ' ಬಿ ಎ. ಆದ ನಂತರ ಇಂಗ್ಲಿಷ ಎಂ. ಎ. ನೂ ಮಾಡಬೇಕೆಂದಿದ್ದೆ... ಆದರೆ ದೈವ ಬೇರೇನೇ ಬಯ ಸಿತ್ತು" ಎಂದು ನುಡಿಯುವಾಗ ಅವರ ಧ್ವನಿಯೂ ಬೇರೆಯೇ ಆಗಿತ್ತು.

"ಯಾಕೆ? ಏನು ಅನಾನುಕೂಲ ಉಂಟಾಯಿತ್ತೇ?" ನಾನು ಕೇಳಿದೆ.

"ಅದೊಂದು ದೊಡ್ಡ ಕಥೆ. ನಿಮ್ಮ ಮುಂದೆ ಹೇಳುತ್ತ ಕುಳಿತರೆ ನಿಮಗೆ ಬೇಸರ..."

ನಾನು ನಡುವೆಯೇ ತಡೆದು, "ಛೇ ಛೇ ಬೇಸರ ವೇನು ಬಂತು?" ಎಂದೆ, ಇಂಥ ಸುಖೀ ಪುರುಷನ ಜೀವನದಲ್ಲೂ ಅಡ್ಡಗಾಲು ಹಾಕಿದ ದೈವದ ಆಟ ವೇನೆಂದು ತಿಳಿಯುವ ಕುತೂಹಲದಿಂದ.

ಮಾತನಾಡುವ ಕಲೆಯಲ್ಲಿ ಪರಿಣತರಾದ ರಾಮು-ರಾಯರು ತಮ್ಮ ಜೀವನದ ಕಥೆಯನ್ನೆಲ್ಲ ತುಂಬ ಸ್ವಾರಸ್ಯಕರವಾಗಿಯೇ ಹೇಳಿದರು. ಅದನ್ನೆಲ್ಲ ಅಷ್ಟೇ ರಸವತ್ತಾಗಿ ಹೇಳಲು ನನಗೆ ಸಾಧ್ಯವಿಲ್ಲ.

ಮುಖ್ಯ ಸಾರವಿಷ್ಟೇ :

ಅವರು ಆ ಊರಿನವರು ಅಲ್ಲವೇ ಅಲ್ಲ. ಬಾಲ್ಯ ದಲ್ಲಿಯೇ ತಂದೆತಾಯಿಗಳನ್ನು ಕಳೆದುಕೊಂಡು ತಬ್ಬಲಿಯಾದ ಅವರನ್ನು ಅವರ ದೂರದ ಆಪ್ತರು-ಅಂದರೇ ಆ ಊರ ಶ್ರೀಮಂತ ದಾದಾಸಾಹೇಬ ಇನಾಂ ದಾರರು ಸಾಕಿ ಸಲುಹಿದರು. ಇವರ ಶಿಕ್ಷಣವೆಲ್ಲವನ್ನೂ ಅವರೇ ಕೊಡಿಸಿದರು. ದಾದಾಸಾಹೇಬರಿಗೆ ಗಂಡು ಮಕ್ಕಳಿರಲಿಲ್ಲ, ಒಬ್ಬಳೇ ಮಗಳು ಬಬೀ. ಶ್ರೀಮಂತರು ರಾಮುನನ್ನೇ ತಮ್ಮ ಮಗನಂತೆ ಪ್ರೀತಿಸಿದರು, ಬಾಲಕ ನಾಗಿದ್ದ ರಾಮುವಿಗೆ ಎಷ್ಟೋ ವರ್ಷಗಳ ವರೆಗೆ ದಾದಾ ಸಾಹೇಬರು ತಮ್ಮ ತಂದೆಯಲ್ಲ ಎಂಬುದೇ ತಿಳಿದಿರ ಲಿಲ್ಲ!

ಬಿ ಎ. ಪರೀಕ್ಷೆಗೆ ನಾಲ್ಕು ದಿವಗಳು ಮಾತ್ರ ಉಳಿದಾಗ ಶ್ರೀಮಂತರಿಗೆ ಹಾರ್ಟ ಅಟ್ಯಾಕ್ ಬಂದಿತು. ತರುಣ ರಾಮು ಹಳ್ಳಿಗೆ ಧಾವಿಸಿದ. ದಾದಾ-ಸಾಹೇಬರೇನೋ ಮೃತ್ಯು ಮುಖದಿಂದ ಪಾರಾದರು. ಆದರೆ ಅವರು ತಮ್ಮ ಬದುಕಿನ ಭರವಸೆಯನ್ನೇ ಕಳೆದುಕೊಂಡಿದ್ದರು. ತಮ್ಮ ಅಂತ್ಯ ಸಮೀಪಿಸಿ ತೆಂದೇ ಅವರು ಭಾವಿಸಿದ್ದರು. ಡಾಕ್ಟರರ ಅಭಿಪ್ರಾಯ ಬೇರೇನೋ ಆಗಿರಲಿಲ್ಲ. ಆದರೆ ಅದು ಹಾಗೆಯೇ ಆಯಿತು. ಅವರು ಮುಂದೆ ನಾಲ್ಕೆ ತಿಂಗಳಲ್ಲಿ ಇಹಲೋಕವನ್ನು ತ್ಯಜಿಸಿದರು. ಬಹುಶಃ ದಾದಾ-ಸಾಹೇಬರು ಎದೆ ಕಳೆದುಕೊಂಡು ತಮ್ಮ ಮೃತ್ಯು ವನ್ನು ತಾವೇ ತಂದುಕೊಂಡಂತಾಯಿತು.

ತಮ್ಮ ಮದುವೆಯಾಗಲಿರುವ ಮಗಳ ಚಿಂತೆ ಯೊಂದು ಮಾತ್ರ ಒಂದೇ ಸವನೆ ಶ್ರೀಮಂತರನ್ನು ಕೊನೆಗಾಲದಲ್ಲಿ ಪೀಡಿಸುತ್ತಿತ್ತು. ಅವರು ಒಂದು ದಿನ ರಾಮುರಾಯರನ್ನು ಕರೆದು ಬಬೀಯನ್ನು ಆತ ಕೈಹಿಡಿಯಬೇಕೆಂದು ಬಿನ್ನವಿಸಿದರು! ರಾಮುರಾಯ ಕ್ಷಣಕಾಲ ದಿಗ್ಭ್ರಾಂತನಾದ! ಆದರೆ ಒಂದು ಶಬ್ದ ವನ್ನೂ ಆಡದೆ ಒಪ್ಪಿಕೊಂಡುಬಿಟ್ಟ. ದಾದಾಸಾಹೇಬರು ಬಬೀ-ರಾಮುರ ಲಗ್ನವನ್ನು ಮಾಡಿಯೇ ನಿಶ್ಚಿಂತೆ ಯಿಂದ ಕಣ್ಣು ಮುಚ್ಚಿದರು.

ರಾಮುರಾಯ ಶ್ರೀಮಂತ ದಾದಾಸಾಹೇಬರ ಮಗಳ ಯಜಮಾನನಾದಂತೆ, ಅವರ ಎಲ್ಲ ಆಸ್ತಿ-ಪಾಸ್ತಿಗೂ ವಾರಸುದಾರನಾದ.

ತಮ್ಮ ಜೀವನದ ದಿಕ್ಕನ್ನೇ ಬದಲಿಸಿದ ಆ ಆಕಸ್ಮಿಕ ಮದುವೆಯ ಕತೆಯನ್ನೆಲ್ಲ ಹೇಳಿ.

"ಅಂದಿನಿಂದ ನನ್ನ ಅಭ್ಯಾಸಕ್ಕೆ, ಸಾಹಿತ್ಯ ಪ್ರೇಮ ಪ್ರಕರಣಕ್ಕೆ ಕೊನೆಯ ತೆರೆ ಎಳೆದಂತಾ-ಯಿತು." ಎಂದರು ರಾಯರು ನಗುತ್ತ.

ನಾನೂ ನಕ್ಕೆ.

ರಾಯರು ತೆರವಾದ ಎಲೆ-ಅಡಿಕೆಯ ತಬಕ ವನ್ನು ತುಂಬಿ ತರಲು ಒಳಗೆ ಹೋದರು.

ಇಂಥ ಸುಂದರ ಸುಸಂಪನ್ನ ಪತ್ನಿಯೇ ಪ್ರೇಮದ ರಾಣಿಯಾಗಿ ಕೈ ಹಿಡಿದಿರುವಾಗ, ರಾಯರು ಸಾಹಿತ್ಯ ಪ್ರೇಮ ಪ್ರಕರಣಕ್ಕೆ ಕೊನೆಯಾದುದು ಸಹಜವೇ ಎಂದು ನನಗೆ ತೋರಿತು. ರಾಯರು ಸಾಹಿತ್ಯ ವನ್ನು ಸೃಷ್ಟಿಸಿರಲಿಕ್ಕಿಲ್ಲ. ಸಾಹಿತ್ಯವನ್ನು ಈಗ ಓದುತ್ತಲೂ ಇರಲಿಕ್ಕಿಲ್ಲ. ಆದರೆ ಅವರು ಪ್ರತ್ಯಕ್ಷ ಸಾಹಿತ್ಯವನ್ನೇ ಬಾಳುತ್ತಿದ್ದಾರೆ ಎನ್ನಿಸಿತು. ಅವರು ತುಂಬ ಸುದೈವಿಗಳು ಅವರ ಜೀವನ ಕಾವ್ಯಮಯ ವಾಗಿತ್ತು, ಆನಂದಮಯವಾಗಿತ್ತು!

ಎಲೆ-ಅಡಿಕೆಗಳಿಂದ ತುಂಬಿದ ಪ್ಲೇಟನ್ನು ತರುತ್ತ ರಾಯರು, "ಚಹ-ಕಾಫಿ ಏನನ್ನಾದರೂ ತೆಗೆದುಕೊಳ್ಳುತ್ತೀರಾ?" ಎಂದು ಕೇಳಿದರು

"ಛೇ ಛೇ ಬೇಡ" ಎಂದು ನಾನು ಗಡಿಯಾರದ ಕಡೆಗೆ ನೋಡಿದೆ. ಆಗಲೇ ರಾತ್ರಿ ಒಂದು ಗಂಟೆ ಯಾಗಲಿಕ್ಕೆ ಬಂದಿತ್ತು.

"ಎಷ್ಟು, ಒಂದು ಹೊಡೆಯಿತೇನು? ನಾನು ಹರ ಟೆಗೆ ಕುಳಿತರೆ ಮುಗಿದೇ ಹೋಯಿತು. ಆದರಲ್ಲಂತೂ ನೀವು ಸಹೃದಯತೆಯಿಂದ ಕೇಳುವವರು ಸಿಕ್ಕರಿ, ನನಗೆ ಸ್ವರ್ಗ ಸಿಕ್ಕಂತಾಯಿತು. ನನ್ನ ಬಾಯಿ ಕಟ್ಟಿಗೆಯದಾಗಿದ್ದರೆ ಒಡೆದೇ ಹೋಗುತ್ತಿತ್ತೋ ಏನೋ!" ಎಂದು ಮನಃಪೂರ್ವಕವಾಗಿ ನಕ್ಕರು.

ಮಧ್ಯದಲ್ಲಿ ನಗೆಯನ್ನು ತಡೆದು, "ನನ್ನ ಹೆಂಡ ತಿಯ ಮಾತನ್ನೆಲ್ಲ ನಾನೇ ತೆಗೆದುಕೊಂಡಿದ್ದೇನೆ! ಯಾಕೆ? ಏನೆಂದಿರಿ?" ಎಂದು ಮತ್ತೂ ನಕ್ಕರು!

ಎಂಥ ತಿಳಿಹೃದಯದ ಮನುಷ್ಯ! ಅಪರಿಚಿತ ನಾದ ನನ್ನ ಮುಂದೆ ತಮ್ಮ ಸಂಸಾರದ ಕಥೆಯನ್ನೆಲ್ಲ ಹೇಳಿ, ನನ್ನನ್ನು ಅದೆಷ್ಟು ಆತ್ಮೀಯತೆಯಿಂದ ಕಂಡ ರಲ್ಲ ಎನ್ನಿಸಿತು. ನನಗೆ.

ಕೊನೆಗೆ ರಾಯರ ಒತ್ತಾಯಕ್ಕೆ ಒಂದು ಕಪ್ಪು ಚಹವನ್ನು ಕುಡಿದೇ ಮಲಗಬೇಕಾಯಿತು.

* * *

ನಾನು ಮರುದಿನ ಮುಂಜಾನೆ ಎಂಟು ಗಂಟೆಯ ಬಸ್ಸನ್ನು ಹಿಡಿಯಲೇಬೇಕಾಗಿತ್ತು. ಅಷ್ಟರೊಳಗಾಗಿಯೇ ರಾಯರು ನನ್ನ ಸ್ನಾನ—ಉಪಹಾರಗಳ ವ್ಯವಸ್ಥೆಯನ್ನು ಮಾಡಿಸಿದ್ದರು, ಎಷ್ಟು ಬೇಡವೆಂದರೂ ಅವರು ಕೇಳಲಿಲ್ಲ. ರಾಯರ ಸ್ನೇಹಯುಕ್ತ ಒತ್ತಾಯಕ್ಕೆ ನಾನು ಮಣಿಯಲೇಬೇಕಾಯಿತು. ಬೇಗನೇ ಸ್ನಾನದ ಶಾಸ್ತ್ರ ಮಾಡಿ, ರಾಯರ ಹೆಂಡತಿ ಬಡಿಸಿದಷ್ಟು ಶಿರಾ—ಉಪ್ಪಿಟ್ಟು—ಬಾಳೇ ಹಣ್ಣುಗಳನ್ನು ತಿಂದು, ಎರಡು ಕಪ್ಪು ಚಹವನ್ನು ಕುಡಿದೇ ಹೊರಡಬೇಕಾಯಿತು .

ಆ ದಂಪತಿಗಳಿಬ್ಬರೂ ನನ್ನ ಆದರಾತಿಥ್ಯವನ್ನು ಮಾಡಿದ ರೀತಿಯನ್ನು ಕಂಡು ನಾನು ಮಾರು ಹೋಗಿದ್ದೆ. ಅವರು ನನ್ನ ಬಗ್ಗೆ ಅಷ್ಟು ಮಾಡಲು ನಾನು ಯಾರು? ನನ್ನಿಂದ ಅವರಿಗಾಗಬಹುದಾದ ಲಾಭವಾದರೂ ಏನು...?

ಆದರೆ ಆ ಪುಣ್ಯವಂತರು ಈ ರೀತಿ ಲೆಖ್ಖವನ್ನು ಹಾಕುವವರು ಅಲ್ಲವೇ ಅಲ್ಲ!

ಬರುವಾಗ ನಾನು ರಾಯರಿಗೆ "ನಿಮ್ಮ ಆತಿಥ್ಯಕ್ಕಾಗಿ ತುಂಬ ಥ್ಯಾಂಕ್ಸ್" ಎಂದು ಹೇಳಿದ್ದು ಕೇವಲ ಉಪಚಾರದ ಮಾತಾಗಿರದೆ, ಅದು ಅಕ್ಷರಶಃ ಸತ್ಯವಾಗಿತ್ತು.

ನಾನು ಹೊರಟಾಗ ರಾಯರ ಪತ್ನಿಯವರು ನಡುಮನೆಯ ಹೊಸ್ತಿಲ ಒಳಗೇ ನಿಂತುಕೊಂಡಿದ್ದರು. ನಾನು ರಾಯರಿಗೆ.

"ರಾಯರ, ನಾನು ನಿಮ್ಮಕಿಂತ ವೈನಿಯವರಿಗೆ ಹೆಚ್ಚು ಋಣಿ. ಅವರಿಗೆ ಹೆಚ್ಚಿನ ತೊಂದರೆಯನ್ನು ಕೊಟ್ಟಂತಾಯಿತು." ಎಂದು ಹೇಳಿ ದೇಶಾವರಿ ನಗೆ ನಗುತ್ತ ಒಳಗಡೆ ರಾಯರ ಪತ್ನಿಯವರತ್ತ ನೋಡಿ ಕೈಜೋಡಿಸಿ "ನಮಸ್ಕಾರ" ಎಂದೆ.

ಅವರು ಕ್ಷಣಾರ್ಧ ದಿಙ್ಮೂಢರಾದರು! ನಾನು ಹಾಗೆ ತಮ್ಮನ್ನು ಮಾತನಾಡಿಸಬಹುದೆಂದು ಅವರು ಭಾವಿಸಿರಲಿಲ್ಲವೇನೋ. ಸಾವರಿಸಿಕೊಂಡು ಅವರು ಕೈಜೋಡಿಸಿದರು ಮಾತ್ರ. ಆದರೆ ಏನನ್ನು ಪ್ರತಿಯಾಗಿ ನುಡಿಯಲಿಲ್ಲ.

ನನಗೆ ಏನೋ ಒಂದು ತರಹ ಎನ್ನಿಸಿತು. ನಾನು ರಾಯರ ಕಡೆಗೆ ನೋಡಿದೆ. ಅವರ ಮುಖ ಅದೇಕೋ ಕಳೆಗುಂದಿತ್ತು! ಅವರು ತಮ್ಮ ಹೆಂಡತಿಯ ಕಡೆಗೇ ನೋಡುತ್ತಿದ್ದರು, ನನಗೆ ಏನೂ ತಿಳಿಯದೆ ಅಸ್ವಸ್ಥವೆನಿಸಿತು.

ಅಷ್ಟರಲ್ಲಿ ವಾಚನಾಲಯದ ಕಾರ್ಯದರ್ಶಿ ಬಂದು, "ಸರ್, ಬಸ್ಸಿನ ವೇಳೆಯಾಯಿತು." ಎಂದರು.

"ಆಗಲಿ ಬರುತ್ತೇನೆ" ಎಂದು ನಾನು ರಾಯರಿಗೆ ಕೈಮುಗಿದು ಹೊರಟೆ.

ಬಸ್ಸು ಸ್ಟ್ಯಾಂಡಿನ ವರೆಗೆ ಸ್ವತಃ ರಾಯರೂ ಬಂದರು. ಬಸ್ಸು ಆಗಲೇ ಬಂದಿತ್ತು. ನನಗಾಗಿ ಸ್ಥಳವನ್ನೂ ಕಾದಿರಿಸಲಾಗಿತ್ತು. ಕಾರ್ಯದರ್ಶಿಗೆ ಹಾವೇರಿಯ ವರೆಗೂ ಬಂದು ನನ್ನನ್ನು ಮನೆ ಮುಟ್ಟಿಸಿ ಬರುವಂತೆ ರಾಯರು ತಿಳಿಸಿದರು. ನಾನು ಅದು ಅವಶ್ಯವಿಲ್ಲ ಎಂದರೂ ಅವರು ನನ್ನ ಜೊತೆಗೆ ಬಂದರು.

x x x x

ಮೋಟಾರಿನಲ್ಲಿ ಕಾರ್ಯದರ್ಶಿ ನನ್ನ ಭಾಷಣವನ್ನು ಜನರೆಲ್ಲ ಬಹಳವಾಗಿ ಮೆಚ್ಚಿದರೆಂದು ತಿಳಿಸಿ "ಕೃತಜ್ಞತೆಗಳು" ಎಂದು ಪದೇ ಪದೇ ನುಡಿದರು. ನನ್ನ ಮನಸ್ಸು ಅದೇಕೋ ವ್ಯಗ್ರವಾಗಿತ್ತು. ಅವರ ಮಾತಿಗೆಲ್ಲ ನಾನು ಕೇವಲ ಹೂಂಗುಟುತ್ತ ಕುಳಿತಿದ್ದೆ. ಅವರು ವಾಚನಾಲಯದ ಪ್ರಗತಿಗೆ ಶ್ರೀಮಂತ ರಾಮರಾಯರೇ ಮುಖ್ಯ ಕಾರಣರೆಂದು ಹೇಳುತ್ತ, ಅಲ್ಲಿಯ ಹೆಚ್ಚಿನ ಪುಸ್ತಕಗಳೆಲ್ಲ ರಾಯರೇ ಕೊಟ್ಟವುಗಳೆಂದೂ ತಿಳಿಸಿದ. ಅವರ ಔದಾರ್ಯವನ್ನೂ ತ್ಯಾಗವನ್ನೂ ಹೊಗಳುತ್ತ ಆತ "ಅವರೆಂದರೆ ನಮ್ಮೂರ ಧರ್ಮರಾಯರೇ ಸರಿ!" ಎಂದ; ಮುಂದುವರಿದು "ಸೀತಾಬಾಯಿಯವರು—ಅವರ ಹೆಂಡತಿ—ಅವರೂ ಅಷ್ಟೇ. ಬಹಳ ಧಾರಾಳ ಸ್ವಭಾವದವರು. ಬಡಬಗ್ಗರು ಅವರ ಹತ್ತರ ಹೋಗಿ ಬರಿಗೈಯಿಂದ ಬಂದುದೇ ಇಲ್ಲ." ಎಂದ.

ನಾನು ಬರುವಾಗ ನಡೆದ ಸನ್ನಿವೇಶ ನನಗೆ ಥಟ್ಟನೆ ನೆನಪಾಯಿತು. ನಾನು ನಮಸ್ಕರಿಸಿದಾಗ ಅವರು ತಿರುಗಿ ಒಂದು ಮಾತನ್ನಾದರೂ ಏಕೆ ಆಡಲಿಲ್ಲ—? ಎಂಬುದೇ ನನಗೊಂದು ಅರ್ಥವಾಗದ ಸಮಸ್ಯೆಯಾಗಿತ್ತು.

"ಅಪರಿಚಿತರೊಂದಿಗೆ ಅವರು ವಿಶೇಷ ಮಾತನಾಡುವುದೇ ಇಲ್ಲವೇನು?" ನಾನು ಕಾರ್ಯದರ್ಶಿಯನ್ನು ಸಹಜವಾಗಿ ಎಂಬಂತೆ ಕೇಳಿದೆ.

ಆತ ನನ್ನನ್ನು ಹುಳು ಹುಳು ನೋಡಿದ!

ಆ ನೋಟ ನನ್ನನ್ನು ಗಾಬರಿಗೊಳಿಸಿತು. ನನ್ನ ಪ್ರಶ್ನೆಯನ್ನೇ ಅವನು ತಪ್ಪಾಗಿ ತಿಳಿದುಕೊಂಡನೋ ಎಂದು ಎದೆಗುಂದಿದ ನಾನು, "ಅಲ್ಲ, ಸಹಜವಾಗಿ ಕೇಳಿದೆ" ಎಂದೆ.

"ಸರ್, ನಿಮಗೆ ಗೊತ್ತಿಲ್ಲವೇ?" ಆತನ ಧ್ವನಿಯಲ್ಲಿ ಆಶ್ಚರ್ಯವಿತ್ತು.

"ಏನು...??"

"ಅವರಿಗೆ ಹುಟ್ಟಿನಿಂದಲೂ ಮಾತಿಲ್ಲ?"

"ಆಂ?... ಅಂದರೆ ಮೂಕ...?"

"ಹೌದು"

ನಾನು ಅಪ್ರತಿಭನಾದೆ, ಮೂಕವಿಸ್ಮಿತನಾದೆ!



# ವಿಷವಧು

ಎಲಾ ಯಾರಿವಳೀ ನಾರಿ ಚೀನಾಂಬರಧಾರಿ,
ಮತ್ತಕಾಶಿ,
ರಕ್ತರವಕೆಯ ತೊಟ್ಟ ಮುಕ್ತಕೇಶಿ!
ಹಗರಣದ ಹಣೆಹುಬ್ಬು, ಮೊಗದಿ ಉಬ್ಬಿದ ಕೊಬ್ಬು,
ಕಂಡವರ ಕರೆಯುವಳು ಕೈಯ ಚಾಸಿ;
ತೂರಿ ತೋರುವಳಣ್ಣ ಮಂತ್ರಬೀಸಿ.
'ಹ್ಹಹ್ಹಾ! ಹಹ್ಹಾ ಭೋಗರಾಶಿ
ಬಂದೆನಾ' ಎನ್ನುವಳು ಕಡು ವಿಲಾಸಿ,...
ಮತ್ತಕಾಶಿ!
ದೂರ ದೂರದ ನೋಟ ಹದಿನಾರು ಹರೆಯ,
ಏನ ಬಣ್ಣಿಸಲಯ್ಯ ವೈಯಾರ ಸಿರಿಯ?
ಕಣ್ಣು ಖಳಖಳಿಸಿಹವು, ಅಧರ ಢಳಮಳಿಸಿಹವು
ಭಂಗಿ ವಿನ್ಯಾಸಕ್ಕೆ ರಂಗ ಬಳಿದು,
ಅಂಗನಾ ಚಾಪಲ್ಯ ಠಿಲ್ಲಣಕೆ ಅರಿದು.
ಹೊಸ ಹೊಸದು ಹೊಟ್ಟೆಯನ್ನು ಅಜ್ಜ ಸುಳಿಸುಳಿದು
ಮಸೆದು ಮೊನೆದಿಟ್ಟಿಗಳ ನೃತ್ಯಕಳೆ ಹೊಳೆದು,
ಸೆಳೆಯಾಗಿ ಸನಿಹಿಸಲು ಕಾಂಬೆ ಚಹರೆಯ ಪರಿಯ
ಕೂದಲಿನ ನರೆಯ!
ಮೈಗಂಧ ಮರೆಸಿತ್ತು ವರುಷಗಳ ಹೊರೆಯ!
ಕೊರಳ ಮಾಂಗಲ್ಯವೊ?......
ಸಿಕ್ಕಲಿಲ್ಲವೊ ಏನೋ? ತಕ್ಕ ಪತಿರಾಯ?...
ಅಥವಾ,
ಮುಟ್ಟಿದವರೆಲ್ಲ ಬಟ್ಟ ಬಯಲು, ಮಟಾಮಾಯ!
ಎಲಾ ಯಾರಿವಳೀ ನಾರಿ ಚಿನಾಂಬರ ಧಾರಿ,
ಮತ್ತಕಾಶಿ,
ರಕ್ತ ರವಕೆಯ ತೊಟ್ಟ ಮುಕ್ತಕೇಶಿ!

* * * *

ವಾಸನೆಯ ಹಸಿಯಲ್ಲಿ ಮುಸುಗುಡುವ ದಾಸರಹಾವೆ,
ಅರಿಸಿಣವ ನೆರೆಮಿಂದ ಅಜಗರದ ಮುದಿಮಗುಳೆ,
ಮದುಮಗುಳೆ,
ವಿಷಕನ್ಯೆ, ವಿಕೃತ ಚಿತ್ತದ ಚಿತ್ರರತಿಯೇ'
ದೈತ್ಯದುವ್ವಾಳಿಯನು ನಡೆಸ ಬಂದಿಹ ನೀರೆ,
ಶೂರ್ಪಣಖೆಯ ದತ್ತ ಅಕ್ಕ,
(ಇರಬಹುದೇ ಶಕುನಿ ನಿನ್ನ ಕಕ್ಕ?)
ಛಡಾ! ಯಾರಿದ್ದರೇನಂತೆ? ಕಟ್ಟು ನಿನ್ನಯ ಕಂತೆ!
ಇಲ್ಲದಿದ್ದರೆ ಕರೆಯಿತಲ, ವಿಲಯ ವೀಳೆಯ ಚಿಂತೆ!
ನಾವು ವರ ಜಟ್ಟಿಗಳು, ಗೋಪಸಂಕುಲದವರು,
ಮಲ್ಲಯುದ್ಧದ ಗರಡಿ ಶುದ್ಧ ಗಾರುಡಿಯಲ್ಲಿ
ಅರಿತು ನುರಿತವರು
ಕೊಳಲ ಕಿಂಕಿಣಿರವಕೆ, ಕುಣಿಸಿ ನಾಗಿಣಿಗಳನು,
ಗಡನೆ ಹೆಡೆಯನೆ ಮೆಟ್ಟಿ
ಕೊರೆ ಮುರಿವವರು:
ಠಕ್ಕು ಲಾವಣ್ಯದಲ್ಲಿ ಉಕ್ಕಿ ಬಹ ತಾಮಸರ,
ಕಾಮ ಸಂತಾನಿಗಳ
ಮೂಗು ತರೆವವರು.
ಇದುವೆ ಪಗಡೆಯ ಆಟ—ರೀತಿ ಬೇರೆ
ನಮ್ಮ ಬೇಟಕ್ಕಿಲ್ಲ ಯಾವುದು ಮೇರೆ.
ಇಂದು ಕಿಷ್ಕಿಂದ, ನಾಳೆ ದಂಡಕ,
ಮರುಗಳಿಗೆ?...
ತುಂಡ ಪ್ರಕಾಂಡ ಉತ್ತುಂಗ ಮಹಾಜಲ.
ರಜನೆ ಕೆತ್ತಿದೆ ರುದ್ರ ಭದ್ರ ಆಡುಂಬೋಲ.
ಶುಭಸ್ಯ ಶೀಘ್ರಂ
ಬಾ ಅಸುರೆ ಪಣ ಕಟ್ಟು, ಜವನಿಕೆಯ ಹರಿದೊತ್ತು.
ವೇತ್ರ ದಂಡವು ಹೂತ ಮಂತ್ರದೊತ್ತು;
ನಿನ್ನ ತಂತ್ರಕ್ಕಿಲ್ಲಿ ನೆಲಿಸಿಲ್ಲ ... ಹಳಸೆಲ್ಲ!
ಅಪ್ಪ ಬಂದಿದೆಯಿದೆಕೋ ಮಿಂಡ ಮಿತ್ತು.

—ಚಿದಂಬರ ದೀಕ್ಷಿತ



# ಅಂದು ಇಂದು ಬಂದು

ಟ್ರಿಣ್! ಟ್ರಿಣ್! ಟ್ರಿಣ್!

'ಶಿವ ಶಿವಾ!' ಎಂದರು ರಾಜಪ್ಪನವರು.

"ಹಲೋ...ನಾನು ರಾಜಪ್ಪ...ಶರಣು...ಬಿಜಾಪುರ ಕಾಗದದ ಬೇಲ್‌ಗಳು ಬಂದಾವೇ?...ಐದು ಸಾವಿರ ರೂಪಾಯಿದವು...ಹೂಂ...ಆ ಟ್ರಕ್ ಗೋಡಾವಿಗೆ ಹೊಡಿಸು...ಮತ್ತ ಹತ್ತಿ ಸ್ಟಾಕ್ ಭರಪೂರ ಆದಾವೇನು?...ಹೂಂ...ಮಳೆಗಾಲ ಜಾಲೂ ಇನ್ನ...ಅಂಗಡಿಗೇ? ನೋಡಬೇಕು...ಮೋಡ ಹಾಕಿತೂ ಅಂದರ, ಬೇಜಾರು...ಇರಲಿ...ಹಲೋ...ಇವತ್ತ ಅಷ್ಟ ಕೆಲಸ ಮಾಡಿಬಿಡಬೇಕು ಅ್ಞs...ಶರಣು..."

'ಶಿವ ಶಿವಾ!' ರಾಜಪ್ಪನವರು ಟೆಲಿಫೋನ್ ಕೆಳಗಿಟ್ಟು ಶಿವಮಂತ್ರ ನುಡಿದರು. ಟೆಲಿಫೋನ್ ತೆಗೆದುಕೊಳ್ಳುವಾಗಲೂ ಹಾಗೆಯೇ ಅದನ್ನು ಕೆಳಗಿಡುವಾಗಲೂ ಹಾಗೆಯೇ. ಟೆಲಿಫೋನ್ ಶಿವನ ಅಪರಾವತಾರ ಎನ್ನುವಂತೆ ರಾಜಪ್ಪನವರು ಅದರ ಕಡೆಗೆ ನೋಡುತ್ತಿದ್ದರು. ಟೆಲಿಫೋನ್ ಮನೆಗೆ ಬಂದಾಗಿನಿಂದ ಅವರ ವ್ಯವಹಾರ ವರ್ಧಿತವಾಗಿತ್ತೇ ಹೊರತು ಏನೂ ಕಡಿವೆಯಾಗಿರಲಿಲ್ಲ. ಅಂತೆಯೇ ಪ್ರತಿದಿನಬೆಳಗ್ಗೆ ಶಿವಪೂಜೆಯಾದಕೂಡಲೇ ಟೆಲಿಫೋನಿನ ಪೂಜೆಯನ್ನು ಅವರು ಮಾಡುತ್ತಿದ್ದರು.

ಟೆಲಿಫೋನ್ ಕೆಳಗಿಟ್ಟು ರಾಜಪ್ಪನವರು ಪಲ್ಲಂಗದ ಗಾದೆಯ ಮೇಲೆ ಕುಳಿತು ತೆಕ್ಕೆಗೆ ಆತುಕೊಂಡು ಕಿಟಕಿಯ ಆಚೆ ನೋಡಿದರು. ಕಾದುಗಪ್ಪು ಮೋಡಗಳು ಗುಂಪು ಗುಂಪಾಗಿ ಮೇಲೇರಿ ಬರುತ್ತಿದ್ದವು. "ಛೋಡಿ ಮೋಡಗಳು! ಆಕಾಶವು ಸ್ವಚ್ಛವಾಗಿದ್ದರೆ ಮನಸ್ಸಿಗೆ ಆರಾಮು..." ಎಂದು ಉದ್ಗಾರ ತೆಗೆದರು ರಾಜಪ್ಪನವರು. ರಾಜಪ್ಪನವರ ಮನಸ್ಸು ಆ ದಿನ ವ್ಯಗ್ರಗೊಂಡಿತ್ತು.

"ಯಾರ್‍ರೀ ಸಾವಕಾರ ಫೋನ ಮಾಡಿದವ?" ದೇವದಾರ ಕಟ್ಟಿಗೆಯಿಂದ ತಯಾರಿಸಿದ ಚಿಕ್ಕ ಮೇಜಿನ ಮೇಲೆ ಕಾಗದವಿಟ್ಟು ಬರೆಯುತ್ತಿದ್ದ ಕಾರಕೂನ ಮೆತ್ತಗೆ ಕೇಳಿದ, "ಯಲ್ಲಪ್ಪ ಏನ್ರಿ ಫೋನ ಮಾಡಿದವ?"

ಕಾರಕೂನನಿಗೆ ಯಲ್ಲಪ್ಪನ ಕಡೆಗೆ ಏನಾದರೂ ಕೆಲಸವಿತ್ತೋ ಏನೋ! ಆದರೆ ಸಾವುಕಾರರ ಗಂಭೀರ ಮುಖವನ್ನು ನೋಡಿ ಫೋನಿನ ವರೆಗೆ ಹೋಗುವ ಧೈರ್ಯ ಅವನಿಗಾಗಲಿಲ್ಲ.

"ಹೂಂ... ಪೂಜಾರಿ...ಪತ್ರಾ ಬರೆದು ಹಾಕಿಬಿಡು"

ಕಾರಕೂನ ಪೂಜಾರಿ ಆಶ್ಚರ್ಯ ವ್ಯಕ್ತಮಾಡಿದ ಮುಖದಲ್ಲಿ "ಆದರ ಸಾವಕಾರ....ಇನ್ನು ಪತ್ರದಾಗ ಏನ ಬರೀಬೇಕ ಅದನ್ನ ಹೇಳಿಲ್ಲ. ಮೋಸ್ಟ ಹೇಗೆ ಮಾಡುವುದು?" ಪೂಜಾರಿ ಕೇಳಿದ.

ಕಾರಕೂನ ಪೂಜಾರಿಯ ಮಾತು ಕೇಳಿ ರಾಜಪ್ಪನವರಿಗೆ ಏನೋ ಎಚ್ಚರ ಬಂದಂತಾಯಿತು.

ಪೂಜಾರಿಗೆ ಹೇಳಿದರು "ಹಾಂ! ಯಲ್ಲಪ್ಪಗ ಬಂದು ಬಿಡು ಅಂತ ಬರೆ. ಅಪ್ಪ ಅವರಿಗೆ ಮೈಯಾಗ ನೆಟ್ಟಗಿಲ್ಲ. ಈ ಪತ್ರ ಅಂದ್ರ ತಾಬ್ಡ ಅಂತ ತಿಳಕೊಂಡು ತಾಬಡತೋಬಡ ಹೊರಟ ಬರಬೇಕು ಅಂತ ಬರೆ"

ಪೂಜಾರಿ ರಾಜಪ್ಪನವರ ಕಡೆ ಮಿಕಿ ಮಿಕಿ ನೋಡುತ್ತ ಸುಮ್ಮನೇ ಕುಳಿತಿದ್ದ.

"ಏನೋ ಹೀಗೇಕೆ ಪಿಳಿ ಪಿಳಿ ನೋಡುವಿ?" ತುಸು ಗದ್ದರಿಸಿದಂತೆಯೇ ರಾಜಪ್ಪನವರು ಮಾತನಾಡಿದರು. ಅವರ ಆ ಮುದಿವಯಸ್ಸಿನ ಕಣ್ಣುಗಳಲ್ಲಿಯೂ ಕೆಂಪು ರಕ್ತವಾಡಿದಂತೆ ಕಂಡಿತು. "ಏನಾದರೂ ತಲಿ ಕೆಟ್ಟಿತೋ ಇವೊತ್ತು?" ಎಂದು ಪ್ರಶ್ನಿಸಿದರು.

"ತಲೆ!!" ಪೂಜಾರಿ ಗಾಬರಿಯಾಗಿ ತಲೆ ತುರಿಸಿಕೊಂಡ.

"ಅಲ್ಲಾ ಸಾವಕಾರ, ಯಲ್ಲಪ್ಪ ಇಲ್ಲೇ ಇದ್ದಾನ. ಇದೇ ಈಗ ನೀವೇ ಫೋನ ಮಾಡಿದಿರಿ. ಮತ್ತ ಅವಗ ಏನು ಬರೆಯೋದು?"

ಪೂಜಾರಿಯ ಪ್ರಶ್ನೆಯಿಂದ ರಾಜಪ್ಪನವರಿಗೆ ಅರಿವು ಬಂದಿತು. 'ಶಿವ ಶಿವಾ' ಎಂದು ಉಸಿರ್ಗರೆದರು. "ಪೂಜಾರಿ, ಅರಳು ಮರಳು ಆಗೇತಿ ನೋಡು, ನನ್ನ ವಯಸ್ಸೆಷ್ಟೋ?"

ರಾಜಪ್ಪನವರ ವಯಸ್ಸು ಕೇಳುವವರಾದರೂ ಯಾರು? ಅವರ ಹುಟ್ಟುಹಬ್ಬ ಮಾಡುವವರು ಯಾರು? ಅವರ ಹುಟ್ಟು ಹಬ್ಬ ಬರುತ್ತಿತ್ತು, ಹೋಗುತ್ತಿತ್ತು. ಅದು ಬಂದುದರ ಅರಿವೂ ಯಾರಿಗೂ ಇರುತ್ತಿರಲಿಲ್ಲ.

"ಪೂಜಾರಿ, ಅರವತ್ತು ವರುಷ ಆಯ್ತೋ ಏನೋ! ಶಿವ ಶಿವಾ!" ರಾಜಪ್ಪನವರು ನಿಟ್ಟುಸಿರು ಬಿಟ್ಟರು. "ಪೂಜಾರಿ, ಅಂದೂಗೆ ಪತ್ರ ಬರೆದೇ ಬಿಡು. ನಾ ಹೇಳಿದ್ದೆಲ್ಲಾ ಬರೆ. ಅಪ್ಪಗೆ ಜಡ್ಡು ಬಹಳೇ ಆಗೇದ ಅಶಕ್ತ ಆಗ್ಯಾರೆ..."

ಪೂಜಾರಿ ಕಕ್ಕಾವಿಕ್ಕಿಯಾಗಿ ರಾಜಪ್ಪನವರ ಕಡೆಗೆ ನೋಡಿದ. ರಾಜಪ್ಪನವರಿಗೆ ವಯಸ್ಸಾಗಿದ್ದರೂ ಆದಿನ ಗಟ್ಟಿಯಾಗಿಯೇ ಇದ್ದರು.

"ನನ್ನ ಕಡೆಗೆ ನೋಡಬೇಡ ಪೂಜಾರಿ...ಪತ್ರ ಬರೆ...ಬೇಗ ಬಂದರೆ ಅಪ್ಪನ ಭೆಟ್ಟಿ...ನಿನ್ನನ್ನೇ ನೆನಸುತಾರೆ ಅಂತ ಬರೆ...ಬೇಗ ಬರಲು ತಿಳಿಸು..."

ರಾಜಪ್ಪನವರು ಅಂದೂಗೆ ಬೇಗ ಬರಲು ತಿಳಿಸಿ ಪತ್ರ ಬರೆಯಲು ಹೇಳಿದ್ದು ಆ ದಿನ ಬೆಳಿಗ್ಗೆ ಐದಾರು ಸಲವಾದರೂ ಇರಬೇಕು.

ಕಿಟಿಕಿಯ ಹೊರಗೆ ದೃಷ್ಟಿ ಹಾಚಿ ರಾಜಪ್ಪನವರು ನೋಡಿದರು. ದೂರದಿಂದ ಒಂದೊಂದೇ ಮೋಡ ಹಾರಿ ಬರುತ್ತಿದ್ದವು. ಸಮೀಪ ಬಂದಾಗ ವಿಶಾಲವಾದ ಆಕಾರವನ್ನು ತಾಳುತ್ತಿದ್ದವು, 'ಟಪ್! ಟಪ್!' ಮಳೆಯ ಹನಿಗಳು.

'ಮಳೆ ಬಂದರೆ ಎಷ್ಟು ಚೆನ್ನ?' ರಾಜಪ್ಪನವರು ಯೋಚಿಸಿದರು. 'ಅಂದೂ ಹಾಗೆಯೇ ಮಳೆಯ ಹನಿಯ ಗುಂಟ ಇಳಿದು ಬರಬೇಕು' ಎಂದೂ ರಾಜಪ್ಪನವರು ಬಯಸಿದರು. ಮಳೆ ಬಂದರೆ ನೆಟ್ಟನೆ. ಬಾರದೇ ಇದ್ದರೆ ಅದೇನೊ ವ್ಯಥೆ ರಾಜಪ್ಪನವರಿಗೆ.

ಕಿರ್‍ಂ ಕಿರ್‍ss

ಮೋಟಾರ್ ಹಾರ್ನ್ ಧ್ವನಿ ಕೇಳಿಸಿತು. ಕುತೂಹಲದಿಂದ ರಾಜಪ್ಪನವರು ಕಿಟಕಿಯ ಹೊರಗೆ ಆಚೆಗೆ ರಸ್ತೆಯಲ್ಲಿ ನಿಂತ ಮೋಟಾರ್ ಕಾರನ್ನೆ ನೋಡಿದರು. ಮನೆಯೊಳಗಿಂದ ಚಿಕ್ಕ ಮಕ್ಕಳು ಓಡಿಬಂದವು. ಅವುಗಳಿಗೆ ಮೋಟಾರಿನಲ್ಲಿ ಬೇಗನೇ ಕೂಡುವ ಉತ್ಸಾಹ! ಅವು ಯಾರ ಚಿಕ್ಕ ಮಕ್ಕಳು ಎಂಬುವುದೂ ರಾಜಪ್ಪನವರಿಗೆ ಗೊತ್ತು. ಗೋಪಾಲಯ್ಯ ಉಣ್ಣೆ ಕೋಟು ಧರಿಸಿಕೊಂಡು ಕೈಯಲ್ಲಿ ಒಂದು ಬೆತ್ತ ಹಿಡಿದುಕೊಂಡು ಕೀವಿಯಿಂದ ಹೊರಗೆ ಬಂದರು. ಚಿಕ್ಕ ಮಕ್ಕಳು 'ಅಜ್ಜಾ! ಅಜ್ಜಾ' ಎಂದು ಕೂಗಿದವು ಪ್ರೀತಿಯಿಂದ.

"ಅಜ್ಜಾನ್ನ ದೊದಲ ಮೋಟಾರಿನೊಳಗ ಕೂಡಿಸಬೇಕು. ಅದೆಲ್ಲಾ ಬಿಟ್ಟು ನೀವು ಕೂಡಬೇಕೇನು?" ಒಳಗಿನಿಂದ ಹೆಂಗಸಿನ ಧ್ವನಿ ಕೇಳಿಸಿತು. ಅವಳೂ, ಅವಳ ಪತಿಯೂ ಹೊರಬಿದ್ದು ಗೋಪಾಲಯ್ಯನವರನ್ನು ಸಾವಧಾನವಾಗಿ ಕರೆದುಕೊಂಡು ಹೋಗಿ ಮೋಟಾರ್‌ಕಾರಿನಲ್ಲಿ ಕೂಡಿಸಿದರು.

'ಶಿವ ಶಿವಾ!' ಎಂದರು ರಾಜಪ್ಪನವರು. 'ಇಂದೇ ಅಂದೂ ಬಂದರೆ?...ಅವನ ಹೆಂಡತಿ....?' ರಾಜಪ್ಪನವರ ಮನಸ್ಸು ಏನೇನೋ ಲೆಖ್ಖ ಹಾಕಿತು. ಅಸಾಧ್ಯವಾದುದು ಸಹ ಶಕ್ಯವಾಯಿತು ಎಂಬುವಂತೆ ಅವರ

ಕತೆಗಾರ :

ವರದರಾಜ ಹುಯಿಲಗೋಳ

ನಿರಿಗೆ ನಿರಿಗೆಯಾದ ಮುಖದಲ್ಲಿ ಗೆಲುವಿನ ನಗೆ ನಲಿದಾಟವಾಡಿತು.

ಟಪ್! ಟಪ್! ಟಪ್!

ಯಾರದೋ ಬೂಟಿನ ಸಪ್ಪಳವಾಯಿತು. ಬಹುಶರವಾಗಿ ಅವರು ತಲಬಾಗಿಲ ಹೊರಗಿನ ಮೆಟ್ಟಲುಗಳನ್ನು ಏರಿರಬೇಕು. ಟ್ರಂಕು ಮುಂತಾದ ಸಾಮಾನುಗಳನ್ನು ಕೆಳಗಿಟ್ಟ ಸಪ್ಪಳವೂ ಕೇಳಿಸಿತು. ಬಾಗಿಲದ ಕಡೆಗೇ ರಾಜಪ್ಪನವರು ಹೊರಳಿ ನೋಡಿದರು.

"ಅಪ್ಪಾ!" ಎಂಬ ಧ್ವನಿ ಕೇಳಿಸಿತು.

ಆ ಎರಡೇ ಎರಡು ಅಕ್ಷರಗಳಲ್ಲಿ ಅಕ್ಷಯ್ಯವಾದ ವಾತ್ಸಲ್ಯವು ತುಂಬಿಕೊಂಡಿತ್ತು. ಅದನ್ನು ಕೇಳಿ ರಾಜಪ್ಪನವರ ಪ್ರೀತಿಯೇ ಕೋಡಿವರೆದು ಹರಿಯಿತು. ಮಗನನ್ನು ಆ ಪ್ರೀತಿಯ ಪ್ರವಾಹದಲ್ಲಿ ತೇಲಿಸಿತು.

ಪೂಜಾರಿ ಕೋಣೆಯ ಹೊರಗಡೆ ಓಡಿಹೋಗಿ ಸ್ವಾಗತಿಸಿದ. ತಮ್ಮ ಪಲ್ಲಂಗದ ಮೇಲಿಂದ ರಾಜಪ್ಪನವರು ಧಡಪಡಿಸಿ ಬಂದರು.

"ಚಂದೂ ಬಾಪ್ಪಾ!" ಎಂದು ಉದ್ದವಾಗಿ ಬೆಳೆದ ಪ್ರಬುದ್ಧ ಮಗನ ಮೇಲೆ ಒಂದು ವರುಷದ ಮಗುವೆಂಬುವಂತೆ ಕೈಯಾಡಿಸಿದರು.

"ಪತ್ರ ಬರೆಯಬಾರದಿತ್ತೇನಪ್ಪಾ? ಯಾರಾದರೂ ಸ್ಟೇಶನ್ನಿಗೆ ಬರತಿದ್ದರು?" ರಾಜಪ್ಪನವರು ಹೀಗೆ ಪ್ರಶ್ನಿಸಿದಾಗ ತಾವೇ ಸ್ಟೇಶನ್ನಿಗೆ ಹೋಗುತ್ತಿದ್ದರು ಎಂಬ ಭಾವನೆಯಿತ್ತು.

"ಅಪ್ಪಾ, ಅರಿಯದ ಊರೇನು ಇದು?" ಚಂದೂ ಸಹಜವಾಗಿ ನುಡಿದ. "ಮುಂಬಯಿಯಿಂದ ಹೊರಡೋದೆ ನಕ್ಕಿ ಇರಲಿಲ್ಲ. ಅದಕ್ಕಂತ ಬರೆಯಲಿಲ್ಲ..." ಚಂದೂ ಸಮಾಧಾನದ ಮಾರುತ್ತರ ನುಡಿದ. "ಅಪ್ಪಾ ನಿನ್ನ ಪ್ರಕೃತಿ ಹೇಗದೆ?" ಎಂದು ಕೇಳಿದ.

ರಾಜಪ್ಪ ಮತ್ತು ಪೂಜಾರಿ ಅವರ ಕಣ್ಣುಗಳು ಪರಸ್ಪರ ನೋಡಿ ಮಾತನಾಡಿದವು. ರಾಜಪ್ಪನವರೇ ಹೇಳಿದರು. "ಚಂದೂ ನೀನು ಬಂದೆಯಲ್ಲಾ... ಎಲ್ಲಾ ಚೆಂದ ಆತು. ನನ್ನ ಬೇನೆ ಎಲ್ಲಾ ಹೋಯಿತು..."

ಚಂದೂನನ್ನು ಕಂಡು ರಾಜಪ್ಪನವರಿಗೆ ತೃಪ್ತಿಯಾಗಿತ್ತು. ಅಪೂರ್ವ ಸಮಾಧಾನದ ಅಮೃತದ ಸಿಂಚನೆ ಹೃದಯದ ತುಂಬಾ ಉಂಟಾಗಿತ್ತು.

ಚಂದೂನ ಆಗಮನದ ಸುದ್ದಿ ಒಳಗಿದ್ದ ಪಾರ್ವತೆವ್ವನ ಗಮನವನ್ನೂ ಸೆಳೆಯಿತು. ಅವಳ ಧ್ವನಿ ಕೇಳಿದೊಡನೆ ಚಂದೂ ಒಳಗೋಡಿದ. ಈಶ್ವರದೇವರ ಮುಂದೆ ತುಪ್ಪದ ದೀಪ ಪಾರ್ವತೆವ್ವ ಹಚ್ಚಿದಳು.

ಚಂದೂ ಪುಟಪುಟನೆ ಹೆಜ್ಜೆಗಳನ್ನಿಟ್ಟು ಸಾಮಾನುಗಳನ್ನು ತೆರೆದ. ಪೂಜಾರಿ ನೆಲದ ಮೇಲೆ ಕಾಲೂರಿದನೋ ಇಲ್ಲವೋ ಎಂಬುವಂತೆ ಓಡಾಡಿದ. ಅಡುಗೆಯ ಮನೆಯಲ್ಲೂ ಏನೇನೋ ಭಾಂಡಿಗಳ ಸಪ್ಪಳ. ಸುಮಾರು ಒಂದು ವರುಷದ ನಂತರ ಚಂದೂ ತನ್ನ ಮನೆಗೆ ಬಂದಿದ್ದ. ಅಂತೆಯೇ ಹರುಷವು ಅರಳಿ ಬೆಳಕನ್ನು ಕಂಡಿತು. ಯಾವಾಗಲೂ ಸ್ತಬ್ಧವಾಗಿರುವ ಮನೆ ಜೀವಕಳೆ ತಳೆದಿತ್ತು. ಮಲಗಿದ ಜಗತ್ತು ಒಮ್ಮೆಲೇ ಎಚ್ಚತ್ತಂತಿತ್ತು ಮನೆಯಲ್ಲಿ-

ಟ್ರಣ್! ಟ್ರಣ್! ಟ್ರಣ್!

'ಶಿವಾ ಶಿವಾ!' ಎಂದರು ರಾಜಪ್ಪನವರು. ಸಂತೋಷದಿಂದ ಟೆಲಿಫೋನನ್ನು ಎತ್ತಿದರು. ಅದರ ಕಪ್ಪು ಮುಖವೂ ಪವಿತ್ರವಾದ ದೇವರ ಮುಖವಾಗಿತ್ತು ಅವನಿಗೆ.

"ಹಲೋ..." ಎಂದರು. "ಕಾರಕೂನ...?"

ಕಾರಕೂನ ಪೂಜಾರಿ ಓಡಿಬಂದ ರಾಜಪ್ಪನವರ ಗಡುಚಾದ ಧ್ವನಿಯನ್ನು ಕೇಳಿ "ನೀನು ಅಲ್ಲ ಹೋಗೋ..." ಎಂದರು ರಾಜಪ್ಪನವರು ಪೂಜಾರಿಗೆ.

ರಾಜಪ್ಪನವರಿಗೆ ಕಾರಕೂನ ರಾಜಪ್ಪ ಎಂದು ಕರೆಯುವುದು ಆ ಊರಲ್ಲಿ ರೂಢಿಯಾಗಿತ್ತು.

"ಹೂಂ... ಹೂಂ... ಆಗಲೇನ...?" ರಾಜಪ್ಪನವರು ನಕ್ಕರು. "ನಿಮಗಲ್ಲ ಅಂದದ್ದು... ಹೂಂ ಮಾತಾಡೋದು ನಾನೇ. ಕಾರಕೂನ ರಾಜಪ್ಪ...ಯಾರು ಹಿರೇಮಠ ಅಯ್ಯನವರ...? ಶರಣು... ಬಂದಾನ ಇದೇ ಈಗ... ರುಳಕಕ್ಕ ಇಳಿದಾನ...ನಾಳೆ...ಹೂಂ ...ಹೋಗಿಬಿಡೋಣ... ನೀವು ಎಲ್ಲಾ ಹೇಳೀರಿಲ್ಲೊ? ಸರಿ... ಶರಣು..."

'ಶಿವ ಶಿವಾ!' ರಾಜಪ್ಪನವರು ಟೆಲಿಫೋನನ್ನು ಕೆಳಗಿಟ್ಟರು. ಆ ದಿನ ಆಗ ಅವರು ಯಾವಯಾವುದೋ ಸವಿಗನಸುಗಳನ್ನು ಕಂಡರು. ಪಲ್ಲಂಗದಲ್ಲಿಯೇ ಕೈಕಾಲು ಚಾಚಿಕೊಂಡು ಕೂಡುವದು ಅವರಿಗೆ ರೂಢಿ. ವಯಸ್ಸಾದಂತೆ ಅವರಿಗೆ ಇದು ಚಟವಾಗಿಯೇ ಬಿಟ್ಟಿತ್ತು. ತಲೆಯ ಹಿಂದೆ ಎರಡೂ ಅಂಗೈ ಜೋಡಿಸಿ ಹಿಡಿದುಕೊಂಡು, ತೆಕ್ಕೆಗೆ ಆತುಕೊಂಡು ಕಿಟಕಿಯ ಹೊರಗೆ ಪ್ರತೀಕ್ಷಿಸಿದರು. ನೀಲಛವಿಯ ಮೋಡಗಳು ಮಳೆಗರೆಯದೆ ಚದುರಿದ್ದವು. ಆಕಾಶ ನಿರಭ್ರವಾಗಿತ್ತು. ರಾಜಪ್ಪನವರ ಮನಸ್ಸೂ ಸ್ವತಂತ್ರವಾಗಿ ಸಂತೋಷಪಡೆದಿತ್ತು, ಹೀಗೆಯೇ ಒಂದೊಂದೇ ಮೋಡ ಚದುರಿ ಹೋದರೆ...?

ದಿನವಿಡೀ ರಾಜಪ್ಪನವರು ಮನೆಯಲ್ಲೇ ಕಳೆದರು. ಚಂದೂಗೆ ಏನೇನೋ ಪ್ರಶ್ನೆ ಮಾಡುತ್ತ, ಹೆಚ್ಚೆಯ ಮಾತು ಆಡುತ್ತ ವೇಳೆ ತೆಗೆದರು. ಆದರೆ ಅವರಿಗೆ ಆಡಬೇಕಾದ ಮುಖ್ಯ ಮಾತುಗಳನ್ನೇ ಆಡುವುದಾಗಿರ



"ರಾಜಪ್ಪನವರು ಕಿಟಕಿಯ ಹೊರಗೆ ನಿಂತ ಮೋಟಾರ್ ಕಾರನ್ನು ನೋಡಿದರು"




" ನಮ್ಮ ಚೆಂದೂಗೆ ಕಳೆ ಬಹಳ...... ದೃಷ್ಟಿ ತೆಗೀಬೇಕವಗ "

ಲಿಲ್ಲ. ಊಟದ ನಂತರ ವಿಶ್ರಾಂತಿಯಿಂದ ಚಂದೂ ಏಳುವ ದಾರಿಯನ್ನೇ ರಾಜಪ್ಪನವರು ಕಾಯುತ್ತಿದ್ದರು.

ಅವನ ಧ್ವನಿ ಕೇಳಿದ ಕೂಡಲೇ, ಅವನನ್ನು ತಮ್ಮ ಕೋಣೆಗೆ ಕರೆದುಕೊಂಡು ಬಂದು ತಮ್ಮ ಹತ್ತಿರವೇ ಕೂಡಿಸಿಕೊಂಡರು. ಅವನನ್ನು ನೋಡುವದರಲ್ಲಿಯೂ ರಾಜಪ್ಪನವರಿಗೆ ಅಪಾರ ಸಂತೋಷ.

ಚಂದೂ ಗಿಡ್ಡನೂ ಅಲ್ಲ, ಎತ್ತರವೂ ಅಲ್ಲ, ಹೊಟ್ಟೆಲುಬಿನವನೂ ಅಲ್ಲ, ಜೋಡೆಲುಬಿನ ಲಠ್ಠ ಮನುಷ್ಯನೂ ಅಲ್ಲ. ಅಂಗಾಂಗಗಳಲ್ಲಿ ಮಧ್ಯಮ ರೀತಿಯವನು. ಹವಣಿಯಾಗಿ ಸುಂದರನಾಗಿದ್ದನು. ರಾಜಪ್ಪ ಮತ್ತು ಚಂದೂ ಕುಳಿತಿರುವಾಗಲೇ, ಒಳಗಿನಿಂದ ಪಾರ್ವತೆವ್ವ ಕಳ್ಳನೋಟದಿಂದ ಚಂದೂನನ್ನು ನೋಡುತ್ತಿದ್ದಳು. ಅವನನ್ನು ಕಂಡರೆ ಎಲ್ಲಿಲ್ಲದ ಪ್ರೀತಿ ಅವಳಿಗೆ. ಒಳಗಿನಿಂದ ಬಂದವಳೇ ಅಂದಳು "ನಮ್ಮ ಚಂದೂಗೆ ಕಳೆ ಬಹಳ ದಿನಾಲು ದೃಷ್ಟಿ ತೆಗೀಬೇಕವಗ... ಥೇಟ ತಾಯಿಹಾಗೇ ಇದ್ದಾನ..."

ಪಾರ್ವತೆವ್ವನ ಆ ಮಾತು ಕೇಳಿ ರಾಜಪ್ಪನವರು ಏನೋ ಸ್ಮರಿಸಿಕೊಂಡರು!! ವಿಚಿತ್ರ ನಗೆಯನ್ನೂ ನಕ್ಕರು. ಅಹುದು! ಪಾರ್ವತೆವ್ವ ಹೇಳಿದಂತೆಯೇ ಇದ್ದನು ಚಂದು. ಅವನು ಪುರುಷನಾದರೂ ಹೆಂಗಸರ ಕಳೆ ಹೆಚ್ಚು.

ರಾಜಪ್ಪನವರಿಗೆ ಈ ಸಲ ಚಂದೂನ ಕೂಡ ಬಹಳೇ ಮಾತಾಡುವದಿತ್ತು. ಯಾವ ಮಾತು ಮೊದಲು ಯಾವ ಮಾತು ಹಿಂದುಗಡೆ ಇದೇ ತಿಳಿಯದಂತಾಗಿತ್ತು. ಮಾತುಗಳು ತಮ್ಮ ತಮ್ಮಲ್ಲೇ ಮಲ್ಲಯುದ್ಧ ಮಾಡುತ್ತಿದ್ದವು. ಆದರೂ ಮುಖ್ಯ ಮಾತಿಗೇ ಮೊದಲು ಬರಲು, ರಾಜಪ್ಪನವರು ತಮ್ಮ ಹೇಳಿಕೆ ಆರಂಭಿಸಿದರು.

"ಚಂದೂ ಈ ಮನೆ...ಹೂಂ...ಇದು ಮನೆಯೇನು? ಮನೆಯೇ ಅಲ್ಲ.... ಈಗ ಬೇರೆ ಮನೆ ಹಿಡಿದಿರುವೆ...ಪೂಜಾರಿ..."

"ಏನ್ರೀ ಸಾವಕಾರ?" ಪೂಜಾರಿ ಓಡಿಬಂದನು.

"ಆ ಗೋಕಾಕದವರ ದೊಡ್ಡ ಮನಿ ಹೇಳಿದೆಯೋ ಇಲ್ಲೊ...?" ರಾಜಪ್ಪನವರು ಕೇಳಿದರು.

"ಅಲ್ಲ... ನಾನು...?" ಚಂದು ನಡುವೆಯೇ ಬಾಯಿ ಹಾಕಿದ.

"ಆಗಲೇ ಒಂದು ತಿಂಗಳ ಅಗಾವು ಬಾಡಿಗೆ ನಿನ್ನೇ ಕೊಟ್ಟಿದೆ...."

"ಪೂಜಾರಿ...ಅಲ್ಲ, ನಮ್ಮ ಚಂದೂಗೆ ಮನಸ್ಸಿಗೆ ಬಂದರೆ; ಅದನ್ನ ಕೊಂಡುಕೊಂಡೇಬಿಡೋಣ"

"ಅಲ್ಲಾ...?" ಚಂದೂ ಏನೋ ಹೇಳಲು ಹೋದ. ಆದರೆ ಅದರ ಕಡೆಗೆ ರಾಜಪ್ಪನವರ ಲಕ್ಷ್ಯವೇ ಇರಲಿಲ್ಲ.

"ಮತ್ತೆ ದವಾಖಾನೆ ಸಲುವಾಗಿ...ನಮ್ಮ ಅಂಗಡಿ ಪಕ್ಕದಾಗೆ... ಶನಿವಾರ ಪೇಟೆಯೊಳಗ..." ರಾಜಪ್ಪನವರು ತಮ್ಮವೇ ಮಾತು ಹೇಳಿದರು.

"ಅಲ್ಲಾ...?" ಮತ್ತೆ ಚಂದೂ ನಡುವೆಯೇ ಬಾಯಿ ಹಾಕಿದ.

"ಅಲ್ಲಾ ಇಲ್ಲಾ... ಏನೂ ಇಲ್ಲ. ಚಂದೂ, ನೀ ಇನ್ನ ಇಲ್ಲೇ ಇರೋದು. ನನ್ನ ಕೊನೆಯ ಆಶಾ ನೋಡು ಚಂದೂ...ನನ್ನ ಆಶಾ ಪೂರ್ಣ ಮಾಡೋದು ನಿನ್ನ ಕೈಯಾಗೇ ಅದ ಚಂದೂ.. ಉಳಿದವರ ಯಾರನ್ನೂ ನಾನು ನಂಬಿಲ್ಲ. ಸ್ವತಃ ಮಗಳೇ ಇಂದೂ ನನ್ನ ಕೈ ಬಿಟ್ಟಳು.."

"ಆದರ್‍ಯ?" ಚಂದೂ ಏನೋ ಸಂಶಯ ವ್ಯಕ್ತ ಮಾಡಿದ.

"ಏನೂ ಸಂಶಯ ಪಡಬೇಡ ಚಂದೂ. ಸರಕಾರಿ ದವಾಖಾನೆಗೆ ರಾಜೀನಾಮೆ ಕೊಟ್ಟಬಿಡು. ನೀ ನನ್ನ ಹತ್ತರ ಇರಬೇಕು. ನಿನ್ನ ರಾಜೀನಾಮೆ ಸ್ವೀಕಾರ ಮಾಡಲಿಕ್ಕೆ ಏನು ಎಂ. ಎಲ್. ಎ. ಮಂತ್ರಿ ಯಾರಿಗೆ ಬೇಕಾದರೂ ಹೇಳತೇನಿ. ನಿಮ್ಮ ಅಪ್ಪನದು ಅಷ್ಟು ನಡೀತದೆ.."

"ಅಲ್ಲಾ...ಈಗ ನನಗ ಇಲ್ಲಿಗೆ ಬರೋದು ಆಗಲಿಕ್ಕಿಲ್ಲಾ ಅಪ್ಪಾ..."

"ನನ್ನ ಕಡೇ ಸಂಕಲ್ಪ ಇದು ಚಂದೂ.. ನೀ ಬಂದೇಬಿಡು. ನಾ ಎಲ್ಲಾ ನೋಡಿಕೊಳ್ಳತೇನೆ. ಖರ್ಚು ಕೊಡತೇನೆ. ಎಲ್ಲಾ ಮಾಡತೇನೆ. ನಾ ಗಳಿಸೂದಾದರೂ ಯಾತಕ್ಕ?... ಈ ವ್ಯಾಪಾರ ಈ

ಅಂಗಡಿ ತಗೊಂಡು ನಾ ಏನ ಮಾಡಬೇಕು. ಚಂದೂ ..ಇಲ್ಲೇ ಇದ್ದು ಬಿಡು."

"ಅಪ್ಪ ಆದರ?" ಹೇಳಬೇಕೋ ಬೇಡವೋ ಅನ್ನುತ್ತ ಚಂದೂ ಮಾತನಾಡಿದ. ಏಕೆಂದರೆ ರಾಜಪ್ಪನವರ ಮಾತು ಕೇಳಿ ಅವನಿಗೆ ಸ್ವಲ್ಪ ಗಾಬರಿಯೂ ಆಗಿತ್ತು. ಅವರು ಆ ದಿನ ಮಾತನಾಡಿದಂತೆ ಎಂದೆಂದೂ ನಿರ್ಧಾರದ ವಾಣಿಯಿಂದ ಮಾತನಾಡಿದವರಲ್ಲ. 'ಹೀಗಾದರೆ ವೆಟ್ಟಗೆ' ಎಂದಿಷ್ಟೇ ಅನ್ನುತ್ತಿದ್ದರು. ಆದರೆ ಆ ದಿನ ಅವರು ಹಾಗೇಕೆ ಮಾತನಾಡಿದರೋ ಅವನಿಗೆ ತಿಳಿಯಲಿಲ್ಲ. ಕೆಲ ಕೆಲವು ದಿನಗಳಿಂದ ಅಪ್ಪನ ಸ್ವಭಾವ ತಿಳಿದುಕೊಳ್ಳುವುದೂ ಕಠಿಣವಾಗಿತ್ತು. ಏಕೆಂದರೆ ಅಪ್ಪನ ಹತ್ತಿರವಿರುವ ದಿನಗಳೇ ಕಡಿಮೆಯಿದ್ದವು. ಐದಾರು ವರ್ಷ ಚಂದೂ ಮುಂಬೈಯಲ್ಲಿ ಡಾಕ್ಟರ್ ಅಭ್ಯಾಸಕ್ಕಾಗಿ ಇದ್ದ. ತರುವಾಯ ಸರಕಾರಿ ಡಾಕ್ಟರನಾಗಿ ಒಂದೆರಡು ವರ್ಷ ಹೊರಗೆಯೇ ಇದ್ದ.

ರಾಜಪ್ಪನವರೇ ಅಂದರು. "ಚಂದೂ ನನಗೂ ವಯಸ್ಸಾತು. ಮೈಯಾಗ ನೀರ ಇರುವಾಗ ದುಡಿದೆ. ಶಿವ ಶಿವಾ! ದೇವರು ಬೇಡಿದಷ್ಟು ಕೊಟ್ಟ. ಅದಕ್ಕ ನಿಮ್ಮ ಶಿಕ್ಷಣೆಲ್ಲಾ ಆತು. ಈಗ ಮೊದಲಿನ ಹಾಗೇ ದುಡಿ ಅಂದರ ಹೇಗೆ ಆಗತದ?"

"ಅಪ್ಪ ನೀ ದುಡಿಯೂದು ಬೇಡ. ನಾ ನಿನಗ ರೂಪಾಯಿ ಕಳಸತೇನೆ... ಇನ್ನ ಮೂರೇ ವರುಷ ತಡೆ. ಆ ಮೇಲೆ ನನ್ನ ಮನಿಯೊಳಗ ಇದ್ದೀ ಅಂತೆ!"

"ರೂಪಾಯಿ!" ರಾಜಪ್ಪನವರು ಉದ್ಗಾರ ತೆಗೆದರು. ಒಂದ–ಎರಡು–ಅಲ್ಲಾ ಸಾವಿರಾರು ರೂಪಾಯಿಗಳ ಝಣತ್ಕಾರವಾಯಿತು. "ಚಂದೂ ನಾ ತಗೊಂಡು ಏನು ಮಾಡಲಿ? ನನಗ ರೂಪಾಯಿ ಬೇಕಾಗಿಲ್ಲ....ಆದರs...?"

ಗೋಪಾಲಯ್ಯ ಮೋಟಾರಿನಲ್ಲಿ ಹೊರಟ ದೃಶ್ಯ ನೆನಪಾಯಿತು. ರಾಜಪ್ಪನವರಿಗೆ. "ಚಂದೂ, ಜೀವನದಾಗ ಪ್ರೀತಿ ಮುಖ್ಯ. ನನಗ ನೀ ಬೇಕಪ್ಪಾ ನೀನು" ನೀನು ಎಂಬ ಶಬ್ದವನ್ನು ಒತ್ತಿಕೊಟ್ಟೇ ಹೇಳಿದರು ರಾಜಪ್ಪನವರು. "ಚಂದೂ, ನಮ್ಮ ಮನೆಗೆ ಒಬ್ಬ ಸೊಸೆ ಬೇಡವೇನೋ? ಮನೆಯೊಳಗೆ ಮೊಮ್ಮಕ್ಕಳ ಚಿನ್ನಾಟ ಬೇಡವೇನೋ?"

"ನೀ ಹೇಳೂದು ತಿಳಿಯಿತು. ಅಪ್ಪಾ...ಇಷ್ಟು ವರುಷ ನೀ ಏನೇನೂ ಅಂದಿಲ್ಲ. ಇನ್ನ ಎರಡೇ ವರುಷ ತಡಿ. ಎರಡು ವರುಷ ನನಗ ಕೆಲಸ ಅದೆ.. ಆಮ್ಯಾಲೆ...?"

ರಾಜಪ್ಪನವರ ಮನಃಸ್ಥಿತಿಯನ್ನು ಕಂಡು ಚಂದೂ ಮೊದಲು ಮೂರು ವರುಷ ಅಂದವನು ಈಗ ಎರಡೇ ವರುಷ ಅಂದನು.

"ಅಯ್ಯೋ! ಶಿವಾ ಶಿವಾ!" ರಾಜಪ್ಪನವರು ಉಸಿರ್ಗರೆದರು. "ನೀ ಅದರ ಕಾಳಜೀ ಬಿಟ್ಟುಬಿಡು. ನಾ ಎಲ್ಲಾ ಹೇಳತೇನೆ. ನಿನ್ನ ರಾಜೀನಾಮೆ ಕೆಲಸ ಮಾಡಿಕೊಡತೇನೆ..."

"ಅದಲ್ಲ ಅಪ್ಪಾ...ನಾ ಹೇಳೋದು. ಆದರs?" ಚಂದೂ ಈಗ ಸ್ಪಷ್ಟವಾಗಿ ಮಾತನಾಡಲು ಧೈರ್ಯ ಮಾಡಿದ. "ನನಗೆ ಪರದೇಶಕ್ಕ ಹೋಗಿ ಬರಬೇಕಾಗೇದ ಮುಂಬೈಯೊಳಗ ಪರೀಕ್ಷೆಗೆ ಕೂತು ಬಂದೇ ಅಮೇರಿಕಾಕ್ಕೆ ಹೋಗಿ ಎರಡು ವರುಷದ ಕೆಲಸ ಮಾಡಿ ಬರತೇನೆ. ನನಗ ಮಾನಸಿಕ ರೋಗದ್ದು ಸ್ಪೆಶಲಾಯಜೇಶನ್ ಮಾಡಕೋಬೇಕಾಗೇದ..."

ಚಂದೂ ಕೆಳಮೊಗಮಾಡಿಕೊಂಡೇ ಮಾತನಾಡಿದ. ಅವನ ಸಂಗಡಿಗರು ಅನೇಕರು ವಿದೇಶ ಪ್ರವಾಸ ಕೈಕೊಂಡಿದ್ದರು. ಅದ್ದರಿಂದ ತಾನೇಕೆ ಮಾಡಬಾರದು ಎಂಬುದೇ ಅವನಿಗೆ ಯೋಜನೆ. ಚಂದೂ ಮುಖವೆತ್ತಿದಾಗ ರಾಜಪ್ಪನವರು ಬಿಮ್ಮನೇ ಮುಖ ಬಿಗಿದುಕೊಂಡು ಕುಳಿತುಬಿಟ್ಟಿದ್ದರು. ಅವರ ಉತ್ಸಾಹದ, ಕಳಸ ಕಳಚಿ ಬಿದ್ದಿತ್ತು. ಹಾಸುಗೆಯ ಮೇಲೆಯೇ ಎಚ್ಚರದಪ್ಪಿ ಎಲ್ಲಿ ಬೀಳುವರೊ ಎಂಬಂತೆ ಅವರ ಮುಖಚರ್ಯೆ ಇದ್ದಿತು.

"ನಾಳೆ ಹೋಗತೀರೇನು ಹೆಣ್ಣು ನೋಡಾಕ?"

ಪಾರ್ವತೆವ್ವ ಒಳಗಿನ ಕೆಲಸ ಮುಗಿಸಿ ಹೊರಗೆ ಬರುತ್ತಲೇ ನುಡಿದಳು. ಅವಳ ಮಾತುಗಳೇ ಚಂದೂನನ್ನು ಪಾರು ಮಾಡಿದವು. "ಚಂದೂಗ ಒಂದು ಹೆಣ್ಣು ತಂದು ಮಾಡಿಬಿಟ್ಟರ ನನ್ನ ಕೆಲಸ ಮುಗಧಂತೆ ಅತು" ಎಂದಳು ಮುಗುಳು ನಗೆ ನಗುತ್ತ. ಹೆಣ್ಣಿನ ಮುಗ್ಧ ಹೃದಯದಿಂದ ಆ ಮಾತುಗಳು ಬಂದಿದ್ದವು.

"ಯಕ್ಕಾ" ಪಾರ್ವತೆವ್ವನನ್ನು ಹೀಗೆ ಕರೆಯುವುದು ಚಂದೂಗೆ ರೂಢಿಯಾಗಿತ್ತು. "ಬರೇ ಹೆಣ್ಣ ತಂದರs ಹೇಗೆ? ಮುಂದೆ ಅವಳನ್ನ ನೋಡಕೋ—ಬೇಕಲ್ಲಾ? ಅದನ್ನ ಯಾರ ಮಾಡವರು ಯಕ್ಕಾ?" ಚಂದೂ ಪಾರ್ವತೆವ್ವನನ್ನು ಕೇಳಿದ.

"ಚಂದೂ ನೀ ಇನ್ನೂ ಪಾಪಾ ಅಲ್ಲ" ಪಾರ್ವತೆವ್ವ ನಕ್ಕು ನುಡಿದಳು. "ನಿನಗ ಇನ್ನ ಪಾಪಾ ಆಗೂ ದಿವಸ ಬಂದವು. ನಿನ್ನ ಹೆಂಡತಿನ್ನ ನೀ ನೋಡಕೋತೀದಿ!"

ಗೊಂಬೆಯಂತೆ ಐದು ನಿಮಿಷ ಕುಳಿತ ರಾಜಪ್ಪನವರಿಗೆ ನಿನ್ನ ಹೆಂಡತಿಯೆಂಬ ಮಾತು ಕೇಳಿ ಬಂದವು. ಅವರಿಗೆ ಕೂಡಲೇ ಒಂದು ಅಪೂರ್ವ ಯೋಜನೆ ಮಿಂಚಿತು. "ಚಂದೂ" ಎಂದು ಪ್ರೀತಿಯಿಂದ ಕೂಗಿದರು. "ಹೇಗೂ ಎರಡು ಮೂರು ದಿನಾ ಇದ್ದೀದಿ. ನಿನ್ನ ಹೆಂಡತಿ ಬೇಗ ಮನೆಗೆ ಬರಬೇಕು ನೋಡು..."

ಪಾರ್ವತೆವ್ವನ ಕಡೆಗೆ ಮುಖ ತಿರುವಿ ರಾಜಪ್ಪನವರು ಹೇಳಿದರು. "ನಾಳೆ ಹೋಗೋದು ಮಾಡೇವಿ ಈಗಾಗಲೇ"

ಚಂದೂ ಕೂಡಲೇ ಒಪ್ಪಿಗೆ ಕೊಟ್ಟ. ಕೆಲವು ನಿಮಿಷಗಳ ಹಿಂದೆ ಅವನು ತಂದೆಗೆ ಅಸಮಾಧಾನ ಮಾಡಿದ್ದ. ಮತ್ತೆ ಅವರ ವಿರುದ್ಧ ಮಾತನಾಡಲು ಚಂದೂಗೆ ಮನಸ್ಸಾಗಲಿಲ್ಲ.

ರಾಜಪ್ಪನವರ ಮನಸ್ಸು ಗೆಲವಿನ ಕುದುರೆಯ ಸವಾರಿ ಮಾಡಿ ಮುಂದೋಡಿತು.

× × ×

ಸಾಂಪ್ರದಾಯಿಕವಾಗಿ ಹೆಣ್ಣನ್ನು ನೋಡುವುದಾಯಿತು ಬಾಗೇವಾಡಿಯಲ್ಲಿ. ಲಲಿತಾ ಎಂಬ ಲಲಿತವಾದ ಹೆಸರು ಆ ಹುಡಿಗೆಯದು. ಒಬ್ಬಳೇ ಒಬ್ಬ ಮಗಳು. ಎಸ್. ಎಸ್. ಎಲ್. ಸಿ. ವರೆಗೆ ಅಭ್ಯಾಸ ಮಾಡಿದ್ದಳು.

"ಲಲಿತಾಂಬಾ ನಮ್ಮ ಚಂದೂಗೆ ಒಳ್ಳೇ ಹೆಣ್ಣು" ಪಾರ್ವತೆವ್ವ ಉದ್ಗಾರ ತೆಗೆದಳು.

"ಸಲಕ್ಷಣವಾಗಿದ್ದಾಳೆ" ಎಂದರು ರಾಜಪ್ಪನವರು.

ವರನ ಕಡೆಯವರೇ ಅವಳನ್ನು ಇಷ್ಟು ವರ್ಣಿಸಿದ ಮೇಲೆ ಲಲಿತಾಂಬೆಯ ತಂದೆ ತಾಯಿ ಅವಳನ್ನು ಎಷ್ಟು ಬಣ್ಣಿಸಲಿಕ್ಕಿಲ್ಲ!

ಚಂದೂ ನೋಡಿದ್ದೇ-ಸಾಂಪ್ರದಾಯಿಕವಾಗಿ—ಒಂದೇ ಒಂದು ಹೆಣ್ಣು. ರಾಜಪ್ಪ ಮತ್ತು ಪಾರ್ವತೆವ್ವ ಅವರು ಅವಳನ್ನು ಬಾಯಿ ತುಂಬಾ ಹೊಗಳುವುದನ್ನು ಕೇಳಿದ್ದ. ನೋಡಿದ ಕೂಡಲೇ ಒಪ್ಪಿಕೊಳ್ಳುವಂತೆ ಲಲಿತಾಂಬಳೂ ಇದ್ದಳೆನ್ನಿ. ಚಂದೂ ಲಲಿತಾಂಬಳನ್ನು ಮದುವೆಯಾಗುವುದಕ್ಕೆ ಅನುಮತಿ ಕೊಟ್ಟನು.

ಮಧ್ಯಸ್ಥನಾಗಿ ರಾಯಭಾರವನ್ನು ವಹಿಸಿದ ಹಿರೇಮಠರ ಸಂಧಾನ ತೀವ್ರವೇ ಫಲಬಿಟ್ಟಿತು. ಮದುವೆಯ ಮಾತುಕತೆಗಳೂ ನಡೆಯಬೇಕಾದವು.

"ಅಲ್ರೀ, ಅಯ್ಯನವರೇ, ಹುಡುಗನಲ್ಲಿ ಏನೂ ದೋಷವಿಲ್ಲದೇ ಹ್ಯಾಗೆ?" ಹುಡಿಗೆಯ ತಂದೆ ಪಾಟೀಲರು ಕೇಳಿದರು. ಚಂದೂ ಕೂಡಲೇ ಒಪ್ಪಿಗೆ ಕೊಟ್ಟಿದ್ದು ಸಂಶಯಕ್ಕೆ ಕಾರಣವಾಗಿತ್ತು.




"ಕಾರಕೂನ ಅನ್ನೂ ಹೆಸರ ಮಾತ್ರ ಹೋಗಿಲ್ಲ."

"ಗೌಡರೇ, ನಾ ಬಂದೇನೆ ಅಂದ ಮೇಲೆ ನೀವು ಏನೂ ಸಂಶಯ ಹಿಡಿಬೇಡಿ. ಅಂಥಾ ಇಂಥಾ ಮನೆತನ ಇದ್ದರೆ ನಾ ಬಾಯನೇ ಹಾಕೂದಿಲ್ಲ"

"ಹಾಗಲ್ಲ ಅಯ್ಯನವರೇ, ಹುಡುಗ ಡಾಕ್ಟರ! ಮುಂಬೈಯಾಗ ಯಾವುದಾದರೂ ಹುಡುಗಿನ್ನ ಪ್ರೀತಿ ಮಾಡಿ...ಮತ್ತ...? "

"ಛೇ...ಛೇ... ಅಂಥಾ ಭಾನಗಡೀ ಏನೇನೂ ಇಲ್ಲ"

"ಮತ್ತ.. ಆ ಹುಡುಗನ ಅಪ್ಪಗ ಕಾರಕೂನ ಕಾರಕೂನ ಅಂತಾರಲ್ಲ? ಆಸ್ತಿ ಏನೂ ಇಲ್ಲೇನು? "

ಹಿರೇಮಠರು ನಕ್ಕರು. ತರುವಾಯ ಹೇಳಿದರು. "ರಾಜಪ್ಪನವರು ಮೊದಲ ಕಾರಕೂನ ಇದ್ದರು. ಆ ಮೇಲೆ ತಮ್ಮ ಸ್ವಂತ ಸ್ಟೇಶನರಿಯ ಅಂಗಡಿ ಆರಂಭ ಮಾಡಿದರು. ಗೌಡರ ಎಲ್ಲಾ ನಸೀಬ ನೋಡ್ರಿ. ಅವರ ಅಂಗಡಿ ಸುರು ಆಗಿ ಎರಡು ವರ್ಷ ಆಗಿತ್ತೋ ಇಲ್ಲೋ ಯುದ್ಧ ಸುರು ಆಗಬೇಕೆ? ಧಾರಣಿ ಏರಿದವು!! ರಾಜಪ್ಪನವರ ಮನಿಗೆ ಲಕ್ಷ್ಮೀ ಬಂದು ಬಿಟ್ಟಳು. ಗೌಡರ ರಾಜಪ್ಪನವರು ಸಾವಕಾರ ಆದರೂ ಕಾರಕೂನ ಅನ್ನೂ ಹೆಸರು ಮಾತ್ರ ಹೋಗಿಲ್ಲ ನೋಡ್ರಿ." ಹಿರೇಮಠರು ಮತ್ತೆ ನಕ್ಕರು.

ಪಾಟೀಲಗೌಡರು ಮುಂದೆ ಯಾವ ಪ್ರಶ್ನೆಯನ್ನು ಎತ್ತಲಿಲ್ಲ. ಹಿರೇಮಠ ಅವರಲ್ಲಿ ಸಂಪೂರ್ಣ ವಿಶ್ವಾಸವಿಟ್ಟು ಮಗಳ ಮದುವೆಯ ಮಂಗಲ ಕಾರ್ಯಕ್ಕೆ ಒಪ್ಪಿಗೆ ಕೊಟ್ಟರು.

ಶುಭಸ್ಯ ಶೀಘ್ರಂ ಅನ್ನುತ್ತಾರೆ. ಅಕ್ಷರಶಃ ಹೀಗೆಯೇ ಆಯಿತು. ಚಂದೂ ಮತ್ತು ಲಲಿತಾಂಬಾ ಅವರ ಮದುವೆ !!

× × ×

ಮದುವೆಯ ಗಡಿಬಿಡಿಯೆಲ್ಲ ಮುಗಿದುಹೋಗಿತ್ತು. ರಾಜಪ್ಪನವರು ಹಾಯಾಗಿ ಪಲ್ಲಂಗದ ಮೇಲೆ ಅಡ್ಡಾಗಿದ್ದರು. ಕಿಟಕಿಯ ಹೊರಗೆ ನೋಡಿದಾಗ ನೀಲಿಯ ನಿರಭ್ರ ಆಕಾಶವು ಅವರ ದೃಷ್ಟಿಗೆ ಬಿತ್ತು. ಸ್ವಚ್ಛವಾದ ಸೂರ್ಯನ ಬೆಳಕು ಜಗವನ್ನು ಬೆಳಗಿತ್ತು. ಅದನ್ನು ನೋಡಿದಾಗ ರಾಜಪ್ಪನವರಿಗೂ ಎಲ್ಲಿಲ್ಲದ ಸಂತೋಷ!!

ರಾಜಪ್ಪನವರ ಮನೆಗೆ ಅವರ ಸೊಸೆ ಬೇಗ ಬರುವವಳಿದ್ದಳು. ಸುಮಾರು ಇಪ್ಪತ್ನಾಲ್ಕು ವರುಷ ಆ ಮನೆ ಬರಿದಾಗಿಯೇ ಇದ್ದಿತು. ಗೃಹಿಣಿ ಎಂಬವಳು ಬಂದು ಆ ಮನೆಯ ಹೊಸಿತಲಕ್ಕೆ ಕುಂಕುಮ ಹಚ್ಚಿದ್ದಿಲ್ಲ. ಆ ಅಪಾರವಾದ ಕೊರತೆಯನ್ನು ತುಂಬಿಕೊಂಡು ಪವಿತ್ರ ಗಂಗೆಯಂತೆ ಅವಳು ಹರಿದು ಬರುವವಳಿದ್ದಳು. 'ತನ್ನ ಮಗ, ತನ್ನ ಸೊಸೆ !!' ಈ ಶಬ್ದಗಳು ರಾಜಪ್ಪನವರ ಎದುರು ಅಭೂತಪೂರ್ವವಾದ ಉತ್ಸವದ ನರ್ತನವನ್ನು ಮಾಡಿದವು.

ಒಂದು ರೀತಿಯಿಂದ ಸಂತೋಷವಾದರೂ, ಇನ್ನೊಂದು ರೀತಿಯಿಂದ ರಾಜಪ್ಪನವರಿಗೆ ಎದೆಗುದಿ ಇದ್ದೇ ಇದ್ದಿತು— ಚಂದೂ ಎಲ್ಲಿ ಪರದೇಶದ ಪ್ರವಾಸ ಕೈಗೊಳ್ಳುವನೋ ಎಂದು. ಅವನು ಅಂಥ ವಿಚಾರ ಮಾಡಬಾರದೆಂದೇ ಅವರು ಲಲಿತಾಂಬಳ ಮೋಹದ ಬಲೆಯನ್ನು ಬೀಸಿದ್ದರು. ಅದರ ಜೊತೆಗೆ ಇನ್ನೊಂದು ವಿಚಾರ ಹೇಳಿದರೆ, ಚಂದೂ ಊರಲ್ಲೇ ಉಳಿಯುವನೆಂದು ರಾಜಪ್ಪನವರು ತರ್ಕಮಾಡಿದರು.

"ಅಂದೂ ತಿರುಗಿ ಬರತಾನೆ" ಎಂದರು. ರಾಜಪ್ಪನವರು ಅಲ್ಲಿಯೇ ಓಡಾಡುತ್ತಿದ್ದ ಚಂದೂನನ್ನು ಕರೆದು.

"ನನಗೇನೂ ಪತ್ರ ಬಂದಿಲ್ಲ" ಆಶ್ಚರ್ಯದಿಂದ ಚಂದೂ ನುಡಿದ.

"ಅವನೇನು ಆರು ತಿಂಗಳಿಗೊಂದು ಪತ್ರ ಬರೆಯುವವ! ಇದು ನಾನು ಅದನಿಗೆ ಬರೆದಿರುವೆ. ಮತ್ತೆ ಅವನು ಬಂದೇ ಬಿಡತಾನೆ."

"ಮತ್ತ ನಮ್ಮ ಪತ್ರ ಅಂದರೆ ಹಾಗೇ ಅದೆ. ಅಂದೂ ಬಂದೇ ಬಿಡತಾನೆ" ಪೂಜಾರಿ ರಾಜಪ್ಪನವರ ಮಾತಿಗೆ ಧ್ವನಿಗೂಡಿಸಿದ.

ಅಂದೂ ಅಂದರೆ ಅನ್ನದಾನಿ ಎಂದು ಅವನ




ಅಖಿಲ ಕರ್ನಾಟಕ ಈ ರೈಲು ರಸ್ತೆ
ಧರಣಿ ಮಂಡಳ ಮಧ್ಯದಲಿ ಅವ್ಯವಸ್ಥೆ
ಮೂರು ತಾಸಿಗೆ ಹತ್ತು ಮೈಲು ಓಡಾದಿ
ಕಳಮಳಿಸುತಿದೆ ನಮ್ಮ ಜೀವನದ ನಾಡಿ

—ದಿನಕರ ದೇಸಾಯಿ

ಹೆಸರು. ಅವನು ಬಿ. ಇ. ಪರೀಕ್ಷೆ ಪಾಸಾಗಿ ಹೆಚ್ಚಿನ ಅಭ್ಯಾಸಕ್ಕಾಗಿ ಬರ್ಲಿನಕ್ಕೆ ಹೋದನು. ಹಿರಿಯ ಮಗ ವಿದೇಶಕ್ಕೆ ಹೊರಟಾಗ, ಸಂಭ್ರಮದಿಂದ ರಾಜಪ್ಪನವರು ಬೀಳ್ಕೊಟ್ಟರು. ಅವನಿಗೆ ಬೇಕಾಗುವ ಸಾವಿರಾರು ರೂಪಾಯಿಗಳ ಸಹಾಯವನ್ನು ಮಾಡಿದರು. ಆದರೆ ಅಂದೂನ ಮದುವೆ ನೋಡುವುದು ರಾಜಪ್ಪನವರಿಗೆ ಸಾಧ್ಯವಾಗಲಿಲ್ಲ. ಅವನ ಮದುವೆ ಬರ್ಲಿನದಲ್ಲಿಯೇ ಆಯಿತು.

"ಇಂದೂಳದು ಏನಾದರೂ ನಿನಗೆ ಕಾಗದ ಬಂದಿದೆಯೇನು ? " ಚಂದೂ ಕೇಳಿದ.

"ಛೇ !... ಅವಳು ಯಾವಾಗ ಬರತಾಳೋ ಬರಲಿ..." ಮೈಗೆ ಅಂಟಿಕೊಂಡ ಧೂಳವನ್ನು ಝಾಡಿಸುವಂತೆ ರಾಜಪ್ಪನವರು ಮಾತು ಹಾರಿಸಿಕೊಂಡರು. ತರುವಾಯ ವಾತ್ಸಲ್ಯದಿಂದ ಅಂದರು- "ಅವಳೂ ಮಗಳೇ ! ಅಪ್ಪನ ನೆನಪು ಯಾವಾಗ ಆಗುತ್ತದೋ ಆಗಲಿ ! " ಎಂದು ಮೃದುಮಾತುಗಳನ್ನಾಡಿದರು.

ಇಂದುಮತಿ ರಾಜಪ್ಪನವರ ಮಗಳು. ಅವಳು ಭಾಂಡಾರಿಗ ಪರೀಕ್ಷೆಯಲ್ಲಿ ತೇರ್ಗಡೆಹೊಂದಿ, ಸರಕಾರಿ ಸ್ಕಾಲರಶಿಪ್ ಪಡೆದು ಕ್ಯಾನಡಾಕ್ಕೆ ಹೋದಳು. ಅವಳು ಕ್ಯಾನಡಾದಲ್ಲಿಯೇ ಇದ್ದು ಎರಡು ವರುಷವಾಗಿತ್ತು. ಇಂದು ಮದುವೆ ಮಾಡಿಕೊಂಡು ತಮ್ಮ ಊರಲ್ಲಿ ಅಥವಾ ಊರ ಸಮೀಪದಲ್ಲಿ ಇದ್ದರೆ ಪಟ್ಟಗೆಂದು ರಾಜಪ್ಪನವರು ಯೋಚಿಸಿದ್ದರು. ಅವರ ಯಾವ ಯೋಜನೆಯೂ ಅದರಂತೆ ಆಗಿರಲಿಲ್ಲ. ಅದು ಆದರೂ ಏಕಾಗಬೇಕು ?

ಇಂದೂಳ ಸುದ್ದಿ ಏನೋ ಇರಲಿ ಅಂದೂ ತಿರುಗಿ ಬರತಾನೆ ಎಂಬುದು ಚಂದೂಗೆ ಅನುಕೂಲವಾಗಿ ಕಂಡಿತು. ಚಂದೂನ ಅಣ್ಣ—ತಂಗಿಯರು ಪರದೇಶಕ್ಕೆ ಹೋಗಿದ್ದರು. ಅವನ ಮಿತ್ರರೂ ಕೆಲವರು

ಹೋಗಿದ್ದರು. ಅದ್ದರಿಂದ ಚಂದೂ ಸಹ ಅಮೇರಿಕೆಗೆ ಹೋಗುವ ಸಂಪೂರ್ಣ ಸಿದ್ಧತೆ ಮಾಡಿಕೊಳ್ಳುತ್ತಿದ್ದನು. ಡೆಟ್ರಾಯಿಟ್ ದವಾಖಾನೆಯಲ್ಲಿ ಅವನಿಗೆ ಡಾಕ್ಟರನ ಕೆಲಸವೂ ಸಿಕ್ಕಿತ್ತು. ಆ ಸುದ್ದಿ ತಂದೆಯ ಮುಂದೆ ಅವನು ಹೇಳಿರಲಿಲ್ಲ. ಅವರ ಮನಸ್ಸು ಅಸ್ತವ್ಯಸ್ತವಾಗುತ್ತದೆ ಅದರಿಂದ ಎಂಬುದು ಅವನಿಗೆ ಗೊತ್ತಿತ್ತು.

"ಚಂದೂ ಇನ್ನು ಭಾರತೀಯ ಡಾಕ್ಟರನ್ನ ಪರದೇಶಕ್ಕೆ ಕಳಿಸಬಾರದೂ ಅಂತ ಸರಕಾರದವರು ಮಾಡಿದ್ದಾರಂತಲ್ಲ ? " ರಾಜಪ್ಪನವರು ಚಂದೂಗೆ ಕೇಳಿದರು.

"ನನಗೇನು ಗೊತ್ತು ಅಪ್ಪಾ. ಇದ್ದರೂ ಇರಬಹುದು."

"ಒಂದು ರೀತಿಯಿಂದ ಒಳ್ಳೆಯದೇ ಅತು ನೋಡು, ಚಂದೂ..." ರಾಜಪ್ಪನವರಿಗೆ ಅದೇನೋ ಧೈರ್ಯ—ತಮ್ಮ ಮಗ ಇನ್ನ ವಿದೇಶಕ್ಕ ಹೋಗೂದಿಲ್ಲ ಎನ್ನುವುದು. "ನಮ್ಮ ಡಾಕ್ಟರು ಇಲ್ಲೇ ದೇಶಸೇವಾ ಮಾಡಬೇಕು. ನೋಡು. ಸರಕಾರದವರು ಪಾಡು ಮಾಡಿದರು. ಆ್ಞ ?"

ಚಂದೂ ಮೌನವಾಗಿದ್ದ!!

"ಚಂದೂ ನಿಮ್ಮ ಅವ್ವ ಹೇಳಿದ ಹಾಗೆ ನಾ ಎಲ್ಲಾ ಮಾಡೇನಿ. ನನ್ನ ಮಕ್ಕಳು ಶ್ಯಾಣಾ ಆಗಬೇಕು ಅಂತಿದ್ದಳು. ಅದೇ ಅವಳ ಇಚ್ಛೆಯಿತ್ತು. ಚಂದೂ."

ರಾಜಪ್ಪನವರು ತಮ್ಮ ಹಿಂದಿನ ದಿನಗಳನ್ನು ನೆನೆದರು. ಅವರ ಧರ್ಮಪತ್ನಿ ಒಂಟಿ ಸೀರೆಯ ಮೇಲೆ ನೂರೆಂಟು ದಿನ ಕಳೆಯುತ್ತಿದ್ದಳು. ಬಡತನ ಅವರ ಬಾಳಿಗೆ ಅಂಟಿಕೊಂಡ ಗೆದ್ದಲಿಯಾಗಿತ್ತು. ಬಡತನದ ಬೇಗೆಯಲ್ಲಿ ಬೇಯುತ್ತಿದ್ದ ಪುಟ್ಟ ಮಕ್ಕಳು ಅಂದು ಇಂದು ಚಿಂದು ಅವರನ್ನು ನೋಡಿ ರಾಜಪ್ಪನವರ ಧರ್ಮ ಪತ್ನಿ ಉಸಿರ್ಗರೆದಿದ್ದಳು— "ನನ್ನ ಮಕ್ಕಳಾದರೂ ಮುಂದೆ ಬರಲಿ" ಎಂದು.

ತಾಯಿಯ ಇಚ್ಛೆಯನ್ನು ಪೂರೈಸಿದರು ರಾಜಪ್ಪನವರು. ತಮ್ಮ ವ್ಯವಹಾರದ ಲಾಭವನ್ನೆಲ್ಲ ಮಕ್ಕಳ ಶಿಕ್ಷಣಕ್ಕಾಗಿಯೇ ವ್ಯಯ ಮಾಡಿದರು. ಅಂತೆಯೇ ರಾಜಪ್ಪನವರ ಎಲ್ಲ ಮಕ್ಕಳೂ ಶಿಕ್ಷಣದಲ್ಲಿ ಪ್ರಗತಿ ಪಡೆದರು.

"ಚಂದೂ...ಹೂಂ...ಹೂಂ....ಇನ್ನ ನಿನಗ ಚಂದ್ರಮೌಳಿ ಅಂತ ಕರೀತೇನೆ." ಪಾರ್ವತೆವ್ವ ಸುಮ್ಮನೇ ಕುಳಿತ ಚುದೂನನ್ನು ನೋಡಿ ಅಂದಳು "ಚಂದ್ರಮೌಳಿ ಇನ್ನ ನೀ ದೊಡ್ಡ ಅದೆ...ನನ್ನ ಕೆಲಸ ಮುಗಿಯಿತು ..."

"ಯುಕ್ಕಾ ಹಾಗೆನಬೇಡ,. ನೀ ನಮ್ಮನ್ನ ನೋಡಿದ್ದಿಲ್ಲಾ ಅಂದರೆ ನಾವು ಯಾವ ಗಿಡದ ತೊಪ್ಪಲು?" ಚುದೂ ಭಾವಪೂರಿತವಾಗಿಯೇ ನುಡಿದ.

ಚುದೂ ಅಮೇರಿಕೆಗೆ ಹೊರಡುವ ಮೊದಲೇ ಈ ಮಾತುಗಳು ಮನೆಯಲ್ಲಿ ನಡೆದವು. ಚಂದೂಗೆ ಏನು ಹೇಳಬೇಕೋ ತಿಳಿಯದಾಯಿತು. ಜೀವನದಲ್ಲಿ ಅಪೂರ್ವ ಪ್ರಸಂಗಗಳು ಸಿಗುವುದು ಕ್ವಚಿತ್ತ. ಅಂಥ ಶುಭಪ್ರಸಂಗ ಬಂದಾಗ, ಅದನ್ನು ಏಕೆ ಕಳೆದುಕೊಳ್ಳಬೇಕು? ಆದ್ದರಿಂದ ಚಂದೂ ತನ್ನ ಸುದ್ದಿಯನ್ನು ಗುಟ್ಟಾಗಿಯೇ ಇಟ್ಟ. ಮನೆಯಲ್ಲಿ ಯಾರೂ ಅರಿಯದಂತೆ ತನ್ನ ಸಿದ್ಧತೆಯನ್ನು ಮಾಡಿಕೊಂಡ.

ಚಂದೂ ಅಮೇರಿಕೆಗೆ ಪ್ರಯಾಣ ಮಾಡುವುದಕ್ಕೆ ಹತ್ತೇ ದಿನ ಉಳಿದಿತ್ತು. ಇನ್ನು ಮೌನವಾಗಿರುವುದು ಉಚಿತವಲ್ಲವೆಂದು ಚಂದೂ ವಿಚಾರಿಸಿದ. ಧೈರ್ಯ ಮಾಡಿಕೊಂಡು ತಂದೆಗೆ ತನ್ನ ಸುದ್ದಿಯನ್ನು ತಿಳಿಸಲು ಸಿದ್ಧನಾದ.



'ಶಿವ ಶಿವಾ' ಎಂದುದ್ಗರಿಸಿ ಕಣ್ಣು ಮುಚ್ಚಿದರು ರಾಜಪ್ಪನವರು.

"ಅಪ್ಪಾ, ಅಂದೂ ಬರತಾನೆ ಅಂದೆ. ಬಂದರೆ ನೆಟ್ಟಗೇ ಅತು" ಎಂದು ಚಂದೂ ಸಾವಧಾನವಾಗಿಯೇ ಮಾತನಾಡಿದ.

"ಯಾಕೆ?" ರಾಜಪ್ಪನವರು ಹೇಳಿದರು.

"ನಿನ್ನ ನೋಡಕೋತಾನೆ."

"ಶಿವಾ ಶಿವಾ! ಅವ ಬಂದರ ಎಲ್ಲೊ ಇಂಜಿನಿಯರ ಅದು ಆಫೀಸರ ಆಗಿ ಇರುವವ. ಅಲ್ಲಾ ಚಂದೂ ನೀನು ಮತ್ತು ಲಲಿತಾಂಬಾ ಅದ ಹಾಗೆ ಅವನದು ಹೇಗೆ ಆಗತದ? ಮತ್ತ ಅವ ಬಂದರೂ ಅವನ ಹೆಂಡತಿ ಬರತಾಳೋ ಇಲ್ಲವೋ?"

ಅಂದೂ ಪ್ರೀತಿಸಿದ್ದು, ಮದುವೆಯಾದದ್ದು ಒಬ್ಬ ಬ್ರಾಹ್ಮಣರ ಹುಡಗೆಯನ್ನು. ಆ ಮದುವೆಯಾಗಬಾರದೆಂದು ರಾಜಪ್ಪ ಶತಪ್ರಯತ್ನ ಮಾಡಿದ್ದರು. ರಾಜಪ್ಪ ಕಟ್ಟಾ ಧರ್ಮನಿಷ್ಠರಿದ್ದರು... ಆದರೆ? ಅಂದೂ ಮದುವೆಯಾದ ನಂತರ, ಅವರ ಮನೋಧರ್ಮದಲ್ಲಿಯೂ ಬದಲಾವಣೆ ಅಂಕುರಿಸಿರಿತು. ಬ್ರಾಹ್ಮಣನಾದ ಕಾರಕೂನ ಪೂಜಾರಿಗೆ ಅವರ ಮನೆಯಲ್ಲೇ ಆಶ್ರಯವಿತ್ತು. ಆದರೂ ಅಂದೂನ ಹೆಂಡತಿ ಅದನ್ನ ತಿಳಿದುಕೊಳ್ಳಬೇಕಲ್ಲ?

"ಅಪ್ಪಾ ಜಗತ್ತು ಈಗ ಬದಲಾಗೇದ..."

ಚಂದೂನವು ಬರಿ ಮಾತು ಆಗಿದ್ದವು. ರಾಜಪ್ಪನವರು ಮಾತ್ರ ತಮ್ಮ ಜೀವನದಲ್ಲಿ ಅದರ ಅನುಭವವನ್ನೇ ಪಡೆದಿದ್ದರು. ಬದಲಾದ ಜಗತ್ತಿಗೆ ಬೇಸತ್ತಿದ್ದರು. ಅಂತೆಯೇ ಚಂದೂನ ಬಗ್ಗೆ ನಿಶ್ಚಿತ ಮಾತು ಆಡುತ್ತಿದ್ದರು. "ಚಂದೂ ಅಂದೂ ಬರತಾನೆ ಆದರ ಮುಂದ ಏನು? ನೀ ಅಂತೂ ಇಲೇ ದವಾಖಾನೆ ತೆಗೆಯಬೇಕು. ಇನ್ನ ಹತ್ತ ದಿನಕ್ಕ ಪ್ರತಿಪದಾ...ಘಟಸ್ಥಾಪನಾ... ಅವತ್ತ ದವಾಖಾನೆ ಸ್ಥಾಪನಾ ಮಾಡಿ ಬಿಡೋಣ ಒಳ್ಳೇ ಮುಹೂರ್ತ. ನಾ ಅದರ ಸಲುವಾಗಿ ಹತ್ತು ಸಾವಿರ ರೂಪಾಯಿ ತೆಗೆಸಿ ಇಟ್ಟೇನೆ. ಅಲ್ಲದೆ ನಿನ್ನ ಮಾವನವರೂ ಒಳ್ಳೆಯವರು. ಅಗರ್ಭ ಶ್ರೀಮಂತರು ಅವರೂ ಸಹಾಯ ಮಾಡತೇನಿ ಅಂತ ಹೇಳ್ಯಾರೆ..."

"ಅಪ್ಪಾ, ದವಾಖಾನೆ...!" ಚಂದೂ ತಡವರಿಸಿದ.

ಆ ಮೇಲೆ ಹೇಳಿದ "ಘಟಸ್ಥಾಪನಾ ದಿವಸ ತೆಗೆಯೋಣ ಆದರ ಈ ವರುಷ ಬೇಡ. ಮುಂದಿನ ವರುಷ."

"ಅಂದರೆ? ಅಲ್ಲಿವರೆಗೂ ನೀ ನೌಕರಿ ಮಾಡೇತನೇನು?" ರಾಜಪ್ಪನವರು ಕೇಳಿದರು ಸಂಶಯದಿಂದ.

"ಇಲ್ಲ, ಅಮೇರಿಕಾಕ್ಕ ಹೋಗಿ ಬರತೇನೆ. ಇನ್ನ ಹತ್ತ ದಿನಕ್ಕ ನಾ ಹೊರಡಬೇಕು."

"ಶಿವ ಶಿವಾ!" ಎಂದು ಉದ್ಗರಿಸಿ ಕಣ್ಣು ಮುಚ್ಚಿದರು ರಾಜಪ್ಪನವರು "ಚಂದೂ ನೀ ಹೇಳೂದು ನಿಜವನೋ?" ರಾಜಪ್ಪನವರು ಜೀವ ಹೋಗೇವಂತೆಯೇ ಕೂಗಿಕೊಂಡರು.

ಅವರ ಧ್ವನಿಯನ್ನು ಕೇಳಿ ಚಂದೂ ಕಂಪಿಸಿದ. "ಅಪ್ಪಾ... ಒಂದ ವರುಷದಾಗ ತಿರುಗಿ ಬರತೇನೆ... ನನಗ ಮನೋರೋಗದ ಅಭ್ಯಾಸ ಮಾಡಬೇಕಾಗೇದ. ಸ್ಪೆಶಲಿಸ್ಟ ಅಗಬೇಕಾಗೇದ..."

"ಶಿವ ಶಿವಾ!... ಚಂದೂ ಮೊದಲ ನಿನ್ನ ಅಪ್ಪನ್ನ ಪರೀಕ್ಷಾ ಮಾಡು. ನಾನು ನಿನಗೆ ಮೊದಲನೇ ಪೇಶಂಟ"

ಟೇಬಲ್ ಮೇಲಿಟ್ಟ ಪೇಪರವೇಟನ್ನು ಥಟ್ಟನೆ ದರು. ತಲೆಯ ಮೇಲಿನ ರುಮಾಲನ್ನೇ ಕಿತ್ತೊಗೆದರು. ರಾಜಪ್ಪನವರ ರೀತಿಯನ್ನು ಕಂಡು ಚಂದೂ ಕಕ್ಕಾವಿಕ್ಕಿಯಾದ. ತನ್ನ ನಿರ್ಧಾರವನ್ನು ಬದಲಿಸಬೇಕೇನೊ ಎಂದೆನಿಸಿತು. ಆದರೆ ಅವನ ಸಿದ್ಧತೆ ಸಂಪೂರ್ಣವಾಗಿತ್ತು. ಕೈಮೀರಿ ಹೋದ ಮೇಲೆ ಮಾಡುವದಾದರೂ ಏನು?

ಟ್ರಿನ್! ಟ್ರಿನ್! ಟ್ರಿನ್!

ತಮ್ಮ ಅಸ್ತವ್ಯಸ್ತ ಮನಸ್ಸಿನಲ್ಲಿಯೂ 'ಶಿವಶಿವಾ' ಎಂದರು ರಾಜಪ್ಪನವರು.

ಟೆಲಿಫೋನ್ ಹಿರೇಮಠ ಅವರಿಂದ ಬಂದಿತ್ತು. ಬಾಗೇವಾಡಿಯಿಂದ ಪಾಟೀಲರು ಅದೇ ದಿನ ಬರುವ ಸುದ್ದಿಯನ್ನು ತಿಳಿಸಿದರು.

ಇನ್ನು ಹತ್ತು ದಿನ! ಅಂದೇ ಲಲಿತಾಂಬಾ ಮನೆಗೆ ಬರುವ ದಿನವಿತ್ತು! ರಾಜಪ್ಪನವರಿಗೆ ಕಸಿವಿಸಿಯಾಯಿತು.

ಪಾಟೀಲರ ಸವಾರಿ ಮಧ್ಯಾಹ್ನ ಬಂದಿತು. ಅವರು ನರಸಿಂಹನ ಉಗ್ರಾವತಾರದಲ್ಲಿಯೇ ಅಗಮಿಸಿದ್ದರು.

"ಮೋಸ! ಮೋಸ!" ಎಂದು ಒಳಗೆ ಕಾಲಿಡು ತ್ತಲೇ ನುಡಿದರು. "ನೀವು ಈ ಮಾತನ ಮೊದಲೇ ನಮಗ ಏಕೆ ಹೇಳಬಾರದಾಗಿತ್ತು ಕಾರಕೂನರೇ? ಈಗ ನನ ಮಗಳ ಗತಿ ಏನು? ಲಗ್ನ ಮಾಡಿ ಗಂಡನ್ನ ಪರದೇಶಕ್ಕ ಕಳಿಸಿಕೊಡೋದೇ! ಅಲ್ಲಿ ಅವ ಮತ್ತ ಯಾವಾದರೂ ಮಡ್ಡಮ್ಮನ್ನ ಲಗ್ನ ಆದರ ನಾವ ಏನ ಮಾಡಬೇಕು? ... ಖೊಟ್ಟಿ ನಶೀಬ ನಮ್ಮ ಮಗಳದು. ನಿಮ್ಮ ಮನೆತನ ಹೀಗೆ ಅದ ಅನ್ನುವುದು ನಮಗ ಮೊದಲ ಗೊತ್ತಾಗಲಿಲ್ಲ ಕಾರಕೂನರ..."

ಆ ಗೌಡಪಾಟೀಲರು ತಪ್ಪಿ ಸಹ ಸಾವಕಾರ ರಾಜಪ್ಪ ಎಂದು ಅನ್ನಲಿಲ್ಲ. ರಾಜಪ್ಪನವರನ್ನು ಛೇಡಿಸಬೇಕೆಂದೇ ಬೇಕೆಂತಲೇ ಕಾರಕೂನ ಎಂದು ಅನ್ನುತ್ತಿದ್ದರು.

ಗೌಡರ ಮಾತು ಕೇಳಿ "ಶಿವ ಶಿವಾ!" ಎಂದರು ರಾಜಪ್ಪನವರು.

"ಏನ ಶಿವ ಶಿವಾ ನೀವು, ಹೊರಗೊಂದು ಒಳ ಗೊಂದು... ನಮ್ಮ ಸ್ವಾಮಿಗೋಳು ಎಲ್ಲಾ ಹೇಳಿ ದರು. ಆಗ ನಿಮ್ಮ ಹೂರ್ಣ ಹೊರಬಿತ್ತು"

ಗೌಡರು ಇಂಥ ಮಾತು ಆಡಬಹುದೆಂದೇ ಹಿರೇ ಮಠರು ಅವರ ಕೂಡ ಆ ದಿನ ಬಂದಿರಲಿಲ್ಲ.

"ನಿಮ್ಮ ಮಗಳು ಅಲ್ಲೇ ಪರದೇಶದಾಗ ಯಾವ. ನೋ ಕ್ರಿಶ್ಚನ್ನನ್ನ ಲಗ್ನ ಆಗಿದ್ದಾಳಂತ... ನಿಮ್ಮ ಮಗ ಯಾವಳೊ ಬ್ರಾಹ್ಮಣ ಹುಡುಗಿನ್ನ ಲಗ್ನ ಆಗಿ ದ್ದಾನಂತ... ಛೀ...ಛೀ... ಜಾತಿ ಅನ್ನೋದು ಹೋಯಿತು. ಅಯ್ಯೋ ಒಬ್ಬಳೇ ಒಬ್ಬ ಮಗಳು ನನಗೆ. ಅವಳ ಗತಿ ಹೀಗೆ ಆಗಬೇಕೆ? ನೂರು ಸುಳ್ಳು ಹೇಳಿ ಒಂದು ಮಂಗಲ ಕಟ್ಟು ಅನ್ನುತ್ತಾರೆ...ನಮ್ಮ ಲಲಿತಾಂಬಳದು ಹಾಗೇ ಆಗಬೇಕೆ ನಿಮ್ಮಿಂದ?"

ಗೌಡರ ಮಾತು ಕೇಳಿ ಗೊಂಬೆಯಂತೆ ಕುಳಿತಿ ದ್ದರು ರಾಜಪ್ಪನವರು. ಪುಣ್ಯ! ಆಗ ಚಂದೂ ಹೊರಗೆ ಹೋಗಿದ್ದ ಎಂದು ಒಳ್ಳೇದೇ ಆಯಿತು.

"ಹಾಂ! ಆ ಪಾರ್ವತೆವ್ವ... ಅಯ್ಯೋ ಅವಳು ನಿಮ್ಮ ಹೆಂಡತಿ ಅಂತ ತಿಳಿದಿದ್ದೆ. ಅದೂ ಅಲ್ಲ ಅಂತ! ಅಯ್ಯೋ ಏನ ಮನೆತನ ?"

ಅಡುಗೆಯ ಮನೆಯಲ್ಲಿ ಬಿಕ್ಕಿಸಿ ಬಿಕ್ಕಿಸಿ ಅತ್ತ ಧ್ವನಿ ಕೇಳಿಸಿತು. ಗೌಡರಿಗೆ ಆ ಧ್ವನಿಯ ಕಡೆಗೆ ಲಕ್ಷ್ಯವೇ ಇರಲಿಲ್ಲ. ಅವರಿಗೇನು ಗೊತ್ತು ಪಾರ್ವತೆ ವ್ವನ ತ್ಯಾಗದ ಮಹಿಮೆ!!

ರಾಜಪ್ಪನವರ ಎಲ್ಲಾ ಮಕ್ಕಳ ಸಾಕುತಾಯಿ ಅವಳಾಗಿದ್ದಳು. ರಾಜಪ್ಪನವರ ಧರ್ಮಪತ್ನಿಯ ವಿಶೇಷ ಸ್ನೇಹಿತೆ ಅವಳು. ಸಾಯುವಾಗ ಮಕ್ಕಳ ರಕ್ಷಣೆ ಪಾರ್ವತೆವ್ವ ಮಾಡಬೇಕೆಂದು ವಚನವನ್ನು ತೆಗೆದು ಕೊಂಡಿದ್ದಳು. ಅದೆಲ್ಲಾ ಗೌಡರಿಗೆ ಏನು ಗೊತ್ತು? ಅವರು ತಮ್ಮ ಆವೇಶದಲ್ಲಿಯೇ ಮಾತನಾಡುತ್ತಿದ್ದರು.

"ಏ ಕಾರಕೂನ ಮಾತನಾಡ್ರಿ. ತಪ್ಪು ಮಾಡಿ ಬೆಪ್ಪನಂತೆ ಕೂತೀರಲ್ಲ..! ಅಲ್ಲವೇ?"

ಗೌಡರ ಗಡುಸಿನ ಧ್ವನಿ ಕೇಳಿ ತಾಳಿಕೊಳ್ಳುವುದು ಸಾಧ್ಯವಿರಲಿಲ್ಲ. ರಾಜಪ್ಪನವರು ಹೇಳಿದರು—"ನೀವು ಏನೇ ಅನ್ನರಿ. ನನ್ನ ಅಂದು, ಇಂದು, ಚಂದು ಕೆಟ್ಟ ಸ್ವಭಾವದ ಕೀಳು ಜನರಲ್ಲ..."

"ಹೂಂ! ಹೇಳ್ರಿ...ಹೇಳ್ರಿ...ಹಡೆದವರಿಗೆ ಹೆಗ್ಗ ಣಾನೂ ಮುದ್ದು..."

"ಹಾಂ! ಏನಂದ್ರೀ ಗೌಡರೇ?...ನಾವ ಅಂದರೆ ಏನ ಅಂತ ತಿಳಿದೀರಿ?...ಹೆಚ್ಚಿಗೆ ಮಾತನಾಡು ಕಾರಣ ಇಲ್ಲಾ...ನೀವು ಇಲ್ಲಿಂದ ಹೋಗಿಬಿಡಬೇಕು."

ಗೌಡರಷ್ಟೇ ನಿಷ್ಠುರವಾದರು ರಾಜಪ್ಪನವರು.

ಗೌಡರು ಹೋಗಿಯೇಬಿಟ್ಟರು!!

ಆ ದಿನ ರಾತ್ರಿ ಹಾಸುಗೆಯಲ್ಲಿ ಮಲಗಿದಾಗ ಏನೇ ಆದರೂ ರಾಜಪ್ಪನವರಿಗೆ ನಿದ್ದೆಯೇ ಬರಲಿಲ್ಲ. ಅವರ ತಲೆದಿಂಬು ತಲೆಗೆ ಇಂಬಾಗದೆ ತಲೆಶೂಲೆಯನ್ನೇ ತಂದಿತು. ಮಧ್ಯರಾತ್ರಿ ಆಗಿಹೋಯಿತು. ನಿದ್ದೆಯೇ ಇಲ್ಲ. ಗೌಡರ ಮಾತುಗಳು ಅವರನ್ನು ಚುಚ್ಚಿಯೇ ಚುಚ್ಚುತ್ತಿದ್ದವು.

ರಾಜಪ್ಪನವರು ನೇರವಾಗಿ ಚಂದೂ ಮಲಗಿದ ಕೋಣೆಗೆ ಹೋಗಿ ಅವನನ್ನು ಎಬ್ಬಿಸಿ ಕರೆದುಕೊಂಡು ಬಂದರು.

"ಏನಾಗಿದೆ ಅಪ್ಪಾ ನಿನಗೆ?" ಚಂದೂ ಕೇಳಿದ.

ಚಂದೂನನ್ನು ತಮ್ಮ ಹಾಸುಗೆಯಲ್ಲಿಯೇ ಕೂಡಿಸಿ ಕೊಂಡು, ಮಮತೆಯಿಂದ ಅವನ ತಲೆಯ ಮೇಲೆ ಕೈಯಾಡಿಸಿದರು. ರಾಜಪ್ಪನವರ ಕಣ್ಣುಗಳಲ್ಲಿ ನೀರು ತುಂಬಿಬಂದವು.

"ಏನಾಗಿದೆ ಅಪ್ಪ?" ಮತ್ತೆ ಚಂದೂ ಕೇಳಿದ.

"ಚಂದೂ ಅಮೇರಿಕೆಗೆ ಹೋಗಿ ಬಾಪ್ಪಾ...ಮೂರು ವರುಷ ಎಂದಿದ್ದೆ...ಈಗ ಒಂದೇ ವರುಷ ಎನ್ನುವೆ... ಇರಲಿ...ನಾನು ಹೇಗಾದರೂ ಜೀವ ಹಿಡಿದುಕೊಂಡು ಇರುವೆ...ಹೋಗಿ ಬಾಪ್ಪಾ...ಎಲ್ಲಾದರೂ ನನ್ನ ಮಗು ಸುಖವಾಗಿ ಬದುಕಿರಲಿ..." ಹೆಂಗರುಳಿನಿಂದ ಮಾತ ನಾಡಿದರು ರಾಜಪ್ಪನವರು. ಆ ಮಕ್ಕಳಿಗೆ ತಂದೆ ತಾಯಿ ಇಬ್ಬರೂ ಅವರೇ ಆಗಿದ್ದರು. "ಆದರೆ...ನನ್ನ ಒಂದು ಮಾತು ನೀ ನಡೆಸಿ ಕೊಡಬೇಕು ಚಂದೂ... ಲಲಿತಾಂಬಳನ್ನ ನಿನ್ನ ಕೂಡ ಕರಕೊಂಡು ಹೋಗು ಎಷ್ಟ ಖರ್ಚು ಬಂದರೂ ನಾ ಕೊಡತೇನೆ...ಹತ್ತು ಸಾವಿರ ರೂಪಾಯಿ ನಿನ್ನ ದವಾಖಾನೆಗೆ ತೆಗೆದಿಟ್ಟದ್ದು ನಿನಗೇ ಕೊಡತೇನೆ...ನಿನ್ನ ಅಪ್ಪ ಅವ್ವರ ಈ ಮಾತು ನಡೆಸಿಕೊಡು, ಚಂದೂ..."

ಅವನ ತಾಯಿಯೇ ಬದುಕಿಬಂದು ಮಾತನಾಡಿ ದಂತೆ ಅನಿಸಿತು ಚಂದೂನಿಗೆ. ಅಪ್ಪನ ತೊಡೆಯ ಮೇಲೆ ಒಮ್ಮೆಲೇ ಮುಖವನ್ನಿಟ್ಟು ಅತ್ತನು ಚಂದೂ. ತಂದೆ ತಾಯಂದಿರ ಅಪಾರ ತ್ಯಾಗವು ಅವನನ್ನು ಅಳು ವಂತೆ ಮಾಡಿತು.

ಮರುದಿನ ಬೆಳಗಿನಲ್ಲಿ ಎದ್ದು ನೋಡಿದಾಗಲೇ ರಾಜಪ್ಪನವರಿಗೆ ಗೊತ್ತಾಯಿತು, ಪಾರ್ವತೆವ್ವ ಅವರ ಮನೆಯನ್ನು ಬಿಟ್ಟು ಹೋಗಿದ್ದಾಳೆ ಎಂಬುವುದು!!

ಚಂದೂ ಮತ್ತು ಲಲಿತಾಂಬಾ ಅವರನ್ನು ಬೀಳ್ಕೊ ಡುವದಿನ ಮುಂಬೈಬಂದರಕ್ಕೆ ಮತ್ತೆ ಪಾರ್ವತೆವ್ವನನ್ನು ಕರೆಯಿಸಿಕೊಂಡಿದ್ದರು. ಪಾರ್ವತೆವ್ವ ಆ ದಿನ ಅತ್ತಷ್ಟು ಎಂದೂ ಅವಳ ಜನುಮದಲ್ಲಿ ಅತ್ತಿರಲಿಕ್ಕಿಲ್ಲ!!

ಲಲಿತಾಂಬಳೂ ಹೊರಟದ್ದರಿಂದ ಪ್ರತಿಪದೆಯ ದಿನ ಚಂದೂ ಭಾರತವನ್ನು ಬಿಡುವುದು ಶಕ್ಯವಾಗ ಲಿಲ್ಲ. ದಸರೆಯ ದಿನ ಸೀಮೋಲ್ಲಂಘನೆಯ ದಿನ— ಅವರು ಹೊರಡಬೇಕಾಯಿತು.

ಬಂದರದಿಂದ ಹಡಗವು ದೂರ ದೂರ ಸರಿಯಿತು. ಸಮುದ್ರದ ತೆರೆಗಳು ಅನಂತವಾಗಿ ಬಂದು ಅದನ್ನು ಮುತ್ತಿದವು. ರಾಜಪ್ಪನವರು ಕಲ್ಲುಗೊಂಬೆಯಂತೆ ಸ್ತಬ್ಧವಾಗಿ ನಿಂತು ಸಮುದ್ರದ ಕಡೆಗೆ ನೋಡಿಯೇ ನೋಡಿದರು. "ವಿಶಾಲ ಸಮುದ್ರ!! ಅನಂತ ಸಮುದ್ರ....!!" ರಾಜಪ್ಪನವರು ಉದ್ಗಾರ ತೆಗೆದರು. "ನಾನು ಮಾತ್ರ ಸ್ವಾರ್ಥಿ!!"

ರಾಜಪ್ಪನವರು ಮರಳಿ ತಮ್ಮ ಊರಿಗೆ ಪ್ರಯಾಣ ಬೆಳೆಸಿದರು. ಮತ್ತೆ ಅದೇ ಮನೆ! ಅದೇ ಪಲ್ಲಂಗ! ಅದೇ ಕಿಟಕಿ!

ಅಂದೂ ಪತ್ರ ಬರೆದಿದ್ದ—ಅಮೇರಿಕೆಯಲ್ಲಿ ತಾವಿಬ್ಬರೂ ಮೂರು ವರುಷ ಇದ್ದು ತಿರುಗಿ ಬರುವು ದಾಗಿ ತಿಳಿಸಿದ್ದ!!

ಕಿಟಕಿಯ ಆಚೆ ದೃಷ್ಟಿ ಚೆಲ್ಲಿ ರಾಜಪ್ಪನವರು ನೋಡಿದರು. ಕಪ್ಪು ಮೋಡಗಳು ಇನ್ನೂ ಮೇಲೇರಿ ಬರುತ್ತಲೇ ಇದ್ದವು. "ಅಂದು ಇಂದು ಚಂದು!!" ಎಂದು ಕೂಗಿದರು ರಾಜಪ್ಪನವರು ಏಕಾಕಿಯಾಗಿ!!

ಆ ದಿನ ಎಲ್ಲ ಪತ್ರಿಕೆಗಳಲ್ಲಿ ರಾಜಪ್ಪನವರ ಆಧು ನಿಕ ಆದರ್ಶ ಮನೆತನದ ಸುದ್ದಿ ಪ್ರಕಟವಾಗಿತ್ತು!! ಚಂದೂ ವಿದೇಶ ಪ್ರವಾಸ ಕೈಕೊಂಡ ಸುದ್ದಿ ಭಾವ ಚಿತ್ರ ಸಹಿತ ಪ್ರಸಿದ್ಧವಾಗಿತ್ತು.

ರಾಜಪ್ಪನವರನ್ನು ಅಭಿನಂದಿಸಲು ಎಷ್ಟು ಜನರ ಕಡೆಯಿಂದ ಟೆಲಿಫೋನ್ ಕರೆ! ಟ್ರಿಣ್! ಟ್ರಿಣ್! ಟ್ರಿಣ್!

ರಾಜಪ್ಪನವರು ಯಾರಿಗೂ ಉತ್ತರಿಸಲಿಲ್ಲ.

ಶಿವ ಶಿವಾ ಎನ್ನಲಿಲ್ಲ.

'ಅಂದು ಇಂದು ಚಂದು' ಎಂದಿಷ್ಟೇ ನುಡಿದರು.

# ನಾಳೆ ಅನ್ನದವರ ಮನೆ ಹಾಳು

**ನಾಳೆ** ಅಂದವನ ಮನೆ ಹಾಳು ಎಂದು ಹಿರಿಯರು ಹೇಳುವ ಮಾತು ನೀವೆಲ್ಲ ಬಲ್ಲಿರಷ್ಟೇ! ಬಹುಶಃ Never put off till tomorrow what yon can do today ' ಎಂದು ಇದೇ ಅಭಿಪ್ರಾಯವನ್ನು ಸಮರ್ಥಿಸುವ ಆಂಗ್ಲ ಭಾಷೆಯ ಮಾತಿನಿಂದ ಇದು ರೂಢಿಯಲ್ಲಿ ಬಂದಂತೆ ಕಾಣಿಸುತ್ತದೆ. ಆಂ. ಹೌದು. ಹಾಯಸ್ಕೂಲಿನಲ್ಲಿದ್ದಾಗ ನಮ್ಮ ಗುರುಗಳು ಪದೇ ಪದೇ ಇದನ್ನು ಹೇಳುತ್ತ ಬಂದಿದ್ದರು. ಆದರೆ ಅದು ಇಷ್ಟು ಬೇಗ ಮರೆತುಹೋಗಿದೆಯಲ್ಲ. ಆಂ. ಹೌದು. ವಯಸ್ಸಾದಂತೆ ಬುದ್ಧಿ ಬೆಳೆಯದಿದ್ದರೂ ಖಂಡಿತ ನನ್ನ ತಲೆ ಬೆಳೆದಿದೆ! ಬೆಳೆಯುತ್ತಲೇ ಇದೆ. ಇದು ನನ್ನ ಅನುಭವ. ಅದೇ ಕಾರಣವಿದ್ದಿರಬಹುದು. ಅಷ್ಟೊಂದು ತಲೆ ಹೇಗೆ ಬೆಳೆಯುತ್ತದೆ ಎನ್ನುವಿರೇನೊ! ಅದಕ್ಕೆ ಪುರಾವೆ ಬೇಕಿದ್ದರೆ ನೀವು ದೂರ ಹೋಗಬೇಕಿಲ್ಲ ತಿಂಗಳಿಗೊಮ್ಮೆ ನನ್ನ ಕೇಶರಾಶಿಯ ಪರಾಮರ್ಶೆ ಮಾಡುವ ನಮ್ಮೂರ ಆಯುಷ್ಕರ್ಮಶಾಲೆಯ ವಿಠ್ಠಲನನ್ನು ಕೇಳಬಹುದು. ಒಮ್ಮೆ ವಿಠ್ಠಲ ನನಗೆ ಪ್ರಶ್ನೆ ಮಾಡಿದ;

"ರಾಯರೇ, ನೀವು ತಿಂಗಳಿಗೊಮ್ಮೆ ನನ್ನ ಭೆಟ್ಟಿಗೆ ಬರುವಿರಿ. ವಾರಕ್ಕೊಮ್ಮೆ ಬಂದರೆ ನಿಮ್ಮ ತಲೆ ಇನ್ನೂ ಹುಲುಸಾಗಿ ಬೆಳೆಯುವದೆಂದು ತೋರಿಸಿ ಕೊಡಬಹುದು. ವಾರಕ್ಕೊಮ್ಮೆ, ಅದು ಕೆಲಸದಲ್ಲಿ



ಸಾಧ್ಯವಿಲ್ಲವೆಂದೆನಿಸಿದರೆ ಕನಿಷ್ಠ ಪಕ್ಷಕ್ಕೆ ಎರಡು ವಾರಕ್ಕೊಮ್ಮೆಯಾದರೂ ಯಾಕೆ ಬರುವದಿಲ್ಲ?"

ಅವನ ಪ್ರಶ್ನೆಗೆ ಉತ್ತರ ಹುಡುಕಲು ಫಲವತ್ತಾಗಿ ಬೆಳೆದ ನನ್ನ ತಲೆಯ ಮೇಲೆ ಕೈಯಾಡಿಸಿದೆ. ಬೆಳೆ ಹುಲುಸಾದಾಗ ಯಾರಿಗೂ ಹುರುಪು, ಉತ್ಸಾಹ ಇನ್ನಿಲ್ಲದ ಸ್ಫೂರ್ತಿ. ಹಾಗೇ ಆಯಿತು ನನ್ನ ಪರಿಸ್ಥಿತಿ. "ನಾಳೆ ಅನ್ನದವನ ಮನೆ ಹಾಳು" ವೆಂಬ ವಾಕ್ಯ ನನ್ನ ಮಿದುಳಿನಲ್ಲಿ ಸ್ಫುರಣಗೊಂಡಿತು. ಋಷಿಗಳಿಗೆ ಮಂತ್ರಗಳು ದೃಷ್ಟಿಗೆ ಬೀಳುತ್ತಿದ್ದವಂತೆ! ಅಂತೆಯೇ ಅವರಿಗೆ ದೃಷ್ಟಾರರು ಎಂದು ಹೇಳುವರು ಎಂದು ಹಾಯಸ್ಕೂಲಿನಲ್ಲಿದ್ದಾಗ ನಮ್ಮ ಸಂಸ್ಕೃತ ಮಾಸ್ತರರು ದೃಷ್ಟಾರ ಶಬ್ದದ ಅರ್ಥ ಹೇಳುವಾಗ ಹೇಳಿದ ಮಾತು ನನಗೆ ನೆನಪಿಗೆ ಬಂತು. ಆಗ ನಾನು ದೃಷ್ಟಾರ ಶಬ್ದದ ಅರ್ಥವನ್ನು ಗುರುಗಳು ಹೇಳಿದಂತೆ ಬರೆದುಕೊಂಡು ಪಾಠಮಾಡಿದ್ದೆ. ಆದರೆ ಅದರ ನಿಜವಾದ ಅರ್ಥ ನನ್ನ ಮಿದುಳಿನಲ್ಲಿ ಹೊಳೆದುದು ಈಗ. ಯಾವಾಗ? "ನಾಳೆ ಅನ್ನದವನಮನೆ ಹಾಳು" ಎಂಬುದು ಸ್ಫುರಣಗೊಂಡಾಗ ಹೊಳೆಯಿತು. ಬಹುಶಃ ಋಷಿಗಳಿಗೆ ನನಗೆ ಈ ವಾಕ್ಯವು ಹೊಳೆದಂತೆಯೇ ಮಂತ್ರಗಳು ಹೊಳೆದಿರಬಹುದು ಎಂಬ ಇನ್ನೊಂದು ವಿಚಾರವೂ ಸುಳಿಯಿತು. ಈ ವಿಚಾರದ ಸುಳಿಯಲ್ಲಿ ಸಿಕ್ಕ ನಾನೂ ಒಬ್ಬ ಋಷಿ ಎಂದುಕೊಂಡೆ. ನಾನು ಹೀಗೆಂದುಕೊಂಡಿದ್ದರಲ್ಲಿ ಅಸ್ವಾಭಾವಿಕವಾದುದೇನೂ ಇರಲಿಲ್ಲ. ಋಷಿಗೆ ಗಡ್ಡ, ಜಟಾ ಸ್ವಾಭಾವಿಕ. ಹುಲುಸಾಗಿ ಬೆಳೆದ ತಲೆ, ಗಡ್ಡಗಳು ಹೊಸದಾಗಿ ಋಷಿಯಾಗಲು ಹೊರಟ ಯಾವನಿಗೂ ಕಡಿಮೆ ಇಲ್ಲ ಎಂದು ನನ್ನಲ್ಲಿ ಆತ್ಮವಿಶ್ವಾಸವನ್ನು ಹುಟ್ಟಿಸಿದವು. ಈ ಮನಃಸ್ಥಿತಿಯಲ್ಲಿದ್ದಾಗ ನನಗೆ ವಿಠ್ಠಲನ ಪ್ರಶ್ನೆಗೆ ಉತ್ತರ ಕೊಡುವದೇ ಮರೆತು ಹೋಯಿತು. ನಾನೊಬ್ಬ ಋಷಿ ಎಂದು ಹಿಂದಿನ ಋಷಿಗಳು ಹೇಳಿಕೊಂಡಂತೆ ನಾನೂ ಯಾಕೆ ಹೇಳಿಕೊಳ್ಳಬಾರದು ಎಂದು ವಿಚಾರ ಮೂಡಿಹೋಯಿತು. ಅದೇ ಭಾವದಲ್ಲಿ ಕನ್ನಡಿ ನೋಡಿದಾಗ ಎಂಥ ಅಸಂಬದ್ಧ ವಿಚಾರ! ಇದು ಎಂದೆನಿಸಬೇಕೆ? ನೀನೆಲ್ಲಿ? ಋಷಿಗಳೆಲ್ಲಿ? ಶುದ್ಧ ಅವಿವೇಕ ಎಂಬ ಇನ್ನೊಂದು ವಿಚಾರದ ಸುಳಿ ಮಿದುಳಿಗೆ ಅಪ್ಪಳಿಸಿದಾಗ ನನ್ನಷ್ಟಕ್ಕೆ ನಾನೇ ಗಟ್ಟಿಯಾಗಿ ನಕ್ಕುಬಿಟ್ಟೆ!

ಬೆಳೆದ ತಲೆಯು ನನ್ನದಾಗಿದ್ದರೂ ಅದರ ಆಗುಹೋಗುಗಳ ಸಂಪೂರ್ಣ ಹೊಣೆಗಾರಿಕೆ ತನ್ನದು. ಅದು ಎಲ್ಲರ ತಲೆಯಂತೆ ಅಂದವಾಗಿ ಕಾಣಬೇಕು. ಗಾಂಧೀ ಟೊಪ್ಪಿಗೆಯ ಕಳಸವನ್ನಿಟ್ಟಾಗ ಅದು ನೆಹರೂರವರ ತಲೆಯಂತೆ ಒಂದು ವೇಳೆ ಕಾಣದಿದ್ದರೂ ಸ್ಥಳೀಯ ದೇ. ಭ.ಗಳಲ್ಲಿ ಯಾರ ತಲೆಗಿಂತಲೂ ಕಡಿಮೆ ಎನಿಸದಂತೆ ಟೊಪ್ಪಿಗೆ ಹಾಳತಿಯಾಗಿ ಕೂಡ್ರುವಂತೆ ನೋಡಿಕೊಳ್ಳುವ ಗುರುತರ ಜವಾಬದಾರಿ ತನ್ನ ಮೇಲಿದೆ! ಹೀಗೆ ಸಲ್ಲದ ವಿಚಾರಗಳು ವಿಠ್ಠಲನ ತಲೆಯಲ್ಲಿ ತುಂಬಿರಬೇಕು. ಅಂತೆಯೇ ಅವನು ತನ್ನ ಅಧೀನದಲ್ಲಿ ಒಮ್ಮೆ ನನ್ನ ತಲೆಯು ಸಿಕ್ಕರೆ ತೀರಿತು. ಒಂದೊಂದೇ ಕೂದಲನ್ನು ಕತ್ತರಿಸುವದು; ಒಮ್ಮೆ ದೇಶಿ ಕತ್ತರಿ, ಒಮ್ಮೆ ವಿದೇಶೀ ಕತ್ತರಿ, ಒಮ್ಮೆ ವಿದ್ಯುತ್‌ಚಾಲಿತ ಕತ್ತರಿ ಪ್ರಯೋಗ, ಆ ಮೇಲೆ ಪುನಃ ಇವೆಲ್ಲ ಶಸ್ತ್ರಾಸ್ತ್ರಗಳ ಮರುಪ್ರಯೋಗ, ಹೀಗೆ ನನಗೆ ಬೇಸರ ಬಂದರೂ, ಸಾಕು ಬಿಡು ಮಹಾರಾಯಾ ಎಂದು ಹೇಳಿಕೊಂಡರೂ ಅತ್ತ ಕಿವುಡುಗೇಳುತ್ತ ಗೀತೆಯಲ್ಲಿ ಶ್ರೀಕೃಷ್ಣನು ಹೇಳಿದ "ಯೋಗಃ ಕರ್ಮಸು ಕೌಶಲಂ" ಎಂಬ ಮಾತನ್ನು ಸಿದ್ಧಮಾಡಿ ತೋರಿಸಲು ಹೊರಟವನ ರೀತಿಯಲ್ಲಿಯೇ ತನ್ನ ಕರ್ಮಕಾಂಡದಲ್ಲಿಯೇ ನಿರತನಾಗುವನು. ಇಂದು ಅವನು ಮುಂಗೈ ಏರಿಸಿ ಕೇಶ-ರಕ್ಕಸರ [illegible] ಮೇಲೆ ದಾಳಿ ಮಾಡಲು ಶಸ್ತ್ರಸನ್ನದ್ಧನಾಗಿ [illegible] ಅವನು ಕೇಳಿದ ಅತಿ ಸುಲಭವಾದ ಒಂದು ಪ್ರಶ್ನೆಗೆ ಉತ್ತರ ಕೊಟ್ಟು ಅವನ ಮುಂದಿನ ಕಾರ್ಯಕ್ಕೆ [illegible] ವಾಗಲಿ ಎಂದು ಹರಸುವ ಬದಲು ಕಲ್ಲು[illegible]ಯಂತೆ ತುಟಿ ಎರಡು ಮಾಡದೆ ಕುಳಿತದ್ದು ನೋಡಿ ಅವನ ಉತ್ಸಾಹಭಂಗವಾಗಿತ್ತು. ಅದ[illegible] ನಾನು ಅಕಾರಣವಾಗಿ ನಕ್ಕದ್ದು ಅವನ [illegible] ಬಿದ್ದಾಗ ಅವನಿಗೆ ರಾಯರ ತಲೆಯು ಸ್ವಲ್ಪ [illegible] ತಬೇಕು. ಎಂಬ ಬಲವಾದ ಸಂಶಯ ಬಂದಿರಬೇಕು. ತನಗೆ ಅನಿಸಿದ್ದನ್ನು ಆಡಿ ತೋರಿಸುವದೊಂದು ವಿಠ್ಠಲನ ಹುಟ್ಟು ಗುಣ. ಅವನು ಥಟ್ಟನೆ "[illegible] ರಾಯರೇ, ಸುಮ್ಮನೇ ನಿಮ್ಮಷ್ಟಕ್ಕೆ ನೀವೇ ನಗಹತ್ತಿರುವಿರಿ? ಹೀಗೆ ನಗುವವರಿಗೆ ಜನಾ [illegible] ಅದು ಗೊತ್ತಿಲ್ಲದವರಂತೆ ನಗಹತ್ತಿರುವಿರಿ?" ಎಂದು ಇನ್ನೊಂದು ಪ್ರಶ್ನೆಯ ಬಾಣ ಬೀರಿದ.

"ನಿನ್ನ ಮೊದಲಿನ ಪ್ರಶ್ನೆಗೆ ನಾನು ಕೊಡುವ ಉತ್ತರ, ಕೇಳಿದರೆ ನೀನೂ ನನ್ನಂತೆ ನಗುವಿ. ಇಷ್ಟೇ ಅಲ್ಲ. ನನ್ನ ತಲೆ ಸರಿಯಾಗಿ ಇಲ್ಲ ಎಂದು ನೀನು ಭಾವಿಸಬಹುದು!" ಎಂದೆ.

"ಅದೆಂಥಾ ಉತ್ತರಾ ಕೊಡಬೇಕಂತೀರಿ ರಾಯರೇ ಹೇಳಿ ಬಿಡ್ರಿ" ಎಂದು ವಿಠ್ಠಲ ಕುತೂಹಲ ಕೇಳಿ ಬಾಯಿಬಿಟ್ಟ.

"ನೋಡು ವಿಠ್ಠಲಾ, 'ನಾಳೆ ಅನ್ನದವನ ಮನೆ ಹಾಳು' ಈ ಸಿದ್ಧಾಂತಕ್ಕೆ ನಾನು ಬಂದವನು. ಈಗ

ಹರಟೆಗಾರ:

**ರಾವಬಹಾದ್ದೂರ**

ತಿಂಗಳಿಗೊಮ್ಮೆ ನಿನ್ನ ಕಡೆಗೆ ಬರುವದಕ್ಕೂ ಈ ಸಿದ್ಧಾಂತವೇ ಕಾರಣ" ಎಂದು ಹೇಳಿ ಅವನ ಮುಖ ನೋಡಿದೆ.

ಅವನು ನನ್ನ ಮಾತಿಗೆ ನಗಲಿಲ್ಲ!

ಅವನ ಮುಖವು ಗಂಭೀರವಾಗಿತ್ತು.

"ನೀವು ಈಗ ಹೇಳಿದ ಸಿದ್ಧಾಂತ ಮನೆ ಹಾಳು ಮಾಡುವಂಥದಾಗಿದೆ ರಾಯರೇ, ನನ್ನ ಕಡೆಗೆ ಬರುವ ಗಿರಾಕಿಗಳಿಗೆ 'ನಾಳೆ ಬನ್ನಿ' ಎಂದು ಹೇಳಿದರೆ ನನ್ನ ಧಂದೇ ಉಳಿದೀತೆ? ನಾಳೆ ಅಂದವನ ಮನೆ ಹಾಳು ಎಂದು ನಮ್ಮಲ್ಲಿ ಗಾದೆ ಮಾತು ಇದೆ. ನಿಮ್ಮ ಮಾತು ಅದಕ್ಕೆ ಹೊಂದಿಕೆಯಾಗುವದಿಲ್ಲ. ಅಸಂಬದ್ಧ ಮಾತು ಎಂದು ನಿಮಗೆ ಅನಿಸುವದಿಲ್ಲವೆ? ಇಂಥ ಮಾತನ್ನು ನೀವು ನನ್ನಿಂದ ಅಪ್ರಿಯ ಉತ್ತರಬರಬಾರದೆಂದೇನೂ ಆಡುವದೇ ನನಗ್ಯಾಕೋ ವಿಚಿತ್ರ ಅನಿಸುತ್ತದೆ." ಎಂದು ವಿಠ್ಠಲ ಎಂದಿನಂತೆ ತನ್ನ ಹೊಣೆಯನ್ನು ನಿರ್ವಹಿಸುವ ಕಾರ್ಯದಲ್ಲಿ ಮಗ್ನನಾಗಿ ಬಿಟ್ಟ.

ಅವನ ಪ್ರತಿಕ್ರಿಯೆ ನನ್ನ 'ದೃಷ್ಟಾರ' ಅಹಂಭಾವಕ್ಕೆ ಪುಷ್ಟಿಕೊಡುವಂಥದಾಗಿರಲಿಲ್ಲ. ಇದರಿಂದ ನನಗೇನೂ ಕೆಡಕೆನಿಸಲಿಲ್ಲ. 'ಪಾಪ, ಅವನ ತಿಳುವಳಿಕೆಯೇ ಅಷ್ಟು. ಇಂಥ ಮಹಾತತ್ತ್ವದ ಮಹತ್ವ ಅವನಿಗೆ ಹೇಗೆ ಹೊಳೆದೀತು? ಎಂದು ಅವನ ಬಗ್ಗೆ ಕನಿ

ದಲ್ಲಿ ವೈರಿಯು ದಾಳಿ ಮಾಡಿದಾಗ ನಾಳೆ ಪ್ರತಿದಾಳಿ ಮಾಡುವಾ ಎಂದು ಸೇನಾಪತಿಯು ನಿರ್ಣಯ ಸ್ವೀಕರಿಸಿದರೆ ದೇಶವೇ ಹಾಳಾಗುವದು. ಇಂಥ ಸಿದ್ಧಾಂತ ನಿಮ್ಮದು!" ಎಂದು ವಿಜಯದ ಮುದ್ರೆಯಿಂದ ನನ್ನ ಮುಖ ನೋಡಿದಳು.

"ನೀನು ಎತ್ತಿದ ಪ್ರಶ್ನೆ ಸೂಕ್ತವಾದುದು. ಅವಸರ ಮಾಡಿ ಯುದ್ಧ ಸಾರುವದರಿಂದ ದೇಶವೊಂದೇ ಅಲ್ಲ ಜಾಗತಿಕಶಾಂತಿಗೇ ಸಂಚಕಾರ ಬರುವ ಭಯವಿರುವದರಿಂದ ನಿರ್ಣಯ ಸ್ವೀಕರಿಸುವಾಗ ನನ್ನ ಸಿದ್ಧಾಂತಕ್ಕೆ ಅಂಟಿಕೊಂಡರೆ ಜಗತ್ತಿಗೇ ಲಾಬವಾದೀತು. ಚೀನವು ಭಾರತದ ಮೇಲೆ ಯುದ್ಧ ಸಾರದೆ ನೋಟೀಸು ಕೊಡುತ್ತ ಬೆದರಿಕೆ ಹಾಕುತ್ತ ಕಾಲಹರಣ ಮಾಡಿದ್ದರಿಂದ ವಿಶ್ವಸಂಸ್ಥೆಯ ಗೌರವ ಉಳಿಯಿತು. ಚೀನದ ದುಡಿಕಿನ ನಿರ್ಣಯದಿಂದ ತಲೆದೋರಬಹುದಾದ ಜಾಗತಿಕ ಯುದ್ಧ ತಪ್ಪಿತು. ಪಾಕಿಸ್ತಾನದ ಅಧ್ಯಕ್ಷರು ಅವಸರದಿಂದ ಯುದ್ಧ ಸಾರಿದ್ದರಿಂದ ಆದ ಹಾನಿಯ ವಿವರ, ಪತ್ರಿಕೆಯನ್ನು ಓದಿ ತಿಳಿದ ನಿನಗೆ ನಾನು ಬೇರೆ ಹೇಳಬೇಕಿಲ್ಲ

ಶಾಂತವಾಗಿ ಕುಳಿತು ನಿಧಾನವಾಗಿ ನಿರ್ಣಯ ಸ್ವೀಕರಿಸುವದರಿಂದ ಅನರ್ಥ ತಪ್ಪುವದು ಎಂದು ನೀನು ಒಪ್ಪಿಕೊಳ್ಳುವಿ."

"ಒಪ್ಪಿಕೊಳ್ಳುವೆನೆಂದು ತಿಳಿಯಿರಿ. ಆದರೆ ಇದು ವ್ಯಾವಹಾರಿಕವಾದ ಮಾತಲ್ಲ ಅನಿಸುತ್ತದೆ."

"ವ್ಯಾವಹಾರಿಕವೆಂದರೆ ಏನು? ರೂಢಿಯಲ್ಲಿರುವಂಥದು ಎಂದಿಷ್ಟೇ ಅದರ ಅರ್ಥ. ನಮ್ಮ ಸರಕಾರದ ಎಲ್ಲ ಇಲಾಖೆಗಳಲ್ಲಿ ನಾಳೆ ಅನ್ನದವನ ಮನೆ ಹಾಳು ಈ ಸಿದ್ಧಾಂತದ ಕಾರ್ಯಾಚರಣೆ ಜಾರಿಯಲ್ಲಿರುವದು ನಿನಗೆ ಮನದಟ್ಟಾದರೆ ನನ್ನ ಸಿದ್ಧಾಂತ ವ್ಯಾವಹಾರಿಕವೆಂದು ಸಿದ್ಧವಾದಂತೆ ಅಲ್ಲವೆ?

ಕಾಲೇಜ್ ಪ್ರಾರಂಭಿಸಲು ಸರಕಾರ ವರ್ಷದ ಮೊದಲಿನ ಒಂದೆರಡು ತಿಂಗಳು ಗತಿಸುವ ವರೆಗೆ ಕಾಲವನ್ನು ಮುಂದೂಡುತ್ತ ಸಾಗುವದು. ಜೂನದಲ್ಲಿ ಜಮಖಂಡಿಯಲ್ಲಿ ಪ್ರಾರಂಭವಾಗಬೇಕಾದ ಕಾಲೇಜ್ ಅಫ್ ಎಜ್ಯುಕೇಶನ್‌ದ ವಿಷಯದಲ್ಲಿ ಕಾಲೇಜ್ ಪ್ರಾರಂಭಿಸುವ ನಿರ್ಣಯ ಅಗಸ್ಟ ಕೊನೆಯ ಸುಮಾರಿಗೆ ಸ್ವೀಕರಿಸುವದು. ಕಾಲೇಜ್ ಪ್ರಾಧ್ಯಾಪಕರ ನೇಮಕದ ನಿರ್ಣಯಕ್ಕೆ ಮುಂದೆ ಒಂದು ತಿಂಗಳು ಅವಧಿ ತಕ್ಕೊಂಡದ್ದು ಕೊನೆಗೆ ಮೊದಲನೇ ಇಡೀ ಟರ್ಮ ವಿದ್ಯಾರ್ಥಿಗಳಿಗೆ ಶಿಕ್ಷಣ ಕೊಡದೆ ಹಾಜರಿ ಮಾರ್ಕ ಮಾಡಿದ್ದು ನೋಡಿದರೆ ನನ್ನ ಸಿದ್ಧಾಂತಕ್ಕೆ ಸರಕಾರದಲ್ಲಿ ವ್ಯಾವಹಾರಿಕ ಸ್ಥಾನವಿದ್ದದ್ದು ಮನವರಿಕೆ ಆಗುವದಿಲ್ಲವೇ? ಅಷ್ಟೇಕೆ ಮೈಸೂರು ಭೂ-ಸುಧಾರಣೆ ಕಾನೂನು ಎಷ್ಟೋ ವರ್ಷಗಳಿಂದಲೂ ಮುಂದೂಡುತ್ತಲೇ ಬಂದದ್ದು ಕೊನೆಗೆ ಜಾರಿಗೆ ಬರುವ ದಿನವನ್ನು ಕೂಡಾ ಮುಂದೂಡುತ್ತಲೇ ಸಾಗಿದ್ದು ನನ್ನ ಸಿದ್ಧಾಂತಕ್ಕೆ ತಕ್ಕ ನಿದರ್ಶನವಾಗಿದೆ. ನಮ್ಮ ಮ್ಯಾಜಿಸ್ಟ್ರೇಟರ ಕೋರ್ಟುಗಳಲ್ಲಿ ಮೊಕದ್ದಮೆಗಳ ವಿಚಾರಣೆಯಲ್ಲಿ ನನ್ನ ಸಿದ್ಧಾಂತಕ್ಕೆ ಮಹತ್ವದ ಸ್ಥಾನಕೊಡುತ್ತಿರುವದರಿಂದಲೇ ಹಾಟೆಲ್, ಖಾನಾವಳಿ, ಎಸ್. ಟಿ. ಬಸ್ ಸಾರಿಗೆ. ಉರ್ಜಿತದಲ್ಲಿ ಉಳಿದು ಅನೇಕರಿಗೆ ಜೀವನಾಧಾರ ಕಲ್ಪಿಸಿಕೊಟ್ಟಂತೆ ಆಗಿದೆ. ಬೇಸಾಯದ ಉತ್ಪಾದನೆಯಲ್ಲಿ ಅಭಿವೃದ್ಧಿ ಸಾಧಿಸಲು ಬೇಸಾಯಗಾರರಿಗೆ ಎಕರೆಗೆ ೧೦೦ ರೂ. ಯಂತೆ ಆರ್ಥಿಕ ನೆರವು ನೀಡುವ ಸರಕಾರದ ನಿರ್ಣಯವು ಸಪ್ಟಂಬರ್ ತಿಂಗಳು ಮುಗಿದರೂ ಕಾರ್ಯರೂಪಕ್ಕಿಳಿಯದೆ ಉಳಿದದ್ದು ನನ್ನ ಸಿದ್ಧಾಂತದ ಬಗ್ಗೆ ಬಿ. ಡಿ. ಓ. ಅಫೀಸದಲ್ಲಿಯ ಸಿಬ್ಬಂದಿಯವರಿಟ್ಟುಕೊಂಡ ಪೂರ್ಣ ಭರವಸೆಯ ನಿದರ್ಶನವಲ್ಲವೆ? ಯಾವದೇ ಪ್ರಶ್ನೆಗೆ ಸರಕಾರೀ ಕಚೇರಿಯಿಂದ ಉತ್ತರ ಬರಲು, ಮಂತ್ರಿಗಳು ಪ್ರವಾಸದಲ್ಲಿ ಕಾರ್ಯಕ್ರಮಗಳಿಗೆ ಹಾಜರಾಗಲು, ಆಗುವ ಕಾಲ ವಿಲಂಬ ನನ್ನ ಸಿದ್ಧಾಂತದ ವ್ಯಾವಹಾರಿಕ ಸ್ವರೂಪದ ನಿದರ್ಶನ ಹೀಗೇ ಪ್ರತಿಯೊಂದು ಇಲಾಖೆಯಲ್ಲಿ ಸರಕಾರಕ್ಕೆ ಕೋಟ್ಯಾವಧಿ ರೂ. ನೌಕರರ ಸಂಬಳ. ಗ್ರೇಡ್, ತುಟ್ಟಿಭತ್ತೆ ಬಗ್ಗೆ ನಿರ್ಣಯ ಸ್ವೀಕರಿಸುವಾಗ ನನ್ನ ತತ್ತ್ವದ ಅನುಷ್ಠಾನದಿಂದ ಆಗುತ್ತಿದೆ. ಇದು ಸಾಮಾನ್ಯ ಲಾಭವಲ್ಲ. ಬಡ ಬೋರೇಗೌಡನ ಮನೆ ಹಾಳು ಮಾಡದೆ ಕೊಂಚ ಮಟ್ಟಿಗಾದರೂ ಕರಭಾರದಿಂದ ಅವನ ಬೆನ್ನೆಲುಬನ್ನು ಉಳಿಸುವ ಶ್ರೇಯಸ್ಸಿಗೆ ಸರಕಾರವು ಪಾತ್ರವಾದದ್ದು ನನ್ನ ತತ್ತ್ವದ ಅನುಷ್ಠಾನದಿಂದ ನನ್ನ ಸಿದ್ಧಾಂತ ವ್ಯಾವಹಾರಿಕ ಎಂದೂ ಈಗಲಾದರೂ ಒಪ್ಪಿಕೊಳ್ಳುವಿಯಷ್ಟೆ?"

ಅವಳು ಉತ್ತರ ಕೊಡದೆ ಎದ್ದುಹೋಗಿದ್ದಳು.

ಒಂದು

## ಮನೋಲಹರಿ

ಹುಬ್ಬಳ್ಳಿಯಲ್ಲಿ ಗಲ್ಲಿಗಳಿಗೇನು ಕೊರತೆ? ಹುಯಿಲೆಬ್ಬಿಸುವ ಗಲ್ಲಿಗಳ ಆಕರವೇ ಹುಬ್ಬಳ್ಳಿ–ಎಂದು ಶಬ್ದಭೇದಕ, ಅರ್ಥಭೇದಕ, ಧ್ವನಿಬಾಧಕ ಮಿತ್ರರೊಬ್ಬರು ಸಂಶೋಧನೆ ನಡೆಸಿ ಉದಾಹರಣೆಗಳೊಡನೆ ಸ್ಥಾಪಿಸಿದ್ದಾರೆ. ಹೀಗೂ ಇರಬಹುದು ಎಂದು ಯಾರೂ ಕಾಮನ್‌ಸೆನ್ಸ ಇದ್ದವರು ಒಪ್ಪಿಕೊಳ್ಳುವರೆಂದು ಅವರ ಕಾನ್‌ಷೆನ್ಸು ಹೇಳುತ್ತದಂತೆ. ಅದು ಇದ್ದರಲ್ಲವೆ ಈ ಆಹಾರಾಭಾವ ಕಾಲದಲ್ಲಿ ಎಂದು ನಾನು ಕೇಳಿದರೆ, ಇದೆ– ಕಾಳಸಂತೆಯಲ್ಲಿ ಬೇಕಾದ್ದನ್ನು ಬೇಕಾದಷ್ಟು ತಿಂದು ಗೂಳಿಯಾಗಿ ಕೊಬ್ಬಿದೆ ಮತ್ತು ಮಳೆ ತುಂಬಿದ ಮೋಡದಂತೆ ಮೈ ಭಾರವಾಗಿ, (ಮನ ಹಗುರಾಗಿ) ತೂರಾಡುತ್ತಿರುತ್ತದೆ ಎಂದೂ ಉತ್ತರಿಸಬೇಕೆ? ಅದೂ ಹುಬ್ಬಳ್ಳಿಯ ಗಲ್ಲಿಯೊಂದರಲ್ಲಿ ನಿಂತು ತಮ್ಮ ಇಷ್ಟಗಲ ಬಾಯಿ ತೆರೆದು ಹಲ್ಲು ಕಿರಿಯುತ್ತ!- ಹುಬ್ಬಳ್ಳಿಗೇ ಏಕೆ ಈ ಕಿತಾಪತಿ ಸಂಶೋಧನೆ ಎಂದು ಅಪ್ಪಟ (ಪ್ರತಿಷ್ಠಿತ) ಹುಬ್ಬಳ್ಳಿಯೆಂದು ಕೇಳಿದರೆ, ಅನುತಾಪದಿಂದ ಹಾಗೇನಿಲ್ಲ–ಬಳ್ಳಿಯಂತೆ ಮನ ಬಂದತ್ತ ಬೆಳೆಯುತ್ತಿರುವ ಎಲ್ಲಾ ನಗರಗಳಿಗೂ ಅನ್ವಯಿಸುತ್ತದೆ ಇದು. ಇಂದಿನ ನಮ್ಮ ವಕ್ರಬುದ್ಧಿಗೂ; ವೈಜ್ಞಾನಿಕ ಬುದ್ಧಿಗೂ ನಡುವೆ ನಡೆದಿರುವ ಶೀತಲ ಯುದ್ಧಕ್ಕೆ ಪ್ರತ್ಯಕ್ಷ ಪ್ರಮಾಣ ಇದು ಎಂದು ಸುತ್ತುಸುತ್ತಾಗಿ ಹೇಳಿ ಪಾರಾಗಬಹುದು. ಆದರೆ ಈ ವಾಕ್ಯಾರ್ಥದ ಸಾರ್ಥಕ್ಯವಾಗುವುದು ಹುಬ್ಬಳ್ಳಿಯಲ್ಲಿಯೇ ಎಂದು ನನ್ನ – ಅಧಿಕ ಮಿತ್ರರಂತೆ ನಾನೂ ಪ್ರಬಲವಾಗಿ ನಂಬಿದ್ದೇನೆ. ರಾಜಕಾರಣದ ವಕ್ರಬುದ್ಧಿಯಂತೆ ಬೆಳೆದಿರುವ ಹುಬ್ಬಳ್ಳಿ, ಪುನಾ–ಬೆಂಗಳೂರು (ಅಲ್ಲ ಕನ್ನಡಿಗನಾದ್ದರಿಂದ ಹೀಗೆ ಹೇಳುವೆ. ಬೆಂಗಳೂರು–ಪುನಾ) ಹೆದ್ದಾರಿಯ ಮಧ್ಯದಲ್ಲಿದೆ ಎಂಬುದನ್ನು ಮರೆಯಬಾರದು. ವಾಣಿಜ್ಯದಲ್ಲಿ ಮುಂಬಯಿತನ–ಮೈಸೂರತನ, ಇತರೇ ವಿಷಯಗಳಲ್ಲಿ ಕನ್ನಡತನ (ಅರ್ಥಾತ್ ಸೋಮಾರಿತನ!) ಮತ್ತು ಮರಾಠಿಗತನ, (ಛಲವಾದಿತನದಲ್ಲಿ) ಇವುಗಳ ಸಂಗಮಸ್ಥಾನ ಇದು. ಉತ್ತರ ಕರ್ನಾಟಕದ ಸಕಲ ರಾಜಕೀಯ ನಾಟಕಕ್ಕೆ ಇದೇ ರಂಗಭೂಮಿ...

ಹುಬ್ಬಳ್ಳಿಯಲ್ಲಿ ದೊಡ್ಡ ರೇಲ್ವೆ ವರ್ಕಶಾಪ್ ಇದೆ (ಇನ್ನು ಮುಂದೆ ಇರುತ್ತದೋ ಇಲ್ಲವೋ-ಅನುಮಾನದ ವದಂತಿ ಹರಡಿದೆ.) ದೊಡ್ಡ ಜಂಕ್ಶನ್ ಇದೆ. ದೊಡ್ಡ ಆಸ್ಪತ್ರೆ ಇದೆ. ಮೆಡಿಕಲ್ ಕಾಲೇಜು ಭವ್ಯವಾಗಿದೆ. ಕಾಮರ್ಸ್, ಇಂಜನಿಯರಿಂಗ್, ಸೈನ್ಸ ಕಾಲೇಜುಗಳಿವೆ. ಇನ್‌ಸ್ಟ್ಯೂಟಗಳಿವೆ. ಹೊಸ ಬಸ್ ಸ್ಟ್ಯಾಂಡ್ ಆಗಿದೆ. ಕಾರ್ಪೋರೇಶನ್ ಆಫೀಸಿದೆ. ಗೋಕುಲ ಇದೆ, ಅಸಂಖ್ಯಾತ ಹೋಟಲ್ಲುಗಳಿವೆ. ಹಸಿರು-ಹಳದಿ ಪತ್ರಿಕೆಗಳಿವೆ. ಹಾಗೆಯೇ ಮುಂದೆ ಬಂದರೆ ಉಣಕಲ್ ಕೆರೆ ಇದೆ. ಕಾಡಿದೆ, ಹಾಡಾಗುವ ಚಿನ್ನೆಗಳಿವೆ... ತಾಲೂಕು ಎರಡಾದರೂ ಕಾರ್ಪೋರೇಶನ್ ಒಂದೇ ಇದೆ ಇವೆಲ್ಲ ಇವೆ ಅಂದ ಮೇಲೆ...

"ಹೌದು ಸ್ವಾಮಿ, ಇವೆ. ಇಲ್ಲ ಅಂದವರಾರು? ಇವೆಲ್ಲವುಗಳನ್ನೂ ಮೀರಿ ಗಲ್ಲಿಗಳಿರುವುದು ಸುಳ್ಳೇ? ಹೇಳಿ! "

'ಹೂ'

"ಹಾ-ಹಾಗೆ ಬನ್ನಿ ನನ್ನ ಪಾಯಿಂಟಿಗೆ."

"ಆದರೆ"...

"ಆ ಇನ್ನೂ ಒಪ್ಪುವುದಿಲ್ಲವೇ? ಹಾಗಾದರೆ ಕೇಳಿ-

ಆ [illegible] ಫೋ ಫೋ [illegible] ತ್ರಸ್ತ [illegible] [illegible], [illegible] [illegible]... [illegible], [illegible]... [illegible] [illegible], ಅಥವಾ ಆದನ್ನೇ [illegible], ಅದು [illegible] ಆಗಿರ

ರಾಘವೇಂದ್ರ, ಇಟಗಿ
ಧಾರವಾಡ




" ಸರ್ಪನಂತ ಅಚೆ ತಿರುಗಿಸಿಕೊಂಡುಬಿಡೋಣಾಂತ ಹಾಗೆ ಮಾಡಿದೆ, ಅದು ಹೀಗಾಯ್ತು, ನನ್ನಗಂದು "

ಬೇಕು. ಇಂಥ ಒಂದು ಸಂಜೆಗತ್ತಲಿನಲ್ಲಿ ನನ್ನೊಬ್ಬ ಆಂಧ್ರ ಸ್ನೇಹಿತನೊಡನೆ ಅನೇಕಾನೇಕ ಗಲ್ಲಿಗಳನ್ನು ದಾಟಿ ಒಂದು ಗಲ್ಲಿಯನ್ನು ಸೇರಿದೆ—ಕಾರಿನಲ್ಲಿ—ಇಂಥಾ ಬಡುಕ ಸೇರಿದೆ. ಕಾರು ಕ್ರಾಂತಿಯ ಮೇಲೆ ಬ್ಯಾಂಡ ಜೋಳಕ್ಕೆ ಪಕ್ಕಂತೆ ಮೇಲೂ ಕೆಳಗೂ ಕೂಡಾಡುತ್ತ ಕಡೆಯುವ ಸರ್ಕಸ್ ಲಲನೆಯಂತೆ, ಅವಳ ಕೈಯ ಲ್ಲಿಯ ಛತ್ರಿ ವಾಲುವಂತೆ ವಾಲುತ್ತ, ಜೋಲಿ ಹೊಡೆಯುತ್ತ, ಹಿಡಿಯುತ್ತ, ಅಂತೂ ಯಶಸ್ವಿಯಾಗಿ ಗಲ್ಲಿ ಸೇರಿತ್ತು. ಒಂದು ಕಡೆಯಂತೂ ನಿಲ್ಲುವಾಗ ಘರಣ ಘೂರ್ಣಗೆ ಮೊದಲು ಜೇರುವಂತೆ ಜೀರಿ, ಘೌಹಾರಿ, ಬುಸುಗುಡುತ್ತ ಒದ್ದಾಡಿತು. ಜೊತೆಯ ಮಿತ್ರರು ಆಶ್ಚರ್ಯವತ್ ಆಗಿದ್ದರು... ಕೆಲಸ ಪೂರೈಸಿಕೊಂಡು ಕಾರು ತಿರುಗಿಸಿಕೊಂಡು ಪುನಃ ರಾಜ್ಯ ಮಾರ್ಗಕ್ಕೆ ಕೂಡೋಣ ಅಂತ ಹೊರಟರೆ ಮುಂದೆ ಬಡಿಯಲ್ಲಿ ನಿಂತ ಲಾರಿ ಸರಕ್ಕನೆ ಅದು ಹೇಗೋ ಸರಿದು ಬಂದು ದಾರಿಗೆ ಅಡ್ಡ ನಿಂತುಬಿಟ್ಟಿತು. ಸೊರ್ ಸೊರ್ ಎಂದು ದನಿಗೈಯುತ್ತ ಮುಂದೆ ನುಸುಳುವ ಘಳಿವೇ ಕಾಣ ಲಿಲ್ಲ. ಕಾದು ಕಾದು ಬೇಸತ್ತು ಕೊನೆಗೊಮ್ಮೆ ಕೇಳ ಗಿಳಿದ್ದು—!ಯಾಕೆ ಹೀಗೆ ದಾರಿಗೆ ಅಡ್ಡಲುವಾಗಿ ಲಾರಿಯನ್ನು ನಿಲ್ಲಿಸಿದೆ, ಬದಿಗೆ ತಗೋ ಎಂದು ಗದರಿ ಕೇಳಿದರೆ. ಶಾಂತವಾಗಿಯೇ ಹೇಳಿದಸ್ವಾಮಿ, ನಮ್ಮದೆಲ್ಲ ಹೀಗೇ. ಬದಿಗೆ ಸರಿದು ನಿಮಗೆ ಸೈಡ ಕೊಟ್ಟು ಸಾಗಹಾಕೋಣ ಅಂತ ಪ್ರಯತ್ನಿಸಿದರೆ ತನ್ನಗಂಡು...

'ಅಲ್ಲಾ, ಆ ಬದಿಗೆ ಇದ್ದುದನ್ನು ತಂದು ಅಡ್ಡ ದಾರಿಗೆ ನಿಲ್ಲಿಸಿದೇ...'

'ನಮ್ಮದೆಲ್ಲ ಹೀಗೆ. ನೀವು ಬರೋದರೊಳಗೆ ಸರ್ರನಂತ ಆಚೆ ತಿರುಗಿಸಿಕೊಂಡು ಬಿಡೋಣಂತ ಹಾಗೆ ಮಾಡಿದೆ, ಅದು ಹೀಗಾಯಿತು ನಮ್ಮಗಂದು. ! 'ಹಿಂದೆ—ಯಾರಾದರೂ ಬರ್ತಿದಾರೆಯೋ ? ಅಂತ ನೋಡಬಾರ್ದೂ. ಮುಂದೆ ಅಷ್ಟು ಇಕ್ಕಟ್ಟು ಜಾಗ, ಮೇಲೆ ಎರಡು ಟಾಂಗಾ ಎದುರು ಬದುರು ನಿಂತಿವೆ...

'ನೋಡ್ರೀ, ಸ್ವಾಮೇರ ! ಮೊದಲೇ ಇದು ಕಷ್ಟ ಕೊಡ್ತಿದೆ ನನ್ನಗಂದು. ಮ್ಯಾಗ ನಿಮ್ಮ ವಿಚಾರಣೆ ಬೇರೆ. ನಮ್ಮದೆಲ್ಲ ಹೀಗೆ. ಹಿಂದು ಮುಂದು ಅಂತ ನಿಂತರೆ ನಮ್ಮ ಲಾರಿಗಳು ಓಡಿಧಾಂಗೆ ಸೈ...!

ಟಲ್ಲಾ ಎಂದವನ ವಾದಕ್ಕೆ. ತನ್ನ ಲಾರಿ ಓಡುತ್ತಿದ್ದರೆ ತಾನೇ ಇತರರ ವಾಹನದಳ ಓಡಾಟಕ್ಕೆ ಅವಕಾಶ. ತನ್ನದೇ ಜೋಗ್ಗಾಲೂರಿ ನಿಂತಿರುವಾಗ ಇತರರದ್ದು ಹೇಗೆ ಓಡಬೇಕು ! ಏಕೆ ಓಡಬೇಕು ?... ಸೊರ್ ಸೊರ್ ಸ್ಥಿತಿಯೊಂದೇ ಗತಿ ಈ ಸಂಜೆಗತ್ತಲಿನಲ್ಲಿ— ಗಲ್ಲಿಯ ಸುತ್ತಿನಲ್ಲಿ...

ಲಾರಿಡ್ರೈವರೇ ಏಕೆ ? ಎಲ್ಲರೂ ಅಷ್ಟೇ. ತಮ್ಮದು ನೊಗಚೆಲ್ಲಿ ಅಚಲವಾದಾಗ ಸ್ಟ್ಯಾಂಡ್ ಸ್ಟಿಲ್ (Stand still) ಆದಾಗ, ಇತರರ ಚಲನೆಗೆ ಚಾಲನೆಗೆ ಚಾಲನೆ ಕೊಡುವುದಾದರೂ ಎಂತು ? ಹಾಗೇನಾದರೂ ಮಾಡಿದರೆ ವ್ಯವಹಾರ ರೀತ್ಯಾ, ಶಾಸ್ತ್ರ ರೀತ್ಯಾ ಅಚಾತುರ್ಯವಾಗುವುದು. ಬಸವಣ್ಣನವರೇ ಹೇಳಿದ್ದಾರೆ— ಪರಚಿಂತೆ ಎನಗೇಕಯ್ಯಾ— ಎನ್ನ ಚಿಂತೆ ಎನಗೆ ಹಾಸಲುಂಟು, ಹೊದೆಯಲುಂಟು. ಅಷ್ಟೇ ಅಲ್ಲ— ಹಾಸಲು ಹೊದೆಯಲೂ ಆಗಿ ಮತ್ತೆ ಅಧಿಕವೂ ಉಂಟು. ಇದೇ ನಮ್ಮ ಉಳಿತಾಯದ ಗಂಟು.

ನವರಾಜವಾದೀ ಸಮಾಜ ರಚನಾಕ್ರಮದ ಪ್ರಕಾರ ಈ 'ಅಧಿಕ'ವನ್ನು 'ಎಣೆಯಾಗಿಸಲು ಇತರರಿಗೆ ಹಂಚುವುದುಂಟು- ಆ ಲಾರಿ ಡ್ರೈವರ ಹಂಚಿದಂತೆ. ಆವನ 'ನನ್ನಗಂದು', 'ನಿಮ್ಮೆಲ್ಲರ ದಂಗ' ಆಗಿ, ಅವರ ಕಷ್ಟ, ಸರ್ವವ್ಯಾಪಿ ಆಗಲೆಂಬುದೇ ಇದರ ತಾತ್ಪರ್ಯ. ಇದನ್ನೇ ಬೇಕಾದರೆ ಲಾರಿಜಿಸ್ಮ ಎನ್ನಬಹುದು. ತನಗೆ ಬಂದ ಅಳಲನ್ನು ಇತರರೆದುರು ತೋಡಿಕೊಂಡಾಗ ಭಾರವಾದ ಹೃದಯ ಹಗುರಾಗುತ್ತದೆ. ಅಳಲು ಅರೆಯಾಗಿ ಹಾರಿಹೋಗುತ್ತದೆ. ಕರಗಿ (ಕಣ್-) ನೀರಾಗಿ ಹರಿದು ಹೋಗುತ್ತದೆ- ಅಂತು ಅಳಿಯುತ್ತದೆ ಅದು. ಇದೇ ಸೂತ್ರವನ್ನು ನನ್ನ ಡ್ರೈವರ ಮಿತ್ರ ಸ್ವಲ್ಪ ಮುಂದುವರೆಸಿ, ಅಳಿಯುವ ಅಳಲಿಗೆ ಅಸ್ತಿತ್ವ ಹಾಕುವ ದಾರಿಯನ್ನು ಕಂಡುಕೊಂಡಿದ್ದಾನೆ, ಅಲ್ಲ, ತಮಗೆ ತೆರೆದು ತೋರಿದ್ದಾನೆ. ಲಾರಿ—ದಾರಿ—ಡ್ರೈವರ್ ಕೇವಲ ಪ್ರತೀಕಗಳು ಅಷ್ಟೆ. ಇದನ್ನು ಬಿಡಿಸಿ ಬಿಡಿಸಿ ವಿವೇಚಿಸಿದಾಗ ಜೀವನದ ಗಹನ ಸಿದ್ಧಾಂತ— ಇಲ್ಲಿದೆ ಎಂಬುದನ್ನು ಯಾವ ತತ್ವಜ್ಞಾನಿಯೂ ಅರಿಯಬಹುದಾಗಿದೆ. ಲಾರಿ- ಅದು ಜೀವನ. ದಾರಿ ಅಂತತೆಯಿಂದ ಅನಂತತೆಗೆ ಕೊಂಡೊಯ್ಯುವ ಸಾಧನ— ಡ್ರೈವರ್—ಸಾಧಕ ಹಾಗೂ ಬಾಧಕ ! ಅವನು ಲೀಲಾವಿನೋದಿ, ತನ್ನ ಲಾರಿ ಭಾರ ಹೊತ್ತರೂ, ಆ ಭಾರದ ಅನುಭವವನ್ನು ಇತರರಿಗೆ ಹಂಚುವವನು. ಇವನನ್ನೇ ಅರಿಯದ, ವೇದಾಂತಿಗಳು- ಜಗನ್ನಾಟಕ ಸೂತ್ರಧಾರಿ— ಎಂದು ಯಾರಿಗೂ ತಿಳಿಯದ ಹೆಸರಿನಿಂದ ಕರೆಯುತ್ತಾರೆ.

ನನ್ನ ಲೋ— ನಮ್ಮ ಬದುಕಿನ ಹೋರಾಟದಲ್ಲಿ



“ರೂಪಾಯಿ ತಂದಿದ್ದೀರಾ ಸಿನೇಮಾಕ್ಕೆ!”

ಮಂಚೂಣಿಯಲ್ಲಿ ಇರುವವಳು. ಅವಳ ವ್ಯೂಹರಚನೆಯೋ ದ್ರೋಣಾಚಾರ್ಯ ಚಕ್ರವ್ಯೂಹ ರಚನೆಗಿಂತಲೂ ಕ್ಲಿಷ್ಟ. ಅವಳ ಸೈನ್ಯ ಸಾಮಾನ್ಯವಾದುದಲ್ಲ. ಆರು ಹೆಣ್ಣು— ನಾಲ್ಕು ಗಂಡುಗಳಲ್ಲದೇ ಮಿತ್ರರಾಷ್ಟ್ರಗಳ ಸೈನ್ಯಬಲವನ್ನೂ ಆಕೆ ಬಹುಪಾಗಿ ಸಂಗ್ರಹಿಸಿದ್ದಾಳೆ. ಅವಳ ಅಣ್ಣನ ನಾಲ್ಕು ತುಕಡಿ, ನನ್ನ ತಮ್ಮನ ಮೂರ್ರು ತುಕಡಿ ಮತ್ತು ವೃದ್ಧ ಮಾತಾ—ಪಿತರು- ಇವೆಲ್ಲಕ್ಕೂ ಮೀರಿದ ಅವಳ ಅಣ್ವಸ್ತ್ರ- ಆತ್ಮದಹನದ ಬೆದರಿಕೆ. ಇಂಥ ಅಪೂರ್ವ ಸಿದ್ಧತೆಯಿರುವಾಗ, ಇವಳನ್ನು ಎದುರಿಸಲು ಯಾವ ಶಕ್ತಿಗೆ ಸಾಧ್ಯ ಹೇಳಿ ? ಇದರ ಪರಿಜ್ಞಾನ ಇಲ್ಲದೇ ಒಮ್ಮೆ ನಾವು ಯುದ್ಧರಂಗಕ್ಕೆ ಇಳಿದೆ... ಆಫೀಸಿನಲ್ಲಿ ಬಿಡುವಿರದ ಪಗರಣಕ್ಕೆ ಒಳಗಾದ ದುರ್ದಿನ ಅಂದು. ಧಾರಾಕಾರದ ಮಳೆಯಂತೆ ಧಾರಾಕಾರದ ತೊಡಕುಗಳು. ವೀರ ಸೈನಿಕನಂತೆ ಚಳಿಯನ್ನದೇ, ಬಿಸಿಯೆನ್ನದೆ ಹೋರಾಡಿ [illegible] ದಣಿದು ರೋಸಿಹೋಗಿತ್ತು. ಇಂಥ [illegible]ದಲ್ಲಿ ನನಗೊಂದು ಫೋ— ಆದೇಶ [illegible] ಸ್ಥೈ[illegible] ಆ ಒಕ್ಕ[illegible] ಹೋದೆ [illegible] ‘ಪ್ರಿಯಕರ [illegible] ಯಾವಾಗಲೂ ಅಪ್ರಿಯ[illegible] ಇಂದು [illegible] ಹೇಗೆ ಪ್ರಿಯಕರನಾದೆನೋ ಎಂದು, ಸ್ವಲ್ಪ ಸಂತೋಷವೂ ಆಯಿತು. ಒಮ್ಮೆಯಾದರೂ ಪ್ರಿಯಕರನಾದೆನಲ್ಲ— ಎಂದು!) ಒಲುಮೆಯ ಕೋರಿಕೆ. ನಮ್ಮ ಸಹಾಯವನ್ನು ಯಾಚಿಸಿ ಮನೆಗೆ ಅನರ್ಘ ಶ್ರೀಮಂತರು ಬಂದಿದ್ದಾರೆ. ಕಾರಣ ತಕ್ಷಣ ರಜಾಹಾಕಿ (ಮತ್ತು ದಮ್ಮಯ್ಯ!) ಹೇಗಾದರೂ ೫೦ ರೂ. ಕೈಗಡ ಸಂಪಾದಿಸಿ ಮನೆಗೆ ಬನ್ನಿ. ಅವರೊಂದಿಗೆ ಸಿನೀಮಾಕ್ಕೆ ಹೋಗುವ ಪ್ರೋಗ್ರಾಂ ಹಾಕಿದ್ದೇನೆ. ನಿರಾಶೆಗೊಳಿಸಿದರೆ ನನ್ನ ಮರ್ಯಾದೆ ಹೋಗುವುದು ಮರ್ಯಾದೆ ಹೋದ ಮೇಲೆ ಬದುಕಿದರೆಷ್ಟು, ಸತ್ತರೆಷ್ಟು? ತಿಳಿದ ನೀವೇ ಹೇಳಿ- ಕೂಡಲೇ ಬನ್ನಿ! Oh! God- ಎಂದೆ ಸುತ್ತುಮುತ್ತಲಿನ ಪರಿವೆ ಇಲ್ಲದೆ ಸ್ವಲ್ಪ ಗಟ್ಟಿಯಾಗಿಯೇ ಚೀರಿರಬೇಕು. ಅಂತೆಯೇ ಸುತ್ತಲಿದ್ದ ನಿಯೋದ್ಯೋಗಿಗಳು ಯಾಕೆ ಏನಾಯಿತು? ಎಂದು ಸುತ್ತುಗಟ್ಟಿದರು. ಅಷ್ಟರಲ್ಲಿ ಚೇತರಿಸಿಕೊಂಡಿದ್ದೆ. ಏನೂ ಅಲ್ಲ. ತಮಾಷೆ—ಎಂದು ಸುಳ್ಳು ನಗೆ ಬೀರಿ, ರಜಾ ಕೂಡ ಹಾಕದೆ, ಯಾರ ಅಪ್ಪಣೆಯೂ ಕೇಳದೆ, ಕೂಡಲೇ ಮನೆಗೆ ಬಂದು ಅಪ್ಪಳಿಸಿದೆ. ನನ್ನ ಈ ಹಠಾತ್ ದಾಳಿಗೆ ಕ್ಷಣ ಬೆದರಿದರೂ ಕೋ—ಕೂಡಲೇ ಯುದ್ಧಸನ್ನದ್ಧಳಾದಳು— ಅವಳ ನೋಟದಲ್ಲಿ ಅಗ್ನ್ಯಸ್ತ್ರ ಇರುವುದನ್ನೇ ಕಂಡು ತತ್ತರಿಸಿದೆ... ಆ ಅನರ್ಘ ಶ್ರೀಮಂತ ಪ್ರಭೃತಿಗಳಿರಬಹುದು ಎಂದು ನೋಡಲು ತವಕಿಸಿದೆ. ಯಾರೂ ಕಾಣದ್ದರಿಂದ, ಧೈರ್ಯ ತಂದುಕೊಂಡು ಅರ್ಭಟಿಸಿದೆ. “ಏನಿದೆ ಗೊತ್ತು ಗಂಡಿ, ಸಮಯ, ಸಂಕಟ ಒಂದೂ ಅರ್ಥವಾಗುವುದಿಲ್ಲ...” ಆಕೆಯ ಸೈನ್ಯವೆಲ್ಲ ನನ್ನ ಸುತ್ತುವರಿದು ನಿಂತಿತ್ತು. ‘ಆಯಿತೋ...’ ಎಂದು ತನ್ನ ಕಣ್ಣಿಳಿಯ ಆ ಬೆಂಕಿಯ ಅಸ್ತ್ರವನ್ನು ಹಿಂತೆಗೆದುಕೊಂಡು ಹಿಂದಿನ ಒಂದೆರಡು ಕಣ್ಣೀರು ಹನಿಗಳನ್ನು ಪಟಪಟ ಉದುರಿಸಿದಳು. ಆ ಮೇಲೆ ತುಂಬು ಮೋಹಕವಾಗಿ ಮೆಲ್ಲ ನಕ್ಕು ರೂಪಾಯಿ ತಂದಿದ್ದೀರಾ ಸಿನೇಮಾಕ್ಕೆ!— ಎಂದಳು— ಓ ದೇವಾ! ಇವಳದು ಎಂಥ ತೋರಾಟವಪ್ಪ. ಮುಂಗಾರಿನಲಿಯ ಹೋರಾಟ— ಎಂದು ತಳಮಳಿಸುತ್ತ ಮಿಕಿಮಿಕಿ ನೋಡುತ್ತ ನಿಂತಿರುವಾಗಲೇ ಅವಳ ಸಾರ್ಥಕ ಅಣ್ಣ (ಇವನೇ ನನ್ನ ಅನರ್ಘ ಶ್ರೀಮಂತ ಅತಿಥಿ) ಹೊರಗಿನಿಂದ ಒಳಬಂದು —ನಮಸ್ಕಾರ, ಶ್ರೀಮಂತ ಭಾವ! ಏನೂ ಇಷ್ಟುಬೇಗ ಆಫೀಸಿನಿಂದ ಬಂದು ಬಿಟ್ಟಿರಿ? ಎಂದು ಪ್ರಶ್ನಿಸಿದ. ಇಂಗು ತಿಂದ ಮಂಗನಂತಾದ ನಾನು, ಏನೂ ಇಲ್ಲ— ಬೇಜಾರು— ಅಪ್ಪಣೆ ಕೇಳಿ ಬಂದು ಬಿಟ್ಟೆ ಎಂದೆ. ತನಂತರ ಕೋ— ನನ್ನ ಸುತ್ತ ಸೇರಿದ್ದ ತನ್ನ ಸೈನ್ಯವನ್ನು ಛೇದಿಸಿಕೊಂಡು, ನನ್ನನ್ನು ಮುಕ್ತಗೊಳಿಸಿದಳು, ಮತ್ತು ನನ್ನ ಕೈಯಲ್ಲಿ ರಿಜರ್ವ ಮಾಡಿಸಿದ ಸಿನೀಮಾ ಟಿಕೆಟ್ಟುಗಳನ್ನು ಇಟ್ಟು—ಕಾಫಿ, ತಿಂಡಿ ರೆಡಿ ಇದೆ ಎಂದಳು.

‘ನನಗೆ ಬೇಕಿಲ್ಲ—ಸಿನೇಮಾಕ್ಕೆ ಬರುದಿಲ್ಲ.’

“ಯಾಕೆ! ಮೈಯಲ್ಲಿ ಹುಷಾರಿಲ್ಲವೋ—” ಎಂದು ಕೇಳಿದ ಅವಳ ತಮ್ಮ!

‘ಏನಿಲ್ಲ—ಸರಿಯಾಗಿಯೇ ಇದ್ದೇನೆ’

'ವಂತೆ ಬ್ರೇಕ್ ಹಾಕಿ ಲಾರಿಯೆಂತೆ ಸೊರಗುಬಿಟ್ಟಿತ್ತು ಶುವಿ'-ಎಂದು ಒಳಗಿನಿಂದ ನನ್ನ ತಂದೆ ಗೊಣಗಿದರು.

'ಅವರದು ಈಗ ಅದೇ ಸೆನ್ಸ-ನಾವು ಏನಾದರೂ ಪ್ಲಾನ್ ಮಾಡಿದರೆ ಅದನ್ನು ಕೆಡಿಸಲು ಅಡ್ಡವಾಗುವುದು. ಇಲ್ಲವೆ ಮುಂದಗೊಳಿಸಲು ಬ್ರೇಕ್ ಹಾಕುವುದು!" ಎಂದಳು ಕೋ ವಗುನಗುತ್ತ.

'ಅಣ್ಣ ಬಂದಾನಂತ ಖುಷಿಯಿಂದ ಕಾರ್ಯಕ್ರಮ ಇಟ್ಟುಕೊಂಡರೆ ಅದೆಷ್ಟು ನಿನ್ನ ಸಿಡಕು! ಆಫೀಸಿನಿಂದ ಕೆಲಸ ಬಿಡಿಸಿ ಆದಾಂಗೆ ಸಿನೀವಾಕ್ಕೆ ಕರೆದರ ಅವೇನೋ ಅಂತಾರಲ್ಲ-ಕರದು ಹೆಣ್ಣು ಕೊಟ್ಟರ.... ಅಲ್ಲಮುತ್ತ' ಎಂದು ಗದರಿದಳು ನನ್ನ ತಾಯಿ.

ಯಾವ ಅವಸ್ಥೆಯಿಂದ ಯಾವ ಅವಸ್ಥೆಗೆ ಬಂದಿದ್ದೇನೆ-ಎಂಬುದರ ಪರಿವೆ ಇಲ್ಲದೇ ಎಲ್ಲರೂ ಅವಳ ಪರ ವಹಿಸಿ ನನ್ನನ್ನು ತಪ್ಪಿತಸ್ಥನನ್ನಾಗಿ ಮಾಡುತ್ತಿರುವುದನ್ನು ಕಂಡು ಸಂಕಟವಾಯಿತು.

"ಬನ್ನಿ ಬೇಗನಾಗಿ ಹೋಗಿ ಬರೋಣ! ನಾವೇನು ಯಾವಾಗಲೂ ಬರ್ತೀವೇ!' ಎಂದ ಬೀಗ. ಅವಕಂದ ಚಾಕಲೇಟು, ಹಣ್ಣು, ತಿಂಡಿಗಳ ಆಸೆಗೆ ಹುಡುಗರೆಲ್ಲ ಅವನ ಪರ ವಹಿಸಿದ್ದರು.... ಕೊನೆಗೆ ಶರಣಾಗತನಾದೆ. ಆ ಸೋಲಿನಲ್ಲಿಯೇ ಸುಖವಿತ್ತು ಎನ್ನಿಸಿತು ಆಮೇಲೆ 'ತಿಂಗಳ ಕೊನೆ ದಿನ ೧೦ ರೂಪಾಯಿ ಸಿನೇಮಾಕ್ಕೆ ತನ್ನಿ'-ಎಂದರೆ ಏನು ಮಾಡಲಿ ಹೇಳು?' ಎಂದೆ ಮೆತ್ತಗೆ.

'ಹಾಗೆ ಬನ್ನಿ ಎಂದರೆ ಬರುತ್ತಿದ್ದಿಲ್ಲ. ಹೀಗೆ ರೇಗಿಸಿದರೆ ಕೂಡಲೇ ಬರುತ್ತೀರಿಅಂತ ಗೊತ್ತು. ಅದಕ್ಕೇ ಹಾಗೇ ಮಾಡಿದೆ-ದೊರೆಯೇ ಕ್ಷಮಿಸಿ ರಾಜ!'ಎಂದಳು ವೈ ತಿವಿದು ಆ ತಿವಿತ, ಆಹಾ! ಸ್ವರ್ಗಾನಂದ.

ನಾಲ್ಕಾರು ಕ್ಷಣ ಆ ಲಾರಿ ಡ್ರೈವರೂ ನಮ್ಮನ್ನು ಕೊಂದರೆಗೀಡಾಗಿಸಿದರೂ, ಅವ ದಾರಿ ಮಾಡಿಕೊಟ್ಟಾಗ ಆದ ನೆಮ್ಮದಿ ಸುಮ್ಮನೆ ಬರುತ್ತಿರಲಿಲ್ಲ. ಜೀವನದ ಬಗ್ಗೆ ಒಂದಿಷ್ಟು ಹೊತ್ತು ಗಹನವಾಗಿ, ಗಂಭೀರವಾಗಿ ಹಾಯಾಗಿ ವಿವೇಚಿಸುವ ಅವಕಾಶವೂ ಒದಗುತ್ತಿರಲಿಲ್ಲ.






### ನವ್ಯ ಚುಟಿಕ

ಹೊಸ ತರದ ಚುಟಿಕ ಬರೆದಿದ್ದೇನೆ, ತಂಗಿ:
ನರನ ಸಂಸಾರವೆನ್ನುವುದು ಮೂಲಂಗಿ.
ಮೈಯಿಗಿಂತಲು ಉದ್ದವಾಗಿದೆ ಕಿರೀಟ.
ಹೀಗುಂಟು ಆಧುನಿಕ ಜೀವನದ ಆಟ.

—ದಿನಕರ ದೇಸಾಯಿ

# ಬಾಲ ಪ್ರಪಂಚ



## ನಮ್ಮವರಿಗೊಂದು ಕರೆ

ಬನ್ನಿ ಅಣ್ಣತಮ್ಮರೆಲ್ಲ
ಬನ್ನಿ ಈಗ ಯುದ್ಧಕೆ
ಕಾಶ್ಮೀರ ತಮ್ಮದೆಂದು
ಹೇಳ್ವ ಪಾಕಿಸ್ತಾನಕೂಡ ॥ ೧ ॥

ಚೆಲುವ, ಕಾಶ್ಮೀರ ಇಂದು
ಇಹುದು ಯುದ್ಧರಂಗ
ಘೋಷಿಸೋಣ ಬನ್ನಿ ನಮ್ಮ
ಅವಿಭಾಜ್ಯ ಅಂಗ ॥ ೨ ॥

ಹಿಂದು ಮುಸ್ಲಿಂ ಕ್ರೈಸ್ತರೆಲ್ಲ
ಒಂದಾಗಿ ಬನ್ನಿರಿ
ಹಿಂದೆ ಮಾಡಿ ವೈರಿಯನ್ನು
ತಾಯ್ಗೆ ಕೀರ್ತಿ ತನ್ನಿರಿ ॥ ೩ ॥

ಶೌರ್ಯ ಧೈರ್ಯ ಶಕ್ತಿಯುಕ್ತಿ
ತೋರಬನ್ನಿ ಶ್ವಾನಕೆ
ಮುಡ್ಡನಂತೆ ಅಡ್ಡಹಾದಿ
ಹಿಡಿದ ಪಾಕಿಸ್ತಾನಕೆ ॥೪॥

ಒಳದ ಜಗಳ ಬದಿಗೆ ಇರಿಸಿ
ಬನ್ನಿ ದೇಶ ರಕ್ಷಣೆಗೆ
ಸೈನಿಕನ ವೇಷ ಧರಿಸಿ
ಬನ್ನಿ ಯುದ್ಧರಂಗಕೆ ॥೫॥

—ಜಿ. ಎಚ್. ರಾಘವೇಂದ್ರ
ಸ. ಸಂ. ೨೮೦೩
ಹುಲಿಹೈದರ್




## ಕನ್ನಡ ದೇವಿ

ಕನ್ನಡ ದೇವಿಯೇ
ಕರವನ್ನು ಮುಗಿಯುವೆ
ಕರುಣದಿ ನಮ್ಮನ್ನು ಸಲಹಮ್ಮ ॥

ಕನ್ನಡ ದೇಶವೇ
ನಿನ್ನಯ ಗುಡಿಯು
ಶಾಂತಿ, ಅಹಿಂಸೆ ಕಲ್ಲಿನ ಮಂತ್ರವು ॥

ಕನ್ನಡ ಜನರೇ
ನಿನ್ನಯ ಮಕ್ಕಳು
ಮಕ್ಕಳ ಬೇಡಿಕೆ ಸಲಿಸಮ್ಮ ॥

–ಎನ್ ವಿಶ್ವರೂಪಾಚಾರ್
ರಾಮನಗರಂ
ಸಂ. ಸಂ. ೪೬೬೬

# ಅಕ್ಕನ ಮಗಳು



ಉಮಾ ಏಳುವ ಮೊದಲೆ ಅಕ್ಕ ಹೆರಿಗೆಯು ಆಸ್ಪತ್ರೆಗೆ ಹೋಗಿದ್ದಳು. ಉಷಾ ಎದ್ದವಳೆ ಅಮ್ಮಾ ಎಂದು ಸ್ವರ ಹಿಡಿದಳು. ನಮಗೆ ಏನು ಮಾಡಬೇಕೋ ತಿಳಿಯದಂತಾಯಿತು.

"ಅಮ್ಮ-ಅಮ್ಮ ಎಲ್ಲಿ ಹೋಗ್ಯಾಳ!" ಉಷಾ ಕೇಳಿದಳು.

"ಆಸ್ಪತ್ರೆಗೆ ಹೋಗ್ಯಾಳ ನಿಮ್ಮವ್ವ."

"ಏನಾಗಿದೆ ಅಮ್ಮಗೆ?" ಅಳುತ್ತಲೆ ಕೇಳಿದಳು.

"ಏನೇನು ಆಗಿಲ್ಲವ್ವಾ. ಒಂದು ಪುಟ್ಟ ಪಾಪಾನ್ನ ತರಲಿಕ್ಕೆ ಹೋಗ್ಯಾಳ."

"ಕೂಸೇನು ಅಮ್ಮ! ಮತ್ತ ನನಗ ಜಾತ್ರ್ಯಾಗ ಒಂದು ಕೂಸಿನ್ನ ಕೊಡಸು ಅಂದರ ಕೊಡಿಸಲಿಲ್ಲ. ಅಷ್ಟಾ, ಗೊವ್ವಾ."

ನನಗೆ ನಗೆ ಬಂದಿತು. ಆ ಹೊತ್ತಿಗೆ ಉಷಾ ತನ್ನ ಡಬ್ಬಲ್ ಸೂರು ಬಜಂತ್ರಿ ಹಿಡಿದಳು. ಅವಳ ಮುಂದೆ ಅವಳ ಪ್ರೀತಿಯ ಓವಲ್ಟೀನ್ ಮಾಡಿ ಇಟ್ಟೆವು. ಜಾಡಿಸಿ ಒದ್ದಳು. ಕಪ್ಪುಬಸಿ, ಒಡೆದವು.

"ನನ್ನ ಬಿಟ್ಟು ಹೋಗ್ಯಾಳ ಅಮ್ಮ! ನಾನೂ ಹೋಗತೀನಿ. ಒಂದು ಪಾಪಾ ತರತೀನಿ. 'ಅಳುವು ಜೋರಾಯಿತು'

ಇಡೀ ದಿನ ಹಿಡಿಯಬೇಕಾದರೆ ಸಾಕುಸಾಕಾಗಿ ಹೋಯಿತು. ಅಂತೂ ರಾತ್ರಿಯಾಯಿತು. ರಮ್ಮಿಸಿ, ಬೆದರಿಸಿ, ಅವಳನ್ನು ಮಲಗಿಸಿದೆವು. ಉಷಾನ ಮಗ್ಗಲಲ್ಲಿ ನಾನೂ ಮಲಗಿದ್ದೆ.

ನನಗೆ ಇನ್ನೂ ಜಂಪು ಹತ್ತಿರಲಿಲ್ಲ. ಉಷಾ ದಿಗ್ಗನೆ ಎದ್ದು 'ನಾನು ಅಮ್ಮನ ಹತ್ತರ ಹೋಗ್ತೀನಿ.' ಎಂದು ಮುಸುಮುಸು ಪಾವಟಿಗೆ ಇಳಿಯತೊಡಗಿದಳು.

ನಾನು ಅವಳನ್ನು ಹಿಡಿದು ತರಬೇಕಾದರೆ ಸಾಕುಸಾಕಾಯಿತು.

ಹನ್ನೊಂದನೆಯ ದಿನ ಅಕ್ಕ ಆಸ್ಪತ್ರೆಯಿಂದ ಮನೆಗೆ ಬಂದಳು. ಉಷಾ ಅವಳೊಡನೆ ಮಾತಾಡಲೇ ಇಲ್ಲ.

"ಪಾಪಾ ಬಂದದ ನೋಡು ಉಷಾ. ಹ್ಯಾಂಗದ ನೋಡಮ್ಮ!

"ಬೇಸಿಲ್ಲ, ಬೇಸಿಲ್ಲ..."

ಉಷಾ ಅಲ್ಲಿಯೇ ಕುಳಿತವಳು ಹೇಳಿದಳು. "ತರೂದ ತಂದಿ ಅಮ್ಮ! ಒಂದು ಗಂಡು ಪಾಪಾ ತರಬೇಕು."

ಆ ಮಾತಿಗೆ ಎಲ್ಲರೂ ನಕ್ಕರು.

ನಾಮಕರಣದ ದಿನ ಉಷಾ ಮತ್ತೊಂದು ಮಾತು ಆಡಿದಳು. ಮಮತಾ, ಮಮತಾ, ಎಂದು ಉಷಾ ಕುಣಿದಾಡಿದಳು, ಬಂದವರಲ್ಲಿ ಒಬ್ಬರು ಉಷಾನನ್ನು ಹತ್ತರ ಕುಳ್ಳಿರಿಸಿಕೊಂಡು. "ನಿನ್ನಂಥ ಪಾಪಾ ನಮ್ಮ ಮನ್ಯಾಗ ಬೇಕಾಗೇದ ನೋಡು." ಎಂದು ಮುದ್ದು ಕೊಟ್ಟಳು.

"ನೀವು ಆಸ್ಪತ್ರೆಗೆ ಹೋಗ್ರಿ. ನಿಮಗೂ ಸಿಗತಾವ. ಅಮ್ಮ ಒಂದು ತಂದಾಳ ನೋಡ್ರಿ. ಆಸ್ಪತ್ರ್ಯಾಗ ಭಾಳ ಭಾಳ ಪಾಪಾ ಸಿಗತಾವ ಹೋಗ್ರಿ."

ಈ ಮಾತಿಗೆ ಎಲ್ಲರೂ ನಕ್ಕರು.

ಉಷಾನ ವಿಚಾರದಲ್ಲಿ ಆಸ್ಪತ್ರೆ ಪಾಪಾಗಳನ್ನು ಪೋಷಿಸುವ ಸಾಧನವಾಗಿತ್ತು.

—ವಿದ್ಯಾ, ಪುರಾಣಿಕ, ಗೋಕಾಕ,

ಕ. ಸಂ. ೧೯೯೪



# ಓ ಹಿಮಾಲಯ!

ಓ ಹಿಮಾಲಯವೇ ! ಓ ಎನ್ನ ದೇಶ ರಕ್ಷಕನೇ
ನೀನಾಗಿರುವೆ ಪವಿತ್ರ ನದಿಗಳ ಉಗಮಸ್ಥಾನ
ನಿನ್ನಿಂದಲ್ಲವೇ ಧನ್ಯ ಹಿಂದುಸ್ಥಾನ
ನಿನ್ನನೇರಲು ಅದೆಷ್ಟು ಸಾಹಸಿಗರು
ನಿನ್ನ ನೋಡಲು ಅದೆಷ್ಟು ಪ್ರವಾಸಿಕರು ॥೧॥

ಓ ಹಿಮಾಲಯವೇ ಓ ಎನ್ನ ದೇಶ ರಕ್ಷಕನೇ
ನೀ ಕಾಯುವೆ ಗಡಿ ರಕ್ಷಕನಾಗಿ ಉತ್ತರ ಭಾಗವಾ
ನೀ ಲೆಕ್ಕಿಸದಿರುವೆ ಚಳಿಮಳೆಗಾಳಿಗಳಾ
ನೀ ಲೆಕ್ಕಿಸದಿರುವೆ ಹಗಲಿರುಳುಂಗಳಾ ॥೨॥

ನಿನ್ನೀ ಧೀರ ಗುಣವು ಬರಲೆಮಗೆ
ನಾವ್ ಸದಾ ಸಿದ್ಧರಿರುವೆವು ನಿನ್ನ ಬೆಂಬಲಕೆ
ನಿನ್ನಿಂದಲೇ ನಮಗೆ ಯುದ್ಧಸ್ಫೂರ್ತಿ
ನಿನ್ನಿಂದಲೇ ವೈರಿಗಳನ್ನು ಹಿಮ್ಮೆಟ್ಟಿಸಿದ ಕೀರ್ತಿ ॥೩॥

ಧನ್ಯ ಧನ್ಯ ಹಿಮಾಲಯವೇ ನೀನೇ ಧನ್ಯ
ನೀನಿರುವ ಭಾರತದಲ್ಲಿ ಹುಟ್ಟಿದ ನಾವು ಧನ್ಯ ॥

ಚನಬಸನಗೌಡ ಹ. ಬಾಳನಗೌಡ್ರ
ರಾಣೇಬೆನ್ನೂರ
ಸ. ಸಂ. ೧೭೭೪

ರತ್ನಖಚಿತ ಸಿಂಹಾಸನದಲ್ಲಿ ಮೂರು ಲೋಕದ ಒಡೆಯ ದೇವೇಂದ್ರ ಆಸೀನನಾಗಿದ್ದಾನೆ. ಆತನ ಸನಿಹದಲ್ಲೇ ಇಂದ್ರಾಣಿ ಶಚಿಯು. ಇಂದ್ರನ ಸಭೆಯಲ್ಲಿ ಯಮ, ಅಗ್ನಿ, ವಾಯು ಕುಬೇರ ಮೊದಲಾದ ದೇವತೆಗಳು ತಮತಮಗೆ ಯೋಗ್ಯವಾದ ಆಸನಗಳಲ್ಲಿ ಮಂಡಿಸಿದ್ದಾರೆ. ಇಂದ್ರ ಸಭೆ ಸುವರ್ಣ ರತ್ನ ಮಣಿಗಳ ಪ್ರಕಾಶದಿಂದ ಬೆಳಗುತ್ತಿದ್ದರೆ, ದೇವತೆಗಳ ಮುಖಗಳು ನಗುವನ್ನು ಸೂಸುತ್ತ ಸಭೆಯ ಕಾಂತಿಯನ್ನು ಇನ್ನಷ್ಟು ಹೆಚ್ಚಿಸಿದ್ದವು. ಇಂದ್ರನ ಹಿಂಬದಿಯಲ್ಲಿ ನಿಂತ ಅಪ್ಸರೆಯರು ಚಾಮರಗಳನ್ನು ಬೀಸುತ್ತಲಿದ್ದರೆ ಇಂದ್ರನೆದುರು ದೂರದಲ್ಲಿ ನಿಂತ ಅಪ್ಸರೆಯರು ತಮ್ಮ ದಿವ್ಯ ನೃತ್ಯ ಪ್ರದರ್ಶಿಸಲು ಆತನ ಕಣ್ಸನ್ನೆಗಾಗಿ ಕಾದಿದ್ದರು. ಇಂದ್ರ ನಸುನಗುತ್ತ ಅವರಿಗೆ ನೃತ್ಯ ಪ್ರಾರಂಭಿಸಲು ಸೂಚಿಸಿದ. ರಂಭೆ, ಮೇನಕೆ ಊರ್ವಶಿಯರಾದಿಯಾಗಿ ದೇವಸುಂದರಿಯರು ಗೆಲುವಿನ ಹಬ್ಬದ ಆ ದಿನದಂದು ತಮ್ಮ ಕಲೆಯನ್ನು ಅಮೋಘವಾದ ರೀತಿಯಲ್ಲಿ ಪ್ರದರ್ಶಿಸಿದರು. ಅವರ ಥಕ್ ತೈ ನೃತ್ಯ ವೀಣೆ ಮೃದಂಗಗಳ ಇಂಪು ನುಡಿ ನಿಂತಿತು.



" ಅಸುರರನ್ನು ನಾವು ಓಡಿಸಿದೆವೆಂದೇ ಈ ಬಗೆಯ ಭಾಗ್ಯ ಪ್ರಾಪ್ತವಾಯ್ತು " — ಅಗ್ನಿ ಹೇಳಿದ

# ಗರ್ವ ಬಿಳ್ಳೆಯದಲ್ಲ

— ಪ್ರ. ರಂ. ಪಂಢರಿ

ದೇವೇಂದ್ರ ಕಿರುನಗೆ ಸೂಸಿ ಹೇಳಿದ— "ದೇವತೆಗಳೆ, ಇಂದಿನ ನೃತ್ಯ ಅಮೋಘವಾಗಿದೆ. ನಾವು ಈ ಅಪ್ಸರೆಯರಿಗೆ ನಮ್ಮ ಮೆಚ್ಚುಗೆಗಳನ್ನು ತಿಳಿಸಬೇಕಲ್ಲವೆ? ಅಸುರರನ್ನು ಕೊಂದು ಓಡಿಸಿ ಶ್ರಮಹೊಂದಿದ ನಮಗೆ ಈ ನೃತ್ಯ ಉಲ್ಲಾಸವನು ನೀಡಿತು."

"ಅಹುದು ದೇವೇಂದ್ರ, ನಿಜವಾಗಿ ಇಂದಿನ ನೃತ್ಯ ತುಂಬಾ ಮನಾಕರ್ಷಕವಾಗಿತ್ತು. ಅಸುರರನ್ನು ನಾವು ಓಡಿಸಿದೆವೆಂದೇ ಈ ಬಗೆಯ ಭಾಗ್ಯ ಪ್ರಾಪ್ತವಾಯಿತು" ಎಂದ. ಅಲ್ಲಿಯೇ ಸನಿಹದಲ್ಲಿ ಆಸನವೊಂದರಲ್ಲಿ ಮಂಡಿಸಿದ್ದ ಅಗ್ನಿ.

"ಅಸುರರು ನಮಗಾವ ಲೆಕ್ಕ. ಅವರನ್ನು ಧೂಳೀಪಟ ಮಾಡಿ ಹಾರಿಸಿಬಿಟ್ಟೆ. ನನ್ನ ಒಂದೊಂದು ಹೊಡೆತಕ್ಕೆ ನಾಲ್ಕೈದು ಜನ ದೈತ್ಯರು ನೆಲಕ್ಕುರುಳಿ ಬೀಳುತ್ತಿದ್ದರು." ವಾಯು ತನ್ನ ಪೌರುಷ ಪ್ರದರ್ಶಿಸಿದ.

"ನಿಜ ನಿಜ ವಾಯು, ನಿನ್ನ ಹಾಗೆಯೇ ನಾನು ಕೂಡ. ನನ್ನ ಒಂದೊಂದು ಬಾಣಕ್ಕೆ ಒಬ್ಬೊಬ್ಬ ದೈತ್ಯ ಬಲಿಯಾಗುತ್ತಿದ್ದ. ನನ್ನ ಗುರಿ ನಿಶ್ಚಿತ. ನನ್ನೆದುರು ನಿಲ್ಲದೆ ಅವರು ಓಡಿ ಹೋಗುತ್ತಿದ್ದರು." ಎಂದು ಅಗ್ನಿ ತನ್ನ ಶೌರ್ಯವನ್ನೂ ಹೇಳಿಕೊಂಡ.

"ದೇವತೆಗಳೆದುರಿನಲ್ಲಿ ನಿಲ್ಲುವ ಸಾಹಸವು ಮೂರು ಲೋಕಗಳಲ್ಲಿ ಯಾವನಿಗಿದೆ? ದೇವತೆಗಳೆಂದರೆ ಸಾಮಾನ್ಯರೆ? ನಾವು ಏನು ಬಯಸಿದ್ದನ್ನು ಮಾಡಬಲ್ಲೆವು. ನಮ್ಮ ಪ್ರತಾಪ ವೈರಿಗಳನ್ನು ಸುಡಬಲ್ಲುದು. ನಾವು ಮುನಿದರೆ ಈ ಲೋಕಗಳು ಉಳಿಯಲಾರವು. ನಮ್ಮ ಕೃಪೆಯಿಂದಲ್ಲವೇ ಸೃಷ್ಟಿಕ್ರಮ ನಡೆದಿರುವದು" ಎಂದು ಇಂದ್ರ ದೇವತೆಗಳ ಹೆಗ್ಗಳಿಕೆಯನ್ನು ಸಾರಿ—



" ದೇವತೆಗಳಲ್ಲಿ ಸಮರ್ಥರಾದವರನ್ನು ನನ್ನ ಬಳಿಗೆ ಕಳುಹಿಸು ಎಂದು ತೇಜಸ್ಸು ಹೇಳಿತು "

—ದೇವದೂತ ಹೇಳಿದ

ಎಲ್ಲ ದೇವತೆಗಳು ಅಸುರರೊಡನೆ ನಡೆದ ಯುದ್ಧದಲ್ಲಿ ತಾವು ತೋರಿದ ಪರಾಕ್ರಮವನ್ನು ತಮ್ಮ ಶಕ್ತಿಯನ್ನು ಉತ್ಪ್ರೇಕ್ಷೆ ಮಾಡಿ ಹೇಳಿಕೊಂಡರು. ಅವರ ಪೌರುಷ ಪ್ರತಾಪಗಳ ವರ್ಣನೆ ಮಿತಿಮೀರಿ ನಡೆದಿದ್ದಾಗಲೇ ದೇವದೂತನೊಬ್ಬ ಒಳಗೆ ಬಂದ— "ತ್ರೈಲೋಕ್ಯೇಶ್ವರ ದೇವೇಂದ್ರನಿಗೆ ಜಯವಾಗಲಿ. ದೇವೇಂದ್ರಸಹಿತ ದೇವಗಣಕ್ಕೆ ಸಾಷ್ಟಾಂಗ ಪ್ರಣಾಮಗಳು" ಎಂದು ಬಾಗಿ ನಮಸ್ಕರಿಸಿದ. ದೇವೇಂದ್ರ ಆತನೆಡೆ ಕಣ್ಣೆತ್ತಿ ನೋಡಿ "ಏನು ?" ಎಂದು ಕೇಳಿದ.

"ಮಹಾಪ್ರಭು, ದೇವಮಂದಾಕಿನಿಯ ತೀರದಲ್ಲಿ ನಂದನವನದ ಸನಿಹದಲ್ಲಿ ಯಾವದೋ ಒಂದು ತೇಜಸ್ಸು ಬಂದಿದೆ. ಅದರ ಬೆಳಕು ಕಣ್ಣು ಕುಕ್ಕುತ್ತಿದೆ. ಯಾವ ದೈತ್ಯನೋ ಯಾವ ದೇವತೆಯೋ ತಿಳಿಯದು. ಅದರ ಸಮೀಪಕ್ಕೆ ಹೋದಾಗ ಅದು ನನ್ನನ್ನು ಕರೆದು 'ದೇವತೆಗಳಲ್ಲಿ ಸಮರ್ಥರಾದವರು ಶಕ್ತಿಶಾಲಿಗಳನ್ನು ನನ್ನ ಬಳಿಗೆ ಕಳುಹಿಸು ದೇವೇಂದ್ರನಿಗೆ ಈ ವಿಷಯ ಹೇಳು ಹೋಗು' ಎಂದು ಹೇಳಿ ಕಳಿಸಿತು" ಆ ದೇವದೂತ ಒಂದೇ ಉಸುರಿನಲ್ಲಿ ಗಾಬರಿಯಿಂದ ಹೇಳಿದ.

ಅಸುರರೆಲ್ಲರನ್ನು ಸೋಲಿಸಿ ಓಡಿಸಿದಾಗ ಇದಾವ ತೇಜಸ್ಸು? ಇದಾವ ದೈತ್ಯ ಈಗ ಬಂದಿರಬಹುದು, ಎಂದು ದೇವೇಂದ್ರ ಆಲೋಚಿಸತೊಡಗಿದ. ಇದು ವರೆಗೆ ತಮ್ಮ ಅಟ್ಟಹಾಸವನ್ನು ಮೆರೆದಿದ್ದ ದೇವತೆಗಳು ಇದಾವ ಕ್ಷುದ್ರ ತೇಜಸ್ಸು, ಇಲ್ಲಿಗೇಕೆ ಬಂದಿತು? ಎಂದು ತಮ್ಮ ತಮ್ಮೊಳಗೆ ಕೇಳತೊಡಗಿದರು. ಅಷ್ಟರಲ್ಲಿ ಇಂದ್ರನು ಅಗ್ನಿಯನ್ನು ಕುರಿತು ಹೇಳಿದನು. "ಅಗ್ನಿ, ನೀನು ಹೋಗಿ ಆ ತೇಜಸ್ಸು ಯಾವದೆಂದು. ವಿಚಾರಿಸು, ನೀನು ಬರುವವರೆಗೆ ನಾವಿಲ್ಲಿಯೇ ಕುಳಿತಿರುತ್ತೇವೆ. ದೇವತೆಗಳ ಪ್ರತಾಪವನ್ನು ಇನ್ನೊಮ್ಮೆ ತೋರಿಸಬೇಕಾಗುವದೇನೋ ನೋಡೋಣ"

"ಆಗಲಿ ದೇವೇಂದ್ರ, ಅಸುರರನ್ನು ಸುಟ್ಟು ಭಸ್ಮ ಮಾಡಿದ ಈ ಅಗ್ನಿಗೆ ಯಾರು ಸಮರು ನೋಡುತ್ತೇನೆ." ಎಂದು ಗರ್ಜಿಸಿ ಅಗ್ನಿ ಆ ದೇವದೂತನ ಬೆನ್ನು ಹತ್ತಿ ನಡೆದ.

ನಂದನವನದ ಸನಿಹಕ್ಕೆ ಹೋದಂತೆ ಅಗ್ನಿಗೆ ಆತೇಜಸ್ಸಿನ ಪ್ರಖರತೆಯ ಪರಿಚಯವಾಗತೊಡಗಿತು. ಯಾವೊಂದು ಆಕಾರ ಕಾಣದಿದ್ದರೂ ಅದರ ಬೆಳಕು ಕಣ್ಣು ಕುಕ್ಕುತ್ತಿತ್ತು. ಅದರ ತೇಜಸ್ಸು ಅವನಿಗೆ ಕಸಿವಿಸಿಯನ್ನುಂಟು ಮಾಡತೊಡಗಿತು. ಅಗ್ನಿ ತನ್ನ ಧೈರ್ಯವನ್ನೆಲ್ಲ ಒಟ್ಟುಗೂಡಿಸಿ ಆ ತೇಜಸ್ಸನ್ನು ಕೇಳಿದ "ಎಲೈ ಮಹಾನುಭಾವ ನೀನು ಯಾರು? ನೀನು ಇಲ್ಲಿಗೇಕೆ ಬಂದೆ? ಇದು ದೇವತೆಗಳ ನಾಡು ಗೊತ್ತಿದೆಯಲ್ಲವೆ?

"ಅಹುದು ನನಗೆ ಗೊತ್ತಿದೆ, ಇದು ದೇವತೆಗಳ ನಾಡು. ಅಸುರರನ್ನು ಗೆದ್ದಿರುವೆವೆಂದಿರುವ ಈ ದೇವತೆಗಳಲ್ಲಿ ಯಾರಾದರೂ ನನ್ನ ಸರಿಸಮರಿರುವರೇನೋ ಎಂದು ನೋಡಲು ಬಂದಿರುವೆ.?" ತೇಜಸ್ಸು ಗಂಟೆ ಬಾರಿಸಿದಂತೆ ಮಾತನಾಡಿತು.

"ನೀನು ದೇವತೆಗಳನ್ನು ಆಹ್ವಾನಿಸುತ್ತಿರುವೆ. ಇದರ ಪರಿಣಾಮವನ್ನು ಊಹಿಸು. ಹೇಳು ನಿನ್ನ ಪಂಥವನ್ನು; ನಾನು ಅಗ್ನಿ ಅದನ್ನು ಎದುರಿಸುವೆ." ಅಗ್ನಿ ಪ್ರಜ್ವಲಿಸುತ್ತ ಉತ್ತರಿಸಿದ.

"ಹಾಗಾದರೆ ಈ ಹುಲ್ಲುಕಡ್ಡಿಯನ್ನು ಸುಟ್ಟು ಬಿಡು" ಎಂದು ಅಲ್ಲಿಯೇ ಬಿದ್ದಿದ್ದ ಒಣಗಿದ ಕಡ್ಡಿಯೊಂದನ್ನು ಅಗ್ನಿಯೆದುರು ಒಗೆದ.

ಛಟಪಟ ಸಪ್ಪಳ ಮಾಡುತ್ತ ಕೋಪದಿಂದ ಅಗ್ನಿ ಅದನ್ನು ಬೂದಿ ಮಾಡಲು ಬೆಂಕಿಯ ಮಳೆಗರೆದ. ಒಂದು ಗಳಿಗೆಯ ವರೆಗೆ ತನ್ನ ಪ್ರಯತ್ನಗಳನ್ನು ನಡೆಸಿಯೇ ಇದ್ದ. ಕೊನೆಗೆ ಶಕ್ತಿಗುಂದಿದವನಾಗಿ ಮುಖ ಕೆಳಗೆ ಹಾಕಿಕೊಂಡು ಆ ತೇಜಸ್ಸಿನೆಡೆಗೆ ನೋಡುವ ಧೈರ್ಯ ಸಾಲದೆ ದೇವ ಸಭೆಗೆ ಓಡಿದ.

ಓಡುತ್ತ ಬರುವ ಅಗ್ನಿಯನ್ನು ನೋಡಿ ದೇವೇಂದ್ರ ಗಾಬರಿಯಾದ. ಅಗ್ನಿಯ ಮುಖ ಕಪ್ಪಿಟ್ಟಿತ್ತು. ಬೆವರು ಧಾರಾಕಾರವಾಗಿ ಸುರಿಯುತ್ತಿತ್ತು. "ದೇವೇಂದ್ರ ಅದಾವುದೋ ಶಕ್ತಿ ನನ್ನನ್ನು ಪರೀಕ್ಷಿಸಿತು. ನಾನದರ ಹುಲ್ಲುಕಡ್ಡಿಯನ್ನು ಸುಡಲು ಸಮರ್ಥನಾಗಲಿಲ್ಲ. ಇದು ದೈತ್ಯನಲ್ಲ, ಅದಕ್ಕಿಂತ ಹೆಚ್ಚಿನದು ದೇವತೆಗಳಿಗೆ ಇನ್ನು ಉಳಿಗಾಲವಿಲ್ಲ



ಅಗ್ನಿ ಬೆಂಕಿಯ ಮಳೆಗರೆದು ಹುಲ್ಲುಕಡ್ಡಿಯನ್ನು ಸುಡಲು ಯತ್ನಿಸಿದ.



"ಇನ್ನು ಗರ್ವವನ್ನು ಬಿಟ್ಟು ಪರಮಾತ್ಮನ ಭಕ್ತರಾಗಿ ನಿಮ್ಮ ಕಾರ್ಯವನ್ನು ಕೈಕೊಳ್ಳಿರಿ" —ಪಾರ್ವತಿ ನುಡಿದಳು

ಓಡಿ ಪಾರಾಗಿ ಬಂದೆ ಉಶ್" ಎಂದು ನಿರಿತಲ್ಲಿಯೇ ನೆಲಕ್ಕೊರಗಿದ.

ವಾಯು ಘುಡುಘುಡನೆ ಗರ್ಜಿಸಿದ– "ದೇವೇಂದ್ರನೇ ನನಗೆ ಅಪ್ಪಣೆಕೊಡು ಆ ತೇಜಸ್ಸಿನ ಸಮಾಚಾರ ತೆಗೆದುಕೊಳ್ಳುವೆ."

"ಹಾಗೆ ಆಗಲಿ ಹೋಗಿ ಬಾ" ದೇವೇಂದ್ರ ಅನುಜ್ಞೆಯಿತ್ತ.

ದೇವಸಭೆಯಿಂದ ಹೊರ ಹೊರಟಂತೆ ವಾಯುವಿಗೆ ತನ್ನ ವೇಗ ಬಲ ಕಡಿಮೆ ಯೆಂದೆನಿಸತೊಡಗಿತು. ಇದೇನು ಮೋಜು! ನಾನೇಕೆ ನಿಶ್ಶಕ್ತನಾಗತೊಡಗಿರುವೆ, ಎನ್ನುತ್ತ ಆ ತೇಜಸ್ಸಿನ ಸಮೀಪಕ್ಕೆ ಹೋದ. ಆತನಿಗೆ ಸೆಕೆಯೆನಿಸತೊಡಗಿತು. ಆ ತೇಜಸ್ಸು ವಾಯುವನ್ನು ಕುರಿತು ಮಾತನಾಡತೊಡಗಿತು. "ಎಲೆ ವಾಯುವೆ ನೀನು ನನ್ನ ಸಮಾಚಾರ ತಿಳಿದುಕೊಳ್ಳ ಬಂದಿರುವಿಯಲ್ಲವೆ? ಅದ ಕ್ಕಿಂತ ಮೊದಲು ಈ ಕಡ್ಡಿಯನ್ನು ಹಾರಿಸು. ನಂತರ ನನ್ನ ಸಮಾಚಾರ—" ಅದರ ಸವಾಲು ವಾಯುವಿಗೆ ಅಂತಹ ಪರಿಸ್ಥಿತಿಯಲ್ಲೂ ಕೋಪವನ್ನುಂಟು ಮಾಡಿತು.

"ಒಳ್ಳೇದು ನೋಡುತ್ತಿರು ಅಂತೆ ನನ್ನ ಬಲವನ್ನು" ಎಂದವ ಗಟ್ಟಿಯಾಗಿ ಊದಿದ. ಆ ಕಡ್ಡಿ ತುಸುವೂ ಅಲುಗಲಿಲ್ಲ. ಮತ್ತಿಷ್ಟು ಗಟ್ಟಿಯಾಗಿ ಊದಿದ. ಮಂದಾರ ತೀರದಲ್ಲಿಯ ನಂದನವನದ ಗಿಡಮರಗಳೆಷ್ಟೋ ಬೇರು ಸಹಿತ ಕಿತ್ತು ಬಿದ್ದವು. ಚಿಕ್ಕ ಪುಟ್ಟ ಪರ್ವತಗಳೂ ಅಲುಗಾಡಿದವು. ಆದರೆ ಕಡ್ಡಿ ಅಲ್ಲಿಯೇ ಬಿದ್ದಿತ್ತು. ವಾಯು ಮತ್ತೊಮ್ಮೆ ಗಟ್ಟಿಯಾಗಿ ಬಹಳಷ್ಟು ಊದಿದ. ಅವನ ಪ್ರಾಣವೇ ಹೋದಂತಾಯಿತು. ಮೇಲುಸಿರು ಬಿಡುತ್ತ ಕಣ್ತೆರೆದು ನೋಡಿದ. ಆ ಕಡ್ಡಿ ಅಲ್ಲಿಯೇ ಒರಗಿತ್ತು. ಸ್ವಲ್ಪ ಕೂಡ ಸರಿದಿರಲಿಲ್ಲ. ವಾಯು ತೇಜಸ್ಸಿಗೆ ನಮಸ್ಕರಿಸಿ ಕಾಲ್ಕೀಳುತ್ತ ದೇವ ಸಭೆಗೆ ನಡೆದ. ವಾಯುವಿನ ಆಗಮನವನ್ನು ನಿರೀಕ್ಷಿಸುತ್ತಿದ್ದ ದೇವೇಂದ್ರ ಅವನ ಸಪ್ಪೆಮುಖವನ್ನು ನೋಡಿ ಗಾಬರಿಯಾದ. ದೇವತೆಗಳೆಲ್ಲ ಇದೇನೋ ವಿಪತ್ತು ಮತ್ತೆ ತಮಗೆ ಬಂದಿತಲ್ಲ ಎಂದು ನಡುಗತೊಡಗಿದರು. "ದೇವತೆಗಳೇ ಗಾಬರಿಯಾಗದಿರಿ. ನಾನೇ ಹೋಗಿ ಆ ತೇಜಸ್ಸನ್ನು ನೋಡಿ ಬರುವೆ" ಎಂದು ಮಾರುಗಾಲು ಹಾಕುತ್ತ ದೇವೇಂದ್ರ ನಡೆದ.

ನಂದನವನದ ಸನಿಹಕ್ಕೆ ಹೋದಂತೆ ಆ ತೇಜಸ್ಸಿನ ಪ್ರಖರತೆ ಕಡಿಮೆಯಾದದ್ದು ಇಂದ್ರನಿಗೆ ಕಾಣಿಸಿತು. ಇನ್ನೂ ಸಮೀಪಕ್ಕೆ ಹೋದಾಗ ಅದು ಪೂರ್ಣವಾಗಿ ಮಾಯವಾಗಬೇಕೆ? "ಓಹ್, ಇದೇನಿದು? ತಾಯಿ ಪಾರ್ವತಿ, ನೀನೇ ನಮ್ಮನ್ನು ಕಾಪಾಡಬೇಕು. ಇದಾವ ಪರೀಕ್ಷೆ, ವಿಪತ್ತು ನಮಗೆ" ಎಂದಾತ ಎನ್ನುತ್ತಿರುವಷ್ಟರಲ್ಲಿ ಪಾರ್ವತಿದೇವಿ ಆತನೆದುರು ಕಾಣಿಸಿಕೊಂಡಳು. "ತಾಯಿ, ಇದೋ ನಿನಗೆ ನಮಸ್ಕರಿಸುವೆ" ಇಂದ್ರನು ಪಾರ್ವತಿಯ ಚರಣಗಳಲ್ಲಿ ತನ್ನ ದೀರ್ಘ ದೇಹವನ್ನು ಚಾಚಿದ. "ವತ್ಸಾ, ಏಳು, ಗಾಬರಿಯಾಗ

ಬೇಡಪ್ಪ ಇದೀಗ ನಿಮ್ಮೆದುರು ಕಾಣಿಸಿಕೊಂಡ ತೇಜಸ್ಸು ಪರಮಾತ್ಮ, ಆತನೆದುರು ನೀವು ಹುಲ್ಲಿಗಿಂತಲೂ ಕೀಳು, ಆತನ ಮುಂದೆ ನಿಮ್ಮ ಪ್ರತಾಪವೇ? ಆತನ ಒಲವು ನಿಮಗೆ ಬಲ. ಆತನ ಸಹಾಯವಿಲ್ಲದಿದ್ದರೆ ನೀವೇನೂ ಮಾಡಲಾರಿರಿ. ಅಸುರರನ್ನು ಗೆದ್ದವರು ನೀವಾದರೂ ನಿಮ್ಮ ಬಲ ಸ್ಫೂರ್ತಿ ಶಕ್ತಿಯುಳ್ಳ ಪರಮಾತ್ಮನದು. ಆತನನ್ನು ಮರೆತು ನೀವೇ ನಿಮ್ಮ ಪೌರುಷವನ್ನು ಕೊಚ್ಚಿಕೊಂಡರೆ ಏನು? ನಿಮ್ಮ ಈ ಜಂಭ ಸರಿಯಲ್ಲ. ಇನ್ನು ಗರ್ವವನ್ನು ಬಿಟ್ಟು ಉದಾರರಾಗಿ ಪರಮಾತ್ಮನ ಭಕ್ತರಾಗಿ ನಿಮ್ಮ ಕಾರ್ಯಗಳನ್ನು ಕೈಕೊಳ್ಳಿರಿ ಮಗು, ನಿನಗೆ ಒಳ್ಳೆಯದಾಗಲಿ" ಎಂದು ಪಾರ್ವತಿ ಇಂದ್ರನಿಗೆ ಉಪದೇಶಿಸಿದಳು. ನಂತರ ಆತನು ಮತ್ತೊಮ್ಮೆ ನಮಸ್ಕರಿಸಿದ. ಆಗ ಪಾರ್ವತಿ ಅವನ ನೆತ್ತಿಯ ಮೇಲೆ ತನ್ನ ಅಭಯ ಹಸ್ತವನ್ನಿಟ್ಟು ಆಶೀರ್ವದಿಸಿ ಮಾಯವಾದಳು.

ದೇವೇಂದ್ರನಿಗೆ ಇದೆಲ್ಲ ವಿಚಿತ್ರ ಕನಸೆನ್ನಿಸಿತು. ಆದರೆ ನಡೆದದ್ದೆಲ್ಲ ಸತ್ಯವಾಗಿತ್ತು. ದೇವತೆಗಳ ಗರ್ವ ಮುರಿಯಲೆಂದೇ ಪರಮಾತ್ಮ ಈ ಹಂಚಿಕೆ ಹಾಕಿರುವನೆಂದು ನೆನೆದು ಆತನ ಸ್ಮರಣೆಮಾಡುತ್ತ ದೇವಸಭೆಗೆ ನಡೆದ. ದೇವಸಭೆ ಇಂದ್ರನಿಂದ ಕತೆಯನ್ನೆಲ್ಲ ಕೇಳಿ ಸಮಾಧಾನದ ಉಸಿರುಬಿಟ್ಟಿತು. ಎಲ್ಲರ ಮುಖದ ಮೇಲೆ ನಗು ಮೂಡಿತು. ಆದರೆ ಈ ಸಲ ಅಲ್ಲಿ ಗರ್ವದ ರೇಖೆಯಿರಲಿಲ್ಲ. ಪರಮಾತ್ಮನ ಬಗೆಗೆ ಕೃತಜ್ಞತೆಯ ಚಿಹ್ನೆವಿತ್ತು.





" ಸಿಡಿಮದ್ದಿನ ಕಾರ್ಖಾನೆಗೆ ಬೆಂಕಿಬಿದ್ದರೂ ಶಬ್ದವೇ ಇಲ್ಲ, ಎಲ್ಲಾ ಠುಸ್ಸ್! ಈ ಪಟಾಕಿ ಸಹಾ ಇಲ್ಲೇ ತಯಾರಾದ್ದು — ಹಾಳು... "



"ವ್ಹಾ ! ಭೇಷ್ ! ಭಲೆ ಭಲೆ !"

— ೧ —

( ಶ್ಯಾಮರಾಯ ತನ್ನ ಕೋಣೆಯಲ್ಲಿ ಒಂದು ಪತ್ರವನ್ನು ಓದುತ್ತ ಮಂಚದ ಮೇಲೆ ಅಡ್ಡಾಗಿದ್ದಾನೆ. ಓದುತ್ತೋದುತ್ತ "ಭೇಷ್ ! ವ್ಹಾ ! ಭಲೆ" ಎನ್ನುತಿದ್ದಾನೆ.)

ಶ್ಯಾಮು— ಪರವಾ ಇಲ್ಲ. ಪರವಾ ಇಲ್ಲ. ನನ್ನ ಹೆಂಡತಿ ಇಷ್ಟು ಪಕ್ಕಾ ಇದ್ದಾಳೆ, ಇಷ್ಟು ಚುರುಕು ಇದ್ದಾಳೆ ಅಂತ ತಿಳಿದಿರಲಿಲ್ಲ. ವ್ಹಾ ! ಎಷ್ಟು ಸಮಯೋಚಿತ, ಎಷ್ಟು ವ್ಯಾವಹಾರಿಕ ಪತ್ರ ಅಂತೇನಿ ? ಡಾಕ್ಟರ ಆಗಿ ನಾ ಸಂಸಾರ ಹೂಡಿದ ಮ್ಯಾಲೆ ಈಕಿ ಹ್ಯಾಂಗ ಸಂಸಾರಾ ತೂಗಿಸಿಕೊಂಡು ಹೋಗ್ತಾಳೊ ಅಂತಿದ್ದೆ. ಪರವಾ ಇಲ್ಲ. ಈ ಪತ್ರಾ ನೋಡಿದ್ರೆ ನನ್ನ ಸಂಸಾರ ರಥಾ ಸರಳ ಅರವತ್ತು ಮೈಲು-ಫುಲ್ ಸ್ಪೀಡಿನಲ್ಲಿ ಹೋಗ್ತದ ಅನ್ನೂದಕ್ಕೇನೂ ಸಂಶಯ ಉಳೀದ್ಹಾಂಗ ಆತು. ಒಂದು ನಾಲ್ಕ ವರ್ಷ ಪ್ರಾಕ್ಟೀಸ್ ಮಾಡೂದರೊಳಗೆ ಕಾರು-ಬಂಗಲೆ-ಆಳುಕಾಳು-ವೈಭವಾನೇ ವೈಭವ ! (ಪತ್ರ ತನ್ನಷ್ಟಕ್ಕೆ ಓದಿಕೊಳ್ಳುವನು.) 'ಪ್ರಿಯಾ, ಇಷ್ಟರೊಳಗೆ ದೀಪಾವಳಿ ಹಬ್ಬಕ್ಕ ಬರ್ರಿ ಅಂತ ನಿಮಗೆ ಅಪ್ಪನ ಪತ್ರ ಬಂದಿರಬೇಕು. ಪರೀಕ್ಷೆ ಆದ ಮ್ಯಾಲೆ— ನೀವು ಪಾಸಾಗ್ತೀರಿ ಅಂತ ನನಗೆ ಖಾತ್ರಿ ಅದ— ಪ್ರಾಕ್ಟೀಸ್ ಶುರು ಮಾಡೂದಕ್ಕಿಂತ ಮೊದಲ ಹನಿಮೂನಿಗೆ ಹೋಗಿ ಬರೋಣ ಅಂತ ಅಂದಿದ್ರಿ. ಮುಂದೆ ಉಪಯೋಗಕ್ಕೆ ಬಂದೇ ಬರ್ತದ ಅಂತ ಕಾರ್ ಡ್ರೈವಿಂಗ ಕಲತಿಟ್ಟೇನಿ ಅಂತ ಅಂದಿದ್ರಿ. ಆ ಮಾತು ನೆನಪಾಗಿ ಈ ಪತ್ರ ಬರದೇನಿ. ಖರೇ ಅಂದ್ರ ನಮ್ಮಪ್ಪ ಲಗ್ನದೊಳಗೇ ನಿಮಗೆ ಕಾರು ಕೊಡಿಸಬೇಕಿತ್ತು. ಈಗ ಅವಕಾಶ ಬಂದದ. ದೀಪಾವಳಿಗೆ ಬರ್ತೇನಿ, ಕಾರು ಕೊಡಿಸಲಿಕ್ಕೇ ಬೇಕು ಅಂತ ಖಡಾಖಂಡಿತ ಕರಾರು ಹಾಕಿ ಬರೀರಿ, ಒಂದು ಪತ್ರಾನ ನಮ್ಮಪ್ಪನಿಗೆ. ನಮ್ಮಪ್ಪ ದೊಡ್ಡ ಸರಕಾರೀ ನೌಕರರು. ಅವನಿಗೇನೂ ಇದು ನೀಗದ ಮಾತಲ್ಲ. ನಮ್ಮ ಅಪ್ಪನಿಗೆ— ಎಲ್ಲಾ ದೊಡ್ಡ ಸರಕಾರೀ ನೌಕರರಿಗೂ ಹಾಗೇ ಅನ್ನಿ— ಕೆಳಗಿನವರಿಗೆ ಅಪ್ಪಣೆ ಮಾಡೂದು, ಮೇಲಿನವರ ಅಪ್ಪಣೆ ಪಾಲಿಸೂದು ಎರಡೇ ಗೊತ್ತು ವಿನಾ ಹೆಚ್ಚಿನ ವಿಚಾರಕ್ಕೆ ಅಂವಾ ಬೀಳೂದೇ ಇಲ್ಲ. ಕೊಡೂದೆಲ್ಲಾ ಕೊಟ್ಟ್ಯಾಗ್ಯದ ಅಂತ ಆಗ ಈಗ ಅಂತಿರ್ತಾನ. ಅದಕೇ ಈಗ ನೀವು ರಿಮ್ಯಾಂಡರ ಕಳಿಸ್ರಿ. ಮೇಲಿನ ಅಧಿಕಾರಿ ಅಪ್ಪಣೆ ಬಜಾಯಿಸೂ ರೀತಿ... ಪತ್ರ ಬರೀರಿ. ಅಂದ್ರೆ ಕೆಲಸಾಗೇ ಆಗ್ತದ. ಕಾರು ಸಿಕ್ತು ಅಂದ್ರೆ, ನೀವು ಮತ್ತು ನಾನು ಇಬ್ರೆ— ಹೊಸ ಹೊಸಾ ಕಾರಿನೊಳಗೆ ಮೈಸೂರು, ಬೆಂಗಳೂರು, ಊಟಿ-ಎಲ್ಲಾ ಎಲ್ಲಾ ಅಡ್ಡಾಡಿ ಬರೋಣ ದೀಪಾವಳಿ ಎಂದು ಬಂದೀತು, ನೀವೆಂದು ಬರ್ತೀರಿ, ಹೊಸ ಕಾರಿನ ಮಾಲ... ಯಾವಾಗ ಆಗೀರಿ ಅಂತ ಚಾತಕಪಕ್ಷಿ ಹಾಂಗೆ ಕಾಯ್ಕೊಂಡು ಕೂತೇನಿ. ನಾನು ಟಪಾಲಿಗೇ ಎಕ್ಸಪ್ರೆಸ್ ರಜಿಸ್ಟರ ಪತ್ರ ನಮ್ಮಪ್ಪನ ಬರೀರಿ. ಇಲ್ಲಾಂದ್ರೆ ನನ್ನ ಕನಸು ಹಾಳಾಗಿ ಹೋದೀತು. ಹಾಂಗಾತು ಅಂದ್ರೆ, ಮುಂದೆ ನಾ ನಿಮ್ಮೊಡನೆ ಒಂದೆಂದೂ ಒಂದ ಶಬ್ದಾನೂ ಮಾತಾಡಲಿಕ್ಕಿಲ್ಲ. ಇತಿ ನಿಮ್ಮ ಪ್ರಿಯ ಲತಾ' ವ್ಹಾ! ವ್ಹಾ! ಹಾಗಂದ್ರೆ. ಹಾಗಾದೂ ಎಂದೆ. ನನ್ನ ಡಾಕ್ಟರೀ ತಲೀ ಒಳಗೆ ಈ ವ್ಯವಹಾರದ ಮಾತು ಹೊಳೆಯೂದೇ ಸಾಧ್ಯ ಇರಲಿಲ್ಲ. ದವಾಖಾನೆ ತೆರೀಲಿಕ್ಕೆ ಬೇಕಾಗೂ ಹಣ ವರದಕ್ಷಿಣೆ ಅಂತ ಕೊಟ್ಟಾರ, ಇನ್ನೇನು ಕೇಳ್ಬೇಕು ಅಂತ ಇದ್ದ ನನಗೆ— ನಾ ಲತಾನ್ನ ಆರಿಸಿದ್ದು ಬೇಷಾತು. ಇವಳ ತಂಗಿ ಉಷಾ ಇವಳಿಗಿಂತ ತುಸು ನೋಡಲಿಕ್ಕೆ ಛಂದ ಇದ್ರೂ, ನನಗೇಕೊ ಇವಳ ಮುಖಾ ಕಂಡು "ನೀರಿದೆ ಇವಳಲ್ಲಿ" ಅಂತ ಅನಿಸಿ ಇವಳೇ ಅಡ್ಡಿ ಇಲ್ಲ ಅಂದೆ. ದೇವರು ಸೌಂದರ್ಯ ಹೆಚ್ಚಾಗಿ ಕೊಟ್ಟರೆ ಬುದ್ಧಿ ಕಡಿಮೆ ಕೊಟ್ಟಿರ್ತಾನೆ ಅಂತ— (ಬಾಗಿಲು ಬಡಿದ ಸಪ್ಪಳ) ಯಾರಪಾ! ಕನಸಿನಾಗ ಕರದೀ ? (ಬಾಗಿಲು ಮತ್ತೆ ಬಡಿದ ಸಪ್ಪಳ) ಯಾರು ? ಬರ್ರಿ. ಅಗಳೀ ಹಾಕಿಲ್ಲ. (ಬಾಗಿಲು ತೆರೆದು ಮಾಧವರಾಯನ ಪ್ರವೇಶ.) ಓಹೋಹೋ ! ವಕೀಲರು. ನಮ್ಮ ಪಡ್ಡಕ ಭಾವೀ ಎಂ. ಎ. ಎಲ್. ಎಲ್. ಬಿ. ವಕೀಲ ಮಹಾಶಯರು. ಬರ್ರಿ ಬರ್ರಿ. ಏನು ಅಪರೂಪ ಬಂದು ಬಿಟ್ರಿ ? ಎಲ್ಲಾ ಆರಾಮು ಅದsನ ಇಲ್ಲೊ ?

ಮಾಧವ— ತುಸಾ ತಡೀರಪಾ ಈ ಪ್ರಶ್ನೆ ಕೇಳಲಿಕ್ಕೆ ? ಪರೀಕ್ಷೆ ಆಗಿ ಡಾಕ್ಟರರಾಗಿ ದವಾಖಾನೆ ತೆರೆದ ಮ್ಯಾಲೆ ಬಂದವರನ್ನೆಲ್ಲಾ 'ಆರಾಮು ಅದsನೊ ಇಲ್ಲೊ?, ಅಂತ ಕೇಳ್ರಿ. ಈಗ ನಾ ಆರಾಮಿಲ್ಲ ಅಂದ್ರೆ ನೀವೇನ ಔಷಧಿ ಕೊಡುವಾಂಗಿಲ್ಲ, ಬಿಡವ್ಹಾಂಗಿಲ್ಲ. ಹೌದೊ ಅಲ್ಲೊ? ಏನಂತೀರಿ?

ಶ್ಯಾಮು— ಭೇಷ್ ಮಾತು ಅಂದ್ರಿ. ಮತ್ತೆ ಮಾತಿನೊಳಗೆ ಇಷ್ಟು ಚಾಲಾಕು ಇಲ್ಲದಿದ್ರೆ ವಕೀಲ ಆದ್ರೂ ಗುದ್ದಕ್ಕೆ ಮಣ್ಣು ಹೊತ್ತ ಹಾಗೇ ಸರಿ. ಹೌದೋ ಅಲ್ಲೊ ? ಅಂದ ಹಾಗೆ ಮತ್ತೇನು . . .

ನಾಟಕ : ಜಿ.ಜಿ.ಹೆಗಡೆ

ಮಾಧವ— ಅಂದ ಹಾಗೆ ನೀವು ದೀಪಾವಳಿ ವಿಷಯ ಏನು ಯೋಚನೆ ಮಾಡೀರಿ? ಮಾವನ ಮನೀಗೆ—

ಶ್ಯಾಮು—ಅದನ್ಯಾಕೆ ಕೇಳಬೇಕು ಅಂತೇನಿ. ಅಲ್ಲಾ, ಮೊದಲನೆ ದೀಪಾವಳಿ ಮಾವನ ಮನೇಗ ಹೋಗೂದು ಇದ್ದದ್ದೇ. ಹೆಂಡತಿಯ ಮುಖದರ್ಶನ-

ಮಾಧವ— ಬರೇ ಅಷ್ಟಕ್ಕೇ ಹೋಗೂದಿದ್ರೆ ದೀಪಾವಳಿಯ ತನಕಾ ಕಾಯೂದಾದ್ರೂ ಯಾಕೆ? ಏನಂತೀರಿ? ಹೆಂಡತಿ ಮುಖ ದರ್ಶನ ಇನ್ನು ಸಾಯೂತನಕ ನಮ್ಮ ಪಾಲಿಗೆ ನಿತ್ಯ ಇದ್ದದ್ದೇ. ಆದರೆ ಮೊದಲನೇ ದೀಪಾವಳಿ ಅಳಿಯ ಅನ್ನೊ ಪ್ರಾಣಿಗೆ ಜೀವನದಲ್ಲಿ ಬರೂದು ಒಂದೇ ಸಲ. ಆ ಒಂದು ಸಲ ಕೈತಪ್ಪಿ ಅಂತಂದ್ರೆ—ಹೆಂಡ್ತಿ ಮುಖಾ ನೋಡೂ ಹುಚ್ಚಿನೊಳಗೆ ಮಾವನ ಕಿಸೆ ನೋಡಲಿಲ್ಲಾ ಅಂತಂದ್ರೆ— ಮುಂದೆ ಏನಂತೀನಿ, ಸಾಯೂತನಕ ಪಶ್ಚಾತ್ತಾಪ ಪಟ್ಕೋತಾ—

ಶ್ಯಾಮು— ಅಂದ್ರೆ ಮಾವನಿಂದ ದೀಪಾವಳಿ ಉಡುಗೊರೆ— ನಿಮಗೂ ನಿಮ್ಮ ಉಷಾಳಿಂದ ಪತ್ರ ಬಂದದೇನು ?

ಮಾಧವ— ಅಂದ್ರೆ, ನಿಮಗೆ ನಿಮ್ಮ ರಾಣಿ ಸಾಹೇಬರಿಂದ ಪತ್ರ ಬಂದದ ಅಂದ ಹಾಂಗೆ ಆತು. ಏನಂತ ಬರದಾರ? ನಮ್ಮವಳ ಪತ್ರನೂ ಬಂದದ. ಅದಕ್ಕೇ ವಿಚಾರ ಮಾಡೋಣ ಅಂತ ಬಂದೆ. ನಾವಿಬ್ಬರೂ ಆಲೋಚಿಸಿ,

ಸೇರಿ ಜಾಯಿಂಟ್ ಫ್ರಂಟ್– ಸಂಯುಕ್ತರಂಗ ಮಾಡಿಕೊಂಡು ಮಾವನ ತಿಜೋರಿ ಮ್ಯಾಲೆ ದಾಳಿ ಮಾಡಿದರೆ—

ಶ್ಯಾಮು—ಹುಂ. ಮಾಡೋಣಂತ. ಅದಕೇನು? ಆದರೆ ನೀವೇನು ಕೇಳವ್ರು? ಹ್ಯಾಂಗ ಕೇಳವ್ರು? ಏನ ಕೇಳ್ರಿ ಅಂತ ನಿಮ್ಮಾಕಿ ಬರದಾಳ? ಹ್ಯಾಂಗೆ ಕೇಳ್ರಿ ಅಂತ ಸೂಚಿಸ್ಯಾಳ? ಅದನಷ್ಟು ಹೇಳ್ರಲಾ ಅಂದ್ರೆ ಮುಂದಿನ ಹೆಜ್ಜೆ ಇಡ್ಲಿಕ್ಕೆ ಛೆ ಷ್ ಆಗ್ತದ. ನಮ್ಮಾಕಿಅಂತೂ ಸ್ವಚ್ಛ ಕಾರು ಕೇಳ್ರಿ-ಬೇಕೇ ಬೇಕು, ಕೊಡದಿದ್ರ ನಡಿಯೂದಿಲ್ಲ ಅನ್ನುಹಾಂಗ ಹುಕುಂ ಜಾರಿ ಯಿಸಿ ಪತ್ರ ಬರೀರಿ ಅಂತ ಪತ್ರಬರದಾಳೆ. ಅಂದ್ರೆ ಮಾವಗೆ ನೋಟೀಸೇ ಕೊಡಬೇಕು ಅಂತ ಅನ್ರಿ ಅದಕ್ಕೇನೇ ಒಂದು ಛೇಷಾದ ನೋಟೀಸು ರೂಪೀ ಪತ್ರ ಡ್ರಾಫ್ಟ್ ಮಾಡಿಕೊಡ್ರಿ ಅಂತ ನಿಮ್ಮ ಹತ್ರ ಬರಬೇಕು ಅಂತ ಮಾಡಿದ್ದೆ. ನೀವೇ ಬಂದ್ರಿ, ಛೇಷಾತು.

ಮಾಧವ— ವಕೀಲಿ ಶುರೂ ಮಾಡಿದ ಮ್ಯಾಲೆ ಒಳ್ಳೇ ಆಫೀಸು, ಮನೆ ಬೇಕಾಗ್ತದ; ಎರಡಕ್ಕೂ ಉಪಯೋಗ ಆಗುವಂಥ ಮನೆ ಕೊಡಸ್ರಿ ಅಂತ ಅಪ್ಪಗ ಬರೀರಿ ಅಂತ ಉಷಾ ಬರದಾಳ. ಪತ ಬರೀವಾಗ ನಿಮ್ಮ ಬುದ್ಧೀನೆಲ್ಲಾ ಉಪಯೋಗ್ಸಿ ಅಪ್ಪನ್ನ ಹೊಗಳಿದ ಹಾಗೆ ಮಾಡ್ರಿ ನಮ್ಮಪ್ಪ ದೊಡ್ಡ ಸರಕಾರೀ ನೌಕರಾ. ಎಲ್ಲಾರಿಂದ್ಲೂ ಹೊಗಳಿಸಿ ಕೊಂಡು ರೂಢಿಯಾಗಿ ಬಿಟ್ಟದ. ನೀವೇ ಇಂದ್ರ ಚಂದ್ರ ಅಂದ್ರೆ ಬೆಣ್ಣೀ ಹಾಗೆ ಕರಗಿ ಹೋಗ್ತಾನೆ, ಕೆಲಸ ಆಗ್ತದೆ ಅಂತ ಬರದಾಳ ಏನಂತೀನಿ? ನಾ ಏನೋ ಅಂತ ಮಾಡಿದ್ದೆ ಆದರೆ ಉಷಾಗೆ ತಲಿ ಆದ ವಕೀಲನ ಹೆಂಡ್ತಿ ಆಗ್ಲಿಕ್ಕೆ ಯೋಗ್ಯ ಇದ್ದಾಳೆ ಅಂತ ಈಗ ಗೊತ್ತಾದ್ಹಾಂಗ ಆತು ಏನಂತೀನಿ, ನನ್ನ ಅಭಿಪ್ರಾಯ ಕೇಳಿದ್ರೆ— ಇನ್ನೊಬ್ಬ ಹತ್ರ ಕೊಡು ಅಂತ ಕೇಳುವಾಗ ಜಬರಿಸಿದರೆ ಹ್ಯಾಂಗಿ ? ಕೇಳೂದನ್ನ— ಇದೆಲ್ಲಾ ಕುತ್ತಿಗೆ ಕೊಯ್ಯುವಂಥ ಕೆಲಸ ಕೊಯ್ಸಿಕೊಳ್ಳುವವನೀಗೆ ನೋವಾಗದ ಹಾಗೆ ಕೊಯ್ಯಬೇಕು. ಆಪರೇಶನ್ ಮಾಡೂ ಮಂದಿ ನೀವು ನಿಮಗೆ ಗೊತ್ತಿರಬೇಕು ಈ ವಿದ್ಯೆ ಅಂತ ಮಾಡಿದ್ದೆ. ಕೇಳೂದನ್ನ ಕೇಳಲೇ ಇಲ್ಲ ಅನ್ನೂ ನಯವಾದ ಧಾಟೀಲಿ ಕೇಳ್ರಿ ಅಂತ ಬರದ ನನ್ನ ಹೆಂಡತೀ ಅಭಿಪ್ರಾಯವೇ ಯೋಗ್ಯ ಅಂತ ನನಗನಸ್ತದ. ಏನಂತೀನಿ ?

ಶ್ಯಾಮು— ಏನಂತೀರಿ ತಲಿ ? ಸರಳ ನನ್ನ ಮತ್ತು ಲತಾನ್ನ ತಲೀ ಇಲ್ಲದ ಮಡ್ಡರನ್ನಾಗಿ ಮಾಡಿ ನಿಮ್ಮ ಹೆಂಡತೀನ ಹೊಗಳಿ ಬಿಟ್ರಿ ತೀರ್ರಿ. ಅಲ್ರಿ, ಬೇಡಿದ್ರೆ ಯಾರಾದ್ರೂ ಕೊಡೂ ಕಾಲೇನ್ರಿ ಇದು? ಹಕ್ಕ ಇದ್ರೂ ಬಡದಾಡಿ ತಗೊಳ್ರಿ ಅನ್ನೂ ಕಾಲ ಇದು. ಬೆಣ್ಣೆ ಹಚ್ಚಿದ್ರೆ ಕೆಲಸ ಆಗ್ತದ ಅನ್ನೂದು ಕೆಲಮಟ್ಟಿಗೆ ಖರೇ ಇದ್ರೂ ಅದರ ಗುಟ್ಟು ಬ್ಯಾರೇನೇ ಅದ. ಸ್ವಲ್ಪ ಮೆತ್ತಗೆ ತಿಕ್ಕಿದ್ರ ಸಾಲೂದಿಲ್ಲ, ಸ್ವಲ್ಪ ಬಿರುಸಾಗಿ ತಿಕ್ಕಿದ್ರ ಆ ಕಾವಿಗೆ ಬೆಣ್ಣೀನೇ ಕರಗಿ ನೀರಾಗಿ ಹೋಗ್ತದ. ವಕೀಲ ಆಗವ್ರು ನೀವು. ಇಷ್ಟೂ ತಿಳಿಯೂದಿಲ್ಲಾಂದ್ರೆ—ಒಂದು ಹೊಡ್ತ ಎರ ೨ ತುಂಡು.

ಮಾಧವ — ಗೊತ್ತದ ಬಿಡ್ರಿ ನೀವೂ ಮತ್ತ ನಿಮ್ಮಾಕಿ ಇಬ್ರೇ ಈ ಜಗತ್ತಿನೊಳಗ ಶಾಣ್ಯಾರು ಅಂತ ತಿಳಕೊಂಡೀರಲ್ಲ ? ತಿಳಕೊಳ್ರಿ. ಏನಂತೀನಿ? ಹಾಂಗ ತಿಳಕೊಳ್ಳಿಕ್ಕೆ ಯಾರಪ್ಪನ ಗಂಟು ಹೋಗ್ತದೆ ? ಏನಂತೀನಿ. ಅಂಗೈ ಹುಣ್ಣಿಗೆ ಕನ್ನಡಿ ಯಾಕ ಬೇಕು? ದೀಪಾವಳಿ ಏನು ಇನ್ನೊಂದು ವಾರದೊಳಗ ಬರ್ತದ ನಿಮ್ಮ ಶಾಣ್ಯಾ ಹೆಂಡ್ತಿ ಹೇಳಿದ್ಹಾಂಗೆ, ಶಾಣ್ಯಾ ನೀವು ಒಂದು ಹೊಡ್ತ ಎರಡು ತುಂಡು ಮಾಡ್ರಿ. ಧಡ್ಡ ನನ್ನ ಹೆಂಡ್ತಿ, ಧಡ್ಡ ನಾನು ಸಾಮೋಪಾಯದಿಂದ— ನಯನಾಜೂಕಿನಿಂದ—

ಶ್ಯಾಮು— ನಾಜೂಕಲ್ಲ ಬೆಣ್ಣೆ- ಬೆಣ್ಣೆ ಹಚ್ಚೀ ಅನ್ರಿ

ಮಾಧವ— ಆಗ್ಲಿ. ಬೆಣ್ಣೆ ಹಚ್ಚತೀವಿ ಆತೊ ಇಲ್ಲೋ ನಿಮ್ಮ ಕತ್ತಿ ಹೆಚ್ಚೋ ನಮ್ಮ ಬೆಣ್ಣೆ ಹೆಚ್ಚೋ ಅಂತ ನಿರ್ಧಾರ ಆಗಿಹೋಗ್ಲಿ. ನಾ ಏನೋ ಜಾಯಿಂಟ್ ಫ್ರಂಟ್ ಅಂತ ಬಂದ್ರೆ ನೀವು ದಿಮಾಕಿನಿಂದ—

ಶ್ಯಾಮು— ಹೌದು ಅಂದೆ. ರಟ್ಟೆಯೊಳಗೆ ಬಲಾ ಇದ್ರೆ ಮಾತ್ರ ದಿಮಾಕು ಬರ್ತದ ಅಂದೆ.

ಮಾಧವ— ಬರ್ಲಿ. ಆದರೆ—ಹೋಗಲಿಬಿಡ್ರಿ. ಮೈ ಕಸುವಿನ ಜೋರು ತೋರಿಸುವವನಿಗ ಬುದ್ಧಿ ಕಡಿಮೆ ಅಂತ ಎಲ್ಲೋ ಓದಿದ ನೆನಪದ. ಏನಂತೀನಿ ? ಬ್ಯಾಡ—ಮಾತು ಬೆಳಸೂದು ಬ್ಯಾಡ. ಇನ್ನು ನನ್ನ ನಿಮ್ಮಭೆಟ್ಟಿ ಮಾವನ ಮನೇಲಿ. ಮಾತೂ ಕಥೆ—ಯಾರಾದ್ರೂ ಒಬ್ಬರು ಗೆದ್ದಮ್ಯಾಲೆ. ನಿಮ್ಮ ಬಾಣ ಬಿಡ್ರಿ ಮಾವನ ಮ್ಯಾಲೆ. ನಾನೂ ನನ್ನ ಬೆಣ್ಣೆ ಪ್ಯಾಕ ಮಾಡಿ ಕಳಸ್ತೇನಿ. ಹಚ್ಚಲಿಕ್ಕೆ ನಮ್ಮಾಕಿ ಅಲ್ಲಿ ಇದ್ದಾಳೆ, ಅಂದೆ.

ಶ್ಯಾಮು— ನನ್ನಬಾಣ ಸರಿಯಾಗಿ ನಟ್ಟಿತೊ ಇಲ್ಲೊ ನೋಡ್ಲಿಕ್ಕೆ ನಮ್ಮಾಕಿ ಇದ್ದಾಳೆ ಅಂತ

ಮಾಧವ— ಸರಿ ಹಾಗಾದ್ರೆ. ಖಾಸ ಅಕ್ಕ-ತಂಗಿಯರ ಗಂಡಂದಿರಾದ ನಾವು ಅಣ್ಣ ತಮ್ಮಂದಿರ ಹಾಗೆ ಇರೂದು ಬಿಟ್ಟು—

ಶ್ಯಾಮು— ಮುಂದೆ ಇರೋಣಂತ್ರಿ. ಹ್ಯಾಂಗೂ ಸಂದರ್ಭ ಬಂದದ. ನಾನೂ ನನ್ನ ಹೆಂಡತಿ ಹೆಚ್ಚೊ, ನೀವೂ ನಿಮ್ಮ ಹೆಂಡ್ತಿ ಹೆಚ್ಚೊ ನಿರ್ಧಾರಾತು ಅಂದ್ರೆ ಮುಂದೆ ಹ್ಯಾಂಗಬೇಕೋ ಹಾಂಗೇ ಇರೋಣಂತ. ಈ ದೀಪಾವಳಿ ಮುಗಿಯೂ ತನಕ ಮಾತ್ರ ನಾವಿಬ್ಬರೂ ಕುಸ್ತಿ ಕಣಕ್ಕಿಳಿದ ಸ್ಪರ್ಧಾಳುಗಳು. ತಿಳೀತೆ ?

ಮಾಧವ— ಹೂಂ ಕುಸ್ತಿ ಮುಗಿದ ಮ್ಯಾಲೆ ಈ ಹುರುಪು ಉಳಿಯೂದಿಲ್ಲ ನೆನಪಿಟ್ಕೊಳ್ರಿ. ಬರ್ತೇನಿ. ನಮಸ್ಕಾರ–

– ೨ –

(ಲಕ್ಷ್ಮಣರಾಯರ ಮನೆ. ರಾಯರು ಕೈಯಲ್ಲಿ ಎರಡು ಪತ್ರಗಳನ್ನು ಹಿಡಿದುಕೊಂಡು ಶತಪಥ ಹಾಕುತ್ತಿದ್ದಾರೆ.)

ಲಕ್ಷ್ಮಣ— ಏನೇ, ಬಾ ಇಲ್ಲೆ.

ವತ್ಸಲಾ— (ಅವರ ಒಳಗಿಂದ ಹೆಂಡತಿ) ಏನು ?

ಲಕ್ಷ್ಮಣ— ಅಲ್ಲಿಂದ್ಲೆ ಏನು ನಿನ್ನ ತಲೀ ಕೇಳತಿ ? ಇದು ನೆರೆಮನೆಯವರಿಗೆಲ್ಲಾ ಕೇಳಿಸುವಷ್ಟು ಗಟ್ಟಿಯಾಗಿ ಹೇಳೂ ಮಾತಲ್ಲ




" ಸ್ವಲ್ಪ ಬಿರುಸಾಗಿ ತಿಕ್ಕಿದ್ರ ಆ ಕಾವಿಗೆ ಬೆಣ್ಣೆ ಕರಗಿ ಹೋಗ್ತದ "



"ನೀವು ಕೇಳಿದ ಹಾಗೆ ಕಾರು-ಮನೆ"

ವತ್ಸಲಾ— (ಬಂದು) ಏನು? ಮುಖ ಕೆಂಪಾಗೇದ?

ಲಕ್ಷ್ಮಣ— ಮುಖ ಕೆಂಪಗೆ ಮಾಡದಿದ್ರ ಅದು ಕಪ್ಪಾಗೂ ಪ್ರಸಂಗ ಬಂದದ ಅಂದೆ. ಎಲ್ಲಿ ಹೋಗ್ಯಾರ ಲತಾ ಮತ್ತೆ ಉಷಾ? ಕರೀ ಅವ್ರನ್ನ

ವತ್ಸಲಾ— ಏನೋ ಅವರ ಕಾಲೇಜಿನೊಳಗ ದೀಪಾವಳಿ ದಿನಾ ನಾಟ್ಕಾ ಮಾಡ್ತಾರಂತ. ಪ್ರ್ಯಾಕ್ಟೀಸು ಮಾಡ್ಬೇಕು ಅಂತ ಹೋಗ್ಯಾರ.

ಲಕ್ಷ್ಮಣ— ದುಡದು ಹಾಕೂ ಅಪ್ಪ ಇರುವಾಗ ಚೈನಿ ಮಾಡ್ಲಿಕ್ಕೆ ಅವರದೇನು ಹೋಗ್ತದ?

ವತ್ಸಲಾ— ನಮಗಿರವ್ರು ಇವೆರಡೇ ಹುಡುಗಿಯರು ದೇವರ ದಯದಿಂದ ಇಬ್ರದೂ ಲಗ್ನ ಆಗ್ಯದ ಒಬ್ಬಾತ ಡಾಕ್ಟರ. ಇನ್ನೊಬ್ಬ ವಕೀಲ ಆಗಂವಾ. ಛಲೊ ಅಳಿಯಂದಿರು ಸಿಕ್ಯಾರ ನಮ್ಗು— ಅಂದ್ರೆ ನೀವು ದುಡದದ್ದು ಗಳಿಸಿದ್ದು ನಾಳೆ ಅವ್ರೀಗೇ ಹೌದಲ್ಲೊ?

ಲಕ್ಷ್ಮಣ— ಹೌದು ಹಾಗಂತ ನಾ ಜೀವಂತ ಇರಬೇಕಾದ್ರೆ ನನ್ನ ಸುಲೀಬೇಕೇನು? ವರದಕ್ಷಿಣೆ ಅಂತ ಇಬ್ರಿಗೂ ಕೂಡಿ ಸ್ವಚ್ಛ ೨೦,೦೦೦ ರೂಪಾಯಿ ಹೋದವು. ಈಗ ಮತ್ತೆ-

ವತ್ಸಲಾ— ಅಂದ್ರೆ...

ಲಕ್ಷ್ಮಣ— ಅಂದ್ರೆ, ದೇವರ ದಯೆಯಿಂದ ನಿನಗೆ ಸಿಕ್ಕ ಒಳ್ಳೆ ಅಳಿಯಂದಿರ ಕಲ್ಯಾಣಗುಣ ಕೇಳಿಕೊ. ಹಿರಿಯಮಾ-ಶಾಮಾ-ದೀಪಾವಳೀಗೆ ತನಗೆ ಕಾರು ಕೊಡಸಲಿಕ್ಕೇ ಬೇಕು ಅಂತ ಆರ್ಡರೇ ಕೊಟ್ಟಾನ. ಇಲ್ಲಾಂದ್ರ ಛಲೋ ಆಗಲಿಕ್ಕಿಲ್ಲ ಅಂತ ನೋಟೀಸ್‌ರೂಪಿ ಪತ್ರ ಬರದಾನ. ಡಾಕ್ಟರ ಆದಮ್ಯಾಲೆ ಕಾರ ಇಲ್ದೆ, ವಿಜಿಟ್‌ಗೆ ಹೋಗೂದು ಕಿಮ್ಮತ್ ಅಲ್ಲಂತ. ಮಗಾ, ಏನು ದವಾಖಾನೆ ತೆರೆದ ಕೂಡಲೆ ನೂರಾರು ಮಂದಿ 'ಬರ್‍ರಿ ಡಾಕ್ಟರೆ' ಅಂತ ಕರೀಲಿಕ್ಕೆ ಬರ್ತಾರ ಅಂತ ತಿಳಕೊಂಡ ಹಾಂಗೆ ಕಾಣಸ್ತದ. ಶುರು ಶುರೂನಲ್ಲಿ ನೊಣ ಝಾಡಸ್ತಾ ಕೂತಿರಬೇಕಾಗ್ತದ ಅಂತ ಗೊತ್ತೇ ಇಲ್ಲ ಇನ್ನು ಅಂವಾ ಎರಡನೇ ಅಂವಾ ವಕೀಲಾ-ವಕೀಲಿ ಶುರು ಮಾಡುವಾಗ ಒಳ್ಳೇ ಆಫೀಸು ಮನೆ ಇರದಿದ್ರ ಗಿರಾಕೀನೇ ಬರೂದಿಲ್ಲ, ಆದಕ್ಕೆ ಒಂದು ಒಳ್ಳೇ ಮನೆ ಕೊಂಡಕೊಡ್ರಿ ಅಂತ ಭಾಳ ವಿನಯದಿಂದ ಬರದಾನೆ. 'ಅತಿ ವಿನಯಂ ಚೋರ ಲಕ್ಷಣಂ' ಅಂತ ಗೊತ್ತಿಲ್ಲ ಅಂವಗ ತಾತ್ಪರ್ಯ ಏನು ಅಂದ್ರೆ ಒಬ್ಬ 'ಒಂದ ಹೊಡ್ತಾ ಎರಡು ತುಂಡು' ಅಂದ್ರೆ ಇನ್ನೊಬ್ಬ ಬೆಣ್ಣಿಹಚ್ಯಾನ. ಆದ್ರೆ ಈ ಲಕ್ಷ್ಮಣರಾಯ ಸರ್ವೀಸ್ ಮಾಡ್ಲಿಕ್ಕೆ ಹತ್ತಿ ೩೦ ವರ್ಷ ಆತು ಬೆಣ್ಣೀಗೆ ಕರಗು ಹಾಂಗಿದ್ರೆ, ಒಂದ ಹೊಡ್ತಕ್ಕ ಎರಡು ತುಂಡು ಆಗೂ ಹಾಂಗಿದ್ರ, ಬರೀ ಮ್ಯಾಟ್ರಿಕ್ ಆದ ಮನಶಾ ನಾನು- ಡೆಪ್ಯೂಟಿ ಕಮೀಶನರ್ ಆಗ್ತಿದ್ದೆನೇನು?

ವತ್ಸಲಾ— ಸುಳ್ಳೆ ಯಾಕೆ ಬೇಜಾರು ಮಾಡಿಕೋತೀರಿ? ಸಿಟ್ಟು ಮಾಡತೀರಿ? ಕೇಳ್ಯಾರೆ ಅಂದಮ್ಯಾಲೆ ಕೊಟ್ಟು ಬಿಡ್ರಾತು ಇರೂ ಎರಡೇ-

ಲಕ್ಷ್ಮಣ— ಅಂದ್ರೆ, ನಿಂದೂ-ಹಂ ಸೀನು ಲತಾ, ಉಷಾ-ಶ್ಯಾಮ-ಮಾಧವ ಒಂದಾಗಿ ಸಂಚು ಮಾಡಿದ ಹಾಂಗೆ ಕಾಣಸ್ತದ ಹೌದೋ ಅಲ್ಲೊ... ಮಾಡ್ರಿ ಮಾಡ್ರಿ, ನೋಡೇಬಿಡ್ತೇನಿ ನಾನೂ. ಕೊಡುವಾಗ ಕೊಟ್ಟೇ ಕೊಡ್ತೇನೆ ನನ್ನ ಮನಸೀಗೆ ಬಂದ್ರ ಕೊಡ್ತೇನೆ ಹೊರ್‍ತು ಇವರು ಹೆದರಿಸಿದ್ರು ಅಂತ, ಬೆಣ್ಣಿ ಹಚ್ಚಿದ್ರು ಅಂತ, ನೀವೆಲ್ಲಾ ಸಂಚ ಮಾಡಿದ್ರಿ ಅಂತ ನಾ ಏನ ಕೊಡಾಂವ ಅಲ್ಲ

ವತ್ಸಲಾ— ಮತ್ತೆ ನೀವು ಸೆಟಗೊಂಡ್ರ-

ಲಕ್ಷ್ಮಣ— ಏನು ಹೆಂಡ್ರನ್ನ ಬಿಡ್ತೇನು? ಅದೇನೂ ಮಾವನಿಗೆ ಪತ್ರಾ ಬರೀವಷ್ಟು ಸುಲಭ ಅಲ್ಲ. ನೀ ಏನು ಕಾಳಜೀ ಮಾಡಬ್ಯಾಡ ನಾ ಘಟ್ಟಿ ಇದ್ದೇನಿ ಎಲ್ಲಾ ನೋಡಕೋಳ್ಳಲಿಕ್ಕೆ. ಅಪ್ಪಗ ನಿಮ್ಮ ಪತ್ರ ಮುಟ್ಟೇದ. ಹಬ್ಬಕ್ಕೆ ಬರ್‍ರಿ ಅಂತ ಲತಾ ಮತ್ತು ಉಷಾಗೆ ಪತ್ರ ಬರೀಲಿಕ್ಕೆ ಹೇಳು ತಿಳೀತೇನು? ಮತ್ತೆ ಈಗ ಮಾತಾಡಿದ್ದೇನೂ ಲತಾಗೆ, ಉಷಾಗೆ ಹೇಳಬ್ಯಾಡ. ನೀ ಏನಾದ್ರೂ ಹೇಳಿದ್ರೆ-ಖರೇ ಅಂದ್ರೂ ನೀನೂ ಅಳಬೇಕಾದೀತು. ನನ್ನ ಸ್ವಭಾವ ನಿನಗೆ ಗೊತ್ತದ. ತಿಳೀತೇನು!

ವತ್ಸಲಾ— ಹುಂ. ಏನಾದ್ರೂ ಮಾಡಿಕೊಳ್ರಿ ನೀವೇನೊ ನಿಮ್ಮ ಮಕ್ಕಳೇನೊ—

೨

(ಲಕ್ಷ್ಮಣರಾಯರ ಮನೆ. ಹಬ್ಬದ ಮುಂಜಾನೆ.. ಲಕ್ಷ್ಮಣರಾಯರು ಆರಾಮ ಖುರ್ಚಿ ಮೇಲೆ ಕುಳಿತಿದ್ದಾರೆ, ಪತ್ರಿಕೆ ಓದುತ್ತ)

ಲತಾ— (ಪ್ರವೇಶಿಸಿ) ಅಪ್ಪಾ, ಆರತೀಗೆ ಬರಬೇಕಂತ.

ಲಕ್ಷ್ಮಣ— ಅಳಿಯಂದಿರು-

ಲತಾ— ಅವರೇನೊ ನಿಮಗೆ ಪತ್ರ ಬರದಿದ್ದರಂತೆ. ಅದರ ವ್ಯವಸ್ಥೆ ಆಗಿದೆಯೇನು ಕೇಳಕೊಂಡು ಬಾ. ಬರ್‍ತೇವೆ ಆರತೀಗೆ ಅಂದ್ರು.

ಲಕ್ಷ್ಮಣ— ಹೊ ಹೊ! ಎಲ್ಲಾ ತಯಾರ ಅದೆ ಅಂತ ಹೇಳು. ನಡಿ



"ಅಂ!"

(ಲತಾ ಹೋಗುವಳು) ಲಕ್ಷ್ಮಣರಾಯ್ರು ಎದ್ದು ಕಪಾಟು ತೆಗೆದು ಬಣ್ಣದ ಕಾಗದ ಸುತ್ತಿ ನೈಲಾನ್ ರಿಬ್ಬನ್ ಕಟ್ಟಿದ ಎರಡು ಪುಡಿಕೆ ತೆಗೆದುಕೊಂಡು ಒಳಗೆ ಹೋಗುವರು. (ಪಡದೆ ಏಳುವದು ಪಡಸಾಲೆಯಲ್ಲಿ ಆರತಿ ವ್ಯವಸ್ಥೆ ಮಾಡಿದೆ. ಮಣೆ ಹಾಕಿದ್ದಾರೆ. ಶ್ಯಾಮು ಮತ್ತು ಮಾಧವ ಕೂತವ್ದಾರೆ ಲಕ್ಷ್ಮಣರಾಯ್ರು ಬಂದು ಮೂರನೆ ಮಣೆ ಮೇಲೆ ಕೂಡುತ್ತಾರೆ ಲತಾ-ಉಷಾ ಆರತಿ ತಟ್ಟೆ ಹಿಡಕೊಂಡು ಬರ್‍ತಾರೆ)

ಲಕ್ಷ್ಮಣ— ಕೂಡ್ರಿ. ಆರತಿ ಮಾಡ್ರಿ ಮೊದಲನೆ ಆರತಿ ಆದ ಕೂಡಲೆ ಅಳಿಯಂದಿರಿಗೆ ಉಡುಗರೆ ಕೊಡ್ತೇನೆ ಉಡುಗರೆ ಸಿಕ್ಕ್ಮೇ ಅಂತ ಅವರ ಮುಖ ಅರಳಿದ ಮ್ಯಾಲೆ ಇನ್ನೊಂದು ಆರತಿ ಮಾಡೀರಂತೆ. (ಲತಾ-ಉಷಾ ಆರತಿ ಮಾಡುವರು. ಲಕ್ಷ್ಮಣರಾಯ್ರು ಎದ್ದು ಒಂದು ಪುಡಿಕೆ ಶ್ಯಾಮನಿಗೆ, ಒಂದು ಮಾಧವಗೆ ಕೊಡುತ್ತಾರೆ) ನೋಡ್ರಿ, ಬಿಡಿಸಿ ನೋಡ್ರಿ. ಶ್ಯಾಮರಾವ್, ನಿಮಗೆ ನೀವು ಕೇಳಿದ ಹಾಗೆ ಕಾರು; ಮಾಧವರಾವ್, ನಿಮಗೆ ಮನೆ ಕೊಟ್ಟೇನಿ.

ಶ್ಯಾಮು— (ಪುಡಿಕೆ ಬಿಚ್ಚಿ ನೋಡಿ) ಏನಿದು ಹುಡುಗಾಟ? ಕಾರು ಬೇಕಂದ್ರೆ, ಮಕ್ಕಳಾಟಿಗೆ ಕಾರು ತಂದೀರಿ? ಈ ಕಾರು ಆಡಿಸೊ ಭೂಪತಿ ಹುಟ್ಟಬೇಕಾದ್ರೆ, ನಾನು ನಿಮ್ಮ ಮಗಳ ಜೊತೆ ಸಂಸಾರ ಮಾಡಬೇಕಾಗ್ತದ ಅನ್ನೂದನ್ನ ಮರ್‍ತೀರಿ ಅಂತ ಕಾಣಸ್ತದ.

ಮಾಧವ— (ಪುಡಿಕೆ ಬಿಚ್ಚಿ) ಮನೀ ಚನ್ನಾಗಿದೆ. ಈ ಮಾದರಿಯ ಮನೆಯನ್ನು ಕೊಂಡುಕೊಂಡಿದ್ದೀರಾ ನನಗಾಗಿ?

ಲಕ್ಷ್ಮಣ— ಶ್ಯಾಮರಾವ್, ಅಂದ್ರೆ ಕಾರು ಕೊಡದಿದ್ರೆ ಲತಾನ್ನ ಜೊಡಿ ಸಂಸಾರಾ ಮಾಡೂದಿಲ್ಲಾ ಅಂತೀರೇನು? ಮಾಧವರಾವ್, ಈಗ ಕೊಟ್ಟ ಮನೀನೇ ನಿಮಗಾಗಿ ಕೊಂಡೇನಿ. ಈಗಾ ಅದರ ಕಾಗದ ಪತ್ರ- (ಅಂಗಡಿ ಬಿಲ್ ಕೊಟ್ಟು) ವಕೀಲ ಆಗ್ರಿ. ಗಳಸ್ರಿ. ಮನೆ ಕಟ್ಟಸ್ರಿ. ಆಗ ಪ್ಲಾನುಗೀನು ಅಂತ ಖರ್ಚು ಬ್ಯಾಡ ಅಂತ ಈ ಮಾದರಿ ಮನೀ ಕೊಟ್ಟೇನಿ ತಿಳಿತೇನು?

ಶ್ಯಾಮು— (ಮೆಲ್ಲಗೆ) ನಿಮ್ಮ ಬೆಣ್ಣಿ ಕರಗಿ ಹೋತಲ್ರಿ, ಮಾಧವರಾವ್.

ಮಾಧವ— ನೀವು ಒಂದ ಹೊಡತಕ್ಕೆ ಎರಡು ತುಂಡು ಅಂತ ಮಾಡಿದ್ದರ ಫಲಾ ಇದು ಜಾಯಿಂಟ್ ಫ್ರಂಟ್ ಅಂತ—

ಲಕ್ಷ್ಮಣ— ಏನದು ಒಳ ಮಾತು? ಗಟ್ಟಿಯಾಗಿ ಹೇಳ್ರಿ ವಕೀಲರ ಸಲಹಾ ಪಡೀತೀರೇನು? ನಾನಂತೂ ಕೊಡೂದು ಕೊಟ್ಟೆ. ಇನ್ನ ಮ್ಯಾಲೆ ನಿಮ್ಮ ಮರ್ಜಿ. ಹೆಂಡತಿ ಬೇಕಾಗಿತ್ತೂ ಕೊಟ್ಟದ್ದು ತಗೋಡು ಸುಮ್ಮನಿರಿ. ಬ್ಯಾಡ, ಬ್ರಹ್ಮಚಾರಿ ಆಗಿ ಇರ್‍ತೇನೆ ಅಂದ್ರ— ಲತಾ, ಉಷಾ ಈ ವರ್ಷ ಬಿ. ಎ. ಆಗ್ತಾರೆ. ಎಲ್ಲಾರ ನೌಕರಿ ಮಾಡಿ ಹೊಟ್ಟೆ ತುಂಬಿಕೋಡಾರು! ಬ್ಯಾಡ ಅಂದ್ರ, ನನ್ನ ಪಿತ್ರಾರ್ಜಿತ ಆಸ್ತಿ ಅದ, ನಾ ದುಡದಿಟ್ಟದ್ದೂ ಅದ. ಸಾಕಾಗ್ತದ ಅವರಿಗೆ.

ಶ್ಯಾಮು— ಹೀಗೇನು? ಏ ಲತಾ, ಏನಂತಿ ಇದಕ್ಕೆ?

ಮಾಧವ— ಉಷಾ, ನೀನೇನಂತಿ?

(ಲತಾ-ಉಷಾ ಅಳುವರು.)

ವತ್ಸಲಾ— ಯಾಕೆ ಹಬ್ಬದ ದಿನಾ ಮಕ್ಕಳ್ನ ಅಳಸ್ತೀರಿ ಅಂದೆ.

ಲಕ್ಷ್ಮಣ— ನೀ ಸುಮ್ಮನಿರು ಇವರು ಕೇಳಿದ್ದನ್ನೆಲ್ಲ ಕೊಡ್ಲಿಕ್ಕೆ ನಾ ಏನು-

ಶ್ಯಾಮು— ಮಾಧವರಾವ್, ಏಳಿನ್ನು, ಈಗ ಆದ ಮರ್‍ಯಾದೆ ಸಾಕು. (ಏಳುವನು. ಮಾಧವರಾವ್ ಕೂಡ ಏಳುವನು,) ಹೋಗಿಬರ್- ಹ್ದಾಂ- ಸಂಬಂಧಾನೆ ಕಡಕೊಳ್ಳಬೇಕು ಅಂದ ಮ್ಯಾಲೆ ಹೋಗಿ ಬರೂ ಮಾತಾದರೂ ಯಾಕೆ?

ಲಕ್ಷ್ಮಣ— ಹೋಗೀರಂತೆ. ನಿಲ್ರಿ. ತುಸಾ ಒಂದೆರಡು ಮಾತು ಕೇಳಿಕೊಂಡು—

ಮಾಧವ— ನಮ್ಮ ಪತ್ರ ಬಂದ ಮ್ಯಾಲೆ ಉತ್ತರ ಅಂತ ನಿಮ್ಮ ಮಾತು ತಿಳಸಬಹುದು.



" ಫಾಯ್ದೆ ಆಗೂಹಾಂಗಿದ್ರ ಹಾಗೇ ಇರೂಣಂತ ! "

ಲಕ್ಷ್ಮಣ— ಅಂದ್ರೆ ಹೆಂಡತಿ ಬಿಟ್ಟೆ ಅಂತ ನೋಟೀಸು ಕೊಡ್ತೀರೇನು? ಕೂಡ್ರಿ, ಆ ಮ್ಯಾಲೆ ಹೇಳ್ತೇನಿ. ನಿಮ್ಮಿಬ್ಬರ ಪತ್ರ ನನ್ನ ಹತ್ತರ ಅದೆ. ನಿಮ್ಮನ್ನು ಜೇಲಿಗೆ ಕಳಸಲಿಕ್ಕೆ—

ಲತಾ-ಉಷಾ— ಅಪ್ಪಾ !

ಲಕ್ಷ್ಮಣ— ನಿಮ್ಮ ಪತ್ರದೊಳಗೆ ನಾ ಲಂಚ ತಗೊಂಡು ಆಸ್ತಿ ಮಾಡೇನಿ, ಈಗ ಅಳಿಯಂದರೀಗೆ ಕೊಡಲಿಕ್ಕೆ ಅಂತ ಬೇಕಾದ್ರೆ ಇನ್ನಿಷ್ಟು ಲಂಚಾ ತಗೊಳ್ರಿ ಅನ್ನೂ ಅರ್ಥ ಬರೂ ಹಾಂಗೆ ಪತ್ರಾ ಬರದೀರಿ. ಲಂಚ ಕೊಡುವವ್ರು, ತಗೊಳುವವ್ರು, ತಗೊಳ್ರಿ ಅಂತ ಅನ್ನುವವ್ರು ಎಲ್ಲಾರೂ ಅಪರಾಧಿಗಳಾಗ್ತಾರ ತಿಳೀತ. ಸುಮ್ಮನೆ ಹುಚ್ಚರಾಂಗ ಮಾಡಿ ಫಜೀತಿ ಆಗಬ್ಯಾಡ್ರಿ.

ಶ್ಯಾಮು— (ಮಾಧವಗೆ) ಏನು ಮಾಡೋಣ್ರೆಪಾ ಈಗ ?

ಮಾಧವ— ಈಗಂತೂ ಹೋಗೋಣ. ಮುಂದಿನ ಮಾತು ಮುಂದೆ. ಇಕಾ, ಗುಟ್ಟಾಗಿ ಪತ್ರ ಬರೆದು ಲತಾ, ಉಷಾಳ ಕಡೆಯಿಂದ ನಾವು ಬರದ ಪತ್ರಾ ತರಿಸಿಗೊಂಬೋಣ. ಆ ಮ್ಯಾಲೆ—

ಶ್ಯಾಮು— ವ್ಹಾವ್ಹಾ, ಹೌದು ವಕೀಲಿ ತಲಿ. ಆ ದಿನ ನಾನು ಅಂದದ್ದು ಮರ್ತ ಬಿಡ್ರಿ. ಶೇಕ್‌ಹ್ಯಾಂಡ್. ಪ್ಲೀಜ್ ಇನ್ನು ಮೇಲೆ ನಂದು ನಿಮ್ಮದು ಜಾಯಿಂಟ್ ಫ್ರಂಟ್ ಮಾವನ— ಈ ಮಾವನ ಅಹಂಕಾರ ಅನ್ನೊ ಕೋಟೆ ಮ್ಯಾಲೆ ದಾಳೀ ಮಾಡಿ

ಲಕ್ಷ್ಮಣ— ಏನದು ಮತ್ತೆ ಗುಜು ಗುಜು? ಏನು ಸುಮ್ಮನೇ ಕೂತು ಆರತಿ ಮಾಡಿಸಿಕೋತಿರೊ ಕೋರ್ಟ ಕಟ್ಟೆ ಹತ್ತಿ ಮಂಗಳಾರತಿ ಮಾಡಿಸಿಕೋತೀರೋ?

( ಹೊರಗೆ ಕಾರ್ ಹಾರ್ನ ಬಾರಿಸಿದ್ದು ಕೇಳಿಸುವದು. ಲಕ್ಷ್ಮಣರಾಯರ ಆಳು ಬಂದು ಒಂದು ಕಾಗದ ಅವರ ಕೈಲಿ ಕೊಡುತ್ತಾನೆ. )

ಕಾರು ಬಂದದ್ರಿ.

ಲಕ್ಷ್ಮಣ— ( ಕಾಗದ ಓದಿ ) ಅಂ! ಕಾರು ಡೆಲಿವರಿ ತಗೊಂಡು ಪಾವತಿ ಕಳಿಸ್ರಿ ಅಂತ ( ಮತ್ತೆ ಓದುತ್ತ) ನಿಮ್ಮ ಶ್ರೀಮತಿಯವರು ಅರ್ಜಂಟ ಕಾರು ಬೇಕೆಂದಿದ್ದರಿಂದ ಬಹಳ ಕಷ್ಟಪಟ್ಟು ಹೊಸ ಕಾರು ಈಗ ದೊರಕಿಸಿದ್ದೇನೆ. ಹಣಕ್ಕಾಗಿ ಚೆಕ್ ಬಂದದ. ನಮ್ಮ ಮ್ಯಾಲೆ ಹೀಗೇ ಅನುಗ್ರಹ ಇರಲಿ— ಏನೇ ಏನಿದು? ನನಗೆ ಹೇಳದೆ-

ವತ್ಸಲಾ— ಆ ದಿನ ನೀವು ಮಾಡಿದ್ದು ನೋಡಿ ನೀವೆಲ್ಲಿ ಮಕ್ಕಳ ಸಂಸಾರ ಹಾಳ ಮಾಡಿಬಿಡ್ತೀರೋ ಅಂತ ಹೆದರಿ ನಿಮಗೆ ಹೇಳದೇ ಕಾರು ಮಾಡ್ದೆ.

ಉಷಾ— ಮತ್ತೆ ಮನೆ

ವತ್ಸಲಾ— ನಿನ್ನ ಗಂಡಾ ಯಾವ ಊರೊಳಗೆ ಪ್ರಾಕ್ಟೀಸು ಮಾಡ್ತೇನೆ ಅಂತ ಹೇಳಿಲ್ಲ ಅದಕೇ ಮನೆ ತಗೊಂಡಿಲ್ಲ. ಇಗಾ, ೧೫೦೦೦ಕ್ಕೆ ಚೆಕ್ ಬರದಿಟ್ಟೇನಿ ಮನೇ ಹುಡುಕಿ ತಗೊಂಡರಾತು.

ಲಕ್ಷ್ಮಣ— ನನ್ನ - ನ - ನ - ನ -

ವತ್ಸಲಾ — ಸಿಟ್ಟ್ಯಾಗಬ್ಯಾಡ್ರಿ. ನೀವು ನನ್ನ ಹೆಸರಿನಲ್ಲಿ ಬ್ಯಾಂಕಿನೊಳಗ ಹಣಾ ಇಟ್ಟಿದ್ದು ಉಪಯೋಗಕ್ಕೆ ಬಂತು. ನನ್ನಮ್ಯಾಲೆ ನೀವು ಸಿಟ್ಟು ಮಾಡ್ರಿ ಬೇಕಾದ್ರೆ. ಈ ಹಬ್ಬ ಮುಗದು ಲತಾ ಉಷಾ ಗಂಡಂದಿರೊಡನೆ ನಗ್ತಾ ನಗ್ತಾ ಹೋದಮ್ಯಾಲೆ ಬೇಕಾದ್ರೆ ಒಂದೆರಡು ಹೊಡೆದರೂ ಸರಿ. ನಾ ಏನು ಪಿಟಕ್ ಅನ್ನೂದಿಲ್ಲ ಅತೇ ಈಗ.

ಲಕ್ಷ್ಮಣ— ಆತು. ಆತು. ಕೂಡ್ರಿ ಅಳಿಯದೇವರುಗಳಿರಾ, ನಿಮ್ಮ ಪತ್ರ ಕಂಡು ಖರೇ ಅಂದ್ರೆ ನನ್ನ ಮೈ ಉರದು ಹೋಗಿತ್ತು. ನಿಮಗೆ ಬುದ್ಧಿ ಕಲಸಬೇಕು ಅಂತ ನಾ ಉಪಾಯ ಮಾಡಿದ್ರೆ, ಈಕಿ ನನ್ನ ಸಮ ಜೋಡಿಯಾಗಿ ನನಗೇ ಬುದ್ಧಿ ಬರೂಹಾಂಗೆ ಮಾಡಿಬಿಟ್ಟಳು ಆಗ್ಲಿ, ಉಪಾಯವಿಲ್ಲ. ಆದ್ರೆ ಒಂದ ಮಾತು ನೆನಪಿಟ್ಟುಕೊಳ್ರಿ. ಹಿಂಡೂ ಎಮ್ಮೆ ಅಂತ ಎರಡೂ ಕೈಲಿ ಮೊಲಿ ಜಗ್ಗಿದ್ರೆ ಅದು ಒದ್ದಬಿಡ್ತದ. ತಿಳೀತೇನು ?

ಶ್ಯಾಮು — ಮಾವಾ, ಖರೇ ಅಂದ್ರ ನನಗೆ ಕಾರಿನ ವಿಚಾರ ಬಂದಿರಲೇ ಇಲ್ಲ. ಇದ್ದಾಳಲ್ಲ ಈಕಿ-ನಿಮ್ಮ ಮಗಳು ಲತಾ-ಅಪ್ಪನ ಹತ್ತರ ಕಾರು ಕೇಳಿ ಜೋರಾಗಿ ಪತ್ರ ಬರೀರಿ ಅಂತ ಬರದಿದ್ದದ್ದಕ್ಕೆ—

ಲಕ್ಷ್ಮಣ— ಅಂ !

ಮಾಧವ— ಹೌದು. ಈ ಉಷಾ

ಲಕ್ಷ್ಮಣ— ಅಂ!

ಶ್ಯಾಮು— ಅಪ್ಪಗೆ ಆರ್ಡರ್ ಮಾಡೂದು ಅಥವಾ ಆರ್ಡರ್ ಪಾಲಿಸೂದು ಎರಡೇ ಗೊತ್ತು, ಆರ್ಡರ್ ಮಾಡ್ರಿ ಅಂತ ಬರದಿದ್ದವಳು ಉಷಾ. ಬಿರುಸಾಗಿ ಬರೆದದ್ದಕ್ಕೆ ಕ್ಷಮಾ ಇರ್ಲಿ.

ಮಾಧವ— ಅಪ್ಪ ಹೊಗಳಿದರೆ ಅಟ್ಟಕ್ಕೇರಿ ಬಿಡತಾನೆ, ಅಂತ ಉಷಾ ಬರೆದಿದ್ದಳು ಅಂತ ನಾನು ಹೊಂಗಳಂಭಟ್ಟನ ಹಾಗೆ ಬರೆದೆ. ಕ್ಷಮಾ ಇರ್ಲಿ.

ಲಕ್ಷ್ಮಣ— ಸರಿಸರಿ ಹೆಂಡತಿ ಹೇಳಿದ ಹಾಂಗೆ ಕುಣಿಯುವ ಮಂದಿ ನೀವು ಅಂತ ಗೊತ್ತಾತು. ಈಗಲೇ ಜಾಗರೂಕ ಆಗ್ರಿ. ಏನೋ ನಿಮ್ಮ ಪುಣ್ಯ- ಇಲ್ಲಾಂದ್ರೆ ನಿಮ್ಮ ಪತ್ರ ಕಂಡು ಬಂದ ಸಿಟ್ಟಿನ ಭರದಲ್ಲಿ ನಾ ಆಗಲೇ ಕೋರ್ಟಿಗೆ ಹೋಗಿ ಬಿಟ್ಟಿದ್ರೆ—

ವತ್ಸಲಾ— ನಿಮ್ಮ ಮುಖಕ್ಕೆ ಮಸಿ ಹತ್ತಿತ್ತು.

ಲಕ್ಷ್ಮಣ— ಹುಂ. ಆದರೆ

ಮಾಧವ— ಗೊತ್ತಾತು ಮಾಮಾ. ಹೆಂಡರ ಮಾತು ಕೇಳಬ್ಯಾಡ್ರಿ, ಅವರ ಕೃತಿ ಒಪ್ಪಿಕೊಂಡು ಬಿಡ್ರಿ ಅಂತ ನಿಮ್ಮ ಅಭಿಪ್ರಾಯ ಹೌದೋ ಅಲ್ಲೋ.

ಲಕ್ಷ್ಮಣ— ಅಂದ್ರೆ—

ಲತಾ— ಉಷಾ- ನೀ ಈಗ ಅಪ್ಪ ಮಾಡಿದ್ದಕ್ಕೆ ಹೂಂ ಅಂದೀಯಿಲ್ಲೋ? ಅದಕ್ಕೆ ಇರಬೇಕು ಅವರು ಹಾಂಗದದ್ದು (ಎಲ್ಲರೂ ನಗುವರು)

ಲಕ್ಷ್ಮಣ— ಅವಳು ಮಾಡಿದಳು ಅಂತ ಸುಮ್ಮನಾದೆ ಅಂತ ಮಾಡಿದಿರೇನು? ಈಗ ಹುಡುಗಾಟಿಕೆ ಮಾಡಿದ್ರು ಮುಂದೆ ನಾನೇ ಕೊಡಸವ ಇದ್ದೆ.

ವತ್ಸಲಾ— ಆತು ಆತು. ಹಾಗಾದರೆ ಇರ್ಲಿ ಈಗ ಮಾತು. ಎಲ್ಲಾ ಸರಳ ಆತೋ ಇಲ್ಲೋ? ಹುಂ ಕೂಡ್ರಿ. ಇನ್ನು ಆರತಿದಪ್ಪು ಮುಗಿಸಿಬಿಡೋಣ

ಮಾಧವ— ( ಶ್ಯಾಮುಗೆ ) ನೋಡಿಕೊಂಡ್ರೊ ಇಲ್ಲೋ ವತ್ಸಲಾಬಾಯಿ ಅಂದ್ರೆ ಹಾವಾಡಿಗ, ಲಕ್ಷ್ಮಣರಾಯರು ಅಂದ್ರೆ ಹಾವು ತಿಳೀತ. ತಾವೂ ಅಪ್ಪನ ಹಾಗೆ ಹಾವಾಡಿಗರು ಅಂತ ನಮ್ಮವ್ರು ತಿಳಿಸಿ ಬಿಟ್ಟಾರ. ತುಸಾ ಕಾಳಜಿ ಇರಲಿ ಅಂದೆ ಮುಂದೆ ಸಂಸಾರದೊಳಗೆ

ಶ್ಯಾಮು—ಇರಲಿ ಬಿಡ್ರಿ. ಫಾಯದೆ ಆಗೂ ಹಾಂಗೆ ಇದ್ರೆ ಹಾವಾಗೆ ಇರೋಣಂತೆ, ಅದಕ್ಕೇನು?

ಲಕ್ಷ್ಮಣ— ಮತ್ತೇನು ತೆಗೆದರಪಾ ?

ಶಾಮು— ಮಾಧವ (ದೇಶಾವರಿ ನಗುತ್ತ) ಹೆ. ಹೆ. ಏನಿಲ್ಲ ಏನಿಲ್ಲ. ಆದs ಬ್ಯಾರೇ ಮಾತು. ಮಾವ ಅಳಿಯಂದಿರದಲ್ಲ ( ಮಣೆಯ ಮೇಲೆ ಕೂಡುವರು. ಲತಾ ಉಷಾ ಆರತಿ ಬೆಳಗುತ್ತಿದ್ದಂತೆ ಪಡದೆ ಬೀಳುವದು.)

( ಈ ನಾಟಕವನ್ನು ಅಭಿನಯಿಸ ಬಯಸುವವರು ಲೇಖಕರಿಗೆ ರೂ. ೧೫-೦೦ ಗೌರವ ಧನ ಕಳಿಸಿ ಅನುಮತಿ ಪಡೆಯಬೇಕು. )





# 3 ಬಾರಿಯ ಘಟನೆಯಿಂದ

ಕತೆಗಾರ್ತಿ:

ಶ್ರೀಮತಿ ಲಲಿತ ರಾಮಣ್ಣ ಬೊಂಬಾಯಿ

ಒಂದರ ಹಿಂದೆ ಒಂದರಂತೆ ಮೂರುಬಾರಿ ಘಟಿಸಿದ ಈ ಘಟನೆಗಳನ್ನು ಮರೆಯುವುದಾದರೂ ಹೇಗೆ? ಛೆ! ಸಾಧ್ಯವಿಲ್ಲ... ಮಾನವನ ಸ್ಮೃತಿಪಟಲದಿಂದ ಅಳಿಸಿಹೋಗದಂಥ ಘಟನೆ ಕೇವಲ ಒಂದು ಬಾರಿ ಘಟಿಸಿದರೂ ಸಾಲದೆ? ಅಂದಬಳಿಕ ಮೂರು ಬಾರಿ! ಅಬ್ಬ! ಮೈನವಿರೇಳುತ್ತದೆ. ಮೃತ್ಯು ಹೊಂದಿ ಪುನಃ ಜನ್ಮ ತಳೆಯುವ ಮನುಷ್ಯನಿಗೆ ತನ್ನ ಗತ ಜನ್ಮದ ನೆನಪು ಬರುತ್ತಿದ್ದರೆ, ಖಂಡಿತ ಈ ಘಟನೆಗಳು ಮರಳಿ ಮರುಕಳಿಸುತ್ತಲೇ ಇರುತ್ತಿದ್ದವು.

ತುಂಗಾ ತೀರದ ದಂಡೆಯ ಮೇಲೆ ಮುಸ್ಸಂಜೆ ಹೊತ್ತಿನಲ್ಲಿ, ಕಲ್ಲು, ಬಂಡೆಗಳ ನಡುವೆ ಕುಳಿತು, ಒಂದು...ಎರಡು...ಮೂರು...ಎಂದು ಕಲ್ಲುಗಳನ್ನು ಎಸೆಯುತ್ತ. ಮರೆತುಬಿಡಬೇಕು, ಮರೆಯಲೇ ಬೇಕೆಂದು ಪ್ರಯತ್ನಿಸುತ್ತಿದ್ದ ನನಗೆ ಘಟಿಸಿಹೋದ ಆ ವಿಷಯ ಪುನಃ ಪುನಃ ನೆನಪಿಗೆ ಬಂದು ನನ್ನ ಯತ್ನವನ್ನು ವಿಫಲಗೊಳಿಸುತ್ತಿತ್ತೇ ವಿನಾ ಮರೆಯಲಸಾಧ್ಯವಾಗಿತ್ತು.

ಆಗಿನ್ನೂ ನನಗೆ ಹದಿನೆಂಟು ಅಥವಾ ಹತ್ತೊಂಭತ್ತು ವಯಸ್ಸಿದ್ದಿರಬಹುದು. ನಾನು ನೋಡಲು ಆರೋಗ್ಯ ದೃಢಕಾಯನಾಗಿದ್ದು, ಕಂಡ ಕನ್ಯೆಯರ ಮನ ಸೆಳೆಯುವಂಥ ಕಾಮಣ್ಣನಾಗಿರದಿದ್ದರೂ ನನ್ನಲ್ಲಿ ಹಾಸ್ಯದ ಹೊನಲು ಹೊರಹೊಮ್ಮಿ ಸೂಸುತ್ತಿತ್ತಾಗಿ ಈ ಹಾಸ್ಯಕ್ಕೆ, ನನ್ನ ಸಮಯೋಚಿತ ಉತ್ತರಕ್ಕೆ ಮಾರುಹೋಗಿದ್ದ ನನ್ನ ಕಾಲೇಜಿನ ಗೆಳೆಯ, ಗೆಳತಿಯರು ನಕ್ಕು ನಲಿದು ನನ್ನ ಮೈದುಂಬಿಸಿ, ನನ್ನ ಸುತ್ತಮುತ್ತ ಗೆಳೆಯರು ಇರುತ್ತಲೇ ಇದ್ದರು. ಹೀಗೆ ಮೈದುಂಬಿಸಿ ಮಾತನಾಡುವವರಲ್ಲಿ ಚಿತ್ರಳೂ ಇದ್ದಳು.

ಚಿತ್ರ! ಅದೆಷ್ಟು ಅಚ್ಚುಕಟ್ಟಾದ ಹೆಸರು! ಚಿಕ್ಕ ಮಕ್ಕಳಿಗೂ ಉಚ್ಚರಿಸಲು ಸುಲಭ! ನಾಲಿಗೆಗೆ ಹೆಸರೆಷ್ಟು ಸುಲಭವಾಗಿತ್ತೋ! ಅಷ್ಟು ಕಣ್ಣಿಗೆ ಹಬ್ಬವನ್ನುಂಟುಮಾಡುತ್ತಿತ್ತು ಅವಳ ರೂಪ! ಹದಿನಾರು ಅಥವಾ ಹದಿನೇಳರ.. ಕಿಶೋರಾವಸ್ಥೆಯ ಆ ಚಿತ್ರ, ತರಗತಿಗೆ ಬಾರದ ದಿನ ಪಾಠ ಹೇಳಲು ಅಧ್ಯಾಪಕರಿಗೆ ಕೂಡ ಹುರುಪಿರುತ್ತಿರಲಿಲ್ಲವೆಂದರೆ ತಪ್ಪಾಗಲಿಕ್ಕಿಲ್ಲ. (ನನ್ನ ಮಟ್ಟಿಗೆ) ಕಾಲೇಜಿನ ಮೊದಲ ವರ್ಷದಲ್ಲಿ ಅಡಿ ಇಡುತ್ತಿದ್ದ ನಾವು ಒಟ್ಟಿಗೇ ವ್ಯಾಸಂಗ ಮಾಡುತ್ತಿದ್ದೆವು. ಹೀಗೆ ದಿನಂಪ್ರತಿ ಒಂದೆಡೆ ಸೇರಬೇಕಾಗಿದ್ದ ನನಗೆ ಚಿತ್ರಳ ಸ್ನೇಹ ಬೆಳೆದುಬಂದಿತ್ತು.

ಚಿತ್ರಾಪೌರ್ಣಮಿಯ ದಿನ ಹುಟ್ಟಿದ್ದ ಅವಳಿಗೆ ಅವಳಮ್ಮ ಚಿತ್ರಳೆಂದೇ ನಾಮಕರಣ ಮಾಡಿದ್ದರು. ಅವಳ ಹೆಸರೂ ಚಿತ್ರ, ಅವಳಲ್ಲಿ ಅಡಗಿದ್ದುದೂ ಚಿತ್ರಕಲೆ. ಅತ್ಯುತ್ತಮವಾಗಿ ರಂಗೋಲಿಗಳನ್ನು ಬಿಡಿಸಿ ರಂಗು ತುಂಬಿ ಚಿತ್ತಾಕರ್ಷಣೆಯ ಚಿತ್ರವನ್ನಾಗಿ ಮಾಡಿ ತೋರಿಸುತ್ತಿದ್ದಳು. ಅವಳ ಈ ಕಲೆಗೆ ಅತಿಶಯವಾದ ಉತ್ತೇಜನವಿಲ್ಲದಿದ್ದರೂ ಹಲಕೆಲವರು ತಮ್ಮ ಮೆಚ್ಚಿಗೆಯನ್ನು ತೋರ್ಪಡಿಸಲು ಹಿಂದೆಗೆಯುತ್ತಿರಲಿಲ್ಲ. ಹಾಗೆ ಅವಳ ಚಿತ್ರವನ್ನು ಮೆಚ್ಚಿ, ಮನಸಾ ವರ್ಣಿಸಿ, ಕೆಲವೊಮ್ಮೆ ಸೂಚನೆಗಳನ್ನೂ ಕೊಡುತ್ತಿದ್ದವರಲ್ಲಿ ನಾನೂ ಒಬ್ಬನಾಗಿದ್ದೆ.. ಆಗಿದ್ದೆನೆನ್ನದೆ ಮತ್ತೇನೆನ್ನಲಿ?

ಚಿತ್ರ!..ಚಿತ್ರ! ಹೌದು ಚಿತ್ರ ಎಂದ ಕೂಡಲೇ ನನ್ನ ಮೈನವಿರೇಳುತ್ತದೆ. ಅವಳ ಚಿತ್ರ ನನ್ನ ಕಣ್ಣ ಮುಂದೆ ನಿಂತು:— "ಹುಂಬ, ನೀವೆಷ್ಟು ಸುಶೀಲವಾಗಿಯೂ ಸಮಯೋಚಿತವಾಗಿಯೂ ಮಾತನಾಡುತ್ತೀರಿ! ನನಗೆ ನಿಮ್ಮ ಮಾತನ್ನೇ ಕೇಳುತ್ತಾ ಕೂಡಲೇ ಎನಿಸುತ್ತದೆ" ಎಂದು ಹೇಳಿದಂತೆ ಆಗುತ್ತದೆ. ಆಗುತ್ತದೆ ಎಂಬುದೇನು? ಅವಳು ಹಾಗೆ ಹೇಳಿದ್ದು ನಿಜವೆ! ನಾನೂ ಅವಳೂ ಗಂಟೆಗಟ್ಟಲೆ ಊರ ಮುಂದಲ ನಾರಾಯಣನ ಗುಡಿಯಲ್ಲಿ ಕುಳಿತು ಹರಟೆ ಕೊಚ್ಚುತ್ತಿದ್ದುದೂ ನಿಜವೆ!...ಉಸ್ಸ್... ಈಗೂ ಮನಸ್ಸಿಗೆ ನೆನಪೇ ಚೇತನವಂತೆ!

ಈ ನಮ್ಮ ಹರಟೆ ಬೆಳೆಯುದಾಗಿ ಸ್ನೇಹಗಾಢವಾಗಿ ಸಲಿಗೆ ಮುಂದುವರಿಯಲು ಹೆಚ್ಚುಕಾಲ ಹಿಡಿಸಲಿಲ್ಲ. ನಮ್ಮ ಸಲಿಗೆ ಮುಂದುವರಿದಿತ್ತೆಂದರೆ, ಅಷ್ಟೇನೂ ಕಾಲು ಜಾರಿರಲಿಲ್ಲ. ಆದರೂ "ನಾವು ಲಗ್ನವಾಗುವುದಾದರೆ ನಮ್ಮ ನಮ್ಮ ವಿನಾ ಅನ್ಯರೊಡನೆ ಈ ಜನ್ಮಕ್ಕೆ ಸಾಧ್ಯವಿಲ್ಲ" ಎಂಬ ಏಕಮತದ ತನಕ ಮುಂದುವರಿದಿದ್ದೆವು.

ನಾನೇನೋ ಅಡ್ಡ ಹೆಸರಿನಲ್ಲಿಯೂ(Surname) ಹುಂಬ, ನಡವಳಿಯಲ್ಲಿಯೂ ಹುಂಬನಾಗಿದ್ದೆ. ಪರ ಕನ್ಯೆಯರೊಡನೆ ಸಲಗೆಯಿಂದ ವರ್ತಿಸಬೇಕೆ? ಬೇಡವೆ? ಎಂಬ ಅರಿವಿಲ್ಲದ ಅಜ್ಞಾನಿ! ಹೆಚ್ಚೇಕೆ "ಮೀಸೆ ಬರುವವನಿಗೆ ದೇಶ ಕಾಣುವದಿಲ್ಲ" ಎಂಬ ಗುಂಪಿಗೆ ಸೇರಿದ್ದವ ಸರಿಯೆ..ಆದರೆ...ಆದರೆ...ಚಿತ್ರಳಿಗಾದರೂ ತಾರತಮ್ಯ ಜ್ಞಾನಬೇಡವೆ? ಉದ್ಧಟ ಹುಡುಗಿ! ನನ್ನನ್ನೂ ಹುರಿದುಂಬಿಸಿ, ಮೋಹದ ಜಾಳಿಗೆಯಲ್ಲಿ ಸಿಕ್ಕಿಸಿಕೊಂಡು, ಆಸೆ ತೋರಿ ಮೋಸ ಮಾಡಿದ ಮಾಯಗಾತಿ!

ಛೆ! ಪಾಪ! ನಾನು ನನ್ನ ಮನದ ಬೇಗುದಿಯ ಬೆಂಕಿಯ ಕಿಚ್ಚನ್ನು ಕಾರಿ, ಚಿತ್ರಳನ್ನು ಏನೇನೋ ಹೇಳುತ್ತಿರುವೆನಲ್ಲಾ! ಸತ್ಯಕ್ಕೂ ಚಿತ್ರ ಹೀಗೆ ಮೋಸ ಮಾಡಲು ಸಂಕಲ್ಪಿಸಿದ್ದಳೆ?...ಇಲ್ಲ...ಎಂದಿಗೂ ಇಲ್ಲ. ಅವಳ ಹೃದಯ ಸಿಂಹಾಸನದಲ್ಲಿ :- "ಹುಂಬ ನಿಮಗಲ್ಲದೆ ಈ ಹೃದಯ ಸಿಂಹಾಸನದಲ್ಲಿ ಬೇರೆ ಯಾರಿಗೂ ಸ್ಥಾನವಿಲ್ಲ" ಎಂದು ಹೇಳುತ್ತಿದ್ದಳು. ಅಂದ ಬಳಿಕ ಅವಳು ಮೋಸ ಮಾಡಿದ್ದಾದರೂ ಎಲ್ಲಿ? ಅದು ಅವಳ ಹಿರಿಯರಿಂದ ಆದ ದುರುಳತನ. ಸನಾತನಿಗಳೂ ಸಮಾಜವಾದಿಗಳೂ ಆದ ಅವಳ ಅಜ್ಜ ಹಾಗೂ ಹೆತ್ತವರ ಅಜ್ಞಾನದಿಂದ. ನಾನು ಅನ್ಯ ಜಾತಿಯವನೆಂಬ ದುರ್ಭಾವನೆ ಅವರನ್ನು ಕಾಡತೊಡಗಿತು. ಅಯ್ಯೊ! ಆ ಹಿರಿಯ ಧರ್ಮ ದುರಂಧರರಿಗೆ ಪ್ರೇಮಕ್ಕೆ ಜಾತಿ-ಮತಗಳ ಮತ್ಸರವಿಲ್ಲವೆಂಬುದನ್ನು ಯಾರು ತಿಳಿಸಬೇಕು? ಹಾಗೆ ಹೇಳಿರುತ್ತಿದ್ದರೆ ಅವರು ಕೇಳುತ್ತಲೂ ಇರಲಿಲ್ಲ...ಬಿಡಿ...

ಒಟ್ಟಿನಲ್ಲಿ ನನ್ನ ದುರ್ದೈವ! ಚಿತ್ರದಂತೆ ಈ ಸೃಷ್ಟಿಯಲ್ಲಿ ಜನ್ಮಿಸಿದ್ದ ಚಿತ್ರ ನನ್ನ ಮಡಿಲಿನಿಂದ ಸೆಳೆಯಲ್ಪಟ್ಟಳು. ಬೇರೆಯವರ ಮನೆ...ಮಡಿಲು ತುಂಬಿದಳು. ಅಂದಿನಿಂದ ನಾನು, ಚಿತ್ರಳನ್ನು ಮರೆಯಲೇ ಬೇಕಾಯಿತು. ಈ ಘಟನೆ ನನಗೆ ಅದೆಷ್ಟು ಯಾತನೆಯನ್ನುಂಟುಮಾಡಿತು?! "ದೇವಾ! ಮುಂದಿನ ಜನ್ಮದಲ್ಲಿಯಾದರೂ, ನಾನು ಚಿತ್ರ ಒಂದೇ ಜಾತಿಯವರಾಗಿ ಹುಟ್ಟಿ ಆದರ್ಶ ಸತಿಪತಿಯರಾಗಿ ಬಾಳುವಂತೆ ಮಾಡು" ಎಂದು ಏಕಾಂತದಲ್ಲಿ ಕುಳಿತು ಜಪಿಸುವಂತೆ ಆಗಿತ್ತು. ಈ ನನ್ನ ಏಕಾಂತ, ಮಗ್ನತೆಯನ್ನರಿತ ನನ್ನ ಅಣ್ಣ ಕೆಲವು ದಿನಗಳ ಮಟ್ಟಿಗೆ ಮನೆ ಬಿಟ್ಟು ಎಲ್ಲಿಯಾದರೂ ಶಾಂತವಾದ ವಾತಾವರಣದಲ್ಲಿದ್ದು ಬರುವಂತೆ ಪ್ರೇರೇಪಿಸಿದರು. ತಂದೆಯವರು ಬಹಳವಾಗಿ ಕೋಪಿಸಿಕೊಂಡರು. "ಒಂದು ವರ್ಷದ ಫೀಜು ಅನ್ಯಾಯ ಮಾಡಿದ. ಅಯೋಗ್ಯ! ಈಗಿನ ಹುಡುಗರ ಆಡಳಿತವೇ ಗೊತ್ತಾಗುವುದಿಲ್ಲ. ಪ್ರೇಮ, ಪ್ರಣಯ-ಭಂಗ, ಇತ್ಯಾದಿ...ಇಂಥದ್ದೊಂದು ಇಲ್ಲದೆ ವ್ಯಾಸಂಗ ಪೂರ್ಣ ಆಗೋದು ಕಷ್ಟ..ಹಾಗೇ ಹೀಗೆ..ಎಂದು ಏನೇನೋ..ಆದರೆ..ತಾಯಿ ಮಾತ್ರ ಹಳ್ಳಿಯಲ್ಲಾದರೂ ಇದ್ದು, ಸೇವಾಶ್ರಮದಲ್ಲಿ ನಿನ್ನ ಕೈಲಾದ ಸೇವೆ ಮಾಡಿ ಗುಣವಂತನೆನಿಸಿಕೊಂಡು ಬಾ" ಎಂದು ಹರಸಿದಳು. ಎಷ್ಟಾದರೂ ಆಕೆ ಕ್ಷಮಾಶೀಲೆ..ಇರಲಿ..

ಅಣ್ಣನವರ ಹೇಳಿಕೆಯಂತೆ ನಾನು ಅಲ್ಲೇ ಹತ್ತಿರದಲ್ಲಿದ್ದ ಹಳ್ಳಿಯೊಂದರ ಸೇವಾಶ್ರಮದಲ್ಲಿ ಆನರರಿ ಮಾಸ್ತರನಾಗಿ ನೇಮಿಸಲ್ಪಟ್ಟೆ.

ಹಳ್ಳಿಯ ನೈಸರ್ಗಿಕ ವಾತಾವರಣ ಎಷ್ಟು ಶಾಂತವಾಗಿತ್ತು! ಕಣ್ಣು ಹೊರಳಿಸಿ ನೋಡಿದಂತೆಲ್ಲ ಕಾಂಬ ಅಚ್ಚ ಹಸುರು ಪೈರು. ಪಕ್ಕದಲ್ಲಿಯೇ ಹರಿಯುತ್ತಿದ್ದ ಚಿಕ್ಕ ಹೊಳೆ. ಊರಿಗೇ ಅಂಟಿದಂತಿದ್ದರೂ ಪ್ರಶಾಂತ

ವಾದ,ಬಹಳ ಎತ್ತರವಾದ ಸ್ಥಳದಲ್ಲಿ ಕಟ್ಟಿದ್ದ ಆಶ್ರಮ. ಆಶ್ರಮದಲ್ಲಿ ತರತರದ ಹೂಗಿಡಗಳ ಒಂದು ಕೈತೋಟ ಹಾಗೂ ಚಿಕ್ಕ ಕೊಳ ಆಕರ್ಷಣೀಯ ವಾಗಿತ್ತು. ಮಹಾತ್ಮಾ ಗಾಂಧೀಜಿಯವರ ಸ್ಮಾರಕ ಮಂದಿರವೂ ಅದನ್ನು ಬಳಸಿ, ತನ್ನ ಮಡಿಲಿನಲ್ಲಿಟ್ಟು ಕೊಂಡು ಸದಾ ತಂಪನ್ನೀಯುತ್ತಿರುವ ನಿತ್ಯ ಮಲ್ಲಿಗೆಯ ಲತಾಮಂಟಪವೂ ರಮ್ಯವಾಗಿತ್ತು. ಒಂದು ಸುತ್ತು ಆ ತೋಟವನ್ನು ಬಳಸಿ, ಹಾಗೇ ಆ ಸ್ಮಾರಕ ಮಂದಿರದ ಜಗುಲಿ ಮೇಲೆ ಕುಳಿತರೆ, ಎಂಥ ಭಾರವಾದ ಮನಸ್ಸೂ ಹಗುರವಾಗಿ ನೆಮ್ಮದಿಯನ್ನು ಹೊಂದುತ್ತಿತ್ತು. ನಾನು ಇಲ್ಲಿಗೆ ಬಂದ ಹೊಸದರಲ್ಲಿ ಗಂಟೆಗಟ್ಟಲೆ ಆ ಲತಾಮಂಟಪದ ಕಲ್ಲುಬೆಂಚಿನ ಮೇಲೆ ಕುಳಿತು ಚಿತ್ರಗಳನ್ನು ಮರೆಯಲೆತ್ನಿಸುತ್ತಿದ್ದೆ.

ಅಲ್ಲಿದ್ದ ಗರಡಿ ಮನೆಯಲ್ಲಿ ಶ್ರೀ ಸ್ವಾಮಿಜಿಯವರು ದಿನವೂ ಆಶ್ರಮದ ಶಾಲೆಯ ಮಕ್ಕಳಿಗೆ ವ್ಯಾಯಾಮ ಹೇಳಿಕೊಡುತ್ತಿದ್ದರು. ಅದರಲ್ಲಿ ನಾನೂ ಭಾಗ ವಹಿಸುತ್ತಿದ್ದೆ. ಅರವತ್ತು ವರುಷದ ಮುದುಕ ಶ್ರೀ ಸ್ವಾಮಿಜಿ, ಅದೆಷ್ಟು ಲೀಲಾಜಾಲವಾಗಿ ಆಸನಗಳನ್ನು ಹಾಕುತ್ತಿದ್ದರು. ಬೆಳಗಿನ ಝಾವ ನಾಲ್ಕು ಗಂಟೆಗೇ ಎದ್ದು ಸ್ವಾಮಿಜಿ ಆದಿಯಾಗಿ ಸರ್ವರೂ ಸೂರ್ಯ ನಮಸ್ಕಾರ ಹಾಕುತ್ತಿದ್ದೆವು. ಆನಂತರ ಸ್ವಯಂಸೇವೆ ಅಂದರೆ, ಆಶ್ರಮದ ಕೋಣೆಗಳನ್ನೂ, ಸುತ್ತು ಆವರಣವನ್ನೂ ಗುಡಿಸುವುದು. ಗೋಶಾಲೆಯಿಂದ ತಂದ ಹಾಲನ್ನು ಕಾಯಿಸಿ, ಅಲ್ಲಿನ ಅನಾಥ ಮಕ್ಕಳಿಗೆ ಹಂಚುವುದು. ಮಕ್ಕಳಿಗೆ ಪಾಠ ಹೇಳಿಕೊಡುವುದು, ಅಡಿಗೆ, ಊಟ, ಇತ್ಯಾದಿ ಇತ್ಯಾದಿ ಎಲ್ಲವೂ ಸ್ವಯಂ ಪ್ರೇರಣೆಯ ಕೆಲಸಗಳೇ. ಯಾರೂ, ಯಾವ ಕೆಲಸವನ್ನಾದರೂ ಮಾಡಬಹುದು. ಆದರೆ ಆಫೀಸು ಅಲ್ಲಿನ ಲೆಕ್ಕ ಪತ್ರಗಳಿಗೆ ಮಾತ್ರ ಗುಮಾಸ್ತರುಗಳನ್ನು ಗೊತ್ತುಮಾಡಿದ್ದರು. ಅಂತೂ ಈ ರೀತಿಯ ನಿತ್ಯ ಕಾರ್ಯಕ್ರಮದಿಂದ ನನ್ನ ಮನಸ್ಸಿನ ಮೇಲೆ ಸ್ವಾವ-ಲಂಬನೆಯ ಪರಿಣಾಮ ಚೆನ್ನಾಗಿ ಆಗಿತ್ತು. ಇಲ್ಲಿಯೇ ಇದ್ದುಬಿಡಲೆ? ಎನ್ನುವಷ್ಟು ಒಗ್ಗಿಹೋಗಿತ್ತು. ನಾನು ಅಲ್ಲಿ ಹೋಗಿದ್ದು ಆಗಲೇ ಆರೇಳು ಮಾಸಗಳು ಕಳೆದಿರಬಹುದು. ಭಾದ್ರಪದ ಶುದ್ಧ ಚೌತಿ, ಎಂದಿನಂತೆ ಜರುಗಲಿದ್ದ ಗಣಪತಿಯ ಉತ್ಸವಕ್ಕೆ ಬಂದಳು ನಯನ. ಇದು ನನ್ನ ಎರಡನೆ ಘಟನೆಗೆ ಕಾರಣವಾಯ್ತು.

ಅವಳ ತಾಯಿ, ತಂದೆಯರು ಅದೆಷ್ಟು ಚತುರತೆಯಿಂದ ಇಟ್ಟ ಹೆಸರದು!? ನಯನಳ ಕಣ್ಣಿಗೆ ಕಣ್ ಸಂದರ್ಶಿಸಿತೆಂದರೆ ಸಾಕು. ಅಬ್ಬ! ಎಂಥಹ ಕುಡಿನೋಟ! ಏನು ಮಾಟವಾದ ಕಂಗಳವು! ಎಂತಹ ನಿಷ್ಠಾವಂತ ಮನುಷ್ಯನನ್ನೂ ಅಲುಗಾಡಿಸುತ್ತಿತ್ತು ಳೆಂದರೆ, ತುಂಬಿದ ಸಭೆ ಮಂತ್ರಮುಗ್ಧತೆಯಲ್ಲಿ ಕುಳಿತುಬಿಡುತ್ತಿತ್ತು. ಎಷ್ಟು ತರಹದ ಭಾವ ಭಂಗಿಯಲ್ಲಿ ನರ್ತಿಸುತ್ತಿದ್ದಳು ನಯನ!...ನಯನ... ನಯನ...

ಅದೋ! ಅವಳು ತಾಳಬದ್ಧವಾಗಿ ಹಾಕಿಡುತ್ತಿರುವ ಗೆಜ್ಜೆಸನಾದ! ಥಕ್ಕಥೈ...ಥಾ ಥೈ...ಎಂದು ಇನ್ನೂ ನನಗೆ ಕೇಳಬರುತ್ತಲಿದೆ ಎನ್ನುವಂತಿದೆ. ಹೆಣ್ಣೆಂದರೆ ಸಾಕು, ಈ ಮನುಷ್ಯ ಎಷ್ಟು ಬೇಗ ಮಾರುಹೋಗುವನಪ್ಪಾ! ಎನ್ನುವಿರೇನೋ? ತಲ್ಲೀನರಾಗಿ ಕುಳಿತು, ರಂಗದ ಮೇಲೆ ರಂಗುರಂಗಿನ ಉಡಿಗೆ ತೊಡಿಗೆಗಳಿಂದ ಅಲಂಕೃತಳಾದ ಯೌವ್ವನ ಭರಿತ ಕನ್ಯೆಯನ್ನು, ಅದೂ ಅಂಗವಿನ್ಯಾಸ, ಭಾವ ಭಂಗಿಗಳಿಂದ ಕೂಡಿದ ಕನ್ಯೆಯನ್ನು ಎವೆಯಿಕ್ಕದೆ ನೋಡುವ ನಿಮ್ಮ ಮನಸ್ಸಿಗೆ ನೀವೇ ಪ್ರಶ್ನೆ ಹಾಕಿ ನೋಡಿರಿ...ಹೆಚ್ಚು ಮಾತೇಕೆ? ಒಬ್ಬ ರಾಮನಿದ್ದರೆ, ಒಬ್ಬ ಕೃಷ್ಣ. ಒಬ್ಬ ಕೃಷ್ಣನಿದ್ದಲ್ಲಿ ಒಬ್ಬ ರಾಮ...




"ಈ ಮೂರು ಘಟನೆಗಳನ್ನು ಮರೆಯುವದಾದರೂ ಹೇಗೆ ?"

ಆ ನೋಟ! ಅಂದ ಬಳಿಕ ನನ್ನಂತಹ ಬ್ರಹ್ಮಚಾರಿ ಅದರಲ್ಲಿಯೂ ಕೈಗೆ ಸಿಕ್ಕ ತುತ್ತನ್ನು ಕಳೆದುಕೊಂಡವನಿಗೆ ಆ ನೋಟವೇ ಹಬ್ಬವಲ್ಲವೆ? ಇದೇನು? ಹೀಗೆ ಹುಚ್ಚುಚ್ಚಾರ-ಎನ್ನುವಿರೇನೋ... ಅದರಲ್ಲೇನು ತಪ್ಪು? ನಾನೇನು ಭೀಷ್ಮನಂತೆ ಪ್ರತಿಜ್ಞೆ ಮಾಡಿದವ ನಲ್ಲವಲ್ಲಾ!

ನಯನ ಬೆಂಗಳೂರಿನ ಒಬ್ಬ ಸದ್ಗೃಹಸ್ಥರ ಏಕ ಮಾತ್ರ ಪುತ್ರಿ. ಶ್ರೀಮಂತ ಪುತ್ರಿ! ಅವಳಿಗೆ ಶಾಲೆಯ ವಿದ್ಯಾಭ್ಯಾಸದೊಡನೆ ಶಾಸ್ತ್ರೀಯವಾಗಿ ಭರತನಾಟ್ಯದ ಅಭ್ಯಾಸವೂ ಆಗಿತ್ತು. ಸರ್ವಾಲಂಕಾರಭೂಷಿತೆಯಾಗಿ ರಂಗದ ಮೇಲೆ ಬಂದು ನಟನೆಗಾರಂಭಿಸಿದ ಳೆಂದರೆ... ಹೀಗೆ ಇರುವುದೇ ಸೃಷ್ಟಿಯ ನಿಯಮವಲ್ಲವೆ?

ನಾನು ಅಲ್ಲಿನ ಶಾಲಾ ವಾರ್ಷಿಕೋತ್ಸವದಿಂದ ಆಗಿನ ಗಣೇಶೋತ್ಸವದಲ್ಲಿ ಹೆಚ್ಚು ಮುತುವರ್ಜಿ ವಹಿಸಿ ಕೆಲಸ ಮಾಡಬೇಕಾಗುತ್ತಿತ್ತು. ಈ ನೃತ್ಯಗಾತಿ ನಯನಳ ಸಹಾಯ ಸೌಲಭ್ಯಗಳಿಗಾಗಿ ಸ್ವಾಮಿಜಿ ನನ್ನನ್ನೇ ನೇಮಿಸಿದ್ದರು. ಅವಳ ಆ ಕುಡಿನೋಟದಿಂದ ಚಂಚಲಗೊಂಡಿದ್ದ ನನ್ನ ಮನಸ್ಸು, ಯಾರೂ ಇಲ್ಲದ ಸಮಯ ಸಾಧಿಸಿ ಅವಳೊಡನೆ ನಾಲ್ಕು ಸಲಿಗೆಯ ಮಾತನಾಡಲು ಬಯಸಿತು. ಅದರಂತೆ ಅವಳನ್ನೊಮ್ಮೆ ಸಂಧಿಸಿ, "ನಿಮ್ಮ ಎಲ್ಲಾ ನೃತ್ಯಗಳ ಪೈಕಿ ಹಾವಿನ ನೃತ್ಯ ಮತ್ತು ನಟರಾಜನ ನೃತ್ಯ



ನನ್ನ ಮನವನ್ನಾಕರ್ಷಿಸಿದೆ...ನಿಮಗೆ ಈ ಕಲೆ ಚನ್ನಾಗಿ ಕರಗತವಾಗಿದೆ" ಎಂದು ಕೈ ಕೈ ಹೊಸೆಯುತ್ತ ಅರ್ಧಮರ್ಧ ಧೈರ್ಯ ತಂದುಕೊಂಡು "I Like you very much" ಎಂದೆ. ಸಾಲದೆ?...ಆಕೆ ಅದಕ್ಕೆ ಅತ್ಯಂತ ಕೃತಜ್ಞತಾಭಾವದಿಂದ "ಎಲ್ಲವೂ ನಿಮ್ಮಂತಹ ಸಹೃದಯಿಗಳ ನೆರವಿನಿಂದ. ತುಂಬಾ Thanks. ಇನ್ನು ಮುಂದೆ ಯಾರಿಗೂ ಹೀಗೆ ಹೇಳಬೇಡಿ" ಎಂದು ಹೇಳಿ ಅಲ್ಲಿಂದ ಜಾರಿದಳು.

ಜಾರಿದಳು? ಹೌದು ಜಾರಿದಳು ಎಂಬುದೇ ಸರಿ. ನಾನು ಯಾವ ಆಶೆ ಆಕಾಂಕ್ಷೆಗಳನ್ನು ಇಟ್ಟುಕೊಂಡು ಅವಳೊಡನೆ ಮಾತನಾಡಿ ಸಲಿಗೆ ಬೆಳೆಸಲು ಹೋದೆನೋ ಅದಕ್ಕೆ ತಣ್ಣೀರೆರಚಿದಂತೆ ಆಯ್ತು. ಎಷ್ಟು ಸೂಕ್ಷ್ಮವಾಗಿ ಉತ್ತರಿಸಿದ್ದಳವಳು?!

ನಯನ ಬಳಗದೊಡನೆ ಊರಿಗೆ ಹೋದಳು. ಹೋಗುವಾಗ ನನ್ನ ಮನಸ್ಸನ್ನೂ ತನ್ನ ಹಿಂದೆ ಸೆಳೆದೊಯ್ದಿದ್ದಳು. ನನಗೆ ಶಾಲೆಯ ಕೆಲಸದಲ್ಲಿ ಉತ್ಸಾಹವಿಲ್ಲವಂತೆ ಆಯ್ತು. ನಿರುತ್ಸಾಹಿಗಳಿಗೆ ಎಡೆಯಿಲ್ಲದ ಸ್ವಾಮಿಜಿಯವರ ಸನ್ನಿಧಿಯಲ್ಲಿ ನನ್ನ ಮನ ನಿಲ್ಲದಂತಾಯ್ತು. ಕೇವಲ ಒಬ್ಬ ಹೆಂಗಸಿಗಾಗಿ ಹೀಗೆಲ್ಲ ಆಗುವುದೆ? ಎನ್ನಬಹುದು. ಆದರೆ...ನನ್ನಂತೆ ಫಾಸಿಗೊಳಗಾದ ಒಬ್ಬಿಬ್ಬರು ಯಾರಾದರೂ ಓದುಗರು ಇದ್ದರೆ, ಖಂಡಿತಾ ಇದನ್ನು ಒಪ್ಪುವಿರಿ.

ಸ್ವಾಮಿಜಿಯವರ ಹೇಳಿಕೆಯಂತೆ ಸ್ವಲ್ಪ ದಿನಗಳ ಮಟ್ಟಿಗೆ ಸ್ವಂತ ಊರಿನಲ್ಲಿದ್ದು ಬರಲು ಬಂದೆ. ಅದರಿಂದಾದ ಅನುಕೂಲವೇನು? ಅನುಕೂಲ ಇಷ್ಟೆ. ಮಾಧುರಿಯೊಡನೆ ನನ್ನ ಲಗ್ನ. ನಾನು ಇಲ್ಲಿಗೆ ಬರುವ ಮೊದಲೇ /ಶ್ರೀ ಸ್ವಾಮಿಜಿಯಿಂದ ತಂದೆಯವರಿಗೆ ಏನೆಂದು ಕಾಗದ ಬಂದಿತ್ತೊ ಏನೊ, ಅಂತೂ ನಾನು ಬರುವುದನ್ನೇ ಕಾದಿದ್ದ ಹಿರಿಯರು ಬಂದ ಕೂಡಲೇ ನನ್ನ ಅಕ್ಕನ ಮಗಳಾದ ಮಾಧುರಿಯೊಡನೆ ಲಗ್ನ ನಿಶ್ಚಯಿಸಿದರು. ನಿಶ್ಚಯಿಸಿದರೆಂಬುದೇನು? ನನ್ನ ಯಾವ ಹೇಳಿಕೆ, ಕೇಳಿಕೆಗಳೂ ಇಲ್ಲದೆ ನನ್ನಿಂದ ಅವಳಿಗೆ ತಾಳಿ ಕಟ್ಟಿಸಿಯೇಬಿಟ್ಟರು. ಅಷ್ಟಲ್ಲದೆ ಮತ್ತೇನು? ಅಂದು ನಾನೊಬ್ಬ "ಕೋಲೇ ಬಸವ" ನಂತಾಗಿದ್ದೆ. ಚಿತ್ರಗಳಿಂದ ವಂಚಿತನಾಗಿ, ನಯನಳ ಆಶೆ ಕಡಿದೊಗೆದ ನನಗೆ, ಮಾಧುರಿಯೊಡನೆ ಮೂಕು ಬಸವನಂತಿರುವುದೇ ಲೇಸಾಗಿತ್ತು. ಚಿತ್ರಳ ಜೊತೆ ಕಾಲೇಜಿನಲ್ಲಿಯೇ ಶರಣು ಹೊಡೆದಿದ್ದ ನನಗೆ ಮಾಧುರಿಯೊಡನೆ ಮನೆಯಲ್ಲಿ ಕೂಡಬೇಕಾಗಿತ್ತು. ತಾಯಿಯವರ ಹಟವು ಇದಕ್ಕೆ ಕಾರಣವಾಗಿತ್ತು. "ಮಗನು ಸರಿಯಾದ ಲಗಾಮಿಗೆ ಸಿಗುವತನಕ ಅತ್ತಿತ್ತ ಹೋಗಬಾರದು, ತಮ್ಮೊಟ್ಟಿಗೇ ಇರಲಿ" ಎಂಬುದು.

ಮಾಧುರಿ ಚಿತ್ರಳಂತೆ ಸರ್ವಾಂಗಸುಂದರಳಲ್ಲ. ನಯನಳಂತೆ ನಟನಾರಾಯಣಿಯೂ ಅಲ್ಲ. ಆದರೂ ರಕಸಿಶಿಖಾಮಣಿಗಳನ್ನು ಮುಗ್ಧಗೊಳಿಸುವಂಥ ಮಧುರವಾದ ಕಂಠವಿತ್ತು. ಶಾಸ್ತ್ರೀಯವಾದ ಸಂಗೀತ ಪಾಠ ಆಗಿರದಿದ್ದರೂ, ದೇವರ ನಾಮಗಳನ್ನು ಬಹಳ ಇಂಪಾಗಿ ಹಾಡುತ್ತಿದ್ದಳು. ನಮ್ಮ ಮನೆಯಲ್ಲಿ ವಾರಕ್ಕೊಮ್ಮೆ ಆಗುತ್ತಿದ್ದ ಭಜನೆ ಈಕೆ ಬಂದ ಮೇಲೆ ದಿನವಹಿ ಆಗತೊಡಗಿತು. ಅವಳು ಹಾಡಲು ಕುಳಿತರೆ ನಾನು ತಾಳಹಾಕುತ್ತ ಕೂಡುತ್ತಿದ್ದೆ. ಒಮ್ಮೊಮ್ಮೆ ನಾನೊಂದು, ಅವಳೊಂದರಂತೆ ಪೈಪೋಟಿಯಲ್ಲಿ ಹಾಡುತ್ತಿದ್ದೆವು. ನಾನು ಎಷ್ಟೇ ರಸಭರಿತವಾಗಿ ಹಾಡಿದರೂ ನನ್ನ ತಂದೆಯವರು "ನಮ್ಮ ಮಾಧುರಿಯ ಸಮ ಯಾರೂ ನಿಲ್ಲಲಾರರು. ಆಕೆ ತುಂಬಿದ ಭಕ್ತಿಭಾವದಿಂದ ಹಾಡುತ್ತಾಳಾಗಿ ಸಂಗೀತಜ್ಞರನ್ನೂ ತಲೆ ತೂಗಿಸುವಂತೆ ಮಾಡುತ್ತದೆ." ಎಂದು ಸೊಸೆಯನ್ನು ಹೊಗಳುತ್ತಿದ್ದರು.

ರೂಪಿನಲ್ಲಿ ಕುರೂಪಿಯಾದರೂ, ತನ್ನ ಮಧುರ ಕಂಠದಿಂದ, ನಯ, ವಿನಯಗಳಿಂದ ನಮ್ಮನ್ನೆಲ್ಲ ತನ್ನ ಕಡೆ ಸೆಳೆದುಕೊಂಡಿದ್ದಳು. ಮಾಧುರಿ ನಮ್ಮ ಮನೆಯಲ್ಲಿ ಕೇವಲ ಮೂರೇ ಮೂರು ವರ್ಷ ಬಾಳು

ಮಾಡಿದಳು. ಈ ಮೂರು ವರ್ಷಗಳಲ್ಲಿ ನನಗೊಮ್ಮೆ ನಯನಳ ಭೇಟಿಯಾಗಿತ್ತು. ಮಾಧುರಿಯೂ ಇದ್ದಳು. ಅವಳ ಮುಂದೆ ಅಸ್ಥಿರನಾಗದೆ ಕಲ್ಲಾಗಿದ್ದೆ. ಆದರೂ ನನ್ನ ಮನದ ಮೇಲಾದ ಘಾಸಿಯ ಪರಿಣಾಮಗಳನ್ನು ಹೇಗೆ ಅರಿತಿದ್ದಳೋ ಏನೊ? ಒಂದು ದಿನ ಹಾಗೇ ನಾವು ಮಾತನಾಡುತ್ತ ಕುಳಿತಿದ್ದಾಗ ಮಾಧುರಿ ಕೇಳಿದಳು– "ನಿಮಗೆ ಚಿತ್ರಕಲೆ ಮೆಚ್ಚಿಗೆಯೊ? ನೃತ್ಯಕಲೆ ಮೆಚ್ಚಿಗೆಯೊ? ಅಥವಾ ಸಂಗೀತಕಲೆ ಮೆಚ್ಚಿಗೆಯೊ?" ಎಂದು. ಈ ಪ್ರಶ್ನೆಗೆ ಏನೆಂದು ಉತ್ತರ ಹೇಳಲಿ? ಮನಸಾ ಮೆಚ್ಚಿದ್ದೆ ಚಿತ್ರಕಲೆಯನ್ನು, ಮಾರುಹೋಗಿದ್ದೆ ನೃತ್ಯಕಲೆಗೆ, ಆದರೆ..ಆದರೆ.. ಇಂದು ಕರಗತಮಾಡಿಕೊಳ್ಳಬೇಕಾಗಿರುವುದು ಸಂಗೀತಕಲೆಯನ್ನು. ಯೋಚಿಸುತ್ತಾ ಮೌನವಾಗಿ ಕುಳಿತದ್ದನ್ನು ಕಂಡು "ಏಕೆ ಮೌನವಾಗಿ ಕುಳಿತಿರಲ್ಲ? ನನ್ನ ಪ್ರಶ್ನೆ ತಪ್ಪಾಗಿಲ್ಲ ತಾನೆ?" ಎಂದಳು. ನಾನು ಸ್ವಲ್ಪದರಲ್ಲಿಯೇ ಚೇತರಿಸಿಕೊಂಡು "ಛೆ.. ಛೆ.. ತಪ್ಪಾಗಿಲ್ಲ. ಆದರೆ... ಇಂದೇಕೆ ಈ ಪ್ರಶ್ನೆ ನಿನ್ನ ತಲೆಯಲ್ಲಿ ಉದ್ಭವಿಸಿತು? ನನಗೆ ಚಿತ್ರ, ಹಾಗೂ ನೃತ್ಯಕಲೆಗಳು ಮೆಚ್ಚಿಗೆಯಾಗಿದ್ದರೂ ಇಂದು ಸದ್ಯಕ್ಕೆ ಸಂಗೀತಕಲೆಯೇ ಹೆಚ್ಚು ಮೆಚ್ಚಿಕೆಯಾಗಿದೆ ಮಾಧುರಿ. ಇನ್ನೂ ನಿನಗೆ ಸಂಶ



" ಅದೋ ನೋಡು ಅಲ್ಲಿ ಉತ್ತರದಲ್ಲಿ "

ಯವೆ?" ಎಂದು ಹತ್ತಿರ ಬರಸೆಳೆದೆ. ನನ್ನ ನಿಕಟವಾದ ಸಾನ್ನಿಧ್ಯದಿಂದ ಆನಂದಭರಿತಳಾದ ಮಾಧುರಿ ಅಲ್ಲ– ಮುಗ್ಧ ಮಾಧುರಿ ಮೌನಳಾದಳು.

ಅಂದಿನಿಂದ ನಮ್ಮ ಪ್ರೇಮ ಇನ್ನೂ ಗಾಢವಾಗತೊಡಗಿತು. ಆದರೆ ಅದೇಕಿಷ್ಟು ನನ್ನ ಗಂಟಲು ಬಿಗಿಯುತ್ತಲಿದೆ?.. ವಿಧಿಲಿಖಿತದಲ್ಲಿ ನಾನು ಈ ಜನ್ಮದಲ್ಲಿ ಯಾವೊಬ್ಬ ಹೆಂಗಸನ್ನೂ ಪ್ರೀತಿಸಬಾರದು, ಪ್ರೀತಿಸುವುದು ತಪ್ಪು! ಎಂದಿತೋ, ಏನೋ. ಪುನಃ ಪುನಃ ಘಾಸಿಗೊಂಡರೆ, ಈ ರೀತಿ ನೆನಪು ಮರುಕಳಿಸಿದರೆ, ಗಂಟಲು ಬಿಗಿಯದೆ ಮತ್ತೇನಾದೀತು?

ಚಿತ್ರ ನನ್ನಿಂದ ಸೆಳೆಯಲ್ಪಟ್ಟು ಬೇರೊಬ್ಬನ ಮನೆ ಮಡಿಲನ್ನು ತುಂಬಿದಳು. ನಯನ ನೋಟದ ಬಾಣ ಬೀರಿ ಮೂರ್ಛೆಗೊಳಿಸಿದಳು. ಇನ್ನು ಮಾಧುರಿ. ಮಾಧುರಿ ಸಂಗೀತದ ಸುಧಾಪಾನಮಾಡಿಸಿ ಇನ್ನು ಸಾಕು, ಹೆಚ್ಚು ಪಾನದಿಂದ ಅಜೀರ್ಣವಾದೀತು? ಎಂದು, ಎಂದೆಂದಿಗೂ ಮರೆಯಲಸಾಧ್ಯವಾದಂಥ ಚಿರದುಃಖವನ್ನು ನನಗುಂಟುಮಾಡಿ ಕಣ್ಮರೆಯಾದಳು. ಶಾಂತಿಸ್ವರ್ಗವನ್ನು ಸೇರಿದಳು. ಎಷ್ಟು ಹೇಳಲಿ ಈ ನನ್ನ ಬಾಳ ವರ್ಣನೆಯನ್ನು!

ಇನ್ನು ಜೀವಿಸಿರುವುದು ವ್ಯರ್ಥ. ಹಾಗೆಂದು ಬಂದೆ ತುಂಗಾತೀರದಲ್ಲಿರುವ ಮಂತ್ರಾಲಯಕ್ಕೆ. ಶ್ರೀ ರಾಯರ ವೃಂದಾವನಕ್ಕೆ ನಮಸ್ಕರಿಸಿ, ತಾಯಿ ತುಂಗಮ್ಮನ ಮಡಿಲಲ್ಲಿ ಎಂದೆಂದಿಗೂ ಎಚ್ಚರಬಾರದ, ಮಾಧುರಿಯ ಸಾನ್ನಿಧ್ಯದ ಸುಖನಿದ್ರೆಗೈಯೋಣ ಅಂದರೆ.. ಆದರೆ ಏಕೋ ಮನಸ್ಸು ಅಳುಕಿತು. ಹಾಗೇ ಕುಳಿತೆ. ಹತ್ತಿರದಲ್ಲಿದ್ದ ಕಲ್ಲುಗಳಿಂದ ಮೂರು ಕಲ್ಲುಗಳನ್ನೂ ಆರಿಸಿ ತೆಗೆದೆ. ಇದು ಚಿತ್ರ.. ಇದು ನಯನ.. ಇದು ಮಾಧುರಿ.. ಎಂದು ಮೂವರನ್ನು ಮುಳುಗಿಸಿದೆ. ಇನ್ನು ಉಳಿದಿರುವ ಈ ದೇಹವಾದರೂ ಏಕೆ ಇರಬೇಕು? ಯಾರಿಗಾಗಿ? ಯಾವ ಸುಖಕ್ಕಾಗಿ ಇರಬೇಕು? ಛೆ!.. ಏನೂ ಅಗತ್ಯವಿಲ್ಲ. ಮುಳುಗುವುದೇ ಸೈ! ಎಂದು ದೃಢಮನಸ್ಸು ಮಾಡಿ ಎದ್ದು ನಿಂತೆ.

ದೂರದಿಂದ ಹೆಂಗಸೋರ್ವಳು ಇತ್ತಲೇ ಬರುತ್ತಾ "ಅಯ್ಯೊ! ಹುಂಬ, ಅಡ್ಡ ಹೆಸರಿನಲ್ಲಿಯೂ ಹುಂಬ, ಕೃತಿಮಾಡುವುದರಲ್ಲಿಯೂ ಹುಂಬ.. ಬನ್ನಿ ಇತ್ತ ಬನ್ನಿ ಹೇಗೂ ಸಾಯಲು ಸಿದ್ಧವಾಗಿರುವ ನಿಮಗೆ ಸಾಯುವ ಮತ್ತೊಂದು ಮಾರ್ಗವನ್ನಾದರೂ ತೋರುತ್ತೇನೆ. ಬನ್ನಿ " ಎಂದು. ಗರಬಡಿದವನಂತೆ ಹೆಜ್ಜೆ ಮುಳುಗುವ ನೀರಿನಲ್ಲಿ ನಿಂತಿದ್ದ ನನ್ನನ್ನು ಕೈಹಿಡಿದೆಳೆಯುತ್ತ ದಂಡೆಗೊಯ್ದಳು.

ಆಕೆ ತೋರಿದ ಮಾರ್ಗ ಯಾವುದು ಗೊತ್ತೆ?

ಉತ್ತರದ ಕಡೆ ಕೈಮಾಡಿ ತೋರುತ್ತ- "ಅದೋ ಅಲ್ಲಿ ನೋಡು. ಅಲ್ಲಿ ನಡೆಯುತ್ತಿರುವ ಹತ್ಯಾಕಾಂಡವನ್ನು ನೋಡು. ಭಾರತದ ಮೇಲೆ ದಾಳಿಗೈಯುತ್ತಿರುವ ಚೀನೀಯರೊಡನೆ, ರಣರಂಗದಲ್ಲಿ ವೀರಾವೇಶದಿಂದ ಹೋರಾಡುತ್ತಿರುವ ನಿನ್ನ ದೇಶಬಾಂಧವರನ್ನು ನೋಡು. ತುಂಬಿದ ಯೌವ್ವನದಿಂದ ಕೂಡಿರುವ ನೀನು ಹೇಡಿಯಂತೆ ದುರ್ಮರಣವನ್ನು ಅಪ್ಪಬಯಸುವಿಯಾ? ಧಿಃಕ್ಕಾರ! ವೀರಕರ್ಮಿಯಾಗಿ ಮರಣವನ್ನು ಹೊಂದಬೇಕು. ದುಡಿದು ಮಡಿಯಬೇಕು ಹುಂಬಾ, ಎಂದೆಂದಿಗೂ ಕರ್ಮದಿಂದ ವಿಮುಖನಾಗಬಾರದು. ಹೆಣ್ಣಿಗಾಗಿ ಮನಸೋತು ದುರ್ಬಲನಾದ ನೀನು, ಇನ್ನು ಮುಂದೆ ದೇಶಕ್ಕಾಗಿ ಹೋರಾಡುವ ವೀರಯೋಧನಾಗು. ಕುರುನಾಡಿನ ವೀರ ಕುವರ ಎನ್ನಿಸಿಕೋ ಹೋಗು." ಎಂದು ಹೇಳುತ್ತ ಕಣ್ಮರೆಯಾದಳು. "ಅಮ್ಮ ನೀನಾರು? ತಾಯೀ ನೀನಾರು? ಎಂದು ಸುತ್ತ ಅರಸಿದೆ. ಆದರೆ ಆ ಅಸ್ಪಷ್ಟ ಕತ್ತಲೆಯಲ್ಲಿ ಯಾವ ಸುಳಿವೂ ಕಾಣಲಿಲ್ಲ.

ಆ ದಿವ್ಯ ಸಂದೇಶದಂತೆ ನಾನೇನೋ ಇಂದು ಭಾರತದ ವೀರಯೋಧನಾಗಿದ್ದೇನೆ. ಆದರೆ... ಆಕೆ ಯಾರೆಂಬ ಪ್ರಶ್ನೆ ಇನ್ನು ಬಗೆಹರಿದಿಲ್ಲ. ಚಿತ್ರಳೆ? ನಯನಳೆ? ಮತ್ತೆ ಬಂದ ಮಾಧುರಿಯೇ? ಇಲ್ಲವೆ? ಈ ಮೂವರನ್ನೂ ಒಳಗೊಂಡ ಭಾರತಾಂಬೆಯೆ? ಯಾರೆಂಬುದನ್ನು ನೀವ್ಯಾರಾದರೂ ಹೇಳಬಲ್ಲಿರಾ?

---

**ಪ್ರಜಾರಾಜ್ಯದ ಸಂಕಥಾವಿನೋದ**

RAO

ಬೆಳದಿಂಗಳಲಿ ತಿಂದೆ ಬೇಕಷ್ಟು ಬೆಣ್ಣೆ
ಮನೆಯೊಳಗೆ ಒಗ್ಗರಣೆಗೂ ಇಲ್ಲ ಎಣ್ಣೆ
ಇಡ್ಲಿಗೂ ಸಿಗಲಿಲ್ಲ ರೇಷನ್ನಿನಕ್ಕಿ
ಕ್ಯೂನಲ್ಲಿ ಎಣಿಸಿದೆನು ದಶಕೋಟಿ ಚುಕ್ಕಿ

—ದಿನಕರ ದೇಸಾಯಿ

# 'ಮಾಡುವಾ ಇಲ್ಲವೇ ಮಡಿಯುವಾ' ಹೋರಾಟದ ಒಂದು ಚಿತ್ರ

**೧೯೪೨** ಅಗಸ್ಟ್ ಒಂಭತ್ತನೆಯ ದಿನಾಂಕ ಭಾರತಸ್ವಾತಂತ್ರ್ಯ ಸಂಗ್ರಾಮದ ಇತಿಹಾಸದಲ್ಲಿ ಚಿರ ಸ್ಮರಣೀಯವಾದ ದಿನ. ಭಾರತದ ಸ್ವಾತಂತ್ರ್ಯ ಸಂಪಾದನೆಗಾಗಿಯೇ ೧೮೮೫ ರಂದು ಜನ್ಮವೆತ್ತಿದ್ದ ಕಾಂಗ್ರೆಸ್ಸು ಅಂದು ತನ್ನ ಧ್ಯೇಯಸಾಧನೆಗಾಗಿ ಕೊನೆಯ ಕ್ರಾಂತಿಯ ಕಹಳೆಯನ್ನೂದಿತು. ಆಗ ಮುಂಬಯಿಯಲ್ಲಿ ಸೇರಿದ್ದ ಅಖಿಲ ಭಾರತ ಕಾಂಗ್ರೆಸ್ ಸಮಿತಿಯು ನೂರೈವತ್ತು ವರುಷಗಳಿಂದ ಭಾರತವನ್ನು ದಾಸ್ಯಶೃಂಖಲೆಯಲ್ಲಿ ಬಂಧಿಸಿದ್ದ ಬ್ರಿಟಿಶ್ ಆಡಳಿತವನ್ನು ನಿರ್ಮೂಲಗೊಳಿಸಲು ಕೊನೆಯದಾದ 'ಚಲೇಜಾವ್' ಚಳವಳಿಯನ್ನು ಘೋಷಿಸಿತು. ಈ ಕ್ರಾಂತಿಯು ಜೋರಾಗಿ ಯಶಸ್ವಿಯಾಗದಿದ್ದರೂ ಬ್ರಿಟಿಶರು ಭಾರತವನ್ನು ಬಿಟ್ಟುಹೋಗುವಂತೆ ಮಾಡಲು ಅದು ಸಮರ್ಥವಾಯಿತು. ಮುಂದೆ ಐದೇ ವರುಷಗಳಲ್ಲಿ ಬ್ರಿಟಿಶರು ಭಾರತಕ್ಕೆ ಸ್ವಾತಂತ್ರ್ಯವನ್ನು ಕೊಟ್ಟು ಸ್ವದೇಶಕ್ಕೆ ಮರಳಿದರು. ಈ ಕೊನೆಯ ಕ್ರಾಂತಿಯ ವಿವರಗಳನ್ನು ನೋಡುವ ಮೊದಲು ಭಾರತೀಯರು ಬ್ರಿಟಿಶರ ಗುಲಾಮಗಿರಿಯನ್ನು ಹರಿದೊಗೆಯಲು ಮಾಡಿದ ಪ್ರಯತ್ನಗಳನ್ನು, ಹೂಡಿದ ಯುದ್ಧಗಳನ್ನು ಸಿಂಹಾವಲೋಕನ ದೃಷ್ಟಿಯಿಂದ ತಿಳಿದುಕೊಳ್ಳುವುದು ಅಗತ್ಯವಾಗಿದೆ. ಸಿಪಾಯಿ ದಂಗೆಯೆಂದು ಕರೆಯಲಾಗುತ್ತಿರುವ ೧೮೫೭ರ ಕ್ರಾಂತಿಯು ನಿಜವಾಗಿ ಭಾರತಸ್ವಾತಂತ್ರ್ಯಸಂಗ್ರಾಮದ ಮೊದಲನೆಯ ಕಹಳೆಯೆಂದು ಹೇಳಬಹುದು. ಆದರೆ ಆಗ ರಾಷ್ಟ್ರೀಯತ್ವದ ಜಾಗೃತಿ ಜನತೆಯಲ್ಲಿ ಸಾಕಷ್ಟು ಇರದ್ದರಿಂದ ಮತ್ತು ಆಳರಸರ ಮೋಸದ ಪರಿಣಾಮವಾಗಿ ಅದರಲ್ಲಿ ಯಶಸ್ಸು ಸಿಕ್ಕಲಿಲ್ಲ. ಇದರ ಪರಿಣಾಮವಾಗಿಯೇ ೧೮೮೫ ರಲ್ಲಿ ಕಾಂಗ್ರೆಸ್ಸು ಸ್ಥಾಪಿತವಾಯಿತು. ಕಾಂಗ್ರೆಸ್ಸಿನ ಸ್ಥಾಪನೆಗೆ ಕೆಲವು ಆಂಗ್ಲ ಆಡಳಿತಗಾರರೂ ಕಾರಣರಾದರೆಂಬುದನ್ನು ನೆನೆದರೆ ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕುವುದೆಷ್ಟೊಂದು ಅವಶ್ಯವಾಗಿತ್ತೆಂಬುದು ಸುಸ್ಪಷ್ಟವಾಗುವುದು. ಕಾಂಗ್ರೆಸ್ಸಿನ ಸ್ಥಾಪನೆಯಿಂದ ಸ್ವಾತಂತ್ರ್ಯ ಸಂಪಾದನೆಯ ಹೋರಾಟಕ್ಕೆ ನಿಶ್ಚಿತ ಸ್ವರೂಪ ಬರಹತ್ತಿತು. ಪ್ರಾರಂಭದಲ್ಲಿ, ಠರಾವು ಪ್ರಾರ್ಥನೆ ಮೊದಲಾದವುಗಳ ಮೂಲಕ ಚಳವಳಿ ನಡೆಯಿತು. ಆದರೆ ಈ ಶತಮಾನದ ಪ್ರಾರಂಭದಲ್ಲಿ ಚಳವಳಿಯ ದಿಸೆ ಬದಲಾಯಿತೆಂದು ಹೇಳಬಹುದು. ವಂಗ-ಭಂಗ ಚಳವಳಿಯಲ್ಲಿಯೂ ಸ್ವದೇಶಿ ಬಹಿಷ್ಕಾರ ಚಳವಳಿಯಲ್ಲಿಯೂ ಬಂಗಾಲದ ಕ್ರಾಂತಿಕಾರಕ ಚಳವಳಿಯಲ್ಲಿಯೂ ಭಾರತೀಯರು ಮಹತ್ವದ ಪಾತ್ರವನ್ನು ವಹಿಸಿದರು. ಲೋಕಮಾನ್ಯ ಬಾಳ ಗಂಗಾಧರ ಟಿಳಕರು 'ಸ್ವರಾಜ್ಯ ನನ್ನ ಜನ್ಮಸಿದ್ಧ ಹಕ್ಕು. ಅದನ್ನು ನಾನು ಪಡೆದೇ ತೀರುವೆನು' ಎಂಬ ಘೋಷಣೆಮಾಡಿ ಅದಕ್ಕಾಗಿ ಕಾರ್ಯಪ್ರವೃತ್ತರಾದಂದಿನಿಂದ ಕಾಂಗ್ರೆಸ್ ಚಳವಳಿಗೆ ಹೆಚ್ಚು ಬಲ ಬಂದಿತು. ಸರಕಾರದ ದಬ್ಬಾಳಿಕೆಯೂ ಪ್ರಾರಂಭವಾಯಿತು. ಲೋಕಮಾನ್ಯರಿಗೆ ಆರು ವರುಷ ಶಿಕ್ಷೆ ವಿಧಿಸಿ ಮಂಡಾಲೆಗೆ ಕಳಿಸಲಾಯಿತು. ಅವರು ತುರಂಗವಾಸವನ್ನು ಅನುಭೋಗಿಸಿ ಮರಳಿದ ನಂತರ ಮತ್ತೆ ಚಳವಳಿ ಉಗ್ರ ಸ್ವರೂಪವನ್ನು ತಾಳಿತು. ೧೯೨೦ ಅಗಸ್ಟ್ ಒಂದರಂದು ಲೋಕಮಾನ್ಯರು ನಿಧನ ಹೊಂದಿದರು. ಮಹಾತ್ಮಾ ಗಾಂಧಿಯವರು ಅವರ ಸ್ಥಾನವನ್ನು ತುಂಬಿ ಕಾಂಗ್ರೆಸ್ಸಿಗೆ ಹೊಸ ಜೀವಕಳೆಯನ್ನು ತಂದರು.

ಅವರು ಸರಕಾರದ ವಿರುದ್ಧ ಅಹಿಂಸಾತ್ಮಕ ಅಸಹಕಾರದ ಹೋರಾಟವನ್ನು ೧೯೨೦ ರಲ್ಲಿ ಹೂಡಿ ಭಾರತೀಯರಲ್ಲಿ ಪ್ರಚಂಡ ಜಾಗೃತಿಯನ್ನು ಉಂಟು ಮಾಡಿದರು. ಕಾಂಗ್ರೆಸ್ಸಿನಲ್ಲಿ ಭಾಷಾನ್ವಯ ಪ್ರಾಂತಗಳನ್ನು ರಚಿಸಿದ್ದು ಆಗಲೆ. ಅನಂತರ ಅವರು ಹೂಡಿದ ೧೯೩೦ ರ ಉಪ್ಪಿನ ಸತ್ಯಾಗ್ರಹ, ೧೯೩೨ ರ ಕರನಿರಾಕರಣ ಆಂದೋಲನ, ೧೯೪೦ ರ ವೈಯಕ್ತಿಕ ಸತ್ಯಾಗ್ರಹ, ಕೊನೆಯದಾದ ೧೯೪೨ ರ ಚಲೇಜಾವ್ ಚಳವಳಿ, ಒಂದಕ್ಕಿಂತ ಒಂದು ಹೆಚ್ಚು ಉಗ್ರವಾಗಿದ್ದು ಸ್ವಾತಂತ್ರ್ಯವನ್ನು ಸಮೀಪಕ್ಕೆ ತರಲು ಸಮರ್ಥವಾದವು. ೧೯೩೫ ರಲ್ಲಿ; ೧೯೩೭ ರಲ್ಲಿ ಕಾಂಗ್ರೆಸ್ಸು ಶಾಸನಸಭೆಗಳ ಪ್ರವೇಶಮಾಡಿಯೂ ಸ್ವಾತಂತ್ರ್ಯಸಂಪಾದನೆಗಾಗಿ ಪ್ರಯತ್ನಿಸಿತು. ಆದರೆ ಬ್ರಿಟಿಶರ ಸಾರ್ವಭೌಮತ್ವದಡಿಯಲ್ಲಿ ಶಾಸನಸಭೆಗಳ ಮೂಲಕ ರಾಷ್ಟ್ರವು ಧ್ಯೇಯವನ್ನು ಸಾಧಿಸಲಾರದೆಂಬುದು ಭಾರತೀಯರಿಗೆ ಮನವರಿಕೆಯಾಯಿತು. ಅಂತೆಯೇ ಶಾಸನಸಭೆಗಳಿಂದ ಹೊರಬಂದು ಮತ್ತೆ ಚಳವಳಿಯನ್ನು ಪ್ರಾರಂಭಿಸಬೇಕಾಯಿತು. ಭಾರತೀಯರ ಮನಸ್ಸಿನ ವಿರುದ್ಧ ಬ್ರಿಟಿಶರು ಜಾಗತಿಕ ಯುದ್ಧದಲ್ಲಿ ಭಾರತವನ್ನು ಎಳೆದದ್ದರಿಂದ ಯುದ್ಧದಲ್ಲಿ ಸಹಾಯ ಸಲ್ಲಿಸಲಾರೆವೆಂಬುದೇ ವೈಯಕ್ತಿಕ ಸತ್ಯಾಗ್ರಹದ ಘೋಷಣೆಯಾಗಿದ್ದಿತು. ನಾಡಿನಾದ್ಯಂತ ನಡೆದ ಈ ಚಳವಳಿಯ ಪರಿಣಾಮ ಬ್ರಿಟಿಶರ ಮೇಲಾಯಿತೆಂದು ಪ್ರತ್ಯೇಕವಾಗಿ ಹೇಳಬೇಕಿಲ್ಲ. ಉಗ್ರ ದಬ್ಬಾಳಿಕೆಯನ್ನು ಪ್ರಾರಂಭಿಸಿ ಅನೇಕ ಜನರನ್ನು ಸರಕಾರದವರು ಸೆರೆಹಿಡಿದರು. ಇದರ ನಂತರವೇ ೧೯೪೨ ಅಗಸ್ಟ್ ಒಂಭತ್ತರಂದು ಸ್ವಾತಂತ್ರ್ಯ ಸಮರದ ಕೊನೆಯ ಕಹಳೆಯನ್ನೂದಲಾಯಿತು.

ಮುಂಬೈಯ ಎ. ಐ. ಸಿ. ಸಿ. ಯಲ್ಲಿ ಚಲೇಜಾವ್ ಚಳವಳಿಯ ಗೊತ್ತುವಳಿ ಪಾಸಾದುದೇ ತಡ, ಸರಕಾರದವರು ಸೆರೆ ಹಿಡಿಯುವ ಸತ್ರವನ್ನು ಪ್ರಾರಂಭಿಸಿದರು. ೯ ನೇ ದಿನಾಂಕ ಬೆಳಗಾಗುವದರೊಳಗಾಗಿ ಮುಂಬಯಿಗೆ ಬಂದಿದ್ದ ಕಾಂಗ್ರೆಸ್ ಧುರೀಣರನ್ನೆಲ್ಲ ಸೆರೆ ಹಿಡಿದು ಬಿಡಬೇಕೆಂಬ ಆಜ್ಞೆ ಹೊರಡಿಸಲಾಯಿತು. ಮಹಾತ್ಮಾ ಗಾಂಧಿಯವರನ್ನೊಳಗೊಂಡು ಕೈಗೆ ಸಿಕ್ಕ ಧುರೀಣರನ್ನೆಲ್ಲ ಸೆರೆಹಿಡಿದರು. ಅನೇಕ ಜನ ಧುರೀಣರು ಪೋಲೀಸರ ಕಣ್ಣು ತಪ್ಪಿಸಿ ಭೂಗತರಾದರು. ಮುಂಬಯಿಯಲ್ಲಿ ಸಂಪರ್ಕ ಸಾಧನಗಳನ್ನೆಲ್ಲ ಕತ್ತರಿಸಲಾಯಿತು. ಕಾಂಗ್ರೆಸ್ಸಿಗರು ಪೋಲೀಸರ ಹೊರತಾಗಿ ಬೇರೆ ಯಾವದೇ ಸಾಧನದಿಂದಾಗಲಿ ಪರಸ್ಪರ ಸಂಪರ್ಕ ನಡೆಸದಂತಾಯಿತು. ಹೊರಗೆ ಸಿಕ್ಕವರನ್ನೆಲ್ಲ ಪೋಲೀಸರು ಸೆರೆಹಿಡಿದರು. ಇಷ್ಟುದೊಡ್ಡ ಪ್ರಮಾಣದಲ್ಲಿ ಒಂದೇ ನಗರದಲ್ಲಿ ಹಿಂದೆ ಇಷ್ಟು ಜನರನ್ನು ಸೆರೆಹಿಡಿದಿದ್ದಿಲ್ಲ. ಮಹಾತ್ಮಾ ಗಾಂಧಿ ಮೊದಲಾದವರನ್ನೆಲ್ಲ ಮುಂಬಯಿಯಿಂದ ಸ್ಥಳಾಂತರಿಸಲಾಯಿತು. ಈ ಚಳವಳಿಯ ಕಹಳೆ ಹಾಹಾ ಅನ್ನುವುದರೊಳಗಾಗಿ ದೇಶದಲ್ಲೆಲ್ಲ ಮೊಳಗಿತು. ಅಲ್ಲಲ್ಲಿ ಚಳವಳಿ ನಡೆದಂತೆ ಸರಕಾರದವರು ಸೆರೆಹಿಡಿಯುವುದರಲ್ಲಿ, ಬೇರೆ ವಿಧದಿಂದ ಚಳವಳಿಯನ್ನು ಸದೆಬಡೆಯುವುದರಲ್ಲಿ ಹಿಂದೆ ಬೀಳಲಿಲ್ಲ. ಆದರೆ ಸ್ವಾತಂತ್ರ್ಯದ ಹಸಿವಿನಿಂದ ಬಳಲಿದ್ದ ಭಾರತೀಯರ ಚಳವಳಿಯನ್ನು ಅಷ್ಟು ಬೇಗ ತಗ್ಗಿಸಬಹುದೇ? ಸರಕಾರದವರು ಇದಕ್ಕಾಗಿ ಬಹಳಷ್ಟು ಪ್ರಯತ್ನಿಸಬೇಕಾಯಿತು.

## "ಕೊನೆಯ ಕ್ರಾಂತಿ!"

ಶ್ರೀ ಹ. ರಾ. ಪುರೋಹಿತ
ಹುಬ್ಬಳ್ಳಿ

# ಚಲೇಜಾವ್ ಚಳವಳಿ

ಈ ಕ್ರಾಂತಿಯು ಯಾವುದೊಂದು ಪ್ರಾಂತದಲ್ಲಿ ನಡೆಯದೆ ಇಡೀ ರಾಷ್ಟ್ರದಲ್ಲಿ ಉಗ್ರ ರೂಪದಲ್ಲಿ ಸಾಗಿತು. ಬ್ರಿಟಿಶ್ ಆಡಳಿತೆಯನ್ನು ಸಮರ್ಥಿಸುತ್ತಿದ್ದ ಸಂಸ್ಥಾನಗಳಲ್ಲಿ ಕೂಡ ಇದು ಪ್ರಖರವಾಯಿತು. ಅನೇಕ ಸ್ಥಳಗಳಲ್ಲಿ ಬ್ರಿಟಿಶ್ ಸರಕಾರವೇ ಅಸ್ತಿತ್ವದಲ್ಲಿರಲಿಲ್ಲೆಂದು ಹೇಳಬಹುದು. ಪ್ರಜೆಗಳೇ ತಮ್ಮ ಆಡಳಿತವನ್ನು ನಡೆಸುತ್ತಿದ್ದರು. ಹೊರಗಿನ ಸಂಪರ್ಕವನ್ನು ತಪ್ಪಿಸಿಬಿಡಲಾಗಿದ್ದಿತು. ದ್ವಿತೀಯ ಮಹಾಯುದ್ಧ ನಡೆದದ್ದರಿಂದ ಬ್ರಿಟಿಶರು ಮತ್ತಷ್ಟು ದಿಗಿಲುಗೊಂಡರು. ಈ ಕ್ರಾಂತಿಯು ಕೇವಲ ಒಂಭತ್ತು ತಿಂಗಳ ವರೆಗೆ ನಡೆದರೂ ಬ್ರಿಟಿಶ್ ಸರಕಾರವನ್ನು ಹಣ್ಣುಗಾಯಿ ನೀರುಗಾಯಿಯನ್ನು ಮಾಡಿತು. ಈ ಅವಧಿಯನ್ನು ನಾಲ್ಕು ವಿಭಾಗಗಳನ್ನಾಗಿ ವಿಭಜಿಸಬಹುದು. ಚಲೇಜಾವ್ ಚಳವಳಿಯನ್ನು ಕಾಂಗ್ರೆಸ್ಸು ಘೋಷಿಸಿದ ಕೂಡಲೆ ಸರಕಾರವು ೯ ನೇ ದಿನಾಂಕ ಬೆಳಗಾಗುವುದರೊಳಗೆ ಮಹಾತ್ಮಾ ಗಾಂಧಿಯವರನ್ನೊಳಗೊಂಡು ಮುಂಬಯಿಯಲ್ಲಿ ನೆರೆದಿದ್ದ ಬಹುತರ ಎಲ್ಲ ಧುರೀಣರನ್ನೂ ಸೆರೆ ಹಿಡಿದರು. ಹಲವಾರು ಧುರೀಣರು ಪೋಲೀಸರ ಕಣ್ಣು ತಪ್ಪಿಸಿ ಭೂಗತರಾದರು. ಈ ಸುದ್ದಿ ತಿಳಿದ ಕೂಡಲೆ ನಗರಗಳಲ್ಲಿ ಸಂಪು ಮೆರವಣಿಗೆ ಸಭೆ ಮೊದಲಾದವುಗಳು ನಡೆದು ಉಗ್ರ ಪ್ರತಿಭಟನೆಯನ್ನು ಮಾಡಲಾಯಿತು. ಕಾರಖಾನೆಗಳಿದ್ದಲ್ಲೆಲ್ಲ ಕಾರ್ಮಿಕರು ತೀವ್ರವಾದ ಪ್ರತಿಭಟನೆಯನ್ನು ವ್ಯಕ್ತಪಡಿಸಿದರು. ಅಂಗಡಿ ಕಾರಖಾನೆ ಮೊದಲಾದವು ಅನೇಕ ದಿನಗಳವರೆಗೆ ಮುಚ್ಚಲಾದವು. ನಾಲ್ಕೈದು ದಿನಗಳವರೆಗೆ ನಗರಗಳಿಗೇ ಸೀಮಿತವಾಗಿದ್ದ ಚಳವಳಿಯು ಹಳ್ಳಿಗಳಿಗೆ ಸಣ್ಣ ದೊಡ್ಡ ಪಟ್ಟಣಗಳಿಗೆ ಪಸರಿಸಿತು. ನಗರಗಳ ಕಾರಖಾನೆಗಳಲ್ಲಿ ಸಂಪು ಹೂಡಿದ್ದ ಕೆಲಸಗಾರರು ತಮ್ಮ ತಮ್ಮ ಗ್ರಾಮಗಳಿಗೆ ಹೋಗಿ ಈ ಕ್ರಾಂತಿಯ ಪ್ರಚಾರಮಾಡಿದರು. ಸಂಪು ಹರತಾಳ ಉಗ್ರವಾಗಿ ನಡೆದುವು. ಗಿರಣಿಗಳಲ್ಲಿನ ಉತ್ಪಾದನೆ ಬಹಳ ಮಟ್ಟಿಗೆ ಕಡಮೆಯಾಯಿತು. ಅನೇಕ ನಗರಗಳ ಗಿರಣಿಗಳು ಮುಚ್ಚಲ್ಪಟ್ಟವು. ಕಬ್ಬಿಣ, ಉಕ್ಕುಗಳ ಉತ್ಪತ್ತಿಯೂ ತಗ್ಗಿತು. ಜವಳಿ, ರೇಶ್ಮೆ, ಕಬ್ಬಿಣ, ಉಕ್ಕು, ತಂಬಾಕು ಮೊದಲಾದ ಎಲ್ಲ ಕಾರಖಾನೆಗಳಲ್ಲಿಯೂ ಸಂಪು ನಡೆಯಿತು. ಇದರಿಂದ ಸರಕಾರಕ್ಕೆ ಒಳ್ಳೆ ಬಿಸಿ ತಾಕಿತು. ಸರಕಾರವು ಉಗ್ರ ದಬ್ಬಾಳಿಕೆಯನ್ನು ನಡೆಸಿತು. ಮುಂಬಯಿಯಲ್ಲಿ ೧೧ ನೇ ದಿನಾಂಕ ಮಧ್ಯಾಹ್ನದಷ್ಟೊತ್ತಿಗೆ ಹನ್ನೊಂದು ಸಲ ಗೋಳೀಬಾರು ನಡೆದದ್ದನ್ನು ನೆನೆದರೆ ಸರಕಾರದ ದಬ್ಬಾಳಿಕೆ ಎಷ್ಟು ಉಗ್ರವಾಗಿತ್ತೆಂಬುದು ಗೊತ್ತಾಗುವುದು. ಹೆಣ್ಣುಮಕ್ಕಳು, ಮಕ್ಕಳು, ವೃದ್ಧರು ಮೊದಲಾದವರಾರನ್ನೂ ನೋಡದೆ ಗೋಳೀಬಾರು ಮಾಡಿದ್ದರಿಂದ ಅನೇಕರು ಮರಣ ಹೊಂದಿದ್ದಲ್ಲದೆ ತೀವ್ರಸ್ವರೂಪದ ಗಾಯಗಳನ್ನು ಹೊಂದಿದರು. ಫಟಕೀ ಶಿಕ್ಷೆಯನ್ನು ವಿಧಿಸಲು ಪ್ರಾರಂಭಿಸಿದರು. ಸರಕಾರದ ಈ ದಬ್ಬಾಳಿಕೆಯಿಂದ ಜನತೆಯ ಧೈರ್ಯ ಕುಗ್ಗದೆ ಪ್ರತಿಭಟನೆ ಮತ್ತಷ್ಟು ಉಗ್ರ ಸ್ವರೂಪವನ್ನು ತಾಳಿತು. ಮೂರನೆ ಸುತ್ತಿನಲ್ಲಿ ಚಳವಳಿ ಇನ್ನೂ ಉಗ್ರ ಸ್ವರೂಪವನ್ನು ತಾಳಿತು. ಸರಕಾರದ ಮತ್ತು ನಗರಸಭೆಗಳ ಆಸ್ತಿಪಾಸ್ತಿಗಳಿಗೆ ಹಾನಿಯನ್ನುಂಟುಮಾಡುವುದನ್ನು ಕೈಕೊಳ್ಳಲಾಯಿತು. ಪೋಲೀಸ್ ಠಾಣ್ಯಗಳು ಪೋಸ್ಟ್ ಆಫೀಸುಗಳು ನಾಶಮಾಡಲ್ಪಟ್ಟವಲ್ಲದೆ ರೇಲ್ವೆ ಡಬ್ಬಿಗಳು, ಬಸ್ಸುಗಳು ಟಾಂಗಾಗಳು ನಾಶವಾಗಹತ್ತಿದವು. ಈ ಅವಧಿಯಲ್ಲಿ ೨೧೮ ಸ್ಟೇಶನ್ನುಗಳು ಸುಡಲ್ಪಟ್ಟವೆಂದು ಸರಕಾರದ ಅಂದಾಜು. ೫೫೦ ಅಂಚೆ ಕಚೇರಿಗಳ ಕಟ್ಟಡಗಳು ಬಹಳ ಮಟ್ಟಿಗೆ ಧಕ್ಕೆಗೊಂಡವು. ೬೮ ಅಂಚೇಕಚೇರಿಗಳು ನಾಶಮಾಡಲ್ಪಟ್ಟವು. ೯೪೫ ಪೋಸ್ಟ್ ಆಫೀಸುಗಳ ಮೇಲೆ ದಾಳಿನಡೆಯಿತು. ರೇಲ್ವೆಗಳು ಸಂಗ್ರಹಿಸಿದ್ದ ಸರಕುಗಳನ್ನು ನಾಶಮಾಡಿದ್ದರಿಂದ ಸುಮಾರು ೧೮ ಲಕ್ಷ ರೂಪಾಯಿಗಳ ಹಾನಿಯಾಯಿತು. ಟ್ರಕ್ಕುಗಳನ್ನು ಸುಟ್ಟಿದ್ದರಿಂದ ಸುಮಾರು ೯ ಲಕ್ಷ ರೂಪಾಯಿಗಳಷ್ಟು ನಷ್ಟವಾಯಿತು. ರೇಲ್ವೆ ಸ್ಟೇಶನ್ನುಗಳ ಉಪಕರಣಗಳ ನಾಶದಿಂದ ೬|| ಲಕ್ಷ ರೂಪಾಯಿಗಳಷ್ಟು ಹಾನಿಯಾಯಿತು. ತಂತಿಗಳು ಕಡಿಯಲ್ಪಟ್ಟದ್ದರಿಂದ ಸಂಪರ್ಕಸಾಧನಗಳು ಕಟ್ಟಾದಂತಾದವು. ಇದರಿಂದ ೧೧ ಸಾವಿರಗಳಿಗಿಂತ ಹೆಚ್ಚು ಹಾನಿಯಾಯಿತು. ಇವೆಲ್ಲ ಸಂಪರ್ಕಸಾಧನೆಗಳಿಗೆ ಹಾನಿಯಾದ್ದರಿಂದ ಯುದ್ಧ ಪ್ರಯತ್ನಗಳಿಗೂ ವ್ಯತ್ಯಯವುಂಟಾಯಿತು. ಸಂಯುಕ್ತ ಪ್ರಾಂತದ ಪೂರ್ವಭಾಗದಲ್ಲಿ, ಬಿಹಾರ, ಮದರಾಸ್ ಭಾಗಗಳಲ್ಲಿ ಅನೇಕ ದಿನಗಳ ವರೆಗೆ ರೇಲ್ವೆ ಸಂಚಾರವನ್ನು ನಿಲ್ಲಿಸಬೇಕಾಯಿತು. ಬಂಗಾಲದ ಉತ್ತರ ಪ್ರದೇಶ, ಮದ್ರಾಸಗಳ ಸಂಪರ್ಕವೇ ತಪ್ಪಿದಂತಾಗಿತ್ತು. ಕೋರ್ಟು ಕಚೇರಿಗಳನ್ನು ಕೈವಶಪಡಿಸಿಕೊಳ್ಳುವುದೂ ಈ ಚಳವಳಿಯ ಕಾರ್ಯಕ್ರಮದ ಅಂಗವಾಗಿತ್ತು. ನಾಲ್ಕನೆಯ ಹಂತದಲ್ಲಿಯ ಈ ಕಾರ್ಯಕ್ರಮವು ಅನೇಕ ಕಡೆಗಳಲ್ಲಿ ಯಶಸ್ವಿಯಾಗಿ ನಡೆಯಿತು. ಸರಕಾರಿ ಕಟ್ಟಡಗಳ ಮೇಲೆ ರಾಷ್ಟ್ರಧ್ವಜಗಳನ್ನು ಏರಿಸುವದು ಸರಕಾರಿ ಅಧಿಕಾರಿಗಳ ತಲೆಯ ಮೇಲೆ ಗಾಂಧೀ ಟೊಪ್ಪಿಗೆ ಹಾಕುವುದು ಚಳವಳಿಗಾರರ ನಿತ್ಯದ ಕ್ರಮವಾಗಿತ್ತು. ತುರಂಗಗಳನ್ನು ಹೊಕ್ಕು ಕೈದಿಗಳ ಬಿಡುಗಡೆ ಮಾಡುವುದೂ ಕಾರ್ಯಕ್ರಮದ ಒಂದು ಅಂಗವಾಗಿತ್ತು. ಸರಕಾರದವರ ಎಣಿಕೆ ಮೀರಿ ಈ ಚಳವಳಿ ಉಗ್ರವಾಗಿತ್ತೆಂದು ಹೇಳಬಹುದು.

ಈ ಚಳವಳಿಯಲ್ಲಿ ಪೋಲೀಸರು ಮತ್ತು ಸೈನ್ಯ ದಾಖಲೆಯಂತೆ ಒಟ್ಟಾರೆ ೫೩೮ ಸಲ ಗೋಳೀಬಾರು ಮಾಡಿದರು. ಸರಕಾರದ ಲೆಕ್ಕದಂತೆ ಈ ಗೋಳೀಬಾರಿನ ಪರಿಣಾಮವಾಗಿ ೧೦೨೮ ಜನ ನಿಧನ ಹೊಂದಿದ್ದಲ್ಲದೆ ೩೨೧೫ ಜನ ತೀವ್ರವಾಗಿ ಗಾಯಗೊಂಡರು. ೯೫೮ ಜನರಿಗೆ ಫಟಕೀ ಶಿಕ್ಷೆಯನ್ನು ವಿಧಿಸಲಾಯಿತು. ಸಂಯುಕ್ತ ಪ್ರಾಂತದ ಅಂಕೆಗಳು ಲೆಕ್ಕದಲ್ಲಿ ಸೇರಿಲ್ಲ. ಸೆರೆಹಿಡಿಯಲ್ಪಟ್ಟವರ ಸಂಖ್ಯೆ ೬೦೨೨೯ ಕ್ಕೂ ಹೆಚ್ಚಿದ್ದಿತು. ಮಶಿನ್‌ಗನ್ನುಗಳಿಂದ ಆರು ಸಲ ಪದೇಯಲ್ಲಿ ಗುಂಡು ಹಾರಿಸಲಾಯಿತು. ಸರಕಾರದ ಈ ವರದಿಯು ನಿಜವಾದ ಪರಿಸ್ಥಿತಿಯನ್ನು ತಿಳಿಸುವುದಿಲ್ಲೆಂದು ಹೇಳಬಹುದು. ೫೩೮ ಸಲ ಗೋಳೀಬಾರ ಮಾಡಿದಾಗ ಕೇವಲ ಒಂದು ಸಾವಿರ ಜನ ಸತ್ತರೆಂಬುದು ಸುಳ್ಳಿನ ಕಂತೆ! ಕನಿಷ್ಠ ೮–೧೦ ಸಾವಿರ ಜನರಾದರೂ ಮರಣ ಹೊಂದಿರಬಹುದೆಂದು ಸರಕಾರೇತರ ವರದಿಗಳಿಂದ ತಿಳಿಯುವುದು. ಈ ಚಳವಳಿಯ ಕಾಲಕ್ಕೆ ಜನತೆಯಲ್ಲಿ ಸಾವಿನ ಅಂಜಿಕೆಯೇ ಇರಲಿಲ್ಲ. 'ಮಾಡುವಾ ಇಲ್ಲವೆ ಮಡಿಯುವಾ' ಮಂತ್ರವು ಜನತೆಯ ನಾಡಿನಾಡಿಗಳಲ್ಲಿ ಸ್ಫುರಿಸುತಿದ್ದಿತಲ್ಲದೇ ಅದನ್ನುಚ್ಚರಿಸುತ್ತ ಅನೇಕ ಜನ ಸ್ತ್ರೀ ಪುರುಷರು ಮಕ್ಕಳು ಸಂತೋಷದಿಂದ ಮರಣವನ್ನಪ್ಪಿದರು.

ಜನ ಎಷ್ಟೊಂದು ವಿನಾಶಕಾರಕ ಚಟುವಟಿಕೆಗಳನ್ನು ನಡೆಸಿದರೂ ಪ್ರಾಣಹಾನಿಯಾಗದಂತೆ ಜಾಗ್ರತೆ ವಹಿಸಿತ್ತೆಂಬುದು ಅಭಿನಂದನೀಯವಾದ ಸಂಗತಿಯಾಗಿದೆ. ಈ ಚಳವಳಿಯ ವೈಶಿಷ್ಟ್ಯವಿದೆಂದು ಹೇಳಬಹುದು. ಆದರೂ ಕೆಲ ವಿಶಿಷ್ಟ ಪ್ರಸಂಗಗಳಲ್ಲಿ ಪೋಲೀಸರು ಮತ್ತು ಸೈನಿಕರು ಜನತೆಯ ರೊಚ್ಚಿಗೆ ಬಲಿಯಾಗಬೇಕಾಯಿತು. ೬೦ ಜನ ಸೈನಿಕರು ಮತ್ತು ೬೪೮ ಜನ ಪೋಲೀಸರು ನಿಧನ ಹೊಂದಿದರೆಂದು ಸರಕಾರದ ಲೆಕ್ಕದಿಂದ

ತಿಳಿಯುತ್ತದೆ. ಈ ಲೆಕ್ಕ ನಿಜವೆಂದು ನಂಬಿದರೂ ಇಂಥ [illegible] ಈ ಸಂಖ್ಯೆ ಬಹಳ ಕಡಿಮೆಯೆಂದು ಹೇಳಬಹುದು.

## ಕರ್ನಾಟಕದಲ್ಲಿ

ಇಡೀ ರಾಷ್ಟ್ರದಲ್ಲಿ ನಡೆದ ಚಲೇಜಾವ್ ಚಳವಳಿಯ ಸಿಂಹಾವಲೋಕನವನ್ನು ಈಗ ಮಾಡಿದ್ದಾಯಿತು. ಕರ್ನಾಟಕದಲ್ಲಿಯು ಈ ಚಳವಳಿಯೂ ಅತ್ಯಂತ ಪ್ರಖರವಾಗಿ ನಡೆಯಿತೆಂಬುದು ಅಭಿಮಾನದ ಮತ್ತು ಹೆಮ್ಮೆಯ ವಿಷಯವಾಗಿದೆ. ಮುಂಬೈ ಎ. ಆಯ್. ಸಿ. ಸಿ. ಸಭೆಗೆ ಹೋಗಿದ್ದ ಕರ್ನಾಟಕದ ಮುಖಂಡರಾದ ಶ್ರೀ ರಂಗರಾವ ದಿವಾಕರ ಮೊದಲಾದವರು ಮುಂಬಯಿಯಲ್ಲಿಯೇ ಭೂಗತರಾಗಿ ಚಳವಳಿಯ ಧುರೀಣತ್ವವನ್ನು ವಹಿಸಿಕೊಂಡರು ಇಡೀ ರಾಷ್ಟ್ರದ ಚಳವಳಿಯ ಸೂತ್ರಗಳು ಈ ಕಾಲಕ್ಕೆ ಶ್ರೀ ದಿವಾಕರ ಅವರ ಕೈಯಲ್ಲಿ ಬಂದವು. ಅವರು ಮುಂಬಯಿಯಲ್ಲಿದ್ದುಕೊಂಡು ಈ ಸೂತ್ರಗಳನ್ನು ನಡೆಸಿದರಲ್ಲದೆ ಪ್ರಸಂಗ ಬಂದಾಗಲೆಲ್ಲ ಗುಪ್ತವೇಷದಿಂದ ನಾಡನ್ನೆಲ್ಲ ಸಂಚರಿಸಿ ಚಳವಳಿಯ ನಿರೀಕ್ಷಣೆ ಮಾಡುತ್ತಿದ್ದರಲ್ಲದೆ ಅದನ್ನು ಮುಂದುವರಿಸುವುದಕ್ಕಾಗಿ ಸಲಹೆ ಸೂಚನೆಗಳನ್ನು ಕೊಡುತಿದ್ದರು. ಚನ್ನಬಸಪ್ಪ ಅಂಬಲಿ, ಬುರ್ಲಿ ಬಿಂದುಮಾಧವ, ಶ್ರೀರಂಗ ಕಾಮತ, ಕೇ. ಜಿ. ಜೋಶಿ, ರಾಮಚಂದ್ರ ಹೆಗಡೆ ಮೊದಲಾದವರು ತಮ್ಮ ತಮ್ಮ ಜಿಲ್ಲೆಗಳಲ್ಲಿ ಸಂಘಟನೆ ಮಾಡಿ ವಿವಿಧ ಕಾರ್ಯಕ್ರಮಗಳನ್ನು ನಡೆಸುತಿದ್ದರು. ಧಾರವಾಡ ಜಿಲ್ಲೆಯಲ್ಲಿ ಸ್ಟೇಶನ್ ಸುಡುವದು, ಅಂಚೆ ಚೀಲಗಳನ್ನು ಹಾರಿಸುವುದು, ಸರಕಾರೀ ಕಂದಾಯದ ಹಣವನ್ನು ದೋಚುವುದು ಮುಂತಾದ್ದು ಬಳ್ಳೇ ರಭಸದಿಂದ ನಡೆಯಿತು. ಕಾರ್ಯಕರ್ತರು ಬೇರೆ ಬೇರೆ ಗುಂಪುಗಳಾಗಿ ಹಲವಾರು ಕಡೆ ಶಿಸ್ತಿನಿಂದ ಯಶಸ್ವಿಯಾಗಿ ಕಾರ್ಯಕ್ರಮ ನಡೆಸುತ್ತಿದ್ದರು. ಹಣ ಕೂಡಿಸುವ ಕಾರ್ಯದಲ್ಲಿ ಶ್ರೀ ಕೆ. ಎಫ್. ಪಾಟೀಲರು ಮಹತ್ವದ ಪಾತ್ರವನ್ನು ವಹಿಸಿದರು ಮುಂಬಯಿಯಿಂದ ಆಗಾಗ ಧನಸಹಾಯ ದೊರೆಯುತ್ತಿತ್ತು. ಸಂಯುಕ್ತ ಕರ್ನಾಟಕ ಪತ್ರಿಕೆಯ ಸಂಪಾದಕಮಂಡಲವು ಮುಂಬಯಿಯಿಂದ ಹಣ ತರುವ ಕಾರ್ಯದಲ್ಲಿ ನಿರತವಾಗಿತ್ತು. ಈ ಚಳವಳಿಯಲ್ಲಿ ಬರಿ ಕಾಂಗ್ರೆಸ್ಸಿನವರಷ್ಟೇ ಅಲ್ಲ ಇಡಿ ದೇಶವೇ ಸಹಾಯ ಮಾಡಿತೆಂದು ಹೇಳಬಹುದು. ರೈತರು, ವ್ಯಾಪಾರಸ್ಥರು, ಜಮೀನದಾರರು, ಸರಕಾರಿ ನವಕರರು ಕೂಡ ಸಹಾಯ ಮಾಡಿದರು. ಪೋಲೀಸ್ ಅಧಿಕಾರಿಗಳು ಕೂಡ ಸಕ್ರಿಯ ಸಹಾಯ ಸಲ್ಲಿಸಿದ ಸಂದರ್ಭಗಳೂ ಇರುವವು. ಹೊಸರಿತ್ತಿಯಲ್ಲಿ ಸರಕಾರಾಧೀನದಲ್ಲಿದ್ದ ಭೂಕಂದಾಯದ ಮೇಲೆ ಶ್ರೀ ಮಹಾದೇವಪ್ಪ ಮೈಲಾರ ಅವರು ತಮ್ಮ ಇಬ್ಬರು ಸಹಕಾರಿಗಳ ಸಹಾಯದಿಂದ ದಾಳಿ ಮಾಡಿದಾಗ ಪೋಲೀಸರ ಗುಂಡಿಗೆ ಆಹುತಿಯಾದರು. ಅವರು ಮಾಡಿದ ೭೫ ನೆಯ ಕಾರ್ಯಕ್ರಮವಿದಾಗಿದ್ದಿತು! ಇಂಥ ಅನೇಕ ಘಟನೆಗಳನ್ನು ಉಲ್ಲೇಖಿಸಬಹುದು. ಬೆಳಗಾವಿ ಜಿಲ್ಲೆಯಲ್ಲಿಯೂ ಅನೇಕ ಕಾರ್ಯಕ್ರಮಗಳು ನಡೆದುವು. ಧಾರವಾಡ, ಬೆಳಗಾವಿ ಜಿಲ್ಲೆಯ ಕಾರ್ಯಕರ್ತರು ಕೂಡಿಕೊಂಡೇ ಕಾರ್ಯಕ್ರಮಗಳನ್ನು ನಿರ್ಧರಿಸುತಿದ್ದರು. ವಿಜಾಪುರ ಜಿಲ್ಲೆಯಲ್ಲೂ ವಿವಿಧ ಕಾರ್ಯಕ್ರಮಗಳಾದವು. ಉತ್ತರ ಕನ್ನಡ ಜಿಲ್ಲೆ ಎಲ್ಲ ಚಳವಳಿಗಳಲ್ಲಿಯಂತೆ ಈ ಚಳವಳಿಯಲ್ಲಿಯೂ ಮುಂದೆಯೇ ಇದ್ದಿತು. ಡಾಕ್ ಬಂಗಲೆಗಳನ್ನು ಸುಡುವುದು ತಂತಿ ಕತ್ತರಿಸುವುದು, ಪೋಲೀಸರ ಸಮವಸ್ತ್ರಗಳನ್ನು ಬಂದೂಕುಗಳನ್ನು ಕಸಿದುಕೊಳ್ಳುವುದು ಮೊದಲಾದವು ಶಿಸ್ತಿನಿಂದ ನಡೆದುವು. ನಿಜಾಮ ಕರ್ನಾಟಕದಲ್ಲಿ ಈ ಚಳವಳಿ ಅಷ್ಟೊಂದು ಉಗ್ರವಾಗಿ ನಡೆಯದಿದ್ದರೂ ರಾಷ್ಟ್ರದಲ್ಲಿ ನಡೆದ ಚಳವಳಿಯ ಕಾವು ಇಲ್ಲಿ ತಟ್ಟದಿರಲಿಲ್ಲ. ಅನೇಕ ಜನ ಕಾರ್ಯಕರ್ತರು ಸೆರೆ ಹಿಡಿಯಲ್ಪಟ್ಟರು. ಅನೇಕ ಜನ ಸ್ತ್ರೀಯರು ಕೂಡ ಸತ್ಯಾಗ್ರಹ ಮಾಡಿ ಬಂಧಿತರಾದರು. ಆಗ ಉಂಟಾದ ಜಾಗ್ರತಿಯ ಪರಿಣಾಮವಾಗಿ ಭಾರತವು ಸ್ವತಂತ್ರವಾದ ಬಳಿಕ ಭಾರತ ಸರಕಾರದವರು ತೆಗೆದುಕೊಂಡ ಪೋಲೀಸ್ ಕ್ರಮಕ್ಕೆ ಜನತೆಯ ಹಾರ್ದಿಕ ಸಹಕಾರ ಸಿಕ್ಕಿತು. ನಿಜಾಮ ಕರ್ನಾಟಕವೀಗ ಮೈಸೂರು ರಾಜ್ಯದ ಭಾಗವಾಗಿ ಕಂಗೊಳಿಸುತ್ತದೆ. ಹಳೆಯ ಹೈದರಾಬಾದ ಸಂಸ್ಥಾನದ ಮರಾಠಿ ಹಾಗು ಆಂಧ್ರ ಭಾಗಗಳು ಮಹಾರಾಷ್ಟ್ರ ಮತ್ತು ಆಂಧ್ರ ರಾಜ್ಯಗಳಲ್ಲಿ ಸೇರ್ಪಡೆ ಹೊಂದಿವೆ

ಮೈಸೂರು ಸಂಸ್ಥಾನದಲ್ಲಿಯಾದರೂ ಮೊದಲಿನಿಂದಲೂ ಸ್ವಾತಂತ್ರ್ಯ ಚಳವಳಿ ನಡೆಯಿತೆಂದು ಹೇಳಬಹುದು. ವಿಶೇಷವಾಗಿ ವಂಗಭಂಗ ಚಳವಳಿಯಿಂದ ಜಾಗ್ರತಿ ಹೆಚ್ಚಾಯಿತು. ೧೯೪೨ ರ ಚಲೇಜಾವ್ ಚಳವಳಿಯಲ್ಲಿ ಮೈಸೂರು ತನ್ನ ಪಾತ್ರವನ್ನು ಯಶಸ್ವಿಯಾಗಿ ವಹಿಸಿತು. ಯುದ್ಧೋಪಯೋಗಿ ಸಾಮಾನುಗಳನ್ನು ತಯಾರಿಸುತ್ತಿದ್ದ ಕಾರಖಾನೆಗಳಲ್ಲಿಯೂ ಅನೇಕ ಕಡೆ ಕಾರ್ಯಕ್ರಮ ನಡೆದವು. ಕೆಲಸಗಾರರು ಸಂಪು ಹೂಡಿ ಉತ್ಪಾದನೆ ಕುಗ್ಗಿಸಿದರು ತಂತಿಗಳನ್ನು ಕಡಿಯುವದು ಗಾಡಿಗಳನ್ನು ನಿಲ್ಲಿಸುವದು ಟಪಾಲ ಚೀಲಗಳನ್ನು ಹಾರಿಸುವದು ಮೊದಲಾದವು ಯಥಾಪ್ರಕಾರ ನಡೆದವು. ಈ ಚಳವಳಿಯಲ್ಲಿ ೨೫೦೦೦ ರಷ್ಟು ಜನ ಬಂಧಿಸಲ್ಪಟ್ಟರು. ಗೋಳೀಬಾರಿನಲ್ಲಿ ೧೫೩ ಜನ ಸತ್ತರಲ್ಲದೆ ೭೮೯ ಜನ ಗಾಯಗೊಂಡರು. ಬೆಂಗಳೂರಿನಲ್ಲಿ ೧೨ ಸಲ ಲಾಠಿ ಪ್ರಹಾರವಾಯಿತು. ೬೦ ಜನ ಗಾಯಗೊಂಡರು. ನಾಲ್ಕು ಹಳ್ಳಿಗಳ ಮೇಲೆ ೫೦೦೦ ರೂಪಾಯಿಗಳ ಸಾಮೂಹಿಕ ದಂಡ ವಿಧಿಸಲಾಯಿತು. ೧೯೪೭ ಅಕ್ಟೋಬರ್ ಒಂಬತ್ತರಂದು ಜವಾಬ್ದಾರಿ ಸರಕಾರ ಸ್ಥಾಪಿತವಾಗುವ ವರೆಗೆ ಸಂಸ್ಥಾನದಲ್ಲಿ ಚಳವಳಿ ನಡೆಯಿತೆಂದು ಹೇಳಬಹುದು. ಈದೀಗ ವಿಶಾಲ ಮೈಸೂರು ರಾಜ್ಯ ಸ್ಥಾಪಿತವಾಗಿದ್ದು ಕನ್ನಡಿಗರೆಲ್ಲ ಒಂದೇ ಆಡಳಿತೆಯಲ್ಲಿ ಬಂದು ಸರ್ವವಿಧ ಪ್ರಗತಿಯನ್ನು ಹೊಂದುತ್ತಲಿದೆ.

ದಕ್ಷಿಣಕನ್ನಡ ಜಿಲ್ಲೆ, ಬಳ್ಳಾರಿಜಿಲ್ಲೆ ಮತ್ತು ಕೊಡಗು ಭಾಗದಲ್ಲಿಯೂ ಈ ಚಳವಳಿ ನಡೆಯದಿರಲಿಲ್ಲ. ಒಟ್ಟಾರೆ ಇಡೀಕರ್ನಾಟಕವು ಚಲೇಜಾವ್ ಚಳವಳಿಯಲ್ಲಿ ಮುಂಚೂಣಿಯಲ್ಲಿದ್ದಿತು. ದಕ್ಷಿಣಕನ್ನಡ ಜಿಲ್ಲೆಯಲ್ಲಿ ಘಟಕೀ ರೆಕ್ಕೆ ಹೆಚ್ಚು ಪ್ರಮಾಣದಲ್ಲಿ ನಡೆಯಿತು.




## ಕೆಲವು ಮಹತ್ವದ ಅಂಕಿಗಳು

ಈ ಚಳವಳಿಯಲ್ಲಿಯ ಕೆಲ ಮಹತ್ವದ ಅಂಕಿಗಳನ್ನು ನೋಡುವುದು ಅಗತ್ಯ. ಈ ಚಳವಳಿಯಲ್ಲಿ ಕರ್ನಾಟಕದಲ್ಲಿ ಒಟ್ಟಿಗೆ ೫೬೪೦ ಜನ ಬಂಧಿಸಲ್ಪಟ್ಟರು. ೫೮ ಜನ ಅಪರಾಧಿಗಳೆಂದು ಸಾರಲ್ಪಟ್ಟು ಅವರನ್ನು ಹಿಡಿದು ಕೊಟ್ಟವರಿಗೆ ಪಾರಿತೋಷಕ ಕೊಡುವುದಾಗಿ ಸರಕಾರದವರು ಘೋಷಿಸಿದರು. ಗೋಳೀಬಾರಿನಲ್ಲಿ ಒಟ್ಟಿಗೆ ೧೬೮ ಜನ ಸತ್ತರಲ್ಲದೆ ೮೪೪ ಜನ ಗಾಯಗೊಂಡರು. ಲಾಠೀ ಪ್ರಹಾರದಲ್ಲಿ ೪೪ ಜನ ಸತ್ತರಲ್ಲದೆ ೧೯೯ ಜನರು ಗಾಯಗೊಂಡರು. ೯೪ ಜನರಿಗೆ ೨ ರಿಂದ ೭ ವರ್ಷಗಳ ವರೆಗೆ ಶಿಕ್ಷೆ ವಿಧಿಸಲಾಯಿತು. ಒಟ್ಟಿಗೆ ೫೧ ಹಳ್ಳಿಗಳ ಮೇಲೆ ದಂಡ ವಿಧಿಸಲಾಯಿತು. ಒಟ್ಟಾರೆ ೨೬೬೪೦೦ ರೂಪಾಯಿ ದಂಡ ಹೇರಲಾಯಿತು. ರೇಲ್ವೆಗಳ ಮೇಲೆ ದಾಳಿಯಾಯಿತು. ಹಳಿ ತಪ್ಪಿಸುವದು ನಡೆಯಿತು. ೨೫ ಸೇತುವೆಗಳನ್ನು ಧ್ವಂಸ ಮಾಡಲಾಯಿತು. ೨೦೧ ಸರಕಾರಿ ದಫ್ತರಗಳನ್ನು ನಾಶಪಡಿಸಲಾಯಿತು. ಸಿಂದೀ ಅಂಗಡಿಗಳ ಮೇಲೆ ದಾಳಿ ಮಾಡುವದು ಅನಿರ್ಬಂಧ ನಡೆಯಿತು. ೬೨ ಸಿಂದೀ ಅಂಗಡಿಗಳ ಮುಂದೆ ಪಿಕೆಟಿಂಗ್ ನಡೆಯಿತು. ಸಿಂದಿ ಅಂಗಡಿಗಳ ಮೇಲೆ ದಾಳಿಯಾಯಿತು. ೧೯ ಪಕಾಲಿಗಳನ್ನು ಹರಿಯಲಾಯಿತು. ಸಿಂದಿ ಗಿಡಗಳನ್ನು ಕಡಿಯುವದು ನಡೆಯಿತು. ೪೦ ಡಾಕ್ ಬಂಗಲೆಗಳ ಮೇಲೆ ದಾಳಿ ನಡೆಯಿತು ೨೪೮ ಚಾವಡಿಗಳ ಮೇಲೆ ಪೋಲೀಸ್ ಚೌಕಿಗಳ ಮೇಲೆ ದಾಳಿ ನಡೆದವು. ಭೂಕಂದಾಯ ದಾಳಿಯಲ್ಲಿ ೧೦೨೦೦ ರೂಪಾಯಿ ನಷ್ಟವಾಯಿತು. ಸಾಗವಾನಿ ಕಟ್ಟಿಗೆಗಳಿಗೆ ಬೆಂಕಿ ಹಚ್ಚುವದರಿಂದ ೧೨೦ ಸಾವಿರ ರೂಪಾಯಿಗಳಷ್ಟು ಹಾನಿಯಾಯಿತು ೯ ಜನ ಪೋಲೀಸ್ ಅಧಿಕಾರಿಗಳನ್ನು ನಿಃಶಸ್ತ್ರಗೊಳಿಸಲಾಯಿತು. ೨೯ ಕಡೆ ಪೋಲೀಸರ ಮೇಲೆ ದಾಳಿ ನಡೆಯಿತು.

ಈ ಚಳವಳಿಯಲ್ಲಿ ಸರಕಾರದ ದಬ್ಬಾಳಿಕೆ ಕ್ರೂರವಾಗಿತ್ತೆಂದು ಪ್ರತ್ಯೇಕ ಹೇಳಬೇಕಾಗಿಲ್ಲ. ಗುಂಡು ಹಾರಿಸುವದು, ಲಾಠಿ ಪ್ರಹಾರ ಮಾಡುವುದು, ಛಟಕಿ ಹೊಡೆಯುವದು ಸೆರೆ ಹಿಡಿಯುವದು ಅನಿರ್ಬಂಧವಾಗಿ ನಡೆಯಿತು. ಮೇಲೆ ಹೇಳಿದಂತೆ ಈ ಚಳವಳಿ ಅಲ್ಪಾವಧಿಯದಾಗಿದ್ದರೂ ಭಾರತದ ಧ್ಯೇಯವಾದ ಸ್ವಾತಂತ್ರ್ಯಸಂಪಾದನೆಗೆ ನಾಂದಿಯಾಯಿತೆಂಬುದು ನಿರ್ವಿವಾದ. ಬ್ರಿಟಿಶರು ತಾವಾಗಿಯೇ ಭಾರತವನ್ನು ಬಿಟ್ಟು ಹೋಗುವಂತೆ ಮಾಡುವಲ್ಲಿ ಇದು ಬಹಳ ಮಟ್ಟಿಗೆ ಕಾರಣವಾಯಿತು.

## ಚಳವಳಿಯ ಪರಿಣಾಮ

ಮೇಲೆ ಹೇಳಿದಂತೆ ಈ ಚಳವಳಿಯು ಅಲ್ಪಾವಧಿಯದಾಗಿದ್ದರೂ ಅದರ ಸ್ವರೂಪ ತೀವ್ರವಾದ್ದರಿಂದ ಸರಕಾರದವರು ಆ ಬಗ್ಗೆ ವಿಚಾರ ಮಾಡದೆ ಗತ್ಯಂತರವುಳಿಯಲಿಲ್ಲ. ಬರಿ ಬ್ರಿಟಿಶರ ಮೇಲೆ ಇಷ್ಟೇ ಅಲ್ಲ ಪರರಾಷ್ಟ್ರಗಳ ಮೇಲೆಯೂ ಇದರ ಪರಿಣಾಮವಾಗದಿರಲಿಲ್ಲ. ಭಾರತಕ್ಕೆ ಸ್ವಾತಂತ್ರ್ಯ ಕೊಡಲೇಬೇಕು ಎಂದು ಅನೇಕ ಪರರಾಷ್ಟ್ರಗಳು ಪ್ರತಿಪಾದಿಸಹತ್ತಿದವು. ಇದೆಲ್ಲವರ ಪರಿಣಾಮವಾಗಿ ಬ್ರಿಟಿಶರಿಗೆ ಭಾರತದಲ್ಲಿ ಆಡಳಿತೆಯನ್ನು ಸಾಗಿಸುವದೇ ಕಠಿಣವಾಯಿತು. ಆದಷ್ಟು ಬೇಗ ಭಾರತೀಯರಿಗೆ ಆಡಳಿತೆಯನ್ನೊಪ್ಪಿಸಿ ಗುಡಿಜಾಪಿ ಕಟ್ಟಬೇಕೆಂಬ ನಿರ್ಧಾರವನ್ನು ಬ್ರಿಟಿಶರು ಮಾಡಬೇಕಾಯಿತು. ಇನ್ನು ಮುಂದೆ ಭಾರತದಲ್ಲಿ ಆಡಳಿತೆಯನ್ನು ಸಾಗಿಸುವುದೇ ಅಶಕ್ಯವೆಂಬ ನಿರ್ಧಾರಕ್ಕೆ ಅವರು ಬರಬೇಕಾಯಿತು. ಭಾರತವನ್ನು ಬಿಟ್ಟು ಹೋಗುವಾಗಲೂ ಬ್ರಿಟಿಶರು 'ಒಡೆದು ಆಳುವ' ತಮ್ಮ ದುಷ್ಟ ಧೋರಣೆಯನ್ನು ಬಿಟ್ಟುಕೊಡಲಿಲ್ಲ. ಅಖಂಡವಾದ ಭಾರತವನ್ನು ಭ್ರಾಂತಿ ಮತ್ತು ಟೀಕಿಸಿ ನವೆಂದು ಜಾತೀಯ ತಳಹದಿಯ ಮೇಲೆ ಒಡೆದು ಎರಡು ಉಪಖಂಡಗಳನ್ನಾಗಿ ರಚಿಸಿದರು. ಸಾವಿರಾರು ವರುಷಗಳಿಂದ ಒಂದೇ ರಾಷ್ಟ್ರದಲ್ಲಿ ಬಂಧುಭಗಿನಿಯರಾಗಿದ್ದವರು ಇಂದು ಎರಡು ರಾಷ್ಟ್ರಗಳ ಪ್ರಜೆಗಳಾಗಬೇಕಾದ ದುರ್ಧರ ಪ್ರಸಂಗ ಬಂದಿತು. ಒಂದೇ ಹೊಟ್ಟೆಯಲ್ಲಿ ಹುಟ್ಟಿದ್ದ ಅಣ್ಣತಮ್ಮಂದಿರು ಅಕ್ಕತಂಗಿಯರು ಕೂಡ ಬೇರೆ ಬೇರೆ ಆಡಳಿತೆಗಳಲ್ಲಿ ಹಂಚಲ್ಪಟ್ಟರು. ಬ್ರಿಟಿಶರು ಭಾರತಕ್ಕೆ ಕೊಟ್ಟ ಕೊನೆಯ ಒದಿಕೆ ಇದೆಂದು ಹೇಳಬಹುದು. ಇದರಿಂದ ಭಾರತ, ಪಾಕಿಸ್ತಾನಗಳೆರಡೂ ಸ್ನೇಹ ಸೌಹಾರ್ದದಿಂದ ಬಾಳದಂತಾಗಿದೆ. ವಿಭಜನೆಯ ನಂತರದ ಕಾಲದಲ್ಲಿ ಅನೇಕ ದಂಗೆಗಳಾಗಿ ಭೀಕರ ಹತ್ಯಾಕಾಂಡ ನಡೆಯಿತಲ್ಲದೆ ಸ್ತ್ರೀಯರ ಮಾನಭಂಗ– ಆಸ್ತಿಪಾಸ್ತಿಗಳ ಲೂಟಿ, ಕೊಲೆ, ಕೊಳ್ಳಿ, ಸುಲಿಗೆಗಳು ನಡೆದುವು. ಇದರಿಂದ ಎರಡೂ ರಾಷ್ಟ್ರಗಳಲ್ಲಿ ದ್ವೇಷಭಾವನೆ ಬಲಿಯಹತ್ತಿತು. ಅದರಲ್ಲಿಯೂ ಪಾಕಿಸ್ತಾನದಲ್ಲಿ ಸುಭದ್ರ ಸರಕಾರ ಸ್ಥಾಪನವಾಗದೆ, ಪ್ರಜಾಪ್ರಭುತ್ವ ಆಡಳಿತೆ ಸ್ಥಾಪಿತವಾಗದೆ ಒಂದು ಬಗೆಯ ಸರ್ವಾಧಿಕಾರಿತ್ವವು ನಡೆದಿದ್ದರಿಂದ ಭಾರತದೊಡನೆ ಅದು ಹೆಚ್ಚಾಗಿ ವೈರಭಾವನೆ ಬೆಳೆಸಿದೆ. ಸ್ವಾತಂತ್ರ್ಯ ಸಂಪಾದನೆಯ ಕಾಲಕ್ಕೆ ಅಣ್ಣತಮ್ಮಂದಿರಂತೆ ಅಕ್ಕಪಕ್ಕದಲ್ಲಿ ನಿಂತು ಬ್ರಿಟಿಶರ ದಬ್ಬಾಳಿಕೆಯನ್ನು ಸಹಿಸಿದ ಅಖಂಡ ಭಾರತದ ಪ್ರಜೆಗಳು ಇಂದು ಒಡೆದು ಹೋಗಿದ್ದಾರೆ. ಇದರಿಂದ ಎರಡೂ ರಾಷ್ಟ್ರಗಳಲ್ಲಿ ದ್ವೇಷಭಾವನೆ ಬೆಳೆಯುತಿದೆ. ಭಾರತೀಯರು ಎಷ್ಟೊಂದು ಸಹನೆ ತಾಳಿದರೂ ಪಾಕಿಸ್ತಾನಿಗಳು ಎರಗುತ್ತಿರುವರು. ಈ ವಿಭಜನೆಯ ಕಹಿ ಫಲಗಳನ್ನು ಈಗಲೂ— ಯಾವಾಗಲೂ ಎರಡೂರಾಷ್ಟ್ರಗಳು ಭೋಗಿಸಬೇಕಾಗಿದೆ.

ಸ್ವಾತಂತ್ರ್ಯಾನಂತರ ಭಾರತವು ಸರ್ವಸಮೃದ್ಧ ರಾಷ್ಟ್ರವನ್ನು ಮಾಡುವಲ್ಲಿ ನಿರತವಾದರೆ ಪಾಕಿಸ್ತಾನ ಸರಕಾರವು ತನ್ನ ಸೈನಿಕ ಬಲವನ್ನು ಹೆಚ್ಚಿಸಿಕೊಳ್ಳಲು ಪ್ರಯತ್ನಿಸುತ್ತಿದೆ. ಆ ಬಲದ ಹೆಮ್ಮೆಯಿಂದ ಇಂದು ಪಾಕಿಸ್ತಾನ ಯುದ್ಧವನ್ನು ಹೂಡಿದೆ. ಅನ್ಯಾಯದಿಂದ ಹೂಡಿದ ಈ ಅಧರ್ಮ ಯುದ್ಧವು ಪಾಕಿಸ್ತಾನಕ್ಕೆ ಮಾರಕವೇ ಎಂಬುದು ನಿರ್ವಿವಾದ- ಇರಲಿ.

೧೯೪೨ರ ಕೊನೆಯ ಕ್ರಾಂತಿಯ ನಂತರ ಸ್ವಲ್ಪಾವಧಿಯಲ್ಲಿ ಸ್ವಾತಂತ್ರ್ಯ ಸಂಪಾದಿಸಿದ ಭಾರತವು ಈ ಹದಿನೆಂಟು ವರುಷಗಳಲ್ಲಿ ಗಣನೀಯ ಪ್ರಗತಿಯನ್ನು ಸಾಧಿಸಿದೆ. ಪಾಕಿಸ್ತಾನ ಸರಕಾರದಂತಹ ನೆರೆಯ ಸರಕಾರವು ಕಿರುಕಳ ಕೊಡದಿದ್ದರೆ ಭಾರತವಿನ್ನೂ ಹೆಚ್ಚು ಪ್ರಗತಿಯನ್ನು ಸಾಧಿಸಬಹುದಾಗಿತ್ತು. ಸದ್ಯದ ಯುದ್ಧವು ಬೇಗ ಭಾರತದ ವಿಜಯದಲ್ಲಿ ಪರಿಣಮಿಸಿ ಆದಷ್ಟು ಬೇಗ ಅದು ಸರ್ವಸಮೃದ್ಧ ರಾಷ್ಟ್ರವಾಗಲಿ.

# ಮಂತ್ರಿಗಳಿಗೊಂದು ಮನವಿ

—೧—

ಟೊಪ್ಪಿಗೆಯ ಹಾಕಬೇಡವೊ ನನ ರಾಜಾ,
ನೀ ಟೊಪ್ಪಿಗೆಯ ಹಾಕಬೇಡಾ,
(ಎಂದರೆ ತಲೆ ತೆರೆದು ನಿಲ್ಲೆಂದು ಹೇಳುವೆನೆ?)
ಯಾರಿಗೂ ಟೊಪ್ಪಿಗೆ ಹಾಕಬೇಡಾ!

ನಿನ್ನ ಕಳ್ಳಸಂತೆಯ ಆ ಕರಿಯ ತಲೆಗೆ
ಈ ಮಳ್ಳಮಂದಿಯ ಈ ಕಿರಿಯ ತಲೆಗೆ
ಬಿಳಿಯ ಟೊಪ್ಪಿಗೆಯ ಹಾಕಬೇಡಾ!
(ಎಂದರೆ ಕರಿಯ ಟೊಪ್ಪಿಗೆ ಹಾಕೆನ್ನುವೆನೆ?)

ಆ ಗಾಂಧೀಜಿ ನೆಹರೂಜಿ
ಸ್ವರ್ಗದಲಿ ಏನೆಂದುಕೊಂಡಾರೊ!
ಬರಿ ನಿನ್ನ ಟೊಪ್ಪಿಗೆಯ ಕಂಡು
ಹಿರಿ ಹಿರೀ ಹಿಗ್ಗುಗೊಂಡಾರೊ?
ಇಲ್ಲ, ಈ ನಿನ್ನ ಕೆಳತಲೆಯ ಕಂಡು
ನೊಂದುಕೊಂಡಾರು! ಪಾಪ, ನೊಂದುಕೊಂಡಾರು!
ಏನು, ಅವರಿಗೂ ಹಾಕುವೆಯ ಟೊಪ್ಪಿಗೆಯ?

—೨—

ಪಶ್ಚಿಮದ ಗಾಳಿಯನು ಮೈತುಂಬಿಕೊಂಡು
ಕಾಲಿರದ ಕಾಲೊಳಗೆ ಅರಿವೆಯ ಸುತ್ತಿ ಬೂಟು ಮೆಟ್ಟು
ಹಾಕಿ ಪ್ಯಾಂಟು ಬಾಗಿರುವ ಬೆನ್ನ ಬಿಗಿದು ಬೆಲ್ಟು
ಕಣ್ಣಿರದ ಕಣ್ಗೆ ಕನ್ನಡಕವಿಟ್ಟು
ಸರಳ ಕೊರಳಿಗೆ ಉರುಲುಗಂಟು—

ಹಾಕಿ ಬಂಧವನು ಹಾಕಿದೆಯ ಹ್ಯಾಟು!
ಕೈಕುಲುಕ ಬಂಧವನು ಕೊಟ್ಟೆಯಾ ಕೈಯ್ಯ!

ಬೇಡಪ್ಪಾ, ಟೊಪ್ಪಿಗೆಯ ಹಾಕಬೇಡಾ
ಇರಲಿರಲಿ ಬಕ್ಕದಲೆ ಬೊಕ್ಕದಲೆ;

ಬೇಡಾ, ಇರಲಿ ಕ್ರಾಪು!
ಇರಲಿ ಫ್ರೆಂಚ್ ಕಟ್ಟು
ಇಲ್ಲಾ, ಮೀಸೆ ಹೊರದಿದ್ದರೂ ಮಾಫು!

ಆದರಿದೋ ಮೀಸೆ ಹುಟ್ಟುವ ತಾಳದಲಿ
ಒಮ್ಮೆಯಾದರೂ ನೆನಪಿರಲಿ
ಹೆಮ್ಮೆಯಲಿ ಕೈಯಾಡಿಸಲು; ಸುಮ್ಮನಿರಬೇಡ!

—೩—

ಆ ಕಂತ್ರಾಟದಾರ ನಿಷ್ಠಾವನೂ?
ಈ ಯಂತ್ರಶಿಲ್ಪಿ ತಪ್ಪೇನೋ?
ಮೂವರೂ ಒಂದಾಗಿ ಕೊಟ್ಟಿರಾ ಕೈಯ್ಯ!

ಒಳಗೊಳಗೆ ಉಸುಕು ತುಂಬಿ
ಮೇಲೆಲ್ಲ ಗಿಲೀಟು ಕಾಂಕ್ರೀಟು!

ಮನೆತುಂಬಿಕೊಂಡಿರಾ ಕರನ್ಸಿ ನೋಟು!
ಹೋಟ ಕೊಟ್ಟಾ ಕೈಗೆ ಅದೆ ನೋಟಕೊಟ್ಟು
ಇಲ್ಲಾ ಬರಿಯ ಕೈಯಕೊಟ್ಟು
ಚಪ್ಪಾಳೆ ತಟ್ಟಿದಾ ತಲೆಗೆ ತಂದಿಟ್ಟಿರಾ!
ಏನು? ಟೊಪ್ಪಿಗೆಯ? ಇಲ್ಲ, ಉರುಲು?

—೪—

ಈ ನಿನ್ನ ದಪ್ಪಪುಷ್ಟ ಹೊಟ್ಟೆಯ ಗಟ್ಟಿ ಗೋಡೌನು
ನುಂಗಿರುವುದೆಷ್ಟು ಜೀವಾ?
"ಪುಟ್ಟಪುಟ್ಟ ಹೊಟ್ಟೆಗಳಿಗೆಲ್ಲ ಮುಷ್ಟಿಮುಷ್ಟಿ ಅಕ್ಕಿಯೂ ಸಿಗದೆ

ಬಿಟ್ಟರೇನಂತೆ ಪ್ರಾಣ?
ಪ್ರಾಣವಿಲ್ಲದ ಪ್ರಾಣಿಗಳು ಇದ್ದರೇನಂತೆ. ಇರದಿದ್ದರೇನಂತೆ?
ಏಕೆ ಚಿಂತೆ?"— ಅಲ್ಲವೋ ಮುತ್ಸ?

ಭೂಭಾರ ನೀಗಿಸಲು ನಡೆಸಿದೆಯ ವರಯಜ್ಞ?
ಪಡೆಯಲ್ಕೆ ಪುಣ್ಯವನು ಪಡೆಯಲ್ಕೆ ಸ್ವರ್ಗವನು
ಆ ದೇವ ದೇವನಿಗೂ ಹಚ್ಚಿದೆಯ ಬೆಣ್ಣೆಯನು?




—೫—

ನಿನ್ನಂತ ನರನೊಬ್ಬ ಒಂದಿಲ್ಲ ಒಂದು ದಿನ
ನಿನಗೆ ಬುದ್ಧಿಯ ಕಲಿಸದಿದ್ದಾನೊ?
ನಿನ್ನ ತಪ್ಪಿಗೆ ಒಮ್ಮೆ ನಿನ್ನ ಟೊಪ್ಪಿಗೆ ನಿನಗೆ ಬೀಳದಿದ್ದೀತೊ?
ಜಗಕೆಗೋಳನು ಹೊಯ್ದು ನಿನ್ನದೇತರ ಬದುಕು?
ಜಗ ಬದುಕೆ ನೀ ಬದುಕು, ಪಕ್ಕಗತಿ ಸಾಕಪ್ಪ ಸಾಕು!

ಬೇಡವೊ ಬೇಡಪ್ಪಾ ಬೇಡ ನನ ರಾಜಾ,
ತೆಗೆದು ಒಗೆಯೋ ಆ ಟೊಪ್ಪಿಗೆಯ!
ಟೊಪ್ಪಿಗೆಯ ಒಗೆದು ತಲೆತೆರೆದು ನಿಲ್ಲೆನ್ನುವೆನೆ?
ಛೀ! ಒಗೆದು ಹಾಕಿ ತಲೆಮುಚಿದು ನಿಲ್ಲು
ಭಾರತಿಯ ಶುಭಾಶೀರ್ವಾದವನೆ ಗೆಲ್ಲು!!

—ಭುಜೇಂದ್ರ. ಬಿ. ಮಹೀಶವಾಡಿ.

(ಸೂಚನೆ:- ಯಾರನ್ನೂ ಉದ್ದೇಶಿಸಿ ಬರೆದಿಲ್ಲ; ಕೇವಲ ಕಾಲ್ಪನಿಕ)

# ಶಂಕರ್ ಫಾರ್ಮಸಿ ಭದ್ರಾವತಿ (ಮೈಸೂರು ಸ್ಟೇಟ್)

ಸುಂ. ೪೪ ವರ್ಷಗಳಿಂದ ನಡೆಸಿದ ಸಂಶೋಧನೆ ಮತ್ತು ಚಿಕಿತ್ಸಾ ಅನುಭವದ ಫಲದಿಂದ ಕಂಡುಹಿಡಿದಿರುವ ನಮ್ಮ ಆರು ಆಯುರ್ವೇದ ಟಾನಿಕ್ ಗಳನ್ನು ಸೇವಿಸಿ ಆರೋಗ್ಯ ಭಾಗ್ಯ ಮತ್ತು ದೇಹ ದಾರ್ಢ್ಯತೆಯನ್ನು ವೃದ್ಧಿ ಪಡಿಸಿಕೊಳ್ಳಿರಿ.



**೧) ನವಜೀವ ಕಲ್ಪಂ :–** ಕ್ಷೀಣಕರಿಗೂ ದುರ್ಬಲರಿಗೂ ಅತ್ಯುತ್ತಮವಾದ ಟಾನಿಕ್ ಕೇವಲ ಇಪ್ಪತ್ತು ದಿವಸ ನವಜೀವ ಕಲ್ಪಂ ಸೇವಿಸಿದರೆ ಆರೋಗ್ಯವೃದ್ಧಿಯಾಗಿ ತೂಕ ಅಧಿಕವಾಗಿ ಶರೀರ ಸುಂದರವಾಗುತ್ತದೆ. ಅದರ ಆಶ್ಚರ್ಯಕರ ಗುಣ ತಿಳಿಯ ಬೇಕಾದರೆ ಇದನ್ನು ಉಪಯೋಗಿಸುವ ಮುಂಚೆ ಮತ್ತು ಇಪ್ಪತ್ತು ದಿವಸ ಉಪಯೋಗಿಸಿದ ನಂತರ ನಿಮ್ಮ ತೂಕವನ್ನು ಪರೀಕ್ಷೆ ಮಾಡಿದರೆ ಅದರ ವ್ಯತ್ಯಾಸ ನೋಡಿದಾಗ ನಿಮಗೆ ಅದರ ಮಹತ್ವ ತಿಳಿಯುವುದು. ೪೪ ವರ್ಷಗಳಿಂದ ಲಕ್ಷಾಂತರ ಜನರು ಇದನ್ನು ಉಪಯೋಗಿಸಿ ಪ್ರಶಂಸಾ ಪತ್ರಗಳನ್ನು ಕಳಿಸಿರುವುದು ಈ ಔಷಧಿಯ ಉತ್ತಮ ಗುಣಕ್ಕೆ ಸಾಕ್ಷಿಯಾಗಿದೆ. ಬಲಹೀನ ಶರೀರ ಮತ್ತು ಪ್ರಕೃತಿದತ್ತವಾಗಿ ಕ್ಷೀಣವಾಗಿರುವವರು ಅಗ್ಗದ ಬೆಲೆಯ ಸಾವಿರಾರು ಔಷಧಿಗಳನ್ನು ಸೇವಿಸಿ ನಿರಾಶರಾಗುವುದಕ್ಕಿಂತ ನಮ್ಮ ಜಾಸ್ತಿ ಬೆಲೆಯ ನವಜೀವ ಕಲ್ಪಂ ಒಂದೇ ಒಂದು ಬಾಟಲ್ ಸೇವಿಸಿ ದೇಹ ದಾರ್ಢ್ಯತೆಯನ್ನು ವೃದ್ಧಿ ಪಡಿಸಿಕೊಳ್ಳಿರಿ.

ಮೇಲಿನಿಂದ ಬಿದ್ದು ಅಥವಾ ಪೆಟ್ಟುಗಳಿಂದ ಮೈಯೊಳಗಿನ ಅವಯವಗಳಿಗೆ ಆಗಿರುವ ನೋವು ಮತ್ತು ಅಂಗಗಳ ಒಳಗೆ ಆಗಿರುವ ದುಷ್ಟ ಪರಿಣಾಮಗಳನ್ನು ಸಂಪೂರ್ಣ ಗುಣಪಡಿಸುವದು. ಶರೀರ ಶೋಷಣೆ ಕೆಮ್ಮು, ಎದೆನೋವು. ಉಸಿರು ಕಟ್ಟುವದು, ಶಬ್ದಭಂಗಿ, ಮಲಬದ್ಧತೆ ನಿದ್ರಾಭಂಗ, ತಲೆಸುತ್ತುವದು ಮುಂತಾದವಕ್ಕೂ ಇದು ಕುಠಾರ ಪ್ರಾಯವಾಗಿದೆ. ಜ್ಞಾಪಕಶಕ್ತಿಯು ಅತ್ಯಗತ್ಯವಾಗಿರುವ ವಿದ್ಯಾರ್ಥಿಗಳು ವರ್ತಕರು ನ್ಯಾಯವಾದಿಗಳು ಅಧ್ಯಾಪಕರು ಅಧಿಕಾರಿಗಳು ಮುಂತಾದವರಿಗೆ ಇದು ಅತ್ಯುತ್ತಮವಾದ ಟ್ಯಾನಿಕ್ ಬೆಲೆ ೪೦೦ ಗ್ರಾಂ ಜಾಡಿ ೧ ಕ್ಕೆ ರೂ. ೧೦-೦೦

**೨) ಧಾತು ಕಲ್ಪ ದ್ರುಮಂ :–** ದೇಹದ ಉಷ್ಣತೆಯನ್ನು ನಿವಾರಿಸಿ ತಂಪುಮಾಡುವ ಟಾನಿಕ್ ಜೀವನದ ಸುಖಸಂತೋಷಗಳನ್ನು ಆನಂದವನ್ನು ಅನುಭವಿಸಲು ಇಚ್ಛಿಸುವ ಪ್ರತಿಯೊಬ್ಬ ಯುವಕರೂ ಅತ್ಯಗತ್ಯವಾದ ಈ ಟಾನಿಕ್ ರಕ್ತವನ್ನು ಶುದ್ಧಮಾಡಿ ವೃದ್ಧಿ ಪಡಿಸುತ್ತದೆ.ಬೆಲೆ ೨೫೦ ಎಂ. ಎಲ್. ಬಾಟ್ಲಿ ಒಂದಕ್ಕೆ ರೂ. ೬-೫೦.

**೩) ವಸಂತ ಕುಸುಮಾಮೃತಂ :–** ಎಲ್ಲಾ ವಿಧವಾದ ಹೊಟ್ಟೆ ನೋವುಗಳಿಗೂ ಎದೆ ಉರಿ. ಅಜೀರ್ಣ, ಗ್ಯಾಸ್‌ಟ್ರೊಬಲ್, ಮುಂತಾದವುಗಳಿಗೆ ಕುಠಾರ ಪ್ರಾಯವಾಗಿದೆ. ಬೆಲೆ ೪೦೦ ಗ್ರಾಂ ಜಾಡಿ ಒಂದಕ್ಕೆ ರೂ. ೬-೫೦.

**೪) ಕೆ. ಕೆ. ರಸಾಯನ:–** ಕೆಮ್ಮು ಎದೆ ನೋವು, ಶರೀರ ಶೋಷಣೆ, ಉಸಿರು ಕಟ್ಟುವುದು ಮುಂತಾದ ಶ್ವಾಸ ಕೋಶಗಳಿಗೆ ಸಂಬಂಧಿಸಿದ ರೋಗಗಳಿಗೆ ಇದೊಂದು ವರಪ್ರಸಾದರೂಪದ ಟಾನಿಕ್ ಬೆಲೆ ೪೦೦ ಗ್ರಾಂ ಜಾಡಿ ಒಂದಕ್ಕೆ ಬೆಲೆ ರೂ. ೯-೨೫.

**೫) ನಳಿನ ಕಲ್ಪಂ :–** ಬಾಯಾರಿಕೆ, ಎದೆನೋವು, ಸೊಂಟನೋವು, ಕೈಕಾಲು ಸಂದುಗಳಲ್ಲಿ ನೋವು, ಸುಸ್ತು, ನಿಶ್ಶಕ್ತಿ ಮುಂತಾದುವನ್ನು ನಿವಾರಿಸಿ ಆರೋಗ್ಯವನ್ನು ಶಕ್ತಿಯನ್ನು ವೃದ್ಧಿಪಡಿಸುವದು ಮಹಿಳೆಯರಿಗೆ ವರಪ್ರಸಾದರೂಪದ ದಿವ್ಯ ಟಾನಿಕ್, ಬೆಲೆ ೪೦೦ ಗ್ರಾಂ ಜಾಡಿ ಒಂದಕ್ಕೆ ರೂ. ೬-೫೦.

**೬) ಪ್ರಸೂತಿಕಾ ಕಲ್ಪಂ:** - ಹೆರಿಗೆಯಾದ ಮೊದಲನೇ ದಿನದಿಂದ ಇಪ್ಪತ್ತು ದಿವಸ ಇದನ್ನು ಸೇವಿಸಿದರೆ ಎದೆಯ ಹಾಲನ್ನು ಶುದ್ಧಿಮಾಡಿ ವೃದ್ಧಿಪಡಿಸುವದು ಬಾಣಂತಿಯ ಆರೋಗ್ಯವನ್ನು ವೃದ್ಧಿಪಡಿಸುವದು. **ಪುಷ್ಟಿ ಮಾಡುವ ಅತ್ಯುತ್ತಮ ಟಾನಿಕ್ ಬೆಲೆ ೪೦೦ ಗ್ರಾಂ ಜಾಡಿ** ರೂ ೬-೫೦ ಚಿಕ್ಕವಯಸ್ಸಿನಲ್ಲಿ ಮಾಡಿದ ಸ್ವೇಚ್ಛಾಚಾರ ದುರಭ್ಯಾಸ ಹೊತ್ತಿಗೆ ಸರಿಯಾಗಿ ನಿದ್ರೆ ಆಹಾರಗಳಿಲ್ಲದೆ ಉಂಟಾಗಿರುವ ರೋಗಗಳನ್ನೂ ಮಿತಿ ಮೀರಿದ ಸ್ತ್ರೀ ಸಂಭೋಗಾದಿಗಳಿಂದ ಉಂಟಾಗಿರುವ ಎಲ್ಲಾ ಗುಹ್ಯ ರೋಗಗಳನ್ನೂ, ಹೆಂಗಸರಿಗೆ ಬಿಳುಪು ಹೋಗುವದು ಅಸ್ತಿಸ್ರಾವ ಮುಂತಾದ ಉಷ್ಣ ಸಂಬಂಧವಾದ ರೋಗಗಳನ್ನು ಖಾತರಿಯಾಗಿ ಗುಣಪಡಿಸುತ್ತೇವೆ. ಯಾವುದೇ ರೋಗವನ್ನಾದರೂ ಸಕಾಲದಲ್ಲಿ ಒಳ್ಳೆಯ ಚಿಕಿತ್ಸೆಯಿಂದ ಗುಣಪಡಿಸಬಹುದು ನಿಮಗೆ ಅಕಾಲವಾರ್ಧಿಕ್ಯ, ಸುಸ್ತು ಮತ್ತು ಜೀವನದ ಸುಖಸಂತೋಷಗಳಿಂದ ವಂಚನೆ ಆಗಿದೆಯೇ? ಹಾಗಿದ್ದರೆ ನಿರಾಶರಾಗಬೇಡಿ. ನಮಗೆ ಬರೆಯಿರಿ ಅಥವಾ ಖುದ್ದಾಗಿ ಭೇಟಿಮಾಡಿ ಪತ್ರವ್ಯವಹಾರವನ್ನು ಗುಟ್ಟಾಗಿ ಇಡಲಾಗುವದು. ಸ್ವಪ್ನದಲ್ಲಿ ಅಥವಾ ತಿಳಿಯದೇ ಆಗುವ ಧಾತು ಸ್ಖಲನ, ಧಾತು ನೀರಾಗಿರುವದು, ಶೀಘ್ರ ಸ್ಖಲನ ಇತ್ಯಾದಿ ರೋಗಗಳಿಗೆ ಇತರ ಚಿಕಿತ್ಸೆಗಳಿಂದ ಗುಣವಾಗದೆ ಇರುವವರು ನಮ್ಮ ಚಿಕಿತ್ಸೆಗಳಿಂದ ಗುಣಪಡೆದಿರುತ್ತಾರೆ.

**ಶಂಕರ್ ಫಾರ್ಮಸಿ ಭದ್ರಾವತಿ,**
(ಮೈಸೂರ ಸ್ಟೇಟ.)



# ನಯನಳ ದೀಪಾವಳಿ

ನಯನ ಕಾಲೇಜಿನ ಪ್ರಾಧ್ಯಾಪಿಕೆ. ಒಂದು ವರ್ಷದ ಹಿಂದೆ, ಅವಳ ತಂದೆಯ ಅಕಾಲ ಮರಣದ ಬಳಿಕ ಅವಳು ಕಾಲೇಜಿನ ಹಾಸ್ಟೆಲಿನಲ್ಲಿ ಬಂದು ಇರತೊಡಗಿದಳು. ತಾಯಿ ಹಿಂದೆಯೇ ಗತಿಸಿದ್ದರು. ಸಮೀಪದ ಬಂಧುಎಂದರೆ ಈಗ ಅಕ್ಕ ವಿನಯ ಮಾತ್ರ. ಅವಳು ವಿವಾಹವಾಗಿ ಪತಿಯೊಡನೆ ದೂರದ ನಗರದಲ್ಲಿ ಇದ್ದಳು. ಅಕ್ಕ ತಂಗಿಯರೊಳಗೆ ತುಂಬಾ ಪ್ರೇಮವಿತ್ತು.

ದೀಪಾವಳಿ ರಜೆಗೆ ಎರಡು ವಾರಗಳಿದ್ದವು. ಎಂದಿನಂತೆ ನಯನ ಆ ದಿನದ ಕ್ಲಾಸು ಮುಗಿಸಿ ತನ್ನ ರೂಮಿಗೆ ಹೋದಳು. ಯಾಂತ್ರಿಕವಾಗಿ ಅವಳ ಬಾಳ್ವೆ ಸಾಗಿತ್ತು. ವಿದ್ಯಾರ್ಥಿನಿಯರು, ಪ್ರಾಧ್ಯಾಪಿಕೆಯರು, ಹಾಸ್ಟೆಲ್ಲಿನಲ್ಲಿ ಇರುತ್ತಿದ್ದರು. ಒಂದು ವರ್ಷದಿಂದ ನಯನಳ ಜೀವನ ಕಾಲೇಜಿನ, ಹಾಸ್ಟೆಲ್ಲಿನ ಜೀವನದಲ್ಲಿ ಬೆರೆತು ಹೋಗಿತ್ತು. ತಿಂಗಳಿಗೆರಡಾವರ್ತಿ, ಬರುವ ಅಕ್ಕನ ಕಾಗದದಿಂದ ಅವಳು ಹೊರಗಿನ ಪ್ರಪಂಚದ ತನ್ನ ಇತರ ಬಂಧುಗಳ ಬಗ್ಗೆ ಅರಿಯುತ್ತಿದ್ದಳು.

ಮಂಜುಳಾ, ನಯನಳೊಡನೆ ಅದೇ ರೂಮಿನಲ್ಲಿ ಇರತೊಡಗಿ ಮೂರು, ನಾಲ್ಕು ತಿಂಗಳುಗಳಾದವು. ನಯನ ಒಳಗೆ ಬಂದೊಡನೆ "ನಿಮಗೊಂದು ಪತ್ರವಿದೆ" ಎಂದು ಆ ದಿನದ ಅಂಚೆಯಲ್ಲಿ ಬಂದ ಕಾಗದವನ್ನು ಈಯಲು, ವಿಳಾಸ ಬರೆದ ಹಸ್ತಾಕ್ಷರಗಳನ್ನು ಗುರುತಿಸಿ, ನಯನ, 'ಅಕ್ಕನ ಕಾಗದ' ಎಂದು ಒಡೆದು ಓದಿದಳು. ಓದುತ್ತಿದ್ದಂತೆ, ಅವಳ ಮೊಗದಲ್ಲಿ ಸಂತೋಷದ ಮುಗುಳ್ನಗು ತಾನಾಗಿಯೇ ಪಸರಿಸಿತು.

ಮಂಜುಳಾ, "ಸಂತಸದ ಸಮಾಚಾರ ಬಂದಿರಬೇಕು ಅಲ್ಲವೆ ?" ಎನ್ನಲು,

'ದೀಪಾವಳಿ ರಜೆಯಲ್ಲಿ ಅಲ್ಲಿಗೆ ಬರಲು ಆಹ್ವಾನವಿತ್ತಿದ್ದಾಳೆ.' ಎಂದುತ್ತರವಿತ್ತು ನಯನ ಪತ್ರವನ್ನು ತೆಗೆದಿರಿಸಿದಳು.

'ದೀಪಾವಳಿ ರಜೆಯನ್ನು ಹೇಗೆ ಕಳೆಯುವುದೆಂಬ ಸಮಸ್ಯೆ ಬಗೆಹರಿಯಿತು ನಿಮಗೆ' ಮಂಜುಳೆ ಹೇಳಿದಳು.

"ಹೌದು. ಅಕ್ಕನ ಮನೆಗೆ ಹೋಗದಿದ್ದರೆ ರಜೆಗೆ ಹೋಗಲು ಬೇರೆ ತಾಣವಿಲ್ಲದಾಗಿದೆ."

ಮಂಜುಳೆ, 'ಕ್ಷಮಿಸಿ ನನಗೆ ತಿಳಿದಿರಲಿಲ್ಲ' ಎಂದು ವಿಷಾದ ವ್ಯಕ್ತಪಡಿಸಿದಳು.

"ಅದೇನಿಲ್ಲ. ನನ್ನ ತಂದೆಯವರು ತೀರಿದ ಬಳಿಕ ಮನೆ ಇಲ್ಲದಾಗಿದೆ. ಅಕ್ಕ ಪ್ರತಿ ರಜೆಯಲ್ಲಿ ಬರಲು ಹೇಳುತ್ತಾಳೆ." ಎಂದಳು ನಯನ.

"ನಾನು ತಿಳಿಯದೆ ಆಡಿ ಬಿಟ್ಟೆ. ಕ್ಷಮಿಸಿ" ಪುನಃ ಮಂಜುಳೆ ಹೇಳಲು,

"ಹಾಗೇನಿಲ್ಲ. ಮನಸ್ಸಿಗೆ ಹಚ್ಚಿಕೊಳ್ಳಬೇಡಿ." ಎಂದು ನಯನ ಅವಳನ್ನು ಸಾಂತ್ವನಗೊಳಿಸಿದಳು.

ಮಂಜುಳಾ ಸಂಜೆ ಆಡಲು ಆಟದ ಮೈದಾನಿಗೆ ಹೊರಟು ಹೋದಳು. ನಯನಳಿಗೆ ಆಡಲು ಇಷ್ಟವಿರಲಿಲ್ಲ. ರೂಮಿನ ಬಳಿ ಇದ್ದ ವರಾಂಡದಲ್ಲಿ ಒಂದು ಕುರ್ಚಿಯಲ್ಲಿ ಕುಳಿತು ಸಂಜೆಯ ಪತ್ರಿಕೆಯನ್ನು ಹಿಡಿಸಿ ಓದತೊಡಗಿದಳು.

ಕೆಳಗಿನಿಂದ ವಿದ್ಯಾರ್ಥಿನಿಯರ ಕಲಕಲರವ ಕೇಳಬರುತ್ತಿತ್ತು. ಅವಳ ಮನಸ್ಸು ಏಕಾಗ್ರವಾಗಿರಲಿಲ್ಲ. ಪತ್ರದಲ್ಲಿ ಅಕ್ಕ ದೀಪಾವಳಿ ರಜೆಗೆ ಬರಲು ಆಹ್ವಾನವಿತ್ತಿದ್ದಳು. ಬಳಿಕ ಕೊನೆಯಲ್ಲಿ, ಸುನಿಲ್ ಬರುವನೆಂದು ನಿನ್ನ ಭಾವನವರಿಗೆ ಪತ್ರ ಬರೆದಿರುವನು. ಅದರಿಂದ ನೀನು ಅವಶ್ಯ ಬರಲೇಬೇಕು ಎಂದು ಎರಡು ಪಂಕ್ತಿಗಳನ್ನು ಸೇರಿಸಿದ್ದಳು. ಸುನಿಲ್ ಬರುವನೆಂದು ಓದಿದೊಡನೆ ನಯನಳ ಹೃದಯ ಹರ್ಷದಿಂದ ತುಂಬಿತ್ತು.

ಸುನಿಲ್, ನಯನಳ ಭಾವ ಅನಿಲ್‌ನ ಸೋದರ. ವಿನಯ ತನ್ನ ವಿವಾಹದಾರಭ್ಯ ತಂಗಿಯನ್ನು ಮೈದುನರಿಗೆ ವಿವಾಹ ಮಾಡಿಸಬೇಕೆಂದು ಪ್ರಯತ್ನಪಟ್ಟಿದ್ದಳು. ಆದರೆ ಅದು ಇಷ್ಟರತನಕ ಪೂರೈಸಿರಲಿಲ್ಲ. ಸುನಿಲ್ ಉದ್ಯೋಗಸ್ತನಾಗಿ ನಾಲ್ಕು ವರ್ಷಗಳು ಸಂದರೂ, ತನ್ನ ವಿವಾಹದ ಬಗ್ಗೆ ಅವನು ಖಚಿತ ಅಭಿಪ್ರಾಯ ತಳೆಯದೆ ಇದ್ದುದರಿಂದ, ವಿವಾಹದ ಪ್ರಶ್ನೆ ಮುಂದೂಡಲ್ಪಟ್ಟಿತ್ತು.

ನಯನ ಎಮ್. ಎ. ಪದವೀಧರಳಾಗಿ ಕಾಲೇಜಿನಲ್ಲಿ ನೌಕರಿಗೆ ಸೇರಿದಳು. ನಯನ ಮತ್ತು ಸುನಿಲ್ ಹಲವಾರು ಬಾರಿ ವಿನಯಳ ಮನೆಯಲ್ಲಿ ಭೇಟಿಯಾಗಿದ್ದರು. ಸಲಿಗೆಯಿಂದ ಮಾತುಕತೆಯಾಡಿದ್ದರು. ಸುನಿಲ್‌ನ ಆಕರ್ಷಕ ಮುಖ, ಎತ್ತರದ ನಿಲುವು ನಡೆಯ ರೀತಿ, ತನ್ನ ನೌಕರಿಯಲ್ಲಿ ಇದ್ದ ಉತ್ಸಾಹ, ಜಾಣಾಕ್ಷತನ ನಯನಳಲ್ಲಿ ಅವನ ಬಗ್ಗೆ ಅಭಿಮಾನ ಆದರಗಳನ್ನು ಮೂಡಿಸಿತ್ತು.

ಕೊನೆಯ ಬಾರಿ ಸುನೀಲ್‌ನನ್ನು ಭೇಟಿಯಾಗಿ ಎರಡು ವರ್ಷಗಳು ಸಂದು ಹೋಗಿದ್ದವು. ಅಕ್ಕನ ಮನೆಗೆ ಹೋದಾಗ ಅಕ್ಕ ಭಾವ ಪರಿಚಿತರಲ್ಲಿಗೆ ಭೇಟಿ ಕೊಡಲು ಹೋದಾಗ, ಆಕಸ್ಮಿಕವಾಗಿ ಸುನಿಲ್ ಬಂದಿದ್ದನು.

ಆಗ ಮನೆಯಲ್ಲಿ ಕಿರಿಮಗುವನ್ನು ನೋಡಿಕೊಳ್ಳುವೆನೆಂದು ಉಳಿದ, ನಯನಳೇ ಉಪಾಹಾರ ತಯಾರಿಸಿ ಅವನಿಗೆ ಕೊಟ್ಟಿದ್ದಳು.

"ನಿಮಗೆ ಇದನ್ನು ತಯಾರಿಸಲು ಕೂಡಾ ತಿಳಿದಿದೆಯೇ ?" ಎಂದು ಅವನು ನಸುನಗುತ್ತ ಹೇಳಿ ಮುಂದಿಟ್ಟ ಪೂರಿಯನ್ನು ತೆಗೆದುಕೊಂಡಿದ್ದನು.

"ತಿಳಿಯದೇನು ? ಅಡುಗೆ, ತಿಂಡಿ ಮಾಡಲು ತಿಳಿದಿರುವುದು ಭಾರಿ ಒಂದು ಮಹಾವಿಶೇಷವೇ ?" ಎಂದಿದ್ದಳಾಕೆ.

"ಅಲ್ಲ, ನೀವು ಎಮ್. ಎ. ಓದುವವರು."

"ಓದುವವರು, ಮನೆಕೆಲಸ ತಿಳಿಯದವರೆಂದು ನಿಮ್ಮ ಅಭಿಪ್ರಾಯ."

"ಹಾಗೇನಿಲ್ಲ. ಅತ್ತಿಗೆ ಮಾಡಿದ ಅಡುಗೆ ಉಂಡಿರುವೆನು. ತಯಾರಿಸಿದ ತಿಂಡಿ ತಿಂದಿರುವೆನು. ಅವರನ್ನು ನೀವು ಮೀರಿಸುವಂತಿದೆ."

"ಏನೋ ತಿನ್ನುವವರ ಪುಣ್ಯ."
ಎಂದು ಅವಳು ನುಡಿದಾಗ ಇಬ್ಬರೂ ಜತೆಯಲ್ಲಿ ನಕ್ಕಿದ್ದರು. "ನೀವು ತೆಗೆದುಕೊಳ್ಳಿ" ಸುನಿಲ್ ಒತ್ತಾಯಪಡಿಸಿದುದಕ್ಕೆ ಒಂದು ಕಪ್ ಕಾಫಿ ಕೆಟಲ್‌ನಿಂದ ಅವಳು ತೆಗೆದುಕೊಂಡಿದ್ದಳು.

ಅವಳು ಕಾಫಿ ಕುಡಿಯುತ್ತಿದ್ದಾಗ ಸುನಿಲ್‌ನು, "ನನಗೆ ಇನ್ನೊಂದುತಿಂಗಳಲ್ಲಿ ಪ್ರಮೋಶ್‌ನ್ ಆಗುವ ಸಂಭವವಿದೆ. ಹಾಗೆಯೇ ದಿಲ್ಲಿಗೆ ವರ್ಗವಾಗಲೂ ಬಹುದು." ಎಂದು ಹೇಳಿದ್ದನು.

"ಭಾರೀ ಸಂತೋಷದ ಸಮಾಚಾರ"

"ಸಂತೋಷ ನಿಜ. ಆದರೆ ದೂರ ಹೋಗುಬೇಕೆಂಬ ಚಿಂತೆ"

"ಚಿಂತೆ ಏನು ?"

"ಬಂಧುಗಳಿಂದ, ಅಣ್ಣನಿಂದ ದೂರ ಹೋಗಬೇಕು. ಆದರೆ ಜೀವನ ಸಂಗಾತಿಯೋರ್ವಳು ಜತೆಯಲ್ಲಿದ್ದರೆ ಆಗದೆ? ಎಂಬ ಯೋಚನೆ ಬರುತ್ತದೆ."

ಸುನಿಲ್ ಬಿಚ್ಚುಮನಸ್ಸಿನಿಂದ ನುಡಿದಾಗ, ನಯನಳ ಮೊಗ ಕೆಂಪೇರಿತು.

ಉತ್ತರ ತಕ್ಷಣ ಈಯಲಿಲ್ಲ. "ಅದು ಒಳ್ಳೆಯ ಯೋಚನೆ." ಎಂದಳಾಕೆ ತಡೆದು.

ಅಷ್ಟರಲ್ಲಿ ಕಾಲ್‌ಬೆಲ್ ಸದ್ದು ಮಾಡಿತು. ಬಾಗಿಲು ತೆರೆದಾಗ, ವಿನಯ ಮತ್ತು ಅನಿಲ್ ಬಂದಿದ್ದರು.

ನಯನ ಸುನಿಲ್ ಹೀಗೆ ನುಡಿದವನು ಅಣ್ಣ ಅತ್ತಿಗೆಯರೊಡನೆ ಈ ಪ್ರಸ್ತಾಪ ಎತ್ತುವನೆಂದು ಯೋಚಿಸಿದ್ದಳು. ಆದರೆ ಅವನು ಅವರೊಡನೆ ಯಾವ ವಿಷಯವನ್ನು ಹೇಳಲಿಲ್ಲ. ಕೇವಲ ತನಗೆ ದಿಲ್ಲಿಗೆ ವರ್ಗವಾಗುವ ಸಂಭವವಿದೆ ಎಂದು ಹೇಳಿದ್ದನು.

ಅವನೆಂದಂತೆ ಸುನಿಲ್‌ಗೆ ಒಂದುತಿಂಗಳಲ್ಲಿ ಪ್ರಮೋಶನ್ ದೊರಕಿತ್ತು. ವರ್ಗವೂ ಆಗಿತ್ತು, ಆದರೆ ಸುನಿಲ್ ಜೀವನಸಂಗಾತಿಯನ್ನು ಜತೆಯಲ್ಲಿ ಕರೆದೊಯ್ಯುವ ಯೋಜನೆಯನ್ನು ಕಾರ್ಯಗತಗೊಳಿಸಲಿಲ್ಲ. ಏಕಾಕಿಯಾಗಿಯೇ ತೆರಳಿದ್ದನು. ನಯನಳಿಗೆ ನಿರಾಶೆಯಾಗಿತ್ತು. ಸ್ವಾಭಿಮಾನಕ್ಕೆ ಕೊಂಚ ಧಕ್ಕೆಯಾಗಿತ್ತು. ಆದರೆ ಅವಳ ತನ ಹೃದಯ

---

ಕತೆಗಾರ್ತಿ ;

**ಶ್ರೀಮತಿ ಆನಂದಿ ಸದಾಶಿವರಾವ್**

---

ದನ್ನು ಸೆರೆಯಲ್ಲಿ ಸಿಕ್ಕಿಸಿಕೊಂಡಿರಲಿಲ್ಲ. ಅದರಿಂದ ಹಿಂದಿನಂತೆ ನೆಮ್ಮದಿಯಾಗಿ ಬಾಳ್ವೆ ಸಾಗಿಸಿದ್ದಳು.

ಎರಡು ವರ್ಷಗಳ ಬಳಿಕ ಪುನಹ ಸುನಿಲ್‌ನ ಭೇಟಿಯಾಗಬಹುದು. ಆತುರ, ನಿರೀಕ್ಷಣೆ ಬೇಡ ವೆಂದರೂ ಮನದಲ್ಲಿ ಇಣುಕತೊಡಗಿದುವು.

ಪತ್ರಿಕೆಯಲ್ಲಿ ಚಿತ್ರವು ಇರಲೇ ಇಲ್ಲ. ದೀಪಾವಳೀ ರಜೆಗೆ ಎಷ್ಟು ದಿವಸಗಳಿವೆ ಎಂದು ಮನಸ್ಸು ಲೆಕ್ಕ ಹಾಕತೊಡ ಗಿತು.

ದಿವಸಗಳು ಒಂದರ ಮೇಲೆ ಒಂದು ಸಾಗಿ ಹೋದವು. ರಜೆ ದೊರೆಯಿತು. ನಾಲ್ಕು ದಿವಸಗಳು. ರಜೆ ಸಿಗುವ ಸಂಜೆಯೇ ಟ್ರೈನ್ ಹಿಡಿದು ಅಕ್ಕನ ಲ್ಲಿಗೆ ಹೊರಡುವ ಸಿದ್ಧತೆ ನಡೆಸಿದ್ದಳು ನಯನಾ. ವಿದ್ಯಾರ್ಥಿನಿಯರಲ್ಲಿ ಅನೇಕರಲ್ಲಿ ಊರಿಗೆ ಹೊರಟು ಹೋಗುವವರು.

ವಿದ್ಯಾರ್ಥಿನಿಲಯ ಸಂಜೆ ಬರಿದಾಗಿ ಕಾಣು ತಿತ್ತು. ರೂಮಿಗೆ ಬಂದು ಸಿದ್ಧಪಡಿಸಿಟ್ಟ ಸೂಟ್ ಕೇಸನ್ನು ನೋಡಿದಳು ನಯನ. ರೂಮಿನಲ್ಲಿ ಮಂಜುಳಾ ಹಾಸುಗೆ ಬಿಡಿಸಿ ಮಲಗಿದ್ದಳು.

“ಈ ಹೊತ್ತಿನಲ್ಲಿ ಏಕೆ ಮಲಗಿದ್ದಿರಿ?”

ಮಂಜುಳೆಯ ಬಳಿ ಹೋಗಿ ವಿಚಾರಿಸಿದಳು,

“ಕೊಂಚ ಚಳಿಯಾಗುತ್ತಿದೆ”

ಅವಳ ಹಣೆಯ ಮೇಲೆ ಕೈಯಿಟ್ಟಾಗ ಬಿಸಿ ಏರಿ ದುದು ತಿಳಿಯಿತು.

“ಜ್ವರವಿದೆ. ನೋಡಿದಿರಾ?”

“ಇಲ್ಲ.”

ಥರ್ಮಾಮಿಟರ್ ತೆಗೆದು ನಯನ ಗೆಳತಿಯ ಜ್ವರ ನೋಡಿದಳು. ೧೦೨° F ಯಿಂದ ಮೇಲೆ ಇತ್ತು.

‘ಮೆಟ್ರನ್‌ಗೆ ತಿಳಿಸಿ ಬರ್ತೇನೆ’ ಎಂದು ನಯನ ಹೋದಳು. ಮೇಟ್ರನ್ ಆ ದಿನ ಸಂಜೆ ಬಂಧುಗಳಲ್ಲಿ ಹೋಗಿರುವರು ಎಂದು ತಿಳಿಯಿತು. ರಾತ್ರಿ ಬರ ಬಹುದು ಎಂದುಕೊಂಡಳು ನಯನ. ಆದರೆ ಸಂಜೆಯ ಟ್ರೈನಿಗೆ ಹೋಗಲು ಸಾಧ್ಯವಿಲ್ಲ. ಹತ್ತಿರದ ರೂಮಿ ನಲ್ಲಿರುವವರೆಲ್ಲಾ ಹೊರಟು ಹೋಗಿದ್ದರು.

ಆರುತಾಸಿನ ರೈಲಿಗೆ ಹೊಗಲು ವೇಳೆ ಮೀರಿ ಹೋಗಿತ್ತು.

ಮಂಜುಳಾ, ‘ಗಾಬರಿ ಏನಿಲ್ಲ, ನೀವು ಹೋಗಿ’ ಎಂದಳು. ನಯನಾ, “ಹೂಂ” ಎಂದು ಹೇಳಿದಳು. ಮಾರುದಿನ ಬೆಳಗಿನ ಟ್ರೈನಿಗೆ ಹೋದರಾಯಿತು. ಎಂದು ನಿರ್ಧರಿಸಿದಳು. ಮಂಜುಳೆಗೆ ಡಾಕ್ಟರರಲ್ಲಿಂದ ಔಷಧಿ ತರಿಸಿ ಕೊಡುವ ಏರ್ಪಾಟು ಮಾಡಿದಳು.

ಹಾಸ್ಟೆಲ್ಲಿನ ಲೇಡಿ ಡಾಕ್ಟರ್ ಬಂದು ಪರೀಕ್ಷಿಸಿದರು. ಜ್ವರಕ್ಕಾಗಿ ಔಷಧಿ ಇತ್ತರು.

ರಾತ್ರಿ ಇಡೀ ಮಂಜುಳಾ ಕನವರಿಸುತಿದ್ದಳು. ಮೇಟ್ರನ್ ಬರಲಿಲ್ಲ. ನಯನಳೇ ಗೆಳತಿಯ ಬಳಿ ಇದ್ದಳು. ಮರುದಿನ ಮುಂಜಾವೆ ಜ್ವರ ಕಡಿಮೆಯಾ ಗುವ ಚಿಹ್ನೆ ಕಾಣಿಸಲಿಲ್ಲ.

ನಯನಳಿಗೆ ಏನುಮಾಡುವುದೆಂದು ತಿಳಿಯಲಿಲ್ಲ.

ಗೆಳತಿಯ ಬಗ್ಗೆ ಡಾಕ್ಟರರಿಗೆ ತಿಳಿಸಿ ಯೋಗ್ಯ ಔಷಧೋಪಚಾರದ, ವ್ಯವಸ್ಥೆಯ ಹೊಣೆಗಾರಿಕೆ ಇವಳ ಮೇಲೆ ಇತ್ತು.

ಮಂಜುಳಾ ಆಗೊಮ್ಮೆ ಈಗೊಮ್ಮೆ, “ನೀವು ಹೋಗಿ, ನಿಮ್ಮರಜೆ ಎಲ್ಲಾ ನನ್ನಿಂದಾಗಿ ಹಾಳಾಯಿತು” ಎನ್ನುತ್ತಿದ್ದಳು.

“ನೀವು ಸುಮ್ಮಗೆ ಮಲಗಿವಿಶ್ರಾಂತಿ ತೆಗೆದು ಕೊಳ್ಳಿ” ಎಂದು ನಯನಾ ಅವಳನ್ನು ಸಮಾಧಾನ ಪಡಿಸುತಿದ್ದಳು. ಮಂಜುಳಾ, “ನನ್ನ ಅಣ್ಣನಿಗೆ ಒಂದು ತಂತಿ ಕೊಡಿ. ಇಂದು ಸಂಜೆ ಬರಬಹುದು” ಎಂದು ವಿಳಾಸ ಸೂಚಿಸಿದಳು.

ನಯನ ಹಾಗೇ ಆಗಲಿ ಎಂದು ಅದಕ್ಕೆ ವ್ಯವಸ್ಥೆ ಮಾಡಿದಳು. ವಿಳಾಸದಿಂದ, ಮಂಜುಳೆಯ ಅಣ್ಣ ಡಾ. ಹರಿಕೃಷ್ಣ ಎಂದು ತಿಳಿಯಿತು.

“ನಿಮ್ಮ ಅಣ್ಣನ ಪರಿಚಯ ಭಾಗ್ಯ ನನಗೆ ಇದೆ. ಒಳ್ಳೆ ಪ್ರಖ್ಯಾತಿಗೆ ಬರುತ್ತಿರುವರೆಂದು ಒಮ್ಮೆ ಹೇಳಿ ದ್ದರು” ಎಂದು ನಯನ ಮಂಜುಳೆಯೊಡನೆ ಹೇಳಲು “ಹೌದು ನನ್ನ ಅಣ್ಣನಿಗೆ ಪರಿಚಿತರು ಬೇಕಷ್ಟು ಜನ ಇದ್ದಾರೆ. ಆದರೆ ಅವನು ಇನ್ನೂ ಏಕಾಕಿಯಾಗಿಯೇ ಇದ್ದಾನೆ” ಎಂದಳು.

ಬೆಳಗಿನ ರೈಲೂ ತಪ್ಪಿಹೋಯಿತು. ಮಧ್ಯಾಹ್ನ ಏಕೋ ಅಂದು, ನಯನಳಿಗೆ ಊಟ ಸರಿ ಹೊಚ್ಚಲಿಲ್ಲ. ದಲಿಲ್ಲ. ಅದು ಮಿದುಳಿಗೆ ಸಂಬಂಧಿಸಿದ ಜ್ವರವೋ ಎಂಬ ಸಂದೇಹ ಬಂತು.

ನಯನ ತನ್ನ ತಂಗಿಯನ್ನು ಒಂದು ದಿವಸ ಜಾಗ ರೂಕತೆಯಿಂದ ನೋಡಿಕೊಂಡಳೆಂದು ಅವಳಿಗೆ ಕೃತ ಜ್ಞತೆ ಸೂಚಿಸಲು,

“ಗೆಳತಿಯ ಕಷ್ಟದಲ್ಲಿ ಸಹಾಯ ನೀಡದೆ ಇರು ವುದೆ? ಅದಕ್ಕಾಗಿ ಧನ್ಯವಾದಗಳು ಬೇಡ” ಎಂದು ನಯನ ನುಡಿದಳು ಉತ್ತರವಾಗಿ.

‘ಡಾಕ್ಟರರು ನಾಲ್ಕು ತಾಸಿಗೆ ಬರುವರೆಂದಿರುವರು’ ಎಂದು ನಯನ ಹೇಳಿ ಔಷಧಿ ಚೀಟಿ ಎಲ್ಲಾ ತೋರಿ ಸಿದಳು.

ಮಂಜುಳೆಯ ಜ್ವರ ಏರುತ್ತಾ ಹೋಗುತ್ತಿತ್ತು.



“ಚಿಂತೆ ಏನು?”

ಅಕ್ಕನ ಮನೆಗೆ ಇಷ್ಟರೊಳಗೆ ತಲಪಬೇಕಿತ್ತು ಎಂಬ ಯೋಚನೆ ಆಗಾಗ್ಗೆ ಬರುತಿತ್ತು.

ಮಂಜುಳೆಯು ಮಲಗಿದ್ದಲ್ಲಿಗೆ ಸಮೀಪವೇ ಒಂದು ಕುರ್ಚಿಯಲ್ಲಿ ನಯನ ಮಧ್ಯಾಹ್ನ ಕುಳಿತು ಒಂದು ಪುಸ್ತಕ ಓದಲು ಕೈಗೆತ್ತಿಕೊಂಡಳು.

ಆಗ ಕೆಳಗಿನಿಂದ ಕಾರಿನ ಹಾರ್ನು ಕೇಳಿಸಿತು. ನೋಡಲು ಅಪರಿಚಿತ ಯುವಕನೋರ್ವನು ಕಾರಿ ನಿಂದ ಇಳಿದನು.

ನಯನಳೇ ಆಗುಂತಕನನ್ನು ಇದಿರ್ಗೊಂಡು ಮಂಜುಳೆಯ ಅಣ್ಣನೆಂದು ತಿಳಿದಾಗ, ರೂಮಿಗೆ ಕರೆದುಕೊಂಡು ಬಂದಳು.

ಮಂಜುಳೆಗೆ ಅಣ್ಣನನ್ನು ನೋಡಿ ತುಂಬಾ ಸಂತೋ ಷವೆನಿಸಿತು. ಡಾ. ಹರಿಕೃಷ್ಣ ತನ್ನ ತಂಗಿಯ ಸ್ಥಿತಿ ಇಷ್ಟೊಂದು ಗಂಭೀರವಾಗಿದೆಯೆಂದು ನಿರೀಕ್ಷಿಸಿ

ತಿಳಿಸಿದ ಸಮಯಕ್ಕೆ ಡಾಕ್ಟರರು ಬಂದರು. ಮಂಜುಳೆಯನ್ನು ಆಸ್ಪತ್ರೆಗೆ ಸೇರಿಸುವುದು ಉತ್ತಮ ಎಂದು ಅವರು ಅಭಿಪ್ರಾಯವಿತ್ತರು. ಮಂಜುಳೆಯ ಅಣ್ಣನೂ ಅದನ್ನೇ ಅನುಮೋದಿಸಿದನು.

ಮಂಜುಳೆಯನ್ನು ಆಸ್ಪತ್ರೆಯ ವಿಶೇಷ ವಾರ್ಡಿಗೆ ಸೇರಿಸಿ ಅಲ್ಲಿ ಯೋಗ್ಯ ವೈದ್ಯಕೀಯ ಚಿಕಿತ್ಸೆ ದೊರಕು ವಂತೆ ಏರ್ಪಾಡು ಮಾಡಿ ಮುಗಿಸಿದಾಗ ನಯನಳಿಗೆ ತನ್ನ ಪ್ರಯಾಣದ ನೆನಪಾಯಿತು. ಸಂಜೆ ನಾಲ್ಕು ತಾಸಿನ ಬಳಿಕ, ಗೆಳತಿಯ ಅನಾರೋಗ್ಯ, ಡಾಕ್ಟರರ, ನರ್ಸುಗಳ ಆಗಮನ. ಆಸ್ಪತ್ರೆಯಲ್ಲಿ ಕಾದು ಕುಳಿ- ತುಕೊಳ್ಳುವಾಗ, ಎಲ್ಲಾ ಅವಳ ಯೋಚನೆ ಗೆಳತಿಯ ಮೇಲೆ ಕೇಂದ್ರೀಕೃತವಾಗಿತ್ತು. ಪ್ರಜ್ಞಾಶೂನ್ಯಳಾ ದಂತಿದ್ದ ಮಂಜುಳೆಯ ಬಗ್ಗೆ ತೀರಾ ಕಳವಳಗೊಂಡ ನಯನಳಿಗೆ, ಅಲ್ಲಿಂದ ಹೊರಡಲು ಕಾಲೇ ಬಂದಿರಲಿಲ್ಲ

ಗೆಳತಿಗೆ ಬೇಕಾದ ನೆರವು ನೀಡಲು ಅವಳು ಹಿಂದೆ ಉಳಿದಳು.

ಗಡಿಯಾರ ನೋಡಿದಾಗ ಆ ದಿನದ ಟ್ರೈನ್ ಹೊರಟು ಹೋಗಿಯಾಗಿತ್ತು. ಒಂದು ಕ್ಷಣ ಅವಳ ಆಯಾಸದಿಂದ ಕಳೆಗುಂದಿದ ಮುಖ ನಿಸ್ತೇಜವಾಯಿತು. ಡಾ. ಹರಿಕೃಷ್ಣನು, ತಂಗಿಯನ್ನು ವಿರಮಿಸುವಂತೆ ಹೇಳಿ ಅಲ್ಲಿಯೇ ಇದ್ದವನು ನಯನಳ ಆತುರತೆಯನ್ನು ಗಮನಿಸಿದನು.

"ಏನು ನಿಮಗೆ ಹೋಗಬೇಕಿತ್ತೆ, ಗಡಿಯಾರ ನೋಡಿದಿರಿ" ಎಂದನು.

"ಇಲ್ಲ ಇಲ್ಲ."

"ಸಂಕೋಚ ಪಡಬೇಡಿ."

"ದೀಪಾವಳಿಗೆ ಅಕ್ಕ ಬರಹೇಳಿದ್ದಳು. ನಾಳೆ ಹಬ್ಬ. ಇನ್ನು ಹೋಗಲು ಸಾಧ್ಯವಿಲ್ಲ ಟ್ರೈನಿನ ವೇಳೆ ಮೀರಿ ಹೋಯಿತು."

"ನಮಗಾಗಿ ಭಾರಿ ಶ್ರಮಪಟ್ಟಿರುವಿರಿ. ಅಕ್ಕನಲ್ಲಿಗೆ ಹಬ್ಬಕ್ಕೆ ಹೋಗಲಾಗಲಿಲ್ಲ. ನಿಮಗೆ ಏನಾದರೂ ಸಹಾಯ ಮಾಡಬೇಕೆಂದಿದ್ದರೆ ಹೇಳಿ. ನಾಳೆ ಅಲ್ಲಿಗೆ ಹೋಗುವ ಏರ್ಪಾಡು ಮಾಡಲು ಸಾಧ್ಯವಿದ್ದರೆ ಹೇಳಿ ಪ್ರಯತ್ನಿಸುವಾ" ಎಂದು ಸಹಾಯ ನೀಡಲು ಮುಂದೆ ಬಂದನು.

"ಬೇಡ ಇನ್ನು ಸಾಧ್ಯವಿಲ್ಲ."

"ಅವರಿಗೆ ನೀವು ಬರುವುದಿಲ್ಲ ಎಂದು ತಿಳಿಸಿದಿರಾ?"

"ಇಲ್ಲ"

"ತಿಳಿಸಬೇಡವೆ?"

"ಆಲೋಚನೆ ಬರಲೇ ಇಲ್ಲ."

"ನಿಮ್ಮನ್ನು ನಿರೀಕ್ಷಿಸಿ ಕಾದು ಕುಳಿತಿರಬಹುದು ಫೋನಿನ ಮುಖಾಂತರ ಯಾವಾಗ ಬರುವಿರಿ ಎಂದು ತಿಳಿಸಿ."

"ಸರಿ" ಎಂದಾಗ ಕೊಂಚ ಉತ್ಸಾಹ ತಳೆದು ಎದ್ದಳು. ಅಲ್ಲೇ ಇದ್ದ ಆಫೀಸಿನಲ್ಲಿ ಅಕ್ಕನ ಮನೆಯ ಫೋನಿನ ನಂಬರಿಗೆ ಟ್ರಂಕ್‌ಕಾಲ್ ಬುಕ್ ಮಾಡಿದಳು.

ನಿರೀಕ್ಷಿಸಿದುದಕ್ಕಿಂತ ಬೇಗನೆ ಕಾಲ್ ದೊರೆಯಿತು. ಫೋನ ಎತ್ತಿದವರು ಆ ಕಡೆಯಿಂದ ಸುನಿಲ್

'ಹಲೋ ಹಲೋ, ಎಂಬ ದನಿಗೆ

"ನಯನ, ನಾನು ನಯನ ಮಾತನಾಡುವುದು" ಎಂದುತ್ತರವಿತ್ತಳು.

'ಹಲೋ, ನಾನು ಸುನೀಲ್'

"ಅಕ್ಕ ಇಲ್ಲವೆ ?"

"ಇಲ್ಲ"

"ನನಗೆ ಇಂದೂ ಕೂಡ ಹೊರಟು ಬರಲಾಗಲಿಲ್ಲ."

"ಆದೇನು ಬರಲು ಮನಸ್ಸಿಲ್ಲವೆ?"

ನಯನಗಳಿಗೆ ಅವನ ಮಾತು ಕೇಳಿ ಒಂದು ಕ್ಷಣ ಏನುತ್ತರವೀಯುವುದೆಂದು ತಿಳಿಯಲಿಲ್ಲ. ಬಳಿಯಲ್ಲಿ ನಿಂತಿದ್ದ ಹರಿಕೃಷ್ಣನು, ನಯನಳ ಚಡಪಡಿಕೆ ಕಂಡು ಕನಿಕರವಾಯಿತು.

"ಭಯ ಪಡಬೇಡಿ" ಎಂದು ಮೆಲ್ಲನೆ ಉಸುರಿದ. ನಯನ, "ಇಲ್ಲಿ ನನ್ನ ರೂಮಿನಲ್ಲಿದ್ದ ಗೆಳತಿಗೆ ಅನಾರೋಗ್ಯವಿದ್ದುದರಿಂದ ಬರಲಾಗಲಿಲ್ಲ. ಇಂದು ಆಸ್ಪತ್ರೆಯಿಂದಲೇ ಫೋನ ಮಾಡುತ್ತಿದ್ದೇನೆ." ಎಂದಳು.

"ಅಲ್ಲಿ ಬೇರೆಯಾರೂ ಇರಲಿಲ್ಲವೆ ?"

"ಇರಲಿಲ್ಲ ಮೆಟ್ರನ್ ಕೂಡಾ ಇರಲಿಲ್ಲ."

"ನಿಮ್ಮನ್ನು ನಿನ್ನೆಯಿಂದ ಕಾದು ಕುಳಿತಿದ್ದೆವು. ಬರುವುದಿಲ್ಲ ಎಂದು ಒಂದು ತಂತಿಯನ್ನಾದರೂ ಕಳಿಸಬಾರದಿತ್ತೇ" ಅಪಾದನೆ ಅವನ ಸ್ವರದಲ್ಲಿ ಇತ್ತು.

"ಹೌದು ಕಳಿಸಬಹುದಿತ್ತು. ಗಡಿಬಿಡಿಯಲ್ಲಿ ಮರೆತು ಹೋಯಿತು."

"ಬಹುಶಃ ಅಲ್ಲಿ ಇರುವುದು ಹೆಚ್ಚು ಪ್ರಾಮುಖ್ಯವಾಗಿರಬೇಕು. ಎಂದು ಬರುವಿರಿ?" ನಿರಾಸಕ್ತನಾಗಿ ಸುನಿಲ್ ಹೇಳಿದಂತೆ ಕೇಳಿಸಿತು.

"ನಾಳೆ"

"ನಾಳೆ, ನಾವದು ನಾವೆಲ್ಲಾ ಊರಿಗೆ ಹೋಗುವ ಆಲೋಚನೆಯಲ್ಲಿರುವೆವು."

"ಹಾಗಾದರೆ ನನ್ನಿಂಥ ನಿಮ್ಮ ಕಾರ್ಯಕ್ರಮಕ್ಕೆ ತಡೆ ಹಾಕಿಕೊಳ್ಳಬೇಡಿ. ಇನ್ನು ಎರಡು ದಿವಸಗಳ ರಜೆ ಇರುವುದು."

ಸುನೀಲ್‌ನಿಂದ ಏನು ಪ್ರತಿಕ್ರಿಯೆ ಬರುವುದು ಎಂದಾಕೆ ನೋಡಿದಳು. ಅವನು ಏನೂ ಹೇಳಲಿಲ್ಲ.

'ಹೂಂ,' ಎಂದನಷ್ಟೆ.

'ಅಕ್ಕನಿಗೆ ಹೇಳಿ ಅನಾನುಕೂಲವಾಯಿತು,

'ಹೇಳುತ್ತೇನೆ. ಮತ್ತೇನು? ಎಂದು ಪ್ರಶ್ನಿಸಿದನು

'ಏನಿಲ್ಲ ರಜೆ ಇಲ್ಲೇ ಕಳೆಯುತ್ತೇನೆ.'

'ಸರಿ' ಎಂದನಾತ.

ಅಷ್ಟರಲ್ಲಿ ಫೋನ್‌ನ ಸಮಯಾವಧಿ ಮುಗಿದಿತ್ತು. ಫೋನ್ ಕೆಳಗಿರಿಸುವಾಗ, ನಯನಳ ಹೃದಯ ನಿರಾಶೆಯಿಂದ ತುಂಬಿತ್ತು. ಮುಖ ಬಿಳುಪೇರಿತ್ತು. ನಿರೀಕ್ಷಿಸಿದ ಪ್ರತಿಕ್ರಿಯೆ ಸುನಿಲ್‌ನಿಂದ ದೊರೆಯುವ ಬದಲು, ಕೇವಲ ಅಸಹನೆ, ನಿರಾಸಕ್ತಿ ಅವನ ಮಾತಿನ ಭಾವದಲ್ಲಿ ದನಿಯಲ್ಲಿ ಇದ್ದುವು. ಬಳಿಯಲ್ಲಿದ್ದ ಕುರ್ಚಿಯಲ್ಲಿ ಮೆಲ್ಲನೆ ಕುಳಿತಳು. ಹರಿಕೃಷ್ಣನು ಬಳಿಯಲ್ಲಿ ಇದ್ದುದು ಮರೆತು ಹೋಗಿತ್ತು.





"ಏನು ನಿಮಗೆ ಹೋಗಬೇಕಿತ್ತೆ? ಗಡಿಯಾರ ನೋಡಿದಿರಿ"

ಅವನಿಗೆ ನೆಯುನೆಳ ನಿರಾಶೆ, ನೋವಿನ ಅರಿವಾಯಿತು. "ನಮ್ಮಿಂದಾಗಿ ವ್ಯಥಾ ತೊಂದರೆಗೆ ಒಳಗಾದಿರಿ ಏನು ಮಾಡಬೇಕು ಇಂದೇ ಪ್ರಯಾಣಕ್ಕೆ ಏರಪಾಡು ಮಾಡಬೇಕೆ? ನಾನು ಸಹಾಯ ನೀಡಲು ಸಿದ್ಧನಿರುವೆ." ಕಳಕಳಿಯಿಂದ ಹೇಳಿದನಾತ.

ನಿರಾಶೆಯಿಂದ ತಳಮಳಗೊಂಡಿದ್ದ ಅವಳ ಹೃದಯ ಹರಿಕೃಷ್ಣನ ಸಹಾಯ ನೀಡುವ ಉತ್ಸುಕವಾಣಿಯಿಂದ ಕೊಂಚ ಶಾಂತವಾಯಿತು.

"ಪ್ರಯಾಣ ಕೈಕೊಳ್ಳುವುದಿಲ್ಲ ಇತರರ ಕಷ್ಟ ಆಕಸ್ಮಿಕವಾಗಿ ಒದಗುವ ಸಂದಿಗ್ಧ ಪರಿಸ್ಥಿತಿಯನ್ನು ಅರಿಯುವ ಮನಸ್ಸಿಲ್ಲದವರೊಡನೆ ಕಾಲ ಕಳೆಯುವುದು ಕಷ್ಟ ಎಂದು ತಿಳಿಯಿತು." ಎಂದಾಕೆ ನಸುನಗುತ್ತಾ ಎದ್ದಳು.

ಆಗ ಮಂಜುಳೆಯ ಕೊಠಡಿಯ ನರ್ಸು ಬಂದು, "ನಿಮ್ಮ ತಂಗಿಗೆ ಎಚ್ಚರವಾಗಿದೆ ನಿಮ್ಮನ್ನು ಕೇಳುತ್ತಿರುವಳು" ಎಂದು ಹರಿಕೃಷ್ಣನಿಗೆ ಹೇಳಲು, ಇಬ್ಬರೂ ವಾರ್ಡಿನತ್ತ ಹೋದರು.

ಹರಿಕೃಷ್ಣನು, ಜತೆಯಲ್ಲಿ ನಡೆಯುತ್ತಿದ್ದವಳ ನಯನಗಳ ಕಡೆ ನೋಡುತ್ತಾ, "ಮಂಜುಳೆಯು ಬೇಗನೇ ಸೌಖ್ಯ ಹೊಂದಲಿ. ಆದರೆ ಈಗ ನಿಮ್ಮೊಡನೆ ಪರಿಚಯವಾದುದು ಒಳ್ಳೆಯದಾಯಿತು. ಮುಂದೆ ನಮ್ಮನ್ನು ಮರೆತು ಬಿಡಬೇಡಿ' ಎಂದು ಸ್ನೇಹಪೂರ್ವಕವಾಗಿ ಹೇಳಲು,

"ಇಲ್ಲ" ಎಂದವಳು ಮುಗುಳ್ನಗುತ್ತಾ ಉತ್ತರವಿತ್ತಳು.




ಈ ನೆಲಕ್ಕೇ ಮಯ್ಯ ಮೇಲೆಂಥ ಬಯಕೆಯೋ!
ಜಿಗಿದ ಕಡೆಗೆಲ್ಲ, ಬಲೆ ಎಸೆಯುವುದು. ಎಳೆಯುವುದು,
ನೆಳೆದಪ್ಪಿ, ಮುತ್ತಿಕ್ಕಿ, ಮೈ ನುಗ್ಗು ಮಾಡುವುದು
ಉಸಿರು ಸಿಕ್ಕೊಡ್ಡಾಡಿಪನ್ನಾದ ಏನೋ

ಏನ್ನ ಬಯಕೆಗೆ ಪನ್ನ ಮೈಯಿಂದಲೇ ರಕ್ತ
ಮಾಂಸವುಣಿಸಿ ರೂಪುಕೊಟ್ಟು ಮುಗಿಲಿನ ತುಂಬ
ಗಾಳ ಆಲೆದಲ್ಲೆಲ್ಲ ಅಲೆಯ ಪಕ್ಷಿನೆಂಬ
ಏಪರೇಶಿ. ಈ ನೆಲದ ಬಲೆಯಿಂದ ನಾ ಮುಕ್ತ

ನಾಗಲಾರೆ. ಇಲ್ಲ ಹೋಗಲಾರೆ. ಮೂಢ
ಬಯಕೆಹೊತ್ತಿರುವ ಮೈ ನೆಲದ ಬಯಕೆಗೆ ತುತ್ತು.
ಸರಿ. ನೆಲಕ್ಕೆ ಮತ್ತೆ ಕೆಕ್ಕೆ ಬೀಳಂತ ಮುತ್ತು
ಕೊಟ್ಟು ಮುಚ್ ಮುಕ್ಕುವದು ಹತ್ತಿಕ್ಕಿದರು ಕೂಡ

ಚಿಮ್ಮಿ ರೆಪ್ಪೆಯ ತುದಿಗೆ ಕುಳಿತ ಕಂಬನಿಯಲ್ಲು
ಹುಡುಕುವದು, ಕಾಣುವದು ಕಾಮನಬಿಲ್ಲು

—ಚಂದ್ರಶೇಖರ ಪಾಟೀಲ



# ಮುಕ್ತೇಶ್ವರನ ಸಾನ್ನಿಧ್ಯದಲ್ಲಿ

ಕತೆಗಾರ :

**ಪಂಚಾಕ್ಷರಿ ಹಿರೇಮಠ**

"ನಿನಗೆ ಹೇಗೆನ್ನಿಸಿತು- ಈ ಊರು- ಈ ಚೌಡಯ್ಯದಾನಪುರ?"

"ತುಂಬಾ ಚೆನ್ನಾಗಿದೆ ಅಂದ್ರೆ... ನಿಸರ್ಗವಂತೂ ತುಂಬುಮನಸ್ಸಿನಿಂದ ಸೂರೆಗೈದಿದೆ ತನ್ನ ಚೆಲುವನ್ನು."

"ಓ! ಈ ತುಂಗಭದ್ರೆ! ಗಾನ ಮಾಧುರ್ಯೆ ಇವಳು. ಈ ನದಿಗೂ ಒಂದು ವಿಶೇಷತೆ ಇದೆ ಇಲ್ಲಿ. ನಿನಗೆ ಗೊತ್ತ ವಿಮಲಾ?"

"ಅದೇನು ಅಂತೀರಾ?"

"ಇಲ್ಲಿ ತುಂಗಭದ್ರೆ ಪೂರ್ವ ಪಶ್ಚಿಮ ವಾಹಿನಿಯಾಗಿರುವುದೇ ಆ ವಿಶೇಷ. ಅದೂ ಅಲ್ಲದೆ ಇಲ್ಲಿಯ ದಂಡೆಯ ಗುಂಟ ಹಬ್ಬಿರುವ ಗುಡಿ ಗುಂಡಾರಗಳು, ಐತಿಹಾಸಿಕ ಅವಶೇಷಗಳು. ಇವುಗಳಿಂದಾಗಿ ಮತ್ತೊಂದು ವಿಧದಲ್ಲಿ ಈ ನದಿ ಹೆಸರು ಪಡೆದಿದೆ. ಅಲ್ಲಿ 'ಕಾಣಿಸುತ್ತಿದೆಯಲ್ಲ ಆ ಮಂದಿರ ನೋಡಲಿಲ್ಲವೆ ನೀನು?"

"ಇಲ್ಲವಲ್ಲ. ಬರುವಾಗ ಇಲ್ಲಿಯ ನಿಜ ಸಿಂಹಾಸನದ ಪರಂಪರೆಯ ಈ ಊರಿನ ಪರಮ ಗುರುಗಳಾದ ಶಿವದೇವ ಒಡೆಯರ ಅವರು ಹೇಳಿದ ಮಂದಿರವೇ ಇರಬೇಕು ಅಲ್ಲವೇ?"

"ನಿಜ ವಿಮಲಾ; ಬಾ ಇತ್ತ ನಡೆದು ಹೋಗೋಣ. ಈ ಮಾವಿನ ತೋಪು ನೋಡುತ್ತಿದ್ದಿಯಾ ಓ? ಎನೆಂಥ ಚೆಲುವು? ಎನೆಂಥ ಸೊಗವು ತುಂಬಿದೆ ಇಲ್ಲಿ! ಅಂತೇ ಹಾಡಿರಬೇಕು ಮಹಾಕವಿ ಪಂಪ ಕನ್ನಡ ನೆಲದ ಸೊಬಗನ್ನು ಕುರಿತು— 'ಈ ನಾಡಿನಲ್ಲಿ ಮನುಷ್ಯನಾಗಿ ಹುಟ್ಟಿ ಸೌಂದರ್ಯಾನುಭೂತಿ ಅನುಭವಿಸಲು ಸಾಧ್ಯವಾಗದೆ ಹೋದರೆ ಕೋಗಿಲೆಯಾಗಿಯಾದರೂ ಹುಟ್ಟಬೇಕು..." ಎಂದು. ಮಾವಿನ ಗಿಡಗಳಲ್ಲಿ ಕುಳಿತು ಕುಕಿಲ್ವ ಈ ಕೋಗಿಲೆ... ಏನು ಧನ್ಯತೆ ಈ ಪಕ್ಷಿಯದು..."

"ಓ! ಇಲ್ಲಿ ನೋಡಿ ಈ ಗೋಪುರದಲ್ಲಿ ಕೆತ್ತಿದ ಕೆತ್ತನೆಯ ಕುಸುರುಗೆಲಸ. ಈ ಮೂರ್ತಿಗಳಿಗೆ, ಈ ಸೌಂದರ್ಯದ ಅಪರಾವತಾರವಾಗಿರುವ ಈ ಮೂರ್ತಿಗಳಿಗೆ ಅಕಾಸ್ಮಾತ್ತಾಗಿ ಜೀವ ತುಂಬಿಬಂದರೆ... ಚೆಲುವೆ ಮೈದಳೆದು ಅಡ್ಡಾಡಿದ ಹಾಗಾಗಬಹುದು... ಅಲ್ಲವೇ? ಕಲ್ಲಿನಲ್ಲಿ ಸೃಷ್ಟಿಗೊಂಡಿರುವ ಈ ಚೆಲ್ವ ಸೃಷ್ಟಿ...ಓ!... ಏನೆಂಥ ವೈಭವ..."

"ನನ್ನ ಚೆಲ್ವಚೆನ್ನೆ... ನೀನು ಕಲ್ಪನೆಯ ಅಧಿದೇವತೆ ಓ! ನಿನ್ನ ಊಹೆ ನಿಜವಾದರೆ... ಕಲ್ಪಿಸಿದರೇನೇ ಮೈಯಲ್ಲಿ ರೋಮಾಂಚನವಾಗುತ್ತದೆ. ಹೋಗಲಿ ಬಿಡು ಆ 'ರೆ' ರಾಜ್ಯದ ಮಾತೇಕೆ!... ಇಲ್ಲಿ ಇತ್ತ ನೋಡು ವಿಮಲಾ ಎರಡು ಮೂರು ಕಲ್ಲುಗಳನ್ನು ನಿಲ್ಲಿಸಿದ್ದಾರೆ ನೋಡಿಲ್ಲಿ..."

"ಅದು ಸರಿ. ಆದರೆ ನೀವು ಈ ಚೌಡದಾನಪುರಕ್ಕೆ ಚೌಡಯ್ಯದಾನಪುರವೆಂದು ಹೇಳಿದಿರಲ್ಲ. ಶರಣ ಚೌಡಯ್ಯನಿಗೇನಾದರೂ ಈ ಹೆಸರು ಸಂಬಂಧವಿದೆಯೆ?"

"ನಿಜ ವಿಮಲಾ. ನಿನ್ನ ಊಹೆ ಸರಿಯಾಗಿದೆ. ಪರಮ ತೇಜಸ್ವಿಯಾದ, ಅನುಭಾವಿಯಾದ ಶಿವಶರಣ ಅಂಬಿಗರ ಚೌಡಯ್ಯನು ತನ್ನ ಗುರುವಾದ ನಿಜ ಸಿಂಹಾಸನದ ಮಹಾಸ್ವಾಮಿಗಳ ಪಾದಕ್ಕೆ ಈ ಗ್ರಾಮವನ್ನು ಕಾಣಿಕೆಯಾಗಿ ಅರ್ಪಿಸಿದನಂತೆ, ಅಲ್ಲಿಂದ ಇದಕ್ಕೆ ಚೌಡಯ್ಯದಾನಪುರವೆಂದು ಅಂದಿನಿಂದ ಹೆಸರು ಬಂತು. ಈ ಮುಕ್ತೇಶ್ವರ ದೇವಾಲಯದ ಕೆಳಗಡೆ ನದಿಯ ನೀರ ಪಕ್ಕದಲ್ಲಿಯೇ ಶರಣ ಚೌಡಯ್ಯನ ಸಮಾಧಿಯಿದೆ."

"ಈ ಕಲ್ಲಿನ ವಿಷಯವೇನು ಹಾಗಾದರೆ?"

"ಈ ಎರಡೂ ಕಲ್ಲುಗಳು ಶಾಸನಗಳು. ಈ ಶಾಸನಗಳು ಚೌಡಯ್ಯದಾನಪುರದ ಐತಿಹಾಸಿಕ ಹಾಗೂ ಪೌರಾಣಿಕ ಹಿರಿಮೆಯನ್ನು ಸಾರಿ ಸಾರಿ ಹೇಳುತ್ತವೆ."

"ಇಲ್ಲಿ ನೋಡಿ ಈ ಕಲ್ಲು... ಅಲ್ಲ... ಇದು ಬರೀ ಕಲ್ಲಲ್ಲ, ನಡುವೆ ಲಿಂಗ ಅತ್ತಿತ್ತ ಬಸವಣ್ಣ. ಕೆಳಗಡೆ ಒಂದೆಡೆ ಕುದುರೆಗಳ ಮೇಲೆ ಸವಾರರು, ಶಸ್ತ್ರ ಸಜ್ಜಿತ ವೀರ ಸೈನಿಕರು. ಇನ್ನೊಂದೆಡೆ ಗೋವುಗಳ ಗುಂಪು ಮತ್ತೊಂದೆಡೆ ಮತ್ತೊಂದು ವೀರರ ಗುಂಪು. ಓ! ಇದೆಲ್ಲ ಏನು ಅಂತೀರಾ?"

"ವಿಮಲಾ, ಯಾವುದನ್ನು ಕುರಿತು ನಿನಗೆ ತಿಳಿಸಬೇಕೆಂದಿದ್ದೆನೋ ಅದೇ ವಿಷಯವನ್ನೇ ನೀನು ಕೇಳಿದುದನ್ನು ಕಂಡು ನನಗೆ ತುಂಬಾ ಸಂತೋಷವಾಗಿದೆ. ನೀನೇ ಹೇಳಿದ ಹಾಗೆ ಇದು ಬರೀ ಕಲ್ಲಲ್ಲ...ಇದು ನಮ್ಮ ದೇಶದ ಅಭಿಮಾನಿ, ಸ್ವಾಭಿಮಾನಿಗಳ ಹಾಗೂ ವೀರಶ್ರೀಗಳ ಸ್ಮಾರಕ...ಇದು ವೀರಗಲ್ಲು ವಿಮಲಾ ಇದು ವೀರಗಲ್ಲು."

"ಇನ್ನೂ ಬಿಡಿಸಿ ಹೇಳಬಾರದೆ...ವಿವರ ವಿವರವಾಗಿ...ಅಂದ್ರೆ..."

"ಏನು ಉತ್ಸುಕತೆ ಅಂತೀಯಾ ನಿನಗೆ... ಹಾಗಾದರೆ ಕೊಂಚ ಇತ್ತ ಬಾ...ಅದಕ್ಕೆ ಆ ವಿವರಕ್ಕೆ ಬಹುಮಾನಕೊಡಬೇಕಾಗುತ್ತದೆ...ಏನಂತೀಯಾ..."

"ಆಗಲಿ. ನೀವು ಏನು ಕೇಳ್ತೀರೋ ಅದು... ಆದೀತೇ... ಈಗಲಾದರೂ... ಯಾವಾಗಲೂ... ಓ! ಎಷ್ಟಾದರೂ ರಸಿಕ ಚಕ್ರಿಗಳಲ್ಲವೇ ನೀವು...ಹೇಳಿ ಹೇಳಿ ಮತ್ತೆ ಕಲ್ಲು ಅಲ್ಲ ವೀರಗಲ್ಲಿನ ಆ ವಿಷಯ"

"ನನ್ನ ಚೇತನದ ಸ್ವಾಮಿನಿಯಾದ ನೀನು ಕೇಳಿದಾಗ ಇಲ್ಲವೆನ್ನಲಾದೀತೆ! ದೇವಿಯವರು ಲಾಲಿಸಬೇಕು... ಈ ವೀರಗಲ್ಲು...ಒಂದೆಡೆ ಇರುವ ಈ ಸೈನಿಕರು, ಅವರು ಮುಂದುಕೊಂಡೊಯ್ಯುತ್ತಿರುವ ಗೋವುಗಳು, ಆ ಕಾಲದಲ್ಲಿ ಒಂದು ರಾಜ್ಯಕ್ಕೆ ಅಪಮಾನ, ಬಲಹೀನ ರಾಜ್ಯವೆನಿಸಬೇಕಾದರೆ ಆ ರಾಜ್ಯದ ಗೋವುಗಳನ್ನು ಹೊಡೆದುಕೊಂಡು ಹೋಗುತ್ತಿತ್ತು, ಬೇರೆ ರಾಜ್ಯದ ವೀರರ ಗುಂಪು. ಆಗ ಈ ದೇಶದ ವೀರರ ಗುಂಪು ಆ ವೀರರ ಗುಂಪನ್ನು ಎದುರಿಸಿ ತಮ್ಮ ನಾಡಿನ ಗೋವುಗಳನ್ನು ಬಿಡಿಸಿಕೊಂಡು ಬರುತ್ತದೆ. ಆ ಸಮಯದಲ್ಲಿ ಎರಡೂ ಗುಂಪಿನ ನಡುವೆ ಯುದ್ಧ ಸಂಭವಿಸಿ, ಅಲ್ಲಿ ಹುತಾತ್ಮರಾದವರ ಗೌರವಾರ್ಥವಾಗಿ ಅಂದು ಶತಮಾನಗಳ ಹಿಂದೆ ಈ ವೀರಗಲ್ಲುಗಳನ್ನು ಹೀಗೆ ನಿಲ್ಲಿಸಲಾಗುತ್ತಿತ್ತು. ಹೀಗೆ ನಡೆದು ಬಂತು ಈ ವೀರಗಲ್ಲುಗಳ ಪರಂಪರೆ. ಈ ದೇಶದ ವೀರರುಗಳ ಕಥೆಯನ್ನೇ ಹೊತ್ತು ನಿಂತಿವೆ ಈ ವೀರಗಲ್ಲುಗಳು. ಇಂತಹ ಕಲ್ಲುಗಳು ಈ ದೇಶದಾದ್ಯಂತವೂ ಹರಡಿವೆ ನೂರಾರು, ಸಾವಿರಾರು ಸಂಖ್ಯೆಯಲ್ಲಿ..."

"ಈ ನಾಡು ವೀರಶ್ರೀಗಳ ನೆಲೆವೀಡು. ಹಾಗಾದರೆ ನೀವು ಇನ್ನೂ ಇಂತಹ ವೀರಗಲ್ಲುಗಳ ಬಗ್ಗೆ ಹೇಳುತ್ತ ಹೋಗಿ. ಈ ಪವಿತ್ರವಾದ ಸ್ಥಳದಲ್ಲಿ ಹಾಯಾಗಿರುವ ಮಧುರವಾಗಿರುವ ಈ ವಾತಾವರಣದಲ್ಲಿ ನಮ್ಮ ಪೂರ್ವಜರ ಬಗ್ಗೆ ತಿಳಿಯಬೇಕು ಎನ್ನಿಸುತ್ತಿದೆ..."

"ಓ! ಹಾಗೆ ಏನು? ಕೇಳು ಹಾಗಾದರೆ...ಕೇಳ್ತಾನೇ? ..."

"ಹ್ಞೂಂ! ಅಂದ್ರೆ. ಹೇಳಿ ಮತ್ತೆ.."

"ಕೇಳ್ತಾ ಇದ್ವಿಯಾ...ವಿಮಲಾ ಕೇಳ್ತಾ ಇದ್ದಿಯಾ.."

"ಹೇಳುವುದಕ್ಕಿಂತ ಮುನ್ನವೇ ಕೇಳ್ತಾ ಇದ್ದಿಯಾ.." ಎಂದರೆ ಏನು ಕೇಳುವುದು. ನೀವು ಯಾವಾಗಲೂ ಚೇಷ್ಟೆ.. ಥೂ ಹೋಗಿ ಅಂದ್ರೆ..ಹೇಳಿ

ಪುತ್ರ.. ಈಗಲಾದರೂ ಹೇಳಿ..ನನ್ನದಮ್ಮಯ್ಯ ಹೇಳಿ ಅಂದ್ರೆ.."

"ಸರಿ. ಇನ್ನು ದೇವಿಯವರು ಆಲಿಸಬೇಕು, ಈ ದೇಶದಭವ್ಯ ಪರಂಪರೆಯನ್ನು..ಕ್ರಿಸ್ತಶಕ ಏಳು ನೂರರಲ್ಲಿ ಕೆತ್ತಿದ ಬಾದಾಮಿಯ ಶಿಲಾಶಾಸನ ಇದು.

ಸಾಧುಗೆ ಸಾಧು ಮಾಧುರ್ಯಂಗೆ ಮಾಧುರ್ಯಂ
ಬಾಧಿಪ್ಪಕಲಿಗೆ ಕಲಿಯುಗ ವಿಪರೀತನ್
ಮಾಧವ ನೀತನ್ ಪೆಱನಲ್ಲ...

ಈ ಶಾಸನ ಕಪ್ಪೆ ಅರಭಟ್ಟನನ್ನು ಕುರಿತಾದ್ದು. ಈ ಕಪ್ಪೆ ಅರಭಟ್ಟನು 'ಶಿಷ್ಟಜನ ಪ್ರಿಯನ್, ಕಷ್ಟ ಜನ ವರ್ಜಿತನ್, ಕಲಿಯುಗ ವಿಪರೀತನ್' ಎಂದು ವರ್ಣಿತನಾಗಿದ್ದಾನೆ. ಒಳ್ಳೆಯವರಿಗೆ ಇವನು ಒಳ್ಳೆಯವನು. ಸರಸಜ್ಜನರಿಗೆ ಸಜ್ಜನನು. ಕುಹಕಿಗಳಿಗೆ ಭೀಕರನು. ತನ್ನ ಅತುಲ ಸಾಮರ್ಥ್ಯದಿಂದ ಅವರನ್ನು ಪಾತಾಳಕ್ಕೆ ತುಳಿಯುವ ಬಲವುಳ್ಳವನು. ಇದು ಕನ್ನಡನಾಡಿನ ಒಬ್ಬನ ವೀರ ವ್ಯಕ್ತಿತ್ವವನ್ನು ಕುರಿತು ಹೇಳಿದ ಮಾತಾದರೂ ಇದು ಸಮಸ್ತ ಕನ್ನಡ ಜನಾಂಗದ ಸ್ವಭಾವವನ್ನು ಕುರಿತು ಹೇಳಿದ ಹಾಗೆ. ಅಷ್ಟು ವ್ಯಾಪಕ ಶಕ್ತಿಯಿದೆ ಈ ಶಾಸನದ ಮಾತುಗಳಿಗೆ. ವಿಮಲಾ, ಕನ್ನಡಿಗರು ಸ್ವಭಾವತಃ ವೀರರು, ದಯ ಧರ್ಮಪರಾಯಣರು. ಇಲ್ಲಿಯ ನಿಸರ್ಗವೂ ಅದಕ್ಕೆ ಪೂರಕವಾಗಿದೆಯನ್ನಬೇಕು. ಕನ್ನಡ ನಾಡಿನ ಕಡಲ ರೌದ್ರಗೀತವನ್ನು ಅಪಾರವಾಗಿ ಹಬ್ಬಿರುವ ಬೆಟ್ಟಗಳ ಮಹಾ ಗಂಭೀರ ಮೌನವನ್ನು ಅನುಭವಿಸಿದರೆ, ಕಾಡಿನ ಭೀಕರ ಗರ್ಜನೆಯನ್ನು ಕೇಳಿದರೆ ಮತ್ತೆ ಅಲ್ಲಲ್ಲಿ ಸೂರೆಗೊಂಡಿರುವ ಮಲೆನಾಡಿನ ಚೆಲುವನ್ನು ಆಸ್ವಾದಿಸಿದರೆ, ಬಯಲ ಸೀಮೆಯ ಸಿರಿಸಂಪದವನ್ನು ಕಂಡರೆ ನಿಸರ್ಗದ ಹಿನ್ನೆಲೆಯಲ್ಲಿ ಸೌಮ್ಯ-ಭೀಕರ ವಾತಾವರಣದ ಅರಿವು ನಮಗಾಗದಿರದು. ಅದೇ ಸೌಮ್ಯತೆ, ಅದೇ ಗಂಭೀರ ಭೀಕರತೆ ಈ ನಾಡಿನ ನಾಡವರ ಸ್ವಭಾವದಲ್ಲಿಯೂ ಬೆಳೆದುಕೊಂಡು ಬಂದಿದೆ. ಆದುದರಿಂದ ಕನ್ನಡಿಗರು ಸ್ವಭಾವತಃ ಶೂರರು. ಆದರೆ ಕೆಡುಕರಲ್ಲ. ಅದ್ದರಿಂದಲೇ 'ಸ್ವಭಾವೋದ್ಭಟಾಹ ಕರ್ಣಾಟಾಹ' ಕನ್ನಡಿಗರು ಸ್ವಭಾವತಃ ಶೂರರು, ಕಲಿಗಳು ಎನ್ನುವ ಮಾತು ಪರಂಪರೋಕ್ತಿಯಾಗಿ ಬೆಳೆದು ಬರಲು ಸಾಧ್ಯವಾಯಿತು.

ಇದಕ್ಕೆ ಸಾಕ್ಷಿ ಬೇಕೆ? ಇದೋ ಕನ್ನಡದ ಭವ್ಯ ಇತಿಹಾಸ. ಅನೇಕ ಬಗೆಯ ಅಳಿವುಗಳನ್ನು ಅನುಭವಿಸಿ ನೂತನ ಸೃಷ್ಟಿಯನ್ನು ಕಂಡ ನಮ್ಮ ದೇಶದ ಚರಿತ್ರೆಯಲ್ಲಿ ಬರುವ ವೀರಪುರುಷರ ಆತ್ಮಶ್ರೀ ಇದಕ್ಕೆ ಸಾಕ್ಷಿ ನುಡಿಯುತ್ತಿದೆ. ಉಹ್ಞೂಂ! ಅಷ್ಟೇ ಅಲ್ಲ ವಿಮಲಾ ಈ ನೆಲದ ಕಣಕಣವೂ ಕಲ್ಲು, ಮಣ್ಣು, ಗಿಡಗಂಟಿ ಎಲ್ಲವೂ ಸಾರಿಸಾರಿ ಹೇಳುತ್ತಿವೆ- ಈ ನಾಡಿನ ಭವ್ಯಪರಂಪರೆಯನ್ನು, ಈ ನೆಲದ ತುಂಬ ಅಪರಂಪಾರ ಹಬ್ಬಿರುವ ಹಸಿರೂ ನೆಲದ ಉಸಿರಾಗಿ ನಿಂತು ಈ ನೆಲದ ಹಿರಿಮೆಯನ್ನು ಉಸುರುತ್ತದೆ. ಈ ಪವಿತ್ರ ನಾಡಿನ ಉದ್ದಗಲಕ್ಕೂ ವೀರ ಕಹಳೆಯನ್ನು ಮೊಳಗಿಸುವ ವೀರಗಲ್ಲುಗಳ ಆತ್ಮಧ್ವನಿಯನ್ನು ಕೇಳಿ ನಾವು ಎಚ್ಚರಗೊಳ್ಳುತ್ತೇವೆ—ನಿದ್ದೆಯಿಂದ ಎಚ್ಚೆತ್ತ ಸಿಂಹದಂತೆ ಒಂದು ಸಲ ಗರ್ಜಿಸುತ್ತೇವೆ. ಆ ಗರ್ಜನೆ ನಿರಂತರ ಉಳಿಯುವಂತೆ ಮಾಡುವುದೇ ಇತಿಹಾಸದ ಹಿರಿಮೆ. ಕೇಳುತ್ತಿದ್ದೀಯಾ ವಿಮಲಾ... ಇನ್ನೂ ಹೇಳಲೇ...ಕೇಳು...ಮಂಡ್ಯ ತಾಲೂಕಿನ ಆತಕೂರು ಗ್ರಾಮದಲ್ಲಿ ಕ್ರಿ. ಶ. ೯೪೯ ರ ಕಾಲ. ಅದು ರಾಷ್ಟ್ರಕೂಟ ಮೂರನೆಯ ಕೃಷ್ಣನ ಆಳ್ವಿಕೆ. ಅಮೋಘ ವರ್ಷನ ಮಾಂಡಲಿಕನಾದ ಕಚ್ಚೆಗ ಕನ್ನಡದೇವನು ಚೋಳ ರಾಜಾದಿತ್ಯನ ಮೇಲೆ ಏರಿಹೋದಾಗ ಬೂತುಗನೂ ಹಾಗೂ ಆತನ ನಿಷ್ಠಾವಂತ ಚಾಕರನೂ ಆದ ಮನಾಲರನೂ ಕೂಡಿ ಮಹಾ ಪರಾಕ್ರಮದಿಂದ ಹೋರಾಡಿದರು. ಅವರ ಶೌರ್ಯ, ಸಾಹಸಗಳನ್ನು ಕಂಡು ಮೆಚ್ಚಿದ ಕನ್ನರನು ಈರ್ವರನ್ನೂ ಸನ್ಮಾನಿಸಿದ ನಲ್ಲದೆ ಮಲಾರನು ಬೇಡಿದ ಬಹು ವಿಶ್ವಾಸದ ನಾಯಿ ಕಾಳಿಯನ್ನು ಕೊಡುತ್ತಾನೆ. ಮುಂದೆ ಆ ಶೂರ ನಾಯಿ ಕಾಡಿನ ದೊಡ್ಡ ಹಂದಿಯೊಂದಿಗೆ ಹೋರಾಟ ವೆಸಗಿ ಹಂದಿಯನ್ನು ಕೊಂದು ತಾನೂ ಸಾಯುತ್ತದೆ. ಮಲಾರ ಆ ನಾಯಿಯ ಅಪಾರವಾದ ಶೌರ್ಯಕ್ಕೆ ತಕ್ಕ ಹಾಗೆ ವೀರಗಲ್ಲನ್ನು ನಟ್ಟು ಅವರ ಸ್ಮಾರಕ ಚಿರಗೊಳಿಸುತ್ತಾನೆ. ಈ ವೀರಗಲ್ಲು, ಕನ್ನಡಿಗರು ವೀರತ್ವಕ್ಕೆ ಗೌರವ ಕೊಡುತ್ತಿದ್ದರೆಂಬುದಷ್ಟೇ ಅಲ್ಲ, ಅವರಲ್ಲಿ ಪ್ರಾಣಿ ದಯೆ ಹಾಗೂ ತಮ್ಮನ್ನು ನಂಬಿದವರ ಬಗ್ಗೆ ಅವರಲ್ಲಿ ಪ್ರೀತಿ ವಾತ್ಸಲ್ಯ ಎಂಥ ಉದಾತ್ತವಾದುದು ಇತ್ತೆಂಬುದನ್ನೂ ಈ ವೀರಗಲ್ಲು ಸಾರುತ್ತವೆ. ಮಲಾರನು ಆ ವೀರಗಲ್ಲಿಗೆ ಸದಾ ಪೂಜೆ ನಡೆಯಬೇಕೆಂದು 'ಇರ್ಕ್ಕಂಡುಗ ಮಣ್ಣಂ' ಭೂಮಿಯನ್ನೂ ಬರ್ಪ ಗೊರವನನ್ನು ಪೂಜೆಗಾಗಿ ವ್ಯವಸ್ಥೆಗೊಳಿಸಿದ. ಗೊರವನು ಪೂಜೆ ಮಾಡದೆ ಉಂಡರೆ

## ಕವಿಯ ಸೂಚನೆ



ಕತ್ತಿಗಿಂತಲೂ ಹರಿತ ಲೇಖನಿಯ ಧಾರೆ
ಎಂಬುದನು ಹೇಳಬೇಕೇ ಹತ್ತು ಸಾರೆ?
ಈ ಮಾತು ಸುಳ್ಳಲ್ಲ! ನೋಡಿ ಕೃತಿಗಿಳಿಸಿ
ಕಾರಕೂನರನೆಲ್ಲ ಯುದ್ಧಕ್ಕೆ ಕಳಿಸಿ.

—ದಿನಕರ ದೇಸಾಯಿ

ಅವನು ಮಹಾಪಾತಕಿ ಎಂದು ಶಾಸನ ಬರೆಯಿಸುತ್ತಾನೆ. ಏನು ಆ ಮನಾಲರನ ಪ್ರಾಣ ದಯೆ ಓ! ಲೋಕವೇ ಅಚ್ಚರಿಪಡುವಂತಹದು...

ವಿಮುಲಾ...ವೀರಶ್ರೀಗಳ ಕರ್ಮಭೂಮಿಯಾದ ಈ ಸಿರಿಗನ್ನಡದ ಕುವರಿಯಾದ ಓ! ವೀರರಮಣಿ ನನ್ನ ವಿಮಲಾ...ಕೇಳು ಅದು-೧೧೭೭ರ ಕಾಲ ಕನ್ನಡ ಚರಿತ್ರೆಯಲ್ಲಿ ಅಂಥ ವೀರ ಇನ್ನೊಬ್ಬನಿಲ್ಲ. ವೈರಿಗಳಾದ ಸಾವುಣರ ಎಳೆಂಟುನೂರು ಮದವೇರಿದ ಆನೆಗಳು, ಎಳೆಂಟುಸಾವಿರ ಕುದುರೆಗಳು, ಎಳೆಂಟು ಲಕ್ಷ ಕಾಲಾಳುಗಳು ಒಂದೇ ಬಾರಿಗೆ ಸಮುದ್ರೋಪಾದಿಯಲ್ಲಿ ನುಗ್ಗಿ ಬಂದು ಮುತ್ತಿದರೂ ಇದಾವುದಕ್ಕೂ ಮಣಿಯದೆ, ಒಂದೇ ಒಂದು ಆನೆಯನ್ನೇರಿ ಹೋರಾಡಿದ ಏಕೈಕ ವೀರ ಹೊಯ್ಸಳ ವೀರಬಲ್ಲಾಳ. ಇತಿಹಾಸದಲ್ಲಿ ಆತನಂಥ ಪರಾಕ್ರಮಿ ಆತನೇ. ಆತ ಅರಿಭಯಂಕರ ...ನನ್ನ ವಿಮಲಾ ಇನ್ನೊಂದು ಶಾಸನ: ಇದು ಆರನೆಯ ಚಾಳುಕ್ಯ ವಿಕ್ರಮಾದಿತ್ಯನ ಕಾಲಕ್ಕೆ ಸಂಬಂಧಪಟ್ಟದು. ಇದು ಶಿವಮೊಗ್ಗ ಜಿಲ್ಲೆಯ ಸೊರಬ ತಾಲೂಕಿನ ಕೊಡಗೋಡು ಗ್ರಾಮದ ವೀರಗಲ್ಲು. ಸೊಕ್ಕಿನಿಂದ ಎರಿಬಂದ ವೈರಿಗಳನ್ನು ತಮ್ಮ ಅತುಲ ಭುಜ ಪ್ರತಾಪದಿಂದ ಪ್ರೇರಿತರಾಗಿ ಬಿಚ್ಚುಗತ್ತಿಯನ್ನು ಹಿಡಿದು ಆಹವ ಭೂಮಿಯಲ್ಲಿ ಮುನ್ನುಗ್ಗಿ ವೈರಿಗಳನ್ನು ಕತ್ತರಿಸಿ ಚೆಲ್ಲಿ ಕಾದಿದರು ಎಂದು ಈ ವೀರಗಲ್ಲು ಸಾರುತ್ತಿದೆ. ಅಗ್ರಹಾರದಲ್ಲಿದ್ದ ಗೋವುಗಳನ್ನು ಹೊಡೆದುಕೊಂಡು ಹೋದ ವೈರಿಗಳನ್ನು ಸದೆಬಡಿಯಲು ಮಹಾ ಪರಾಕ್ರಮಿಯಾದ ಬಾವು ಗಾವುಂಡನ ಮಗಂದಿರು ದೇವಗಾವುಂಡ ಮಲ್ಲಗಾವುಂಡರು ಸಿದ್ಧರಾಗಿ ವೈರಿಗಳ ಮೇಲೆ ಎರಿ ಹೋಗುತ್ತಾರೆ. ವೈರಿಗಳ ಅಸಂಖ್ಯಾತ ಜನರನ್ನು ನೆಲಕ್ಕುರುಳಿಸಿ ಅವರೂ ಈ ಹೋರಾಟದಲ್ಲಿ ವೀರಸ್ವರ್ಗವನ್ನೈದುತ್ತದೆ. ಆಗ ಅವರು ತಮ್ಮ ಬಪ್ಪಗಾವುಂಡ ಸಿಂಹನಂತೆ ಮುನ್ನುಗ್ಗಿ ವೈರಿಗಳ ಕತೆ ಅಳಿದುಳಿದ ವೀರರನ್ನು ಮಣ್ಣುಮುಕ್ಕಿಸಿ ತನ್ನ ರಾಜ್ಯದ ಗೋವುಗಳನ್ನು ಹೊಡೆದು ತರುತ್ತಾನೆ. ಆಗ ಸಮಗ್ರ ರಾಜ್ಯವೇ ಆ ಮಹಾವೀರರನ್ನು ಕೊಂಡಾಡುತ್ತಾರೆ...ನನ್ನ ವಿಮಲಾ...ಈ ದೇಶದ ವೀರಕಥೆ ಇದು. ಆ ವೀರಕಥೆ ಹೇಳುವುದಕ್ಕಾಗಿ ವೀರಸ್ಮರಣೆ ಸದಾ ಜಾಗೃತಗೊಳಿಸುತ್ತಿರಲೆಂದೇ ಈ ವೀರಗಲ್ಲುಗಳು..."

"ಓ! ಎಂಥ ಅಪೂರ್ವ ದೇಶವಿದು...ಇದನ್ನೆಲ್ಲ ಕೇಳಿದ ನಾನು ಎಂದೂ ಕಾಣದ ಈ ನಾಡಿನ ಭವ್ಯ ಪರಂಪರೆಯನ್ನು ಇಂದು ಕಂಡಂತಾಯಿತು. ಒಂದೊಂದು ಕಲ್ಲಿಗೂ ಇಂಥ ಕಥೆಗಳಿರಬೇಕಾದರೆ..."




"ಈ ದೇಶವೇ ಅದ್ಭುತವಾಗಿದೆ ವಿಮಲಾ. ಇಲ್ಲಿಯ ಮಣ್ಣು—ಕಲ್ಲು, ಗಿಡ—ಗಂಟಿ, ಬೆಟ್ಟ—ಗುಡ್ಡ, ಕೋಟೆ—ಕೊತ್ತಲಗಳು-ಇವು ಎಲ್ಲವಕ್ಕೂ ಒಂದೊಂದು ಐತಿಹ್ಯ, ಒಂದೊಂದು ರೋಮಾಂಚನಕಾರಿ ಕಥೆ, ಹೃದಯವನ್ನೇ ಅಲುಗಾಡಿಸುವ ಘಟನೆಗಳ ಹಿನ್ನೆಲೆ ಇವೆ. ಈ ನೆಲದ ಮಣ್ಣು ಮಣ್ಣಲ್ಲ ವಿಮಲಾ, ಅದು ನಮ್ಮ ಹಣೆಯ ಜಯ ತಿಲಕ. ಈ ಪವಿತ್ರ ಜಲ, ಚೇತೋಹಾರಿಯಾಗಿರುವ ಈ ನಿಸರ್ಗ—ಎಲ್ಲವೂ ಈ ನಾಡಿನ ಪಾವಿತ್ರ್ಯತೆ ಪವಿತ್ರ ನೆಲವನ್ನು, ಚೆಲುವನ್ನೇ ಸಾರುತ್ತಿವೆ. ಈ ನಾಡಿನ ಜನರನ್ನು ಕುರಿತು ನೃಪತುಂಗ ತನ್ನ 'ಕವಿರಾಜ ಮಾರ್ಗ'ದಲ್ಲಿ ಹೇಳಿದಬಂದು ಮಾತು—

ಸುಭಟರ್ಕಳ್, ಕವಿಗಳ್
ಸುಪ್ರಭುಗಳ್, ಚೆಲ್ವರ್ಕಳ್, ಅಭಿಜನರ್ಕಳ್
ಗುಣಿಗಳ್, ಅಭಿಮಾನಿಗಳತ್ಯುಗ್ರರ್
ಗಭೀರ ಚಿತ್ತರ್ವಿವೇಕಿಗಳ್|

ಎಂಬುದನ್ನು ನೆನೆದಾಗಲೆಲ್ಲ ನನ್ನ ನಾಡಿನ ಜನರ ಬಗೆಗೆ ನನ್ನ ಮನ ಇನ್ನೂ ಮಂತ್ರಮುಗ್ಧವಾಗುತ್ತದೆ."

"ಪ್ರಕೃತಿಯ ಮಡಿಲಲ್ಲಿ, ಮುಕ್ತೇಶ್ವರನ ಸಾನ್ನಿಧ್ಯದಲ್ಲಿ ಈ ನಾಡಿನ ಭವ್ಯ ಪರಂಪರೆ ಅರಿತ ನನಗೆ ಏನಂಥ ಆನಂದವಾಗಿದೆ ಅಂತೀರಾ? ಓ! ಪುಳಕವಿಸ್ಮಿತಳಾಗಿದ್ದೇನೆ. ದೊರೆ: ನನ್ನ ಸ್ಥಿತಿ ಕೂಸು ಕಂಡ ಕನಸಿನಂತಾಗಿದೆ...."

"ಅದು ನಿನ್ನೊಬ್ಬಳ ಅನುಭವವಲ್ಲ ವಿಮಲಾ. ಅದು ನಮ್ಮೆಲ್ಲರ ಅನುಭವ. ನಿನಗೆ ಆನಂದವಾಗಿದೆ. ನನಗೆ ಈ ದೇಶದ ಈ ಪರಂಪರೆ, ಭವ್ಯ ಇತಿಹಾಸ ಅಂದಿನ ನಮ್ಮ ಪೂರ್ವಜರ ವೀರಶ್ರೀ —ಇದೆಲ್ಲ ಕೇವಲ ಗತ ವೈಭವವಾಗದೆ ಮತ್ತೆ ಆ ವೈಭವ ನಮ್ಮದಾಗಬೇಕು; ನಮ್ಮ ಇಂದಿನ ಬದುಕಿನಲ್ಲಿ ಆ ವೈಭವ ಒಂದುಗೊಳ್ಳಬೇಕು. ಆ ಕಾಲ ಬಂದೀತೆ? ವಿಮಲಾ. ಆ ಕಾಲ ಬರಬೇಕು ಎಂದು ನಾವೆಲ್ಲರೂ ಸಂಕಲ್ಪಿಸಬೇಕು...ಏಳು ಹೋಗೋಣ. ಏನು ಇದೇಂತಹ ಮಂತ್ರಮುಗ್ಧತೆ..."

"ಓ...ದೊರೆ...ನನ್ನ ಬದುಕೇ ಸಾರ್ಥಕಗೊಂಡಂತಾಗಿದೆ ಇಂದು."

"ನನಗೂ ಹಾಗೆಯನ್ನಿಸಿದೆ ವಿಮಲಾ. ಹೋಗೋಣವೇ ಇನ್ನು. ಅದೋ ನದಿಯಲ್ಲಿ ಸೂರ್ಯಾಸ್ತದ ಸಂಭ್ರಮ ನಡೆದಿದೆ. ಆ ಹೊಂಬಣ್ಣದ ಬೆಳಕು... ನಮ್ಮದೆಯ ಬೆಳಕಾಗಲಿ. ಇಲ್ಲಿಯ ಪವಿತ್ರತೆ ನಮ್ಮ ಬದುಕಿನಲ್ಲಿ ಒಂದಾಗಲಿ..."

# ಬೇಸರ

ಕತೆಗಾರ:
ಶಾಂತಿನಾಥ ದೇಸಾಯಿ

"ರಾಗೀ, ಹೋಗಿ ಬರುವೆ ಆಫೀಸಿಗೆ. ಸಂಜೆಗೆ ಬರುವಾಗ ಏನಾದರೂ ತರಬೇಕೇ?

"ಏನೂ ಬೇಡ...ಹಾಂ, ನಾಳೆ ಶನಿವಾರ. ನಾಳಿನ [illegible] ಶೋಕ್ಕೆ ಎರಡು ಟಿಕೇಟು ತಗೆದುಕೊಂಡು ಬನ್ನಿ—ಲಿಬರ್ಟಿಗೆ. ಬೂಟಪಾಲಿಶ್ ಬಹಳ ಒಳ್ಳೆಯ ಪಿಕ್ಚರಂತೆ."

"ನೋಡುವ—ಸಿಕ್ಕರೆ ತೆಗೆದುಕೊಂಡು ಬರುವೆ" ಎಂದು ನುಡಿದವನೆ ನಾರಾಯಣ ಫ್ಲ್ಯಾಟಿನ ಹೊರಗೆ ಕಾಲಿಟ್ಟ.

"ತರಲೇಬೇಕು ನೋಡಿರಿ—ಕೊನೆಗೆ ಅಪ್ಪರ್ ಸ್ಟಾಲಿನ ಟಿಕೇಟಾದರೂ—"

ರಾಗಿಣಿಯ ಧ್ವನಿಯು ವ್ಹರಾಂಡಾದಗುಂಟ ನಡೆದ ಅವಳ ಗಂಡನ ಬೂಟಿನ ಸಪ್ಪಳದಲ್ಲಡಗಿತು.

ಕೇಳಿಸಿತೋ ಇಲ್ಲೋ ಇವರಿಗೆ? ಅವರಿಗೇನು, ಆಫೀಸಿನಲ್ಲಿ ಕೆಲಸಮಾಡಿ, ಮಜಾ ಮಾಡಿ, ಸಂಜೆಗೆ ಉಸ್ಸೆಂದು ಬರುವರು. ಅವರು ಬರುವತನಕ ರಾಗಿಣಿಗೆ ಮಾತ್ರ ಇಲ್ಲಿ ತಲೆ ತುಂಬ ಬೇಸರ...ಬಂದ ಮೇಲೆ ಚಹ, ಚಹದೊಡನೆ ಹುಚ್ಚು ಚಿನ್ನಾಟ—ದಿನಾಲು ಅದೇ "ರಾಗೀ, ಉಪ್ಪಿಟ್ಟು ಬಹಳ ಚೆನ್ನಾಗಿದೆ, ಕ್ಲಾಸ್ ಅದಕ್ಕೆಂದು ಒಂದು ಕ್ಲಾಸ್ ಕಿಸ್...", ಅಥವಾ "ಇಂದು ಸಂಜೆಗೆ ಮಟನ್ ಇಸ್ಟೆಕಲ್ ಮಾಡಿ ಬಿಡು. ಒಂದು ಗಚ್ಚು ಫಸ್ಟ್ ಕ್ಲಾಸ್ ಊಟ ಮಾಡಿ, ಆ ಮೇಲೆ ಫರ್ಸ್ಟ್‌ಕ್ಲಾಸ್ [illegible]...ಹಂ,ಹಂ..." ಎಂದು ಕೆನ್ನೆಯ ಮೇಲೆ ತಪ್ಪಡಿಸುವದು...ರಾಗಿಣಿಯನ್ನು ಸಿನೇಮಾಕ್ಕೆ ಕರೆದು ಕೊಂಡು ಹೋಗಿ ಒಂದು ತಿಂಗಳ ಮೇಲಾಗಿದೆ...ಒಳ್ಳೆಯ ಮನುಷ್ಯರು. ಆದರೆ ರಾಗಿಣಿಗೆ ಇಲ್ಲಿ ಒಬ್ಬಳೇ ಮನೆಯಲ್ಲಿ ಕುಳಿತು ಎಷ್ಟು ಬೇಸರ ಎಂಬುವದು ಅವರಿಗೇನು ಗೊತ್ತು? ನೆರೆ ಮನೆಯ ಕಾಲಿನಿಯಂತೆ ಎಸ್. ಎಸ್. ಎಲ್. ಸಿ. ಆಗಿದ್ದರೆ ಅವಳೂ ಹೋಗಬಹುದಿತ್ತು ಆಫೀಸಿಗೆ. ಆದರೆ ಆ ಆಫೀಸಿನಲ್ಲಿಯ ತರುಣರ ಕೆಟ್ಟ ಕಣ್ಣುಗಳಿಗೆ ತುತ್ತಾಗಿ ಕೂಡ್ರುವದು ಸಾಧ್ಯವಿತ್ತೇ? ಅಥವಾ ಅದೂ ಒಂದು ರೀತಿಯ ಮಜವೇ? ಯಾರಿಗೆ ಗೊತ್ತು?

ಅಷ್ಟರಲ್ಲಿ ಎರಡು ಮಾಳಿಗೆ ಇಳಿದು ಕೆಳಗಿನ ರೋಡಿನ ಮೇಲೆ ಸಾಗಿದ್ದ ನಾರಾಯಣ ಎಂದಿನಂತೆ ಮೊಗವೆತ್ತಿ, ಕೈಅಲುಗಾಡಿಸಿ, ನಕ್ಕ. ರಾಗಿಣಿಯೂ ಮಂದಹಾಸ ಬೀರಿದಳು, ಗೋಜಿನಿಂದಲೇ ಒಳ್ಳೇದು ಎಂದಳು.

"ಹಲೊ, ಮಿಸ್ಟರ ಸಿಂಗ್, ಆಫೀಸಿಗೆ ಹೊರಟಿರಾ?" ಎಂದು ಮುಂದಿನ ಎರಡಂತಸ್ತಿನ 'ಮಯೂರ' ಹಾಟೇಲಿನ ಎರಡನೆಯ ಮಾಳಿಗೆಯ ಬಾಲ್ಕನಿಯಿಂದ ಯಾರೋ ಒಬ್ಬರು ನಾರಾಯಣನ ಹಿಂದೆಯೇ ಇದ್ದ ಒಬ್ಬ ದಾಡೀವಾಲಾ ವ್ಯಕ್ತಿಗೆ ಹಿಂದೀಯಲ್ಲಿ ಕೇಳಿದರು. ರಾಗಿಣಿಯ ಲಕ್ಷ್ಯ ಸಹಜವಾಗಿಯೇ ನಾರಾಯಣನನ್ನು ಬಿಟ್ಟು, ಆ ಎರಡು ವ್ಯಕ್ತಿಗಳತ್ತ ಹೋಯಿತು.

"ಜೀ ಹಾಂ! ನಿಮ್ಮ ಕೆಲಸ ಮುಗಿಯಿತಲ್ಲವೇ? ಊರಿಗೆ ಎಂದು ಹೊರಡೋದು?" ಮಿಸ್ಟರ್ ಸಿಂಗ್ ಹಾಟೇಲಿನ ವ್ಯಕ್ತಿಗೆ ಕೇಳಿದ.

"ಹಾಂ, ಕೆಲಸವಂತೂ ಮುಗಿದಿದೆ ರಿಜರ್ವೇಶನಾ ಸಿಗಬೇಕಲ್ಲ...ಇಂದು ಸಂಜೆ ಸಿಕ್ಕರೆ ಇಂದು ಇಲ್ಲದಿದ್ದರೆ ನಾಳೆ..."

"ಬರ್ರಿ ಆಫೀಸಿನ ಕಡೆ—ಸಮಯ ಸಿಕ್ಕರೆ"

"ಓ...ಕೇ..." ಎಂದು ತನ್ನ ನಗುಮುಖವನ್ನು ಹಾಟೇಲಿನ ಆ ಮಹಾಶಯನು ರಾಗಿಣಿಯತ್ತ ತಿರುಗಿಸಿದ, ಸಹಜವಾಗಿಯೇ ಎನ್ನುವಂತೆ ನಗೆಯನ್ನು ಇನ್ನಿಷ್ಟು ಅರಳಿಸಿದ.

ರಾಗಿಣಿಗೆ ಹೇಗೆ ಹೇಗೋ ಅನಿಸಿ, ಒಮ್ಮೆಲೆ ದೃಷ್ಟಿಯನ್ನು ರೋಡಿನ ಮೇಲೆ ಬೇಗ ಬೇಗ ಹೋಗುತ್ತಿ[illegible] ನಾರಾಯಣನ ಬೆನ್ನ ಮೇಲೆ ಹಾಯಾಗಿ ನೆಲಸಿದ[illegible] ಎರಡು ನಿಮಿಷಗಳಲ್ಲಿ, ಅವಳ ಕಣ್ಣಿಗೆ ಆಧಾರವಾಗಿದ್ದ ನಾರಾಯಣನ ಬೆನ್ನು (ಆ ಕೋಟು ಎಷ್ಟು ಹೊಲಸಾಗಿದೆ, ಮೊನ್ನೆಯೇ ಅವಳು ಬದಲಿಸಿರಿ ಎಂದಿದ್ದಳು) ಮಾಯವಾಯಿತು. ಕಣ್ಣು ಮರಳಿ ಮುಂದಿನ ಬಾಲ್ಕನಿಗೆ ಹೊರಳಿದವು—ಸ್ವಲ್ಪ ಸಿಡುಕಿನಿಂದ ಆ ಮಹಾಶಯನ ಕಣ್ಣು ಇನ್ನೂ ಅವಳಲ್ಲಿಯೇ ನಟ್ಟಿದ್ದವು, ಕುಚ್ಯಕ್ಕೆ ನಗೆ ಮಾತ್ರ ಮಾಯವಾಗಿತ್ತು. ಅವಳಿಗೆ ಗೊತ್ತಿಲ್ಲದಂತೆಯೇ ಅವಳ ಕೈಗಳು ಎದೆಯ ಮೇಲಿನ ಸೆರಗನ್ನು ಸರಿಪಡಿಸಿದವು.

ಇಷ್ಟೇಕೆ ತನ್ನನ್ನು ದುರುಗುಟ್ಟಿ ನೋಡುತ್ತಿದ್ದಾನೆ ಈ ಮಹಾನುಭಾವ? ಸ್ತ್ರೀಯೆಂದೊಡನೆ ಆಯೆಂದು ಬಾಯಿಬಿಡುವ ಹಸಿದ ಪ್ರಾಣಿಯೇ ಈತ? ಅಥವಾ ಕೆಲಸವಿಲ್ಲೆಂದು, ಸಮಯ ಕೊಲ್ಲಲೆಂದು, ನಿರರ್ಥಕವಾಗಿ ಹುಡುಗಾಟ ನಡೆಸಿದ್ದಾನೆಯೋ?—ಏನೇ ಇರಲಿ ಕಾಣಲು ಚೆನ್ನಾಗಿದ್ದಾನೆ: ಹರವಾದ ಎದೆ ದೊಡ್ಡ ದೊಡ್ಡ ಕಣ್ಣುಗಳು...ರಾಗಿಣಿ ಒಮ್ಮೆಲೆ ಕಿಡಕಿಯಿಂದ ಒಳಗೆ ತಿರುಗಿ, ಪಲ್ಲಂಗದ ಮೇಲೆ ಬಿದ್ದ ನಾರಾಯಣನ ಮಾಸಿದ ಅಂಗಿಯನ್ನೂ ಪೈಜಾಮನ್ನೂ ತೆಗೆದು ಗೂಟಕ್ಕೆ ಸಿಗಿಸಿದಳು. ಆಗ ಬಳಿಯ ಗೋಡೆಯ ಮೇಲೆ ತೂಗು ಹಾಕಿದ ನಾರಾಯಣನ ಫೋಟೋದ ಕಡೆಗೆ ಅವಳ ಲಕ್ಷ್ಯ ಹರಿಯಿತು. 'ನನ್ನ ಮುದ್ದು ರಾಗಿಣಿಗೆ' ಎಂದು ಅದರ ಹಿಂದೆ ಬರೆದಿದೆ

ಏರಿಬಂದು ಅವಳ ನೆನಪಿಗೆ ಬಂತು. ಲಗ್ನವಾದೊಡನೆ ಮುಂಬಯಿಯಲ್ಲಿ ಮನೆ ಸಿಗದೆ ದೂರ ದೂರವಿರಬೇಕಾಗಿತ್ತು—ಅವರು ಮುಂಬಯಿಯಲ್ಲಿ, ಅವಳು ಸಾತಾರೆಯಲ್ಲಿ. ಆಗ ಅವಳು ಒಂದು ಫೋಟೋ ಕಳಿಸಲು ಬರೆದಿದ್ದಳು. ಅದೇ ಫೋಟೋ ಇದು. ಆಗ ಕಾಣಲು ಎಷ್ಟು ಕೃಶರಾಗಿ ಚೆನ್ನಾಗಿದ್ದರು. ಈಗ...? ಅವಳ ಪ್ರಕೃತಿ ಮಾತ್ರ ಬಹಳ ಸುಧಾರಿಸಿದೆ ಎಂದು ಎಲ್ಲರೂ ಹೇಳುವರು. ಸುಧಾರಿಸದೆ ಏನು ಮಾಡೀತು? ಉಣ್ಣುವದು, ಕೂಡ್ರುವದು, ಉಣ್ಣುವದು ಮಲಗುವದು—ಮನೆಗೆಲಸ, ತಿರುಗಾಟ, ಚಿನ್ನಾಟ—ಒಂದಲ್ಲ, ಎರಡಲ್ಲ, ಮೂರಲ್ಲ, ನಾಲ್ಕು ವರ್ಷ! ಯಾವ ಚಿಂತೆ ಇಲ್ಲ ಆಪತ್ತಿಯ ಇಲ್ಲ-ಎಲ್ಲ ಸುಸೂತ್ರ... ಮಕ್ಕಳ ಕೊಂದರೆಯಂತೂ ಇಲ್ಲ. ರಾಗಿಣಿಗೆ ತಾನಾಗಿಯೇ ನಗೆ ಬಂತು. ಕೆಲವು ದಿನ ಅವರಿಗೆ ಗೊತ್ತಿಲ್ಲದಂತೆ ಆ

ಸಾಧನೆಯ ಉಪಯೋಗ ಮಾಡದೆ ಅವರನ್ನು ಫಸಾಯಿಸಿದರೆ ಹೇಗೆ? ಮುಂದೆ ಗರ್ಭಿಣಿಯಾದರೆ ಅವರಿಗೆ ಸಿಟ್ಟು ಬರದೆ ಬಿಟ್ಟೀತೆ? ಮೊದಲಿನಿಂದಲೂ 'ಪಂಚ-ವಾರ್ಷಿಕ ಯೋಜನೆ'ಯ ಪುರಸ್ಕರ್ತರು ಅವರು! ಇನ್ನೂ ಒಂದು ವರ್ಷ ಸುಮ್ಮನೆ ನೂಕಬೇಕು—ಸುಮ್ಮನೆ...ಒಂದು ವರ್ಷದಲ್ಲಿ ಒಂದು ದೊಡ್ಡ ಪ್ರೊಮೋಶನ್ ಸಿಗಲಿರುವದಂತೆ-ಆ ಮೇಲೆ ಅಂತೆ...

ಬೇಸರ! ಇನ್ನೇನು ಮಾಡುವದು? ಅಡಿಗೆಯಂತೂ ಮುಗಿದದ್ದೇ ಇದೆ. ಟೈಮ್ಸ ಓದುವ ಈ ಮುದಿ ಮಾವನವರು ಯಾವಾಗ ಬರುವರೋ ಏನೋ ಊಟಕ್ಕೆ? ಅವರಿಗಂತೂ ಒಂದು ಮಾತು ಕೂಡ ಆಡಲು ಬರುವದಿಲ್ಲ. ಅವರಿಗೆ ಈ ಜೀವನದ ಬೇಸರ ಹೇಗೆ ಬರುವದಿಲ್ಲವೋ ಏನೋ? ದಿನಾಲು ಮುಂಜಾನೆಯಿಂದ ಹನ್ನೊಂದು ಗಂಟೆಯ ವರೆಗೆ ಟೈಮ್ಸ ಪಠಣ; ಅನಂತರ ಊಟ; ಅನಂತರ ಮಗಳ ಮನೆ ಸಂಜೆಗೆ ಮರಳಿ ಮನೆ: ಆ ಮೇಲೆ ಈವ್ನಿಂಗ್ ನ್ಯೂಜ್—ರಾತ್ರಿಯತನಕ, ಅನಂತರ ಊಟ, ನಿದ್ರೆ! ತಮ್ಮ ಮಗನ ಕೂಡ ಸಹ ವಿಶೇಷ ಮಾತಿಲ್ಲ. ಮಗಳ ಮನೆಯಲ್ಲಿ ಮೊಮ್ಮಕ್ಕಳ ಕೂಡ ಸ್ವಲ್ಪ ಆಟ-ಮಾತು ಎಂದು ಕಾಣಿಸುತ್ತದೆ. ಇನ್ನೇನು ಅವರ ಜೀವನ ಮುಗಿದಂತಾಗಿದೆ. ತಾನು ಅವರ ಸ್ಥಾನದಲ್ಲಿದ್ದರೆ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದೆ, ಆತ್ಮಹತ್ಯೆ!—ಈ ಕಿಡಕಿಯಿಂದ ಕೆಳಗೆ ಜಿಗಿ ಹೊಡೆಯುತ್ತಿದ್ದೆ ಎಂದು ರಾಗಿಣಿಗೆ ಅನಿಸಿ ಹೋಯಿತು.

ಹೋಗಿ ಕಿಡಕಿಯೊಳಗಿಂದ ಕೆಳಗೆ ಹಣಿಕಿ ಹಾಕಿದಳು. ಅದೇ ಕಟ್ಟಡದಿಂದ ಮೂರನೆಯ ಅಂತಸ್ತಿನಿಂದ ಓರ್ವ ಹುಡುಗಿ ಪ್ರೇಮಭಂಗವಾಯಿತೆಂದು ಜಿಗಿಹೊಡೆದು ಪ್ರಾಣಕೊಟ್ಟಿದ್ದಳಂತೆ. ಆ ದೃಶ್ಯವನ್ನು ಕಲ್ಪಿಸಿದೊಡನೆ ರಾಗಿಣಿಯ ಮೈ ಜುಮ್ಮೆಂದಿತು. ಎಂಥ ಹುಚ್ಚು ಹುಡುಗಿಯಿದ್ದಿರಬೇಕವಳು! ಅವಳಿಗೆ ಮುತ್ತ ಯಾರೂ ಬೇರೆಯವರು ಈ ಜಗತ್ತಿನಲ್ಲಿ ದೊರೆಕುತ್ತಿರಲಿಲ್ಲವೋ?

ಇಷ್ಟರಲ್ಲಿ ಆ ಮಹಾಶಯ ಎಲ್ಲಿಯೋ ಮಾಯವಾಗಿ ಬಿಟ್ಟನಲ್ಲ! ಸ್ನಾನಕ್ಕೆ ಹೋದನೋ ಅಥವಾ ಕೆಳಗಿಳಿದು ತನ್ನ ಕೆಲಸಕ್ಕೆ ಎಲ್ಲಿಯಾದರೂ ಹೋದನೋ? ಹುಂ, ಎಲ್ಲಿಗಾದರೂ ಹೋಗಲಿ, ತನಗೇಕೆ ಇಲ್ಲದ ಕುತೂಹಲ?

"ರಾಗಿಣಿ, ಊಟಕ್ಕೆ ಬಡಿಸುವೆಯಾ?"

ಒಮ್ಮೆಲೆ ಬೆಚ್ಚಿಬಿದ್ದಳು. ಬೇರೆ ಯಾರಲ್ಲ—ಮಾವನವರು!

"ಹೂಂ"

ರಾಗಿಣಿ ಬೇಗ ಬೇಗನೆ ಮಣೆ-ತಾಟು ಹಾಕಿ. ಮಾವನವರಿಗೆ ಊಟಕ್ಕೆ ಬಡಿಸಿದಳು. ಮಾವನವರು ಮೌನವಾಗಿಯೇ [illegible] ಮಾಡಿ ಎದ್ದರು.

ಪಾಪ! ಇಡಿಯ ಜೀವನದ ತುಂಬ ಟೈಪಿಸ್ಟನ



«ನಗೆಯನ್ನೇ ಇನ್ನಷ್ಟು ಅರಳಿಸಿದ»

ಕೆಲಸ ಮಾಡಿ ಹಣ ಕೂಡು ಹಾಕಿ; ಮಗನನ್ನು ಹೇಗೂ ಬಿ. ಎ. ದ ವರೆಗೆ ಕಲಿಸಿ, ಮಗಳ ಮದುವೆ ಮಾಡಿ ಆತ್ಮತೃಪ್ತಿಯನ್ನು ಹೊಂದಿದ ಈ ಜೀವಕ್ಕೆ ಮಾತೇಕೆ. ಬೇರೆ ವಿಚಾರವೇಕೆ? ಇನ್ನೇನು ಊಟವಾಯಿತು–ಗಿರಿಗಾಂವಕ್ಕೆ ಹೊರಟರೆಂದು ಕಾಣಿಸುತ್ತದೆ–ಮಗಳ ಮನೆಗೆ.

"ಗಿರಿಗಾಂವಕ್ಕೆ ಹೋಗಿ ಬರುತ್ತೇನೆ. ರಾಗಿಣಿ ಏನಾದರೂ ಹೇಳಬೇಕೇನು ಬೇಬೀತಾಯಿಗೆ? " ಎಂದು ಮೆಲ್ಲನೆ ಕೇಳಿ, "ಏನಿಲ್ಲ" ಎಂದು ಹೇಳುವವೇ ತಡ ಕೈಯಲ್ಲಿ ಛತ್ರಿಯೊಂದನ್ನು ಹಿಡಿದು ಬಾಗಿಲು ತೆರೆದು ಮೆಲ್ಲಗೆ ಹೊರಗೆ ಜಾರಿ ಬಾಗಿಲು ಮುಚ್ಚಿ ಮಾಯವಾದರು!

ರಾಗಿಣಿಯು ಹೊರಗಿನ ಕದದ ಬೋಲ್ಟ ಹಾಕಿ ಬಂದು, ಟೇಬಲ್ ಮೇಲೆ ತಬ್ಬಲಿಯಾಗಿ ಬಿದ್ದ ಟೈಮ್ಸನ್ನು ೮-೧೦ ನಿಮಿಷ ಓದಿದಳು. ಅಥವಾ ಓದುವ ಪ್ರಯತ್ನ ಮಾಡಿದಳು.

ದಿನಾಲು ಮರಾಠೀ ವರ್ತಮಾನ ಪತ್ರವನ್ನಾದರೂ ತರಿಸಿದರೆ ಒಂದೆರಡು ತಾಸು ಓದುವದರಲ್ಲಿ ಕಳೆಯಬಹುದು. ಹುಂ, ವರ್ತಮಾನ ಪತ್ರ ಓದುವದರಲ್ಲೇನಿದೆ? ಏನಾದರೂ ವಿಶೇಷ ಸುದ್ದಿಯಿದ್ದರೆ ಅವರೇ ಹೇಳುತ್ತಾರಲ್ಲ... ಯಾವುದಾದರೂ ಲಾಯಬ್ರರಿಯಿಂದ ಕಥೆ ಕಾದಂಬರಿಗಳನ್ನು ತರಿಸಿ ಓದಬೇಕು. ಹಿಂದೆ ಹಾಯಸ್ಕೂಲಿನಲ್ಲಿದ್ದಾಗ ಎಷ್ಟೊಂದು ಓದುವ ಹುಚ್ಚು. ಖಾಂಡೇಕರ, ಫಡಕೆಯವರ ಒಂದಾದರೂ ಕಾದಂಬರಿ ಬಿಟ್ಟಿದ್ದರೆ ಆಣೆ!—ಫಡಕೆಯವರ ಯಾವದೋ ಕಾದಂಬರಿಯಲ್ಲಿ—ಯಾವುದದು? ನೆನವು ಕೂಡ ಬರುವದಿಲ್ಲವಲ್ಲ!–ನಾಯಿಕೆ ಮುಂಬಯಿಯಲ್ಲಿರುತ್ತಾಳೆ. ಅವಳು ನಾಯಕನೊಂದಿಗೆ ಎಷ್ಟೊಂದು ಮಜವಾಗಿ ಕಾಲಕಳೆಯುತ್ತಾಳೆ—ಈಸಲಿಕ್ಕೆ ಹೋಗುವದು, ಸಿನೇಮಾಕ್ಕೆ ಹೋಗುವದು, ನಾಯಕನ ಕಾರಿನಲ್ಲಿ ಜುಹೂಗೆ ಹೋಗುವದು...ಆಗ ಮುಂಬಯಿ ಜೀವನವೆಂದರೆ ಸುಖದ ಜಾತ್ರೆಯೆಂಬ ಹುಚ್ಚು ಕಲ್ಪನೆಯಿತ್ತು ರಾಗಿಣಿಗೆ. ಈಗ–ಇಷ್ಟು ಬೇಸರ ಮತ್ತಾವ ಊರಿನಲ್ಲಿಯೂ ಬರಲಿಕ್ಕಿಲ್ಲ!... ನಾದಿನಿಯ ಮನೆ ಗಿರಿಗಾಂವದಲ್ಲಿ–ಈ ಖಾರಿನಿಂದ ಒಬ್ಬಳೇ ಹೋಗುವದು ಸಾಧ್ಯವಿಲ್ಲ. ಅಲ್ಲಿ ಹೋದರೂ ಆ ಎರಡು ಕೋಣೆಯ ಮನೆಯಲ್ಲಿ ವಿಪರೀತ ಗದ್ದಲ. ಇನ್ನು ಇವರ ಮಿತ್ರ ರೋಹಿಟೆಯವರ ಮನೆ ಮಲಾಡಿನಲ್ಲಿ. ಅವರ ಹೆಂಡತಿ ಬಹಳ ಒಳ್ಳೆಯವಳು. ಆದರೇನು, ಎರಡು-ಮೂರು ತಿಂಗಳಿಗೊಮ್ಮೆ ಭೆಟ್ಟಿ... ಈ ನೆರೆಮನೆಯವರೊಡನೆ ಗೆಳೆತನ ಮಾಡಿಕೊಳ್ಳೋಣವೆಂದರೆ– ಈ ಕಡೆ ಎರಡು ಸಿಂಧೀ ಕುಟುಂಬಗಳು, ಆ ಕಡೆ ಒಂದು ಸೀಖ, ಇನ್ನೊಂದು ಮದ್ರಾಸೀ ಕುಟುಂಬಗಳು. ಅವುಗಳಾಚೆಗೆ ಒಂದು ಗುಜರಾತೀ, ಒಂದು ಮರಾಠೀ—ಹಾಂ, ಆ ಮರಾಠೀ ಮನೆಯಲ್ಲಿರುವವರು ಒಂದು ಮುದುಕಿ, ಅವಳ ಮಗ-ಆಫೀಸಿಗೆ ಹೋಗುವವನು, ಅವಳ ಮಗಳು ಶಾಲಿನಿ-ಕಾಲೇಜೂ ಆಫೀಸೂ ಎರಡೂ ಮಾಡುವವಳು. ಹಾಗೆ ಇದ್ದವರಲ್ಲಿ ಗೆಳತಿಯೆಂದರೆ ಶಾಲಿನಿಯೇ...

ರಾಗಿಣಿ ಕೂತಲ್ಲಿಂದಲೇ ಕಿಡಕಿಯ ಹೊರಗೆ ನೋಡಿದಳು. ಆ ಮಹಾಶಯ ಬದಿಯ ಕೋಣೆಯವನ ಜೊತೆಗೆ ಮಾತನಾಡುತ್ತ, ನಗುತ್ತ ಹಾಟೇಲಿನ ಬಾಲ್ಕನಿಯಲ್ಲಿ ನಿಂತಿದ್ದ. ಅವನು ಮಾತಾಡುತ್ತಿದ್ದರೂ ಅವನ ಲಕ್ಷವೆಲ್ಲಾ ತಮ್ಮ ಕಿಡಕಿಯತ್ತಲೇ! ಅತ್ತ ಲಕ್ಷ ಕೊಡಲೇಬಾರದು ತಾನು ಎಂಬ ದೃಢ ಮನಸ್ಸಿನಿಂದ ಟೈಮ್ಸದ ಒಂದು ಪಾನು ತಿರುವಿ ಓದುವ ನಟನೆ ಮಾಡಿದಳು. ಅಷ್ಟರಲ್ಲಿ ಅವರ ನಗುವಿನ ಒಂದು ಅಲೆಯು ಬಂದು ಅವಳ ಮನಸ್ಸನ್ನ ಪ್ಪಳಿಸಿತು. ಕುತೂಹಲದಿಂದ ಮರಳಿ ಹಾಟೇಲಿನತ್ತ ನೋಡಿದಳು. ಅವರಿಬ್ಬರೂ ಅವಳೆಡೆಗೇ ನೋಡುತ್ತ ನಗುತ್ತಿದ್ದರು...

ರಾಗಿಣಿಗೆ ಯೋಚನೆ: ನನ್ನ ಬಗ್ಗೆ ಅವರು ಏನು ಮಾತಾಡುತ್ತಿರಬಹುದು? ಮತ್ತೇನು? ಅವಳು ಹಾಗೆ ಕಾಣುತ್ತಾಳೆ, ಹೀಗೆ ಕಾಣುತ್ತಾಳೆ–ಅವಳು ಅದು ಚನ್ನಾಗಿದೆ, ಇದು ಚೆನ್ನಾಗಿದೆ...ಅಥವಾ ನನ್ನ ಏಕಾಕಿತನದ ದುರುಪಯೋಗ ತೆಗೆದುಕೊಳ್ಳಲು ಏನಾದರೂ ಸಂಚು ಹೂಡುತ್ತಿರುವರೋ?

ರಾಗಿಣಿಗೆ ನಗೆ ಬಂತು. ಸ್ತ್ರೀಯ ಪುಷ್ಪದೇಹವೆಂದರೆ ಪುರುಷನಿಗೆ ಅದೆಷ್ಟು ಆಕರ್ಷಣೆ! ಈ ದೇಹದ ಹಾವಭಾವಗಳ ಬಲೆಯಲ್ಲಿ ಪುರುಷನ ಮನ ಹಿಡಿದು ಅದನ್ನು ಮಂಗನಂತೆ ಜಿಗಿದಾಡಿಸುವದು ಎಷ್ಟು ಸುಲಭ!

ಈಗ ಆ ಮಹಾಶಯ ಒಬ್ಬನೇ ನಿಂತಿದ್ದಾನೆ. ಬದಿಯ ಕೋಣೆಯವ ಎಲ್ಲಿಗೋ ಹೋದನೆಂದು ಕಾಣುತ್ತದೆ. ಉಳಿದ ಎಲ್ಲ ಕೋಣೆಗಳ ಬಾಗಿಲು-ಕಿಡಕಿಗಳು ಮುಚ್ಚಿವೆ. ಎಲ್ಲರೂ ತಮ್ಮ ತಮ್ಮ ಕೆಲಸಕ್ಕೆ ಹೋಗಿದ್ದಾರೆ. ಇವನಿಗೇನೂ ಕೆಲಸವಿದ್ದಂತೆ ತೋರುವದಿಲ್ಲ. ಹಾಂ, ಕೆಲಸ ಮುಗಿದಿದೆ, ರಿಜರ್ವೇಶನ್‌ದ ದಾರಿ ಕಾಯುತ್ತಿದ್ದಾನೆ ಎಂದು ಆ ದಾಡೀವಾಲಾನಿಗೆ ಹೇಳಿದನಲ್ಲವೇ. ಒಂದು ತಾಸಿನ ಹಿಂದೆ ಆತ ಇಂದೇ ಸಂಜೆಗೆ ಮರಳಿ ಊರಿಗೆ ಹೋಗುವವ–ತಪ್ಪಿದರೆ ನಾಳೆ. ಯಾವ ಊರಿಗೋ ಏನೋ? ಅದನ್ನು ತೆಗೆದುಕೊಂಡು ಏನು ಮಾಡುವದು? ಅದೊ, ಅವನು ಒಳಗೆ ಹೊರಟನಲ್ಲ! ಹೊರಗೆ ಎಲ್ಲಿಯಾದರೂ ಹೊರಟನೆಂದು ಕಾಣುವದು, ಇಲ್ಲ! ಒಳಗೆ ನಿಂತು ಆ ಕಿಡಕಿಯ ಸಳಿಗಳೊಳಗಿಂದ ಇತ್ತ ಕಡೆಗೇ ನೋಡುತ್ತಿದ್ದಾನೆ... ನೋಡಲಿ—

ರಾಗಿಣಿಯ ದೇಹದಲ್ಲಿ ಚೈತನ್ಯದ ಲಹರಿ ಹರಿಯಕೊಡಗಿತು. ಅವಳ ಮನಸ್ಸನ್ನು ಮುಸಕಲಿದ್ದ ಬೇಸರ ದೂರ ಸರಿಯತೊಡಗಿತು. ಏನಾದರೂ ಮಾಡಬೇಕು ಎಂಬ ಆತುರತೆ-ಉದ್ವಿಗ್ನತೆ, ಅವಳನ್ನೆಳೆಯತೊಡಗಿತು. ಏನು? ಮಾಡುವದಾದರೂ ಏನು?

ಇವೊತ್ತು ತಲೆ ಬಾಚಿ ಸ್ನಾನ ಮಾಡುವದುಳಿದಿದೆ—ದಿನದ ಕಾರ್ಯಕ್ರಮದ ಪ್ರಕಾರ: ದಿನಾಲು ಎದ್ದೊಡನೆ ಚಹ, ಕೂಡಲೆ ೯|| ಯೊಳಗೆ ಅಡಿಗೆ, ನಂತರ ಗಂಡನ ಊಟ, ಆ ಮೇಲೆ ಮಾವನವರ ಊಟ, ಆ ನಂತರ ರಾಗಿಣಿಯ ಸ್ನಾನ, ಊಟ...ಇತ್ಯಾದಿ. ಅಹುದು. ತಲೆ ಬಾಚಬೇಕು ಎಂದು ರಾಗಿಣಿ ತನ್ನ ವಿಪುಲವಾದ ಕೇಶರಾಶಿ ಬಿಚ್ಚಿ ಬೆನ್ನಮೇಲೆ ಹರಹಿದಳು. ಹೊರಗಿನ ಕಿಡಕಿಯಲ್ಲಿಯ ಹಣಿಗೆ ತೆಗೆದುಕೊಳ್ಳಲು ಕಿಡಕಿಯತ್ತ ಹೋಗಿ-ಹೊರಗೆ ರಸ್ತೆಯತ್ತ ಎರಡು ನಿಮಿಷ ನೋಡುತ್ತ ನಿಂತಳು. ಮುಂದಿನ ಹೋಟಲಿನ ಆ ಕಿಡಕಿಯ ಹಿಂದೆ ಎರಡು ಕಣ್ಣುಗಳು ಅವಳ ಮೇಲೆಯೇ ನಟ್ಟಿವೆ ಎಂಬ ಅರಿವು ಅವಳ ಮನಸ್ಸಿನಲ್ಲಿ, ಕೋಣೆಯಲ್ಲಿ ದೀಪ ತೂಗು ಬಿಟ್ಟಂತೆ, ತೂಗು ಬಿಟ್ಟಿತ್ತು. ಒಂದೆರಡು ಸಲ ಸೂಕ್ಷ್ಮವಾಗಿ, ಗುಪ್ತವಾಗಿ ದೃಷ್ಟಿ ಹೊರಳಿಸಿ ಆ ಕಣ್ಣುಗಳು ಕಿಡಕಿಯ ಹಿಂದೆಯೇ ಇವೆ ಎಂದು ಖಾತ್ರಿ ಮಾಡಿಕೊಂಡಳು. ಅವಳ ಮನಸ್ಸಿನಲ್ಲಿ ಒಂದು ಬಗೆಯ ಅಸ್ಪಷ್ಟವಾದ, ಸೂಕ್ಷ್ಮವಾದ ಸಮಾಧಾನದ ಕರಿ ಛಾಯೆ ಹರಡಿತು...

ಕಿಡಕಿಯ ಬಲಕ್ಕೆ ತೂಗು ಹಾಕಿದ ದೊಡ್ಡ ಕನ್ನಡಿಯಲ್ಲಿ ತನ್ನ ಪ್ರತಿಬಿಂಬದತ್ತ ನೋಡುತ್ತ, ರಾಗಿಣಿ ಕೂದಲು ಬಾಚತೊಡಗಿದಳು. ತನ್ನ ಉನ್ನತವಾದ ಉರೋಭಾಗ ನೋಡುತ್ತ ಇದು ಬದಿಯಿಂದ



"ಇಷ್ಟೇಕೆ ದುರುಗುಟ್ಟಿ ನೋಡುತ್ತಿದ್ದಾನೆ."

ಆ ಎರಡು ಕಣ್ಣುಗಳಿಗೆ ಕಾಣುತ್ತಿರಬಹುದೇ ಎಂದು ಯೋಚಿಸಿದಳು. ಕಂಡರೇನು ಮಹಾ? ಅವನು ತಾನಾಗಿಯೇ ಇಷ್ಟು ಕುತೂಹಲದಿಂದ ನೋಡುತ್ತ ಕುಳಿತರೆ ತಾನೇನು ಕಿಡಕಿಯ ಕದ ಹಾಕಿ ಅಡಗಿಕೊಂಡು ಕೂಡ್ರಬೇಕೇ?

ಹತ್ತು ಹದಿನೈದು ನಿಮಿಷಗಳಲ್ಲಿ ತಲೆ ಬಾಚಿ, ಕೂದಲನ್ನು ಹೆಳಲು ಹಾಕದೆ ಹಾಗೆಯೇ ಮಂಡಚಿ ಕಟ್ಟಿ— ಹಾಗೆ ಮೇಲೆ ಏರಿಸಿ ಕಟ್ಟಿದರೆ ಬಹಳ 'ಚಂದ ಕಾಣಿಸುತ್ತದೆ ಎಂದು ಆಕೆಯ ಗಂಡ ಹೇಳುತ್ತಿದ್ದ— ಓರೆಗಣ್ಣಿನಿಂದ ಕಿಡಕಿಯ ಹೊರಗೆ ನೋಡಿ,— ಆ ಕಣ್ಣುಗಳು ಈಗ ಕಿಡಕಿಯ ಸಳಿಗಳಿಗೆ ಅಂಟಿಕೊಂಡು ನೋಡುತ್ತಿದ್ದವು— ಹಣಿಗೆಯಲ್ಲಿ ಸಿಕ್ಕಿಕೊತ ಕೂದಲನ್ನು ತೆಗೆದು ಕಿಡಕಿಯ ಹೊರಗೆ ತೂರುಬಿಟ್ಟಳು.

ಇನ್ನು ಸ್ನಾನ ಮಾಡಬೇಕು. ಬಂಬಿನಲ್ಲಿಯ ನೀರು ಆರಿಲ್ಲವಷ್ಟೆ ಎಂದು ರಾಗಿಣಿ ಮೂಲೆಯಲ್ಲಿಯ ಸಣ್ಣ ಬಚ್ಚಲಿನ ಬದಿಗೆ ಇಟ್ಟ ಬಂಬಿಗೆ ಕೈ ಹಚ್ಚಿ ನೋಡಿದಳು. ನೀರು ಸಾಕಷ್ಟು ಬಿಸಿ ಇದೆ, ಇನ್ನೇನು ಬೇಗನೆ ಸ್ನಾನ ಮಾಡಬೇಕೆಂದು ರಾಗಿಣಿ ಬಕೆಟ್ಟನ್ನು ಬಂಬಿನ ನಲ್ಲಿಯ ಕೆಳಗಿಟ್ಟು ನೀರು ಬಿಟ್ಟಳು. ಬಕೆಟ್ಟಿನಲ್ಲಿ ತುಂಬುತ್ತಿದ್ದ ನೀರಿನೆಡೆ ನೋಡುತ್ತ ತಾನು ಉಟ್ಟ ಸೀರೆಯನ್ನು ಬಿಚ್ಚಿದಳು. ಪರಕರದ ಹುಡುಗಿಯಾಗುವದೆಂದರೆ ರಾಗಿಣಿಗೆ ತುಂಬ ಮಜ— ಹಳೆಯ ತುಂಟತನ ಹುಡುಗಾಟಿಕೆ ಮರಳಿ ರಕ್ತದಲ್ಲಿ ಸಂಚರಿಸಿದಂತೆ ಬಂಬಿನ ನಲ್ಲಿಯನ್ನು ಬಂದುಮಾಡಿ ತನ್ನ / ಒಣಗಿದ ಪರಕರ--ಬ್ಲಾವುಜ್ ಸೀರೆಗಳನ್ನು ತರಬೇಕೆಂದು ಹೊರಟಳು.

ಈಗ ಆ ಕಿಡಕಿಯ ಮುಂದಿನಿಂದ ಆ ಬದಿಯ ಕೋಣೆಗೆ ಹೋಗುವಾಗ ಆ ಕಣ್ಣುಗಳ ದೃಷ್ಟಿಪಥವನ್ನು ದಾಟದೆ ಹೋಗಲಿಕ್ಕಾದೀತೇ? ಆ ದೃಷ್ಟಿ ತನ್ನ ಮೇಲೆ ಬೀಳದಿರಲಾರದು— ಬೀಳಲಿ! ಕಿಡಕಿಯನ್ನು ಬಂದು ಮಾಡಿದರೆ ಹೇಗೆ? ಬಂದು ಮಾಡಿದರೆ ಅವನ ದೃಷ್ಟಿಗೆ, ಅವನಿಗೆ, ಬೆಲೆ ಕೊಟ್ಟಂತಾಗುವದು, ಅವನಿಗೆ ಹೆದರಿದಂತಾಗುವದು. ಅವನು ನೋಡಿದರೆ ತನ್ನದೇನು ಗಂಟು ಹೋಗುವದು? ತನ್ನ ಮನೆಯಲ್ಲಿ ತಾನು ಸ್ವಚ್ಛಂದವಾಗಿ, ಸ್ವತಂತ್ರವಾಗಿ ವಿಹರಿಸಬಾರದೇ?— ಎಂದು ಯೋಚಿಸುತ್ತ ರಾಗಿಣಿ ಕಿಡಕಿಯನ್ನು ಬಂದುಮಾಡುವ ಗೊಂದಲಕ್ಕೆ ಹೋಗದೆ ಹಾಗೆಯೇ ಪರಕರ ಬ್ಲಾವುಜದ ಮೇಲೆ ಆ ಬದಿಯ ಕೋಣೆಗೆ ಹೋದಳು. ಅಲ್ಲಿ ಮೇಲಿನ ಗಳಗಳ ಮೇಲೆ ಒಣಗು ಹಾಕಿದ ಅರಿವೆಗಳನ್ನು ಒಂದು ಚಿಕ್ಕ ಗಳದ ಸಹಾಯದಿಂದ ತೆಗೆದಳು. ಈ ತನ್ನ ಕೆಲಸ ಕೂಡ ಆ ಕಣ್ಣು ತುತ್ತಾಗಿದೆ ಎಂಬುದನ್ನು ಕಂಡಕೂಡಲೇ ಅವಳ ಮನಸ್ಸಿನಲ್ಲಿ ಒಂದು ಬಗೆಯ ವಿಚಿತ್ರ ನಾಚಿಕೆ, ಮೈತುಂಬ ನವಿರು— ಸ್ವಲ್ಪ ಬೆವರು ಕೂಡ...

ರಾಗಿಣಿ ಬೇಗ ಬೇಗನೆ ಬದಿಯ ಕೋಣೆಗೆ ಹೋಗಿ ಬಚ್ಚಲನ್ನು ಸೇರಿದಳು. ಹತ್ತು ನಿಮಿಷ ಒಳ್ಳೆಯ ಸೊಗಸಿನಿಂದ ಸ್ನಾನಮಾಡಿದಳು. ಶುಚಿರ್ಭೂತವಾದ ತನ್ನ ದೇಹವನ್ನು ಚೆನ್ನಾಗಿ ಒರೆಸಿಕೊಂಡು ಬಚ್ಚಲಿನ ಹೊರಗೆ ಕಾಲಿಡುವಾಗ ಒಂದು ಬಗೆಯ ಬೆಚ್ಚಗಿನ ಸಮಾಧಾನ ಅವಳ ಮನಸ್ಸನ್ನಾವರಿಸಿತು. ಅವಳಿಗೆ ಮೊನ್ನೆ ಲಾಂಡ್ರಿಯಿಂದ ಬಂದ ಗುಲಾಬೀ ಸೀರೆಯನ್ನುಡಬೇಕೆಂದೆನಿಸಿ ಪರಕರಿನ ಮೇಲೆಯೇ ಕಿಡಕಿಯ ಎಡಬದಿಗಿದ್ದ ಕಪಾಟಿನತ್ತ ಹೋದಳು. ಕಪಾಟು ತೆರೆದು ಗುಲಾಬೀ ಸೀರೆಯನ್ನು ಕೈಯಲ್ಲಿ ತೆಗೆದುಕೊಂಡು ಕಪಾಟನ್ನು ಮರಳಿ ಮುಚ್ಚಿದಳು. ಆ ಸೀರೆಯ ಮಡಿಕೆಗಳನ್ನು ಬಿಚ್ಚಿ ನಯವಾಗಿ ಸೊಗಸಾಗಿ ಉಟ್ಟು ಕನ್ನಡಿಯ ಮುಂದೆ ಹೋಗಿ ನಿಂತಳು. ತನ್ನ ಪ್ರತಿಬಿಂಬಕ್ಕೆ ತಾನೇ ಮೆಚ್ಚಿ ಕಿಡಕಿಯ ಹೊರಗೆ ಕೂಲಂಕಷ ದೃಷ್ಟಿ ಬೀರಿದಳು. ತನ್ನ ಮುಖದಲ್ಲಿ ತನಗೆ ಗೊತ್ತಿಲ್ಲದೆಯೇ ಒಂದು ಅಸ್ಪಷ್ಟ ನಗೆಯು ಸುಳಿದು ಹೋದುದರ ಅರಿವಾಯಿತು ರಾಗಿಣಿಗೆ. ನಾಚಿಕೆಯಿಂದ ಕಿವಿಗಳು ಉಷ್ಣವಾದವು, ಉರೋಭಾಗದಲ್ಲಿ ಒಂದು ವಿಚಿತ್ರ ಕಂಪನ ಮಿಂಚಿನಂತೆ ಸುಳಿದು ಹೋಯಿತು...




ಆ ಕಣ್ಣುಗಳು ಕಿಡಕಿಯ ಹಿಂದೇ ಇವೆ ಎಂದು ಖಾತ್ರಿ ಮಾಡಿಕೊಂಡಳು

ಅಷ್ಟರಲ್ಲಿ ಆ ಹೋಟಲಿನ ಕಿಡಕಿಯ ಹಿಂದೆ ಒಂದು ನಗೆ ಮೂಡಿತ್ತು... ಸ್ವಲ್ಪ ಹೊತ್ತಿನ ಮೇಲೆ ಆ ಮಹಾಶಯನು ತನ್ನ ಕೋಣೆಯ ಹೊರಗಿನ ಬಾಲ್ಕನಿಯಲ್ಲಿ ಬಂದು ನಿಂತದ್ದು ರಾಗಿಣಿಗೆ ಗೊತ್ತಾಯಿತು... ಇನ್ನು ಕಿಡಕಿಯ ಹತ್ತಿರ ನಿಲ್ಲುವದು ಶ್ರೇಯಸ್ಕರವಲ್ಲವೆಂದು ನಿಶ್ಚಯಿಸಿ ರಾಗಿಣಿ ಕೋಣೆಯ ಒಳಬದಿಯತ್ತ ಹೊರಳಿದಳು— ಬೇಗ ಬೇಗನೆ ಊಟದ ಕೆಲಸ ಮುಗಿಸಬೇಕೆಂದು ಬಾಗಿ ಮಣಿ ಹಾಕಿ ಕೆಳಗೆ ಕುಳಿತಳು.

ಊಟ ಮಾಡುವಾಗ ಅವಳ ಲಕ್ಷ್ಯ ಊಟದ ಕಡೆರಲಿಲ್ಲ. ಆ ಮಹಾಶಯನು ಏನೇನು ಯೋಚಿಸುತ್ತಿಬಹುದು! ಅವನು ಏನಾದರೂ ತಪ್ಪು ತಿಳಿದುಕೊಂಡಿಲ್ಲವಷ್ಟೆ? ಅವನ ಮನಸ್ಸು ಅನುಚಿತವಾಗಿ ಉತ್ತೇಜಿತಗೊಂಡಿದ್ದರೆ... ಅವಳ ಹಾಸ್ಯಕ್ಕೆ ಏನಾದರೂ ಅಪಾರ್ಥ ಕಲ್ಪಿಸಿದ್ದರೆ—? ಅವನೂ ನಕ್ಕಿದ್ದಯಾಕೆ? ಅವನು ನೇರವಾಗಿ ಧೈರ್ಯದಿಂದ ಮನೆಗೆ ಬಂದರೆ? ಅವನು ಬಂದು ಕದ ತಟ್ಟುವ. ಅವಳು ಕದ ತೆರೆದು 'ಯಾರು ನೀವು?' ಎನ್ನುವಳು. ಅವನು ಅರ್ಥಪೂರ್ಣವಾಗಿ ನಕ್ಕು, 'ಹೇಳುವೆ. ಒಳಗೆ ನಡೆಯಿರಿ' ಎಂದವನೇ ಅವಳನ್ನು ಒಂದು ಕೈಯಿಂದ



ಮೈ ತುಂಬ ನವಿರು...

ಬೇಸರದಿಂದ ಗಡಿಯಾರದತ್ತ ನೋಡಿದಳು. ಇನ್ನೂ ಹನ್ನೆರಡೂವರೆ. ಇನ್ನೂ ಸುಮಾರು ಆರು ತಾಸು ಕಳೆಯಬೇಕು. ಕಿಡಕಿಯ ಹೊರಗೆ ಶೂನ್ಯದೃಷ್ಟಿಯಿಂದ ನೋಡುತ್ತ ನಿಂತಳು. ಕೆಳಗೆ ರಸ್ತೆಯ ಮೇಲೆ ಓರ್ವ ಸಿಂಧೀ ಹುಡುಗಿ ಇಬ್ಬರು ತರುಣರೊಡನೆ ನಗುತ್ತ ಕೆಲೆಯುತ್ತ ಸಾಗಿದ್ದಳು. ಅಸೂಯೆಯ ಅಸ್ಪಷ್ಟ ಭಾವನೆಯೊಂದು ರಾಗಿಣಿಯ ಮನಸ್ಸನ್ನು ತಟ್ಟಿ ಮಾಯವಾಯಿತು.

ಬೇಸರ ! ಹೋಟೇಲಿನಲ್ಲಿಯ ಆ ತರುಣ ಮಹಾಶಯನೂ ಎಲ್ಲಿಯೋ ಮಾಯವಾಗಿದ್ದಾನೆ. ತನ್ನ ಬೇಸರ ಕಳೆಯಲು ಆತ ಸ್ವಲ್ಪ ಹೊತ್ತು ಹಾಗೆ ಮಂಗನಂತೆ ಮಿಕಿ ಮಿಕಿ ನೋಡುತ್ತ ನಿಂತಿದ್ದನೆಂದು ಕಾಣುತ್ತದೆ. ಯಾವ ಸಮಾಧಾನ ಪಡೆದನೋ ಏನೋ ಹಾಗೆ ಅವಳನ್ನು ಪರಕರದಲ್ಲಿ ನೋಡಿ !...

ಸ್ವಲ್ಪ ಹೊತ್ತಿನ ಮೇಲೆ ಕೆಲಸಗಿತ್ತಿಯು ಬಳಿಕೆ ಅರಿವೆ ತೆಗೆದುಕೊಂಡು ಬಂದಳು. "ಬಾಯೀ, ನಾ ಹೋಗ್ತೀನಿ," ಎಂದು ಹೇಳಿ ಅವಳು ಹೊರಟು ಹೋದಳು. ಅವಳ ಹಿಂದೆ ಹೋಗಿ ಬಾಗಿಲು ಹಾಕಿ ಬಂದಳು. ರಾಗಿಣಿ... ಈ ಕೆಲಸಗಿತ್ತಿಯರಿಗಿಲ್ಲ ಬೇಸರ! ಮುಂಜಾನೆಯಿಂದ ಸಂಜೆಯ ತನಕ ದುಡಿ... ದುಡಿ ದುಡಿಯುತ್ತಾರೆ; ಸ್ವತಃ ಹಣ ಗಳಿಸುತ್ತಾರೆ. ತಲೆ ಕೆಡಿಸುವ ಆಲಸ್ಯ–ವಿರಾಮ–ಬೇಸರಗಳಿಲ್ಲ ಅವರಿಗೆ. ಅವಳ ವಿಷಯದಲ್ಲಿಯೂ ರಾಗಿಣಿಗೆ ಒಂದು ಬಗೆಯ ಮತ್ಸರವುಂಟಾಯಿತು.

ಏನಾದರೂ ಮಾಡಬೇಕು–ನಿದ್ರೆ ಬರುವ ತನಕ ಎಂದು ಯೋಚಿಸತೊಡಗಿದಳು ರಾಗಿಣಿ. ಆದರೆ ಏನು ಮಾಡಬೇಕು? ಏನು? ಏನು? ಅವಳಿಗಂತೂ ಯಾವ ಕಲೆಯೂ ಗೊತ್ತಿಲ್ಲ. ಏನಾದರೂ ಹೆಣೆಯುವದೆಂದರೆ ಅದೂ ಬೇಸರ. ಹಾಗಾದರೆ ಮಾಡಬೇಕಾದರೂ ಏನು? ಎಲ್ಲ ಅರಿವೆಗಳನ್ನು ಕಿತ್ತೊಗೆದು ಬತ್ತಲೆ ಮನೆ ತುಂಬ ಅಡ್ಡಾಡಬೇಕು, ಹಾಸಿಗೆಯಲ್ಲಿ ಹೊರಳಾಡಬೇಕು. ಎಂಬ ವಿಚಿತ್ರ ವಿಚಾರ ತಲೆಯಲ್ಲಿ ಸುಳಿದು ಹೋಯಿತು. ತನ್ನ ವಿಚಿತ್ರ ವಿಚಾರಕ್ಕೆ ತಾನೇ ಮನಸ್ಸಿನಲ್ಲಿ ನಕ್ಕಳು... ಹೌದು, ಜಗತ್ತಿನಲ್ಲಿ ನೀತಿ ಅನೀತಿಗಳೆಂಬ ಮಾತೇ ಇರದಿದ್ದರೆ, ಪ್ರಾಣಿಗಳಂತೆ ಸ್ವಚ್ಛಂದವಾಗಿ ಸ್ವತಂತ್ರವಾಗಿ ವಿಹರಿಸುವಂತಿದ್ದರೆ ಎಷ್ಟೊಂದು ಮಜಬಾಗಬಹುದಿತ್ತು—ವಿಚಿತ್ರವಾಗಬಹುದಿತ್ತು ಈ ಜೀವನ!

ರಾಗಿಣಿ ಒಮ್ಮೆಲೆ ತನ್ನ ಬಾಡಿಸಿನ ಹುಕ್ಕು ಹರಿದಿದೆ ಎಂಬ ಮಾತು ಲಕ್ಷ್ಯಕ್ಕೆ ಬಂತು. ಹುಕ್ಕು ಹಚ್ಚಲು ಎಷ್ಟು ಸಮಯ? ಇದೇ ಒಳ್ಳೆಯ ಸಮಯವೆಂದು ರಾಗಿಣಿ ತನ್ನ ಬ್ಲಾವುಜ ಕಳೆದು ಒಳಗಿನ ಬಾಡಿಸನ್ನೂ ತೆಗೆದಳು. ತನ್ನ ಮೈಯನ್ನು ಸೀರೆಯ ಸೆರಗಿನಿಂದ ಮುಚ್ಚಿ, ಕಿಡಕಿಯ ಒಳಕಟ್ಟೆಯ ಮೇಲೆ ಇಟ್ಟ ಡಬ್ಬಿಯಲ್ಲಿಯ ಹುಕ್ಕು–ಸೂಜಿ–ದಾರಗಳನ್ನು ತೆಗೆದುಕೊಂಡು, ಪಲ್ಲಂಗದ ಮೇಲೆ ಕೂತು, ಹುಕ್ಕು ಹಚ್ಚಲು ಉದ್ಯುಕ್ತಳಾದಳು. ಮುಂಬಯಿಯ ಸೆಕೆಯಲ್ಲಿ ಬರಿಯ ಸೀರೆಯ ಸೆರಗಿನ ಹೊದಿಕೆ ಹಾಯೆನಿಸಿತು. ಹೊರಗಿನ ತಂಗಾಳಿ ಅವಳಿಗೆ ಸುಖ ಸಂವೇದನೆಯನ್ನುಂಟು ಮಾಡಿತು. ಹುಕ್ಕು ಹಚ್ಚಿಯಾದ ಮೇಲೆ ಲಕ್ಷ ತಾನಾಗಿಯೇ ಮುಂದಿನ ಹೊಟೇಲಿನತ್ತ ಸುಳಿಯಿತು. ಎದೆ ಧಸ್ಸೆಂದಿತು! ಆ ಕಣ್ಣುಗಳು ಮರಳಿ ಕಿಡಿಕಿಯ ಹಿಂದೆ ಅವತರಿಸಿ ನೋಡುತ್ತಿವೆ. ಒಂದರೆನಿಮಿಷದಲ್ಲಿ ತನ್ನನ್ನು ತಾನು ಸಾವರಿಸಿಕೊಂಡು ರಾಗಿಣಿ ತನ್ನ ಮುಂದಿನ ಕಾರ್ಯದಲ್ಲಿ ನಿರತಳಾದಳು...ಬೇಗ ಬೇಗನೆ ಬಾಡಿಸನ್ನೂ ಬ್ಲಾವುಜನ್ನೂ ಧರಿಸಿದಳು.

ಮುಂದೆ ಕುತೂಹಲದಿಂದ ರಾಗಿಣಿ ಹೊರಗೆ ದೃಷ್ಟಿ ಬೀರಿದಳು. ಆ ಮಹಾಶಯ ಬಾಲ್ಕನಿಯಲ್ಲಿ ಬಂದು ನಿಂತು ತನ್ನೆಡೆಗೇ ನಿರುಕಿಸುತ್ತಿದ್ದನಲ್ಲದೆ, ಬರಸೆಳೆದು ಮತ್ತೊಂದು ಕೈಯಿಂದ ಬಾಗಿಲು ಮುಚ್ಚಿದರೆ— ಆಗ ಅವಳೇನು ಮಾಡಬೇಕು ? 'ನಿಮ್ಮ ಹುಚ್ಚುತನ ಇಲ್ಲಿ ನಡೆಯದು, ನಡೆಯಿರಿ ಹೊರಗೆ' ಎಂದು ಬೆದರಿಸುವಳು. ಆದರೆ ಆತ ಅವಳ ಬಾಯಿ ಗಟ್ಟಿಯಾಗಿ ಹಿಡಿದು ದರದರನೆ ಎಳೆದು— ಛೆ, ಇಂದು ಸ್ಪೆಶಲ್ಲಾಗಿ ಮಾಡಿದ ಕಾರಮಂಜ್ಜಿಗೆಯನ್ನೇ ಮರೆತು ಬಿಟ್ಟಿದ್ದಾಳೆ—

ಅಷ್ಟರಲ್ಲಿ ಹೊರಗಿನ ಕದ ತಟ್ಟಿದ ಸದ್ದಾಯಿತು. ಯಾರಿರಬಹುದು ? ಬೇಗಬೇಗನೆ ಕೈತೊಳೆದುಕೊಂಡು ಎದ್ದಳು—

"ಯಾರವರು ? " ಎಂದು ಕೂಗಿ ಕೇಳಿದಳು.

ಮರಳಿ ಕದ ತಟ್ಟುವ ಸದ್ದು. ಮುಂದಿನ ಹಾಟೇಲಿನೆಡೆಗೆ ನೋಡಿದಳು. ಆ ಮಹಾಶಯನು ಬಾಲ್ಕನಿಯಲ್ಲಿದ್ದಿಲ್ಲ, ಕೋಣೆಯಲ್ಲಿಯೂ ಕಾಣಿಸಲಿಲ್ಲ. ಅಯ್ಯೋ, ಅವನೇ ಬಂದನೇ ?

"ಏ ಬಾಯೀ, ಕದ ತೆರೆಯಿರಿ"

ಅಯ್ಯೋ, ಹಾಳು ಮುಂಡೇದೇ— ಕೆಲಸಗಿತ್ತಿ, ಎಂದು ಉಸಿರುಗರೆದು ಕದ ತೆರೆಯಲು ಹೋದಳು.

ಕೆಲಸವೆಲ್ಲ ಮುಗಿಯಿತು. ಇನ್ನೇನು ಮಾಡುವದು ಸಂಜೆಯ ತನಕ ? ರಾಗಿಣಿಗೆ ಏನೂ ತೋಚದು.

ತುಟಿಯ ಮೇಲೆ ಮುಗುಳುನಗೆಯೊಂದನ್ನು ಬೆಳಗಿಸುತ್ತಿದ್ದ.

ರಾಗಿಣಿಯ ಮೈ ಬೆವರತೊಡಗಿತು. ಹಾದಿಯಿಂದ ಹೋಗುವ ದೆವ್ವ ಮನೆ ಸೇರುವದೇ ಎಂಬ ಭೀತಿಯುಂಟಾಯಿತು. ಅವನ ಮುಗುಳುನಗೆಯಲ್ಲಿ ಅಡಕವಾದ ಸಂಕಟ–ಸಾಹಸ–ಅನೀತಿ–ಅವನತಿಗಳು ಅವಳ ಮನಸ್ಸಿನಲ್ಲಿ ಗುಲ್ಲೆಬ್ಬಿಸಿದವು... ಯಾವದೋ ಒಂದು ಭಯಂಕರ ಅನಿಷ್ಟದ ಹೊಸ್ತಿಲಲ್ಲಿ ತಾನು ಬಂದು ನಿಂತಿದ್ದೇನೆ ಎಂಬ ಭೀತಿ ಅವಳ ಮನಸ್ಸನ್ನು ಹಿಂಡತೊಡಗಿತು. ದಿಙ್ಮೂಢಳಾದ ರಾಗಿಣಿ ಧಡಾರನೆ ಕಿಡಕಿಯ ಬಾಗಿಲನ್ನು ಮುಚ್ಚಿದಳು. ಆದರೂ ಕುತೂಹಲದಿಂದ ಬದಿಯ ಕೋಣೆಯ ಕಿಡಕಿಯ ಮರೆಯಲ್ಲಿ ನಿಂತು ಗುಪ್ತವಾಗಿ ಆ ಮಹಾಶಯನ ವರ್ತನೆಯನ್ನು ನಿರೀಕ್ಷಿಸತೊಡಗಿದಳು. ಆತ ಮುಗುಳು ನಗುತ್ತ, ಬೇಗ ಬೇಗನೆ ಅರಿವೆ ಹಾಕಿಕೊಂಡು ಹೊರಗೆ ಹೊರಡುವ ಸಿದ್ಧತೆ ಮಾಡುತ್ತಿದ್ದುದನ್ನು ನೋಡಿದೊಡನೆ ಅವಳ ಜಂಘಾಬಲವೇ ಉಡುಗಿ ಹೋಯಿತು...

ಆತ ಇಲ್ಲಿಯೇ ಬರುತ್ತಿದ್ದಾನೆ–ಅವನ ಮನಸ್ಸು ಉತ್ತೇಜಿತವಾಗಿದೆ–ಬರುತ್ತಿದೆ ಹೊಸನಾತ ಹತ್ತಿದ ಶ್ವಾಪದ! ಎಲ್ಲಿಯಾದರೂ ಓಡಿ ಹೋಗಬೇಕು–ಆತ್ಮ ರಕ್ಷಣೆಗೆ–ಈ ಸಂಕಟದಿಂದ ದೂರ–

ರಾಗಿಣಿ ಟೇಬಲ್ ಮೇಲಿನ ಕೀಲಿ ಕೀಲಿಕೈ ತೆಗೆದುಕೊಂಡು ಓಡುತ್ತ ಮನೆಯ ಹೊರಗೆ ಹೋಗಿ, ಬಾಗಿಲು ಹಾಕಿ, ಬೀಗ ಹಾಕಿ, ಸರಸರನೆ ಮುಚ್ಚಿದ ಪ್ಲ್ಯಾಟುಗಳ ಮುಂದಿನಿಂದ ಓಡುತ್ತ ಹೋಗಿ ಶಾಲಿನಿಯ ಮನೆಯ ಕದ ಬಡೆದು ಕಂಪಿತ ಸ್ವರದಲ್ಲಿ ಕೂಗಿದಳು. "ಶಾಲಿನೀ, ಶಾಲಿನೀ."

ಶಾಲಿನಿ ಇದ್ದಿಲ್ಲ. ಅವಳ ತಾಯಿ ಕೇಳಿದಳು.

" ಹುಕ್ಕು ಹಚ್ಚಲು ಉದ್ಯುಕ್ತಳಾದಳು "

ಎಮ್ಮೆಯ ಸ್ವಾನುಭಾವ



ಈ ಪ್ರಜಾರಾಜ್ಯದಲಿ ನಾನೊಂದು ಎಮ್ಮೆ
ವೋಟು ಕೊಡಬೇಕೆಂದು ಹೇಳಿದರು ಒಮ್ಮೆ
ವೋಟು ಕೊಟ್ಟರು ನನಗೆ ಬರಲಿಲ್ಲ ಹಾಲು !
ನನ್ನ ಮೊಲೆ ವ್ಯರ್ಥವಾಯ್ತೇನು ಹೋಲ್‌ಸೇಲು ?

—ದಿನಕರ ದೇಸಾಯಿ

"ಬಾ ರಾಗಿಣೀ, ಯಾಕೆ ಏನಾಯಿತು? ಹೆದರಿದಂತೆ ಕಾಣಿಸುವಿಯಲ್ಲ."

"ಏನಿಲ್ಲ, ಹೀಗೆ ಮಲಗಿದ್ದೆ. ಏನೋ ಭಯಂಕರ ಕನಸು ಬಿತ್ತು. ಹೆದರಿ ಮನಸ್ಸನ್ನು ಸ್ವಲ್ಪ ಶಾಂತಗೊಳಿಸಲು ಇಲ್ಲಿ ಬಂದೆ..."

"ಕೂತುಕೋ ಹಾಗಾದರೆ. ಬೇಸರ ಬಂದು ನಾನೂ ಚಹಾಕ್ಕೆ ನೀರಿಟ್ಟಿದ್ದೆ...ನಿನಗೂ ಒಂದು ಕಪ್ಪು ಮಾಡಿ ತರುವೆ– ಹಾಂ?" ಶಾಲಿನಿಯ ತಾಯಿ ಒಳಗೆ ಹೊದಳು.

ರಾಗಿಣಿ ಎದ್ದು ಟೇಬಲ್ಲ ಮೇಲಿನ ಒಂದು ಮಾಸಿಕ ಎತ್ತಿಕೊಂಡು, ತೆಗೆದು, ಒಂದು ಬೆರಳಿಟ್ಟು ಮುಚ್ಚಿ ಹೊರಗಿನ ಕದದ ಕಡೆಗೆ ಹೋಗಿ ನಡುಗುವ ಕೈಗಳಿಂದ ಬಾಗಿಲ ಪಡದೆ ಕಿಂಚಿತ್ ತೆರೆದು ಹೊರಗೆ ಹಣಿಕಿ ಹಾಕಿ ತನ್ನ ಮನೆಯತ್ತ ನೋಡಿದಳು... ಹೌದು, ಆ ಮಹಾನುಭಾವನೇ! ಅವಳ ಕಾಲು ಶಕ್ತಿಹೀನವಾಗಿ ನಿಂತಲ್ಲಿಯೇ ನಿಂತವು. ಆತ ಅತ್ತ ಇತ್ತ ನೋಡಿ ದಿಗಿಲುಗೊಂಡು, ಏನು ಮಾಡಬೇಕೋ ಗೊತ್ತಾಗದೆ ನಿರಾಶನಾಗಿ, ನಿರುಪಾಯನಾಗಿ, ಒಮ್ಮೆಲೆ ಜೋರಿನಿಂದ ಬಾಗಿಲ ಬೀಗವನ್ನು ಜಗ್ಗಿ, ಕೈ ಚಲ್ಲಿ, ಮರಳಿ ಅತ್ತ ಇತ್ತ ನೋಡಿ, ಬೇಗ ಬೇಗನೆ ಮೆಟ್ಟಲು ಇಳಿದು ಹೋದ. ರಾಗಿಣಿ ದೀರ್ಘ ನಿಟ್ಟುಸಿರು ಬಿಟ್ಟಳು...

"ರಾಗಿಣೀ, ಹಿಡಿ ಚಹಾ. ಏನು ನೋಡುತ್ತಿರುವಿ?– ನಾರಾಯಣರಾವ ಇಂದು ಬೇಗ ಬರುವವರಿದ್ದಾರೇನು?" ಎಂದು ಶಾಲಿನಿಯ ತಾಯಿ ಚಿಚ್ಚನೆ ನಕ್ಕಳು.

———




(ಅವನವಳ ಸಂವಾದ)

"ಮದುವೆಗೂ ಮುಂಚೆ ನಿನ್ನನ್ನು ಕಂಡಾಗ,
ಎಷ್ಟೊಂದು ಥಳಕಿತ್ತು ಎಷ್ಟೊಂದು ಹೊಳಪಿತ್ತು
ಬಳ್ಳಿಯಂದದಲಿ ಬಳಕುತಿದ್ದೆ
ಐದು ವಾರಿನ ಸೀರೆ ಸಾಲುತ್ತಿತ್ತು
ನಾಜೂಕು ನಿನ್ನಲ್ಲಿ ಮೈವೆತ್ತು ನಿಂತಿತ್ತು
ನೀ ಬಾಜೂಕು ಬಂದರೂ ಅಂದವಿರುತ್ತಿತ್ತು."

"ನನ್ನೊಡನೆ ಬರಲು ನಾಚಿಕೆಯೇ ನಿಮಗೆ ?
ಮದುವೆಗೂ ಮುಂಚೆ ನನಗಾಗಿ ನೀವಂದು
ಮಳೆಗಾಗಿ ಹಾತೊರೆವ ಕಪ್ಪೆಯಂದದಲಿ
ಬಾಯಿ ಬಿಡುತ್ತಿದ್ದಿರಲ್ಲ !
ನಲ್ಲೆ, ಚಲುವೆ, ಮುದ್ದು, ಲತಾಂಗಿ
ಎಂಬೆಲ್ಲ ಶಬ್ದಗಳ ಮಾಲೆ ಪೋಣಿಸುತ
'ಹೇ ಪ್ರಿಯೇ ನೋಡೆನ್ನ ಸಾಹಸವ
ಚಂದ್ರತಾರೆಯ ತಂದು ನಿನ್ನ ಜಡೆ
ಯೊಳಿಡುವೆ'- ಎಂದು ಹೆಮ್ಮೆ ಕೊಚ್ಚುತ್ತಿದ್ದಿರಲ್ಲ
ಎಲ್ಲಿಹನು ಚಂದ್ರ; ಎಲ್ಲಿಹಳು ತಾರೆ ?
ಸಾಕಿರಲಿ ಕೊಡಿಸಿ ನೈಲಾನು ಸೀರೆ."

"ಹೇ ಪ್ರಿಯೇ ಹಳೆಯ ಕತೆಯನು ನೆನಿಸಿ
ಕೋಣದಂದಲಿ ಎನ್ನ ಮನ ಕದಡಬೇಡ
ಪ್ರೇಮವೆಂಬುವ ಮಣ್ಣು ತಳದಲ್ಲಿ ಕುಳಿತಿರಲಿ
ಅಲ್ಲಿಯೇ ಉಳಿಯುವುದು ಅದಕಿನ್ನು ಚೆನ್ನು
ಹೇ 'ಗಜಗುನ್ನಿ' ಯೇ ಇನ್ನೆಲ್ಲ ತರಲಿ
ನಿನೆಗಿನ್ನು ನೈಲಾನು - ನಾನೊಬ್ಬ ಕಾರಕೂನು"

"ಚನ್ನಿ ಚಲುವೆ ಎಂದು ಕರೆಯುತಿದ್ದಿರಲ್ಲ
ನಿಮಗಿಂದು ಆ 'ನಾನು' ಗಜಗುನ್ನಿ ಯೇ?
ತುತ್ತು ಕೂಳನು ತಿಂದು ಸೊರಗಿ ಹೋಗಿದೆ ದೇಹ
ಎಂದು ಕಂಡವರು ಹೇಳುತ್ತಿಹರಲ್ಲ
ನೆರೆಮನೆಯ ತುಂಗವ್ವ ನನಗೂ ದಪ್ಪ
ಹಿಂದಿ ಚಿತ್ರತಾರೆ ಟುನ್- ಟುನ್ನಿ ನಂತೆ
ಅವಳೇ ಹೇಳಿದಳು ನಾ ನಾಜೂಕಂತೆ"

"ನಿನ್ನಿಂದ ಲೋಟ ಕಾಫಿಯನ್ನು ಗಿಟ್ಟಿಸುತ
ಪೂಟ ಮಾಡಿರಬೇಕು ಆ ಪುಟ್ಟ 'ದೇಹಿ'
ನನಗಿಂತ ಮೂರುಸಲ ಹೆಚ್ಚು ಉಣುತಿರುವೆ
(ಅದೂ ಈ ರೇಶನ್ ಕಾಲದಲ್ಲಿ)
'ಎಂತು ಕರೆಯಲಿ ನಿನ್ನ ನಾಜೂಕು ಎಂದು ?"

"ಸಾಕು ಮುಗಿಸಿ ನಿಮ್ಮ ಬಾಯಿ ಬಡಾಯಿ
ಎದ್ದಾವು ನಿಮ್ಮ ಮೊದ್ದು ಮಣಿಗಳು
ಇದೇ ಈಗ ಮಲಗಿಹವು ಎನ್ನ ಪ್ರಾಣ ಹಿಂಡಿ
ಆಫೀಸಿನಲ್ಲಿ ಅರಾಮು ಅಲೆದಾಡಿ ಬರುತೀರಿ
ನಿಮಗೇನು ಗೊತ್ತು ಮನೆಯ ಜಗತ್ತು"



"ಹೊತ್ತು ಕಳೆಯುವ ಕ್ಲಬ್ಬೇನೇ ಆಫೀಸು
ಅಲ್ಲಿ ಪೈಲುಗಳ ರಾಶಿಯಲ್ಲಿ ಮುಳುಗಿರುವೆ. ಗೊತ್ತೆ?
ಸುದೈವದಲಿ ಬಂದಿರುವೆ ಇಂದು ನಾ ವಾಪಸು
ನನ್ನ ಬುದ್ಧಿಯೂ ಸವೆದಿಲ್ಲ ಎಳ್ಳಷ್ಟು ಗೊತ್ತೆ.?"

"ನನಗೆಲ್ಲ ಗೊತ್ತು-ನಿಮ್ಮ ಆಫೀಸ ಗತ್ತು.
ನನ್ನ ಮುಂದೇಕೆ ಇದೆಲ್ಲ ಕಸರತ್ತು ?
ಇರಲಿ-ಬರುವ ದೀಪಾವಳಿಗೆ
ತವರಿನವರೆಲ್ಲ ಬರುತಿಹರು ಗೊತ್ತೇ ?
ತರತರದ ಉಡುಗೊರೆಯ ತಂದಿರಿಸಿ ಮತ್ತೆ."

"ಹಬ್ಬ ಹುಣ್ಣಿಮೆ ಬೇಡ ಈ ತುಟ್ಟಿ ಕಾಲದಲಿ
ಕಾಳುಕಡಿಗಳೇ ಬಂದಿಲ್ಲ ಬಾಜಾರಿನಲ್ಲಿ
ದೀವಾಳಿಯನ್ನೇ ಬರಮಾಡಿಕೊಂಡಂತೆ
ತವರಿನವರೆಲ್ಲ ಬಂದು ಸೇರಿದರಿಲ್ಲಿ"

"ನನ್ನ ತವರೆಂದರೇ ನಿಮಗೆ ತಲೆಬೇನೆಯಷ್ಟೇ ?
ಅವರಿಂದಲೇ ನಿಮ್ಮ ದೀವಾಳಿ ತಾನೇ ?
ನೀವೊಬ್ಬರೇ ಇಲ್ಲಿ ಚಕ್ಕಂದವಾಡಿ
ನನ್ನನ್ನು ತವರೂರ ದಾರಿಯಲಿ ದೂಡಿ."

"ಹೇ (ಸಖಿ) ಶಶಿಯೇ. ನಿನ್ನ ಮೂಗ ರಾಕೆಟ್ಟನೇರಿ
ಕೋಪವಿಳಿದಿಹುದು ಎನ್ನ ಮನಚಂದ್ರನೊಳಗೆ
ಅಲ್ಲೋಲ ಕಲ್ಲೋಲವೀ ಲೋಕದೊಳಗೆ

ಸದ್ಯ ಶಾಂತಗೊಳಿಸು ಬಾ-
ನನ್ನಲ್ಲಿ ನೀ ಸೇರಿ ನಿನ್ನಲ್ಲಿ ನಾ ಸೇರಿ
ಬಾಳ ಬಟ್ಟಲಲಿ—
ಹಾಲು-ಡಿಕಾಕ್ಷನ್ ಆಗೋಣ ಬಾ"

—ಶ್ರೀನಿವಾಸ ಕುಲಕರ್ಣಿ
ಧಾರವಾಡ

ಭವಿಷ್ಯಕಥನ ಕಾರ್ಯಾಲಯ :

ಜ್ಯೋತಿಷಿ :
ಶ್ರೀ ಕೃಷ್ಣಶಾಸ್ತ್ರಿ ಭಿಡೆ
ಮುತ್ತೀಕೊಪ್ಪ ಕಟ್ಟಡ
ಕಪಿಲೇಶ್ವರ ಬೀದಿ, ಬೆಳಗಾವಿ

# ವರ್ಷಭವಿಷ್ಯ

**ಶ್ರೀ ಶಕೆ ೧೮೮೭ ಕಾರ್ತಿಕ ಶುದ್ಧ ಪ್ರತಿಪದೆ ಸೋಮವಾರದಿಂದ ಶಕೆ ೧೮೮೮ ಆಶ್ವಿನ ಬಹುಳ ಅಮಾವಾಸ್ಯೆ ಶನಿವಾರ ಅಂದರೆ ೧೯೬೫ ಅಕ್ಟೋಬರ್ ೨೫ ರಿಂದ ೧೯೬೬ ನವೆಂಬರ್ ೧೨ ರ ವರೆಗಿನ ಅಂದರೆ ಶ್ರೀ ವಿಕ್ರಮಸಂವತ್ ೨೦೨೨ ರ ಒಂದು ವರ್ಷದ ಭವಿಷ್ಯ.**

(ಈ ದೀಪಾವಳಿಯಿಂದ ಮುಂದಿನ ದೀಪಾವಳಿಯ ವರೆಗೆ)

**ಸೂಚನೆ:—** ಈ ವರ್ಷಭವಿಷ್ಯವು ಸ್ಥೂಲವಾದದ್ದು. ಅವರವರ ಜನ್ಮಕುಂಡಲಿಯ ಮೇಲಿಂದ ಭವಿಷ್ಯ ಹೇ… ವರೆ ಮಾತ್ರ ಅದು ಪೂರ್ಣ ಸತ್ಯವಾಗಿ ಪರಿಣಮಿಸುವುದು. ಆದರೂ ಈ ಭವಿಷ್ಯದಿಂದ ಆಯ… ರಾಶಿಯವರಿಗೆ ಆಗಬಹುದಾದ ದುಷ್ಟ ಸುಷ್ಟ ಪರಿಣಾಮಗಳ ಕಲ್ಪನೆ ಮಾತ್ರ ನಿಶ್ಚಿತ ಬರುವುದ… ಜನ್ಮರಾಶಿಯಂತೆ ಜನ್ಮಲಗ್ನದಿಂದಲೂ ಭವಿಷ್ಯ ಹೇಳಿದರೆ ಅದು ಹೆಚ್ಚು ನಿಜವಾಗಿ ಪರಿಣಮಿಸಿದ… ಕಂಡುಬರುವುದು.

## ಮೇಷ

ಈ ವರ್ಷ ಈ ರಾಶಿಯ ಬಹುತ್ತರ ಎಲ್ಲರಿಗೂ ಬಹಳ ಯಶೋದಾಯಕವೇನಲ್ಲದಿ-ದ್ದರೂ ಮಧ್ಯಮಪ್ರತಿಯದಾಗಿದೆಯೆಂದು ನಿಶ್ಚಿತ ತಿಳಿಯಬೇಕು.

ಈ ರಾಶಿಯವರಿಗೆ ಆರೋಗ್ಯದ ದೃಷ್ಟಿಯಿಂದ ಈ ವರ್ಷ ಮೇ ೧೧ರ ವರೆಗೆ ಹಾಗು ಸಪ್ಟೆಂಬರ್ ೭ರ ನಂತರ ಏನೂ ಕ್ಲೇಶವಿಲ್ಲ, ಆದರೆ ಮೇ ೧೨ ರಿಂದ ಸಪ್ಟೆಂಬರ್ ೬ ರ ವರೆಗಿನ ಅವಧಿಯಲ್ಲಿರುವ ೧೨ ನೆಯ ಶನಿಯಿಂದಾಗಿ ಸಾಡೇಸಾತಿಯ ತುಸು ಛಾಯೆ ಬೀಳುವುದರಿಂದ ಶೀತಜ್ವರ ಅಥವಾ ಸಂಧಿವಾತದಿಂದ ತುಸು ಕಷ್ಟವಾಗುವುದು.

ಈ ಸಲ ಸ್ವತಃಕ್ಕಿಂತ ಹೆಂಡತಿಯ ಆರೋಗ್ಯ ಹೆಚ್ಚು ಚನ್ನಾಗಿರುವುದಲ್ಲದೆ ಜೂನ್ ೨೪ ರಂದು ಬರುವ ೭ ನೆಯ ಕೇತುವು ಉಭಯತರಲ್ಲೂ ಪ್ರತಿಯೊಂದು ವಿಷಯದಲ್ಲೂ ಪೂರ್ಣ ಐಕಮತ್ಯವನ್ನು ಉಂಟುಮಾಡುವನು. ಜನೆವರಿ ೮ ರ ವರೆಗೆ ಹಾಗೂ ಮಾರ್ಚ್ ೨೫ ರಿಂದ ಅಗಸ್ಟ್ ೩೧ರ ವರೆಗಿನ ಅವಧಿಯಲ್ಲಿ ಅವಳ ವಿಚಾರದಂತೆ ವರ್ತಿಸಿದರೆ ಎಣಿಕೆಗಿಂತ ಹೆಚ್ಚು ಯಶಸ್ಸು ದೊರೆಯುವುದು. ಆದರೆ ೭ ನೆಯ ಕೇತುವಿರುವಾಗ ಮಕ್ಕಳ ಹಿತಾಹಿತಗಳ ಬಗೆಗೆ ಉಭಯತರಲ್ಲೂ ಒಂದೆರಡು ಸಲ ವಾಗ್ಯುದ್ಧವಾಗಬಹುದು. ಅವಿವಾಹಿತರ ವಿವಾಹವಾಗಬೇಕಿದ್ದರೆ ಎರಡು ಅಥವಾ ನಾಲ್ಕನೆಯ ಗುರುವಿಗಿಂತ ಮೂರನೆಯ ಗುರುವಿದ್ದಾಗ ಅಂದರೆ ಜನೆವರಿ ೮ ರ ವರೆಗೆ ಇಲ್ಲವೆ ಮಾರ್ಚ್ ೨೫ ರಿಂದ ಅಗಸ್ಟ್ ೩೧ ರ ವರೆಗಿನ ಅವಧಿಯಲ್ಲಿ ನಿಶ್ಚಿತವಾಗಿ ಮತ್ತು ಅಲ್ಪಾಯಾಸದಿಂದಾಗುವುದಲ್ಲದೆ ಪತ್ನಿಯು ರೂಪದಿಂದ ಸಾಮಾನ್ಯಳಾಗಿದ್ದರೂ ಗುಣದಲ್ಲಿ ಅತ್ಯುತ್ತಮಳಿರುವಳು. ಅವಳ ತವರುಮನೆಯ ಸ್ಥಿತಿಯು ಕೂಡ ನಿಮಗಿಂತ ಉತ್ತಮವಿರುವದು.

ನಿಮ್ಮ ಮಕ್ಕಳಲ್ಲಿ ಯಾರದಾದರೂ ವಿವಾಹ ಮಾಡುವುದು ನಿಮ್ಮ ಮನಸ್ಸಿನಲ್ಲಿದ್ದರೆ ಅದು ಹೊಂದಲು ತೊಂದರೆಯಾಗುವುದಿಲ್ಲವಷ್ಟೇ ಅಲ್ಲ. ವರ್ಷಾರಂಭದಿಂದ ಅಗಸ್ಟ್ ಕೊನೆಯೊಳಗಾಗಿ ಅದು ಆಗುವಂಥ ಬಾಸಿಂಗಬಲವಿದೆಯೆಂದು ತಿಳಿದು ಪ್ರಯತ್ನ ಮುಂದುವರಿಸಬೇಕು. ಆದರೆ ಸುತಸ್ಥಾನದ ಮೇಲೆ ೧೧ ನೆಯ ಶನಿಯ ದೃಷ್ಟಿಯಿರುವುದರಿಂದ ಒಮ್ಮೆ ಒಂದೆಡೆ ವಿವಾಹ ಹೊಂದಿದ್ದು ಎಲ್ಲಿ ಮುರುಗಡೆಯಾಗುವುದೊ ಎಂಬಂತಹ ಪರಿಸ್ಥಿತಿ ನಿರ್ಮಾಣವಾಗಬಹುದಾದರೂ ಕೊನೆಗೆ ಅದೇ ಸ್ಥಳದಲ್ಲೇ ಮದುವೆಯಾಗುವುದು ನಿಶ್ಚಿತವೆಂದು ತಿಳಿಯಬೇಕು.

ಮಕ್ಕಳ ಉತ್ಕರ್ಷಕ್ಕೆ ೧೨ ನೆಯ ಶನಿ ಇರುವಾಗ ಅಂದರೆ ಮೇ ೧೨ ರಿಂದ ಸಪ್ಟೆಂಬರ್ ೬ ರ ವರೆಗಿನ ಅವಧಿಯಲ್ಲಿ ಕೆಲ ವಿಘ್ನಗಳುಂಟಾಗುವವೇನೊ ಎಂಬಂತಹ ವಾತಾವರಣವುಂಟಾಗಬಹುದಾದರೂ ಅಂಥ ಯಾವ ವಿಘ್ನವೂ ವಾಸ್ತವದಲ್ಲಿ ಬರದೆಯೆ ವಾತಾವರಣ ತಾನಾಗಿಯೇ ತಿಳಿಗೊಳ್ಳುವುದು. ಉಳಿದ ಅವಧಿಯಲ್ಲಿ ಅವರಲ್ಲಿ ಬಹುತರ ಒಳ್ಳೆಯ ಬೆಳ್ಳಿಗೆಯಾಗುವುದಲ್ಲದೆ ಅವರಿಂದ ಉತ್ತಮ ಸುಖವೂ ದೊರೆಯುವುದು. ಅಳಿಯ ಅಥವಾ ಸೊಸೆ ಮನಸ್ಸಿಗೊಪ್ಪುವಂಥವರಾಗಿರುವರು.

ಉದ್ಯೋಗ, ಧಂದೆಗಳಲ್ಲಿ ಈ ವರ್ಷ ಭಾಗ್ಯೇಶ ಗುರು ೨ ಹಾಗೂ ೩ ನೆಯವನಾಗಿರುವಾಗ ಅಂದರೆ ಅಗಸ್ಟ್ ೩೧ ರ ವರೆಗೆ ವ್ಯಾಪಾರ ಇಲ್ಲವೆ ನೌಕರಿ ಮಾಡುವವರಿಗೆ ಬಹಳ ಯಶೋದಾಯಕವಿದೆ. ಮುಂದೆ ೪ ನೆಯ ಗುರುವಿನಲ್ಲಿ ಒಕ್ಕಲತನ ಅಥವಾ ತೋಟಪಟ್ಟಿ ಮಾಡಿಕೊಂಡವರಿಗೆ ಹೆಚ್ಚು ಲಾಭದಾಯಕವಿದೆ. ವಿಶೇಷತಃ ಶ್ರಮಜೀವಿಗಳಿಗಿಂತ ಬುದ್ಧಿಜೀವಿಗಳಿಗೆ ಈ ವರ್ಷ ಹೆಚ್ಚು ಲಾಭಕರವೆನಿಸಿದೆ. ಅದರಂತೆಯೆ ೧೨ ನೆಯ ಶನಿಯ ಕಾಲಕ್ಕೆ ಅಂದರೆ ಮೇ ೧೧ ರಿಂದ ಸಪ್ಟೆಂಬರ್ ೭ ರ ವರೆಗೆ ವ್ಯಾಪಾರಿಗಳಿಗೆ ಉತ್ತಮ ಕಾಲವಾಗಿದ್ದರೆ ನೌಕರದಾರರಿಗೆ ಕೆಲಸದ ಒತ್ತಡದಿಂದಾಗಿ ಇಲ್ಲವೆ ಪ್ರತಿಕೂಲವಾದ ಊರಿಗೆ ಬದಲಿಯಾಗುವುದರಿಂದಾಗಿ ಅಥವಾ ಮೇಲಧಿಕಾರಿಯು ಕೈಕೆಳಗಿನವರನ್ನು ಕೆಟ್ಟ ರೀತಿಯಿಂದ ನಡೆಸಿಕೊಳ್ಳುವುದರಿಂದಾಗಿ ಬಹಳ ಕಷ್ಟವಾಗುವ ಭೀತಿಯಿದೆ ಅದರಂತೆಯೆ, ಲಾ… ವೆಷ್ಟೇ ಆದರೂ ೧ ನೆಯ ರಾಹು ಹಾಗೂ ೧೨ ನೆ… ಶನಿಯಿದ್ದಾಗ ತುಸು ಕೂಡ ಸಂಗ್ರಹವಾಗುವ… ಕಠಿಣ. ನಂತರ ಸಪ್ಟೆಂಬರ್ ೭ ರಿಂದ ತುಸು… ಸಂಗ್ರಹ ಸಾಧ್ಯವಾಗಬಹುದು. ರಾಹು ೨ ನೆಯ… ನಾಗಿರುವಾಗ ಅಂದರೆ ಜೂನ್ ೨೪ ರ ವರೆಗೆ ಗೃಹ… ಕಲಹ ಕೂಡ ಜೋರಾಗಿಯೇ ನಡೆಯಬಹುದು… ಮತ್ತು ಅನೇಕರು ಬೇರೆಯಾಗುವ ಸಂಭವ ಕೂ… ಇದೆ. ೪ ನೆಯ ಗುರುವಿದ್ದಾಗ ಯಾತ್ರೆ ಇ… ಅನೇಕ ಧಾರ್ಮಿಕ ಕೃತ್ಯಗಳು ಜರುಗಬಹುದು ಹಾಗ… ಹಲವಾರು ಶುಭ, ಭಾವೀಸೂಚಕ ಸ್ವಪ್ನಗಳನ… ಕಾಣುವಿರಿ. ಅದರಂತೆಯೆ, ಪ್ರಿಯ ಆಪ್ತರ… ಕೆಲವರ ಒಳ್ಳೆಯ ಉತ್ಕರ್ಷವಾಗುವುದಲ್ಲದೆ ಅ… ರಿಗೆ ನೀವು ಬಹಳ ಬೇಕಾದವರಾಗುವಿರಿ. ವಾಹ… ಸುಖ ಉತ್ತಮ. ಕೈ ಕೆಳಗಿನ ನೌಕರ ಚಾಕರರ… ನಿಷ್ಠೆಯಿಂದ ವರ್ತಿಸುವರು.

ದಾವೆ, ಫಿರ್ಯಾದಿ ಅಥವಾ ಇತರ ಸ್ಪರ್ಧೆಯ… ಕಾರ್ಯಗಳಲ್ಲಿ ೧೨ ನೆಯ ಶನಿಯ ಕಾಲಕ್ಕೆ ಮಾತ್ರ ಸೋಲಿನ ಭೀತಿಯಿದೆ, ಆದರೆ ಅವನು ೧೧ ನೆಯವನಾಗಿದ್ದಾಗ ಯಶಸ್ಸು ಕಟ್ಟಿಟ್ಟದ್ದು.

ಈ ರಾಶಿಯ ಗರ್ಭಿಣಿಯರು ಶನಿ ೧೧ ನೆಯ…

ವನಾಗಿದ್ದಾಗ ಪ್ರಸೂತರಾದರೆ ತುಸು ಕಷ್ಟವೆನಿಸಿದರೂ ನಿರ್ವಿಘ್ನವಾಗಿ ಹೆರಿಗೆಯಾಗುವುದು, ಆದರೆ ಸಪ್ಟೆಂಬರ್ ೩ ರ ನಂತರವಾದರೆ ವಿಶೇಷ ಕಷ್ಟವೆನಿಸುವ ಸಂಭವವಿದೆ. ಆದರೂ ಯಾರಿಗೂ ಪ್ರಾಣಾಪಾಯವೇನಿಲ್ಲ. ಗುರು ೨ ಮತ್ತು ೩ ನೆಯವನಾಗಿದ್ದಾಗ ಪ್ರಸೂತರಾದರೆ ಬಹುಶಃ ಪುತ್ರಲಾಭವಾಗುವ ಯೋಗವಿದೆ.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ಗುರು ೨ ಅಥವಾ ೩ ನೆಯವನಿರುವಾಗ ಅಂದರೆ ಅಗಸ್ಟ ೩೧ ರ ವರೆಗಾದರೆ ಅವರು ನಿಶ್ಚಿತ ಉತ್ತೀರ್ಣರಾಗುವರು.

---

# ವೃಷಭ

ಈ ವರ್ಷ ಈ ರಾಶಿಯುವರಿಗೆ ಜೂನ್ ೨೪ರ ವರೆಗೆ ಮಧ್ಯಮ. ಆದರೆ ಅನಂತರ ಬಹಳಷ್ಟು ವಿಷಯಗಳಲ್ಲಿ ತುಂಬ ಯಶಸ್ವಿನದೂ ಒಳ್ಳೆಯ ಸಮಾಧಾನಕರವೂ ಇರುವ್ರದು ನಿಶ್ಚಿತ.

ಈ ರಾಶಿಯವರಿಗೆ ಒಟ್ಟಿನಲ್ಲಿ ಈ ವರ್ಷ ಗುರು ಹಾಗು ಶನಿ ಮತ್ತು ಜೂನ್ ೨೪ ರ ನಂತರ ರಾಹು ಈ ವಿಶೇಷ ದೊಡ್ಡ ಗ್ರಹಗಳು ರಾಶಿ ಹಾಗು ಸ್ಥಾನಗಳೆರಡರಲ್ಲೂ ಬಲಿಷ್ಠರಾಗಿರುವುದರಿಂದ ಆರೋಗ್ಯ ಉತ್ತಮವೇ ಆಗಿರುವುದು. ಆದರೆ ಮಂಗಳ ೮ ನೆಯವನಾಗಿರುವಾಗ ಅಂದರೆ ನವೆಂಬರ್ ೫ ರಿಂದ ಡಿಸೆಂಬರ್ ೧೪ ರ ವರೆಗಿನ ಅವಧಿಯಲ್ಲಿ ತುಸು ಕ್ಲೇಶವೆನಿಸಬಹುದಾಗಿದೆ. ಮನೋತ್ಸಾಹ ಹೆಚ್ಚಿಸುವಂತಹ ಘಟನೆಗಳು ಒಂದರ ಹಿಂದೊಂದರಂತೆ ಅನೇಕ ಬಾರಿ ಸಂಭವಿಸುವುದರಿಂದ ಮನಸ್ಸು ಒಳ್ಳೆಯ ಆನಂದದಿಂದಿರುವುದಲ್ಲದೆ ನಿರ್ಭಯುವೂ ಆಗಿರುವುದು.

ಹೆಂಡತಿಯ ಆರೋಗ್ಯ ಮಾತ್ರ ಕೇತು ೭ ನೆಯವನಾಗಿದ್ದಾಗ ಅಂದರೆ ಜೂನ್ ೨೪ ರ ವರೆಗೆ ತುಸು ಕಿರಿಕಿರಿಯದಾಗಿರಬಹುದು. ಭಾರ್ಯೇಶ ಮಂಗಳ ಹಾಗು ನಿಮ್ಮ ರಾಶಿಸ್ವಾಮಿಯೂ ಸ್ತ್ರೀಸುಖ ದರ್ಶಕನೂ ಆಗಿರುವ ಶುಕ್ರ ಇಬ್ಬರೂ ವರ್ಷಾರಂಭದಿಂದಲೇ ಭಾರ್ಯಾಸ್ಥಾನದಲ್ಲಿರುವುದರಿಂದ ಉಭಯತರಲ್ಲೂ ಎಲ್ಲ ವಿಷಯಗಳಲ್ಲೂ ಐಕಮತ್ಯವಿರುವುದಲ್ಲದೆ ಪರಸ್ಪರ ಪ್ರೇಮ, ನಿಷ್ಠೆಗಳು ಹಿಂದಿಗಿಂತಲೂ ಹೆಚ್ಚೆನಿಸುವವು. ಅದರಂತೆಯೆ ಅವಿವಾಹಿತರ ವಿವಾಹವಾಗುವುದಿದ್ದರೆ ೨ ನೆಯ ಗುರುವಿಗಿಂತ ೧ ಹಾಗು ೩ ನೆಯ ಗುರುವಿದ್ದಾಗ ಹೆಚ್ಚು ಅನುಕೂಲವಿದೆಯೆಂದು ತಿಳಿಯಬೇಕು. ಅಂದರೆ ಜನವರಿ ೮ ರಿಂದ ಮಾರ್ಚ್ ೨೪ ರ ವರೆಗೆ ಹಾಗು ಸಪ್ಟೆಂಬರ್ ೧ ರಿಂದ ಮುಂದಿನ ಅವಧಿಯಲ್ಲಾದರೆ ಅಲ್ಪಾಯಾಸದಿಂದಾಗುವ ಯೋಗವಿದೆ. ಜೂನ್ ೨೪ ರ ವರೆಗಿನಕ್ಕಿಂತ ಅನಂತರ ವಿವಾಹವಾದರೆ ವಧು ಹೆಚ್ಚು ಜಾಣಳೂ ವಿಶೇಷ ಭಾಗ್ಯವತಿಯೂ ಆಗಿರುವ ಸಂಭವವಿದೆ.

ನಿಮ್ಮ ಮಕ್ಕಳಲ್ಲಿ ಯಾರದಾದರೂ ವಿವಾಹ ಮಾಡುವದಿದ್ದರೆ ಅದಕ್ಕೆ ೧ ಹಾಗು ೨ ನೆಯ ಗುರುವಿರುವಾಗ ಅನುಕೂಲತೆ ಹೆಚ್ಚೆಂದು ತಿಳಿಯಬೇಕು. ಅಂದರೆ ವರ್ಷಾರಂಭದಿಂದ ಸಪ್ಟೆಂಬರ್ ೧ ರ ವರೆಗೆ ಈ ಅನುಕೂಲತೆಯಿದ್ದೇಯಿದೆ. ಅದರಲ್ಲೂ ೧ ನೆಯ ಗುರುವಿರುವಾಗ ಅಂದರೆ ಜನವರಿ ೮ ರಿಂದ ಮಾರ್ಚ್ ೨೪ ರ ವರೆಗೆ ವಿವಾಹ ಅಲ್ಪಾಯಾಸದಿಂದ ಹೊಂದುವುದು ಹಾಗು ಒಳ್ಳೆಯ ಸಡಗರದಿಂದ ಜರುಗುವುದು. ಅಳಿಯ ಅಥವಾ ಸೊಸೆ ರೂಪ, ಗುಣಗಳೆರಡರಲ್ಲೂ ಉತ್ತಮರೇ ಆಗಿರುವರಾದರೂ ಜೂನ್ ೨೪ ರ ನಂತರ ಈ ಬಗ್ಗೆ ನಿಮ್ಮ ಮನಸ್ಸಿಗೆ ತುಸು ಚಿಂತೆಯೆನಿಸುವುದು. ೨ ನೆಯ ಗುರುವಿದ್ದಾಗ ಅಂದರೆ ಜನವರಿ ೮ ರ ವರೆಗೆ ಹಾಗು ಮತ್ತೆ ಮಾರ್ಚ್ ೨೪ ರಿಂದ ಅಗಸ್ಟ ೩೧ ರ ವರೆಗಿನ ಅವಧಿಯಲ್ಲಿ ನಿಮ್ಮ ಹಾಗು ಮಕ್ಕಳ ನಡುವೆ ತುಸು ವಿರಸವುಂಟಾಗಬಹುದು, ಆದರೆ ಇತರ ವೇಳೆಯಲ್ಲಿ ಉತ್ತಮ. ಸಪ್ಟೆಂಬರ್ ೧ ರಂದು ಬರುವ ೩ ನೆಯ ಗುರುವಿನಿಂದ ಮಕ್ಕಳಲ್ಲಿ ಕೆಲವರ ಉತ್ಕರ್ಷವೂ ಆಗಬಹುದು.

ಉದ್ಯೋಗ, ಧಂದೆ ಅಥವಾ ನೌಕರಿಯ ಬಗೆಗಿನ ಯೋಗವನ್ನು ನೋಡಿದರೆ ಇಡೀ ವರ್ಷ ಭಾಗ್ಯೇಶ ಹಾಗು ಕರ್ಮೇಶ ಶನಿಯು ಮೇ ೧೧ ರ ವರೆಗೆ ಹಾಗು ಮತ್ತೆ ಸಪ್ಟೆಂಬರ್ ೬ ರ ನಂತರ ಇದೇ ಸ್ಥಾನದಲ್ಲಿ ಅಂದರೆ ೧೦ ನೆಯವನಾಗಿ ತನ್ನದೇ ಆದ ಕುಂಭರಾಶಿಯಲ್ಲಿರುವನು. ಮಧ್ಯಂತರ ಅವಧಿಯಲ್ಲಿ ಅಂದರೆ ಮೇ ೧೨ ರಿಂದ ಸಪ್ಟೆಂಬರ್ ೫ ರ ವರೆಗೆ ೧೧ ನೆಯವನಾಗಿ ಲಾಭಸ್ಥಾನದಲ್ಲಿ ಮತ್ತು ಮಿತ್ರರಾಶಿಯಾದ ಮೀನದಲ್ಲಿ ಇರುವನಲ್ಲದೆ ಲಾಭೇಶ ಗುರುವು ಕೂಡ ಕೆಲ ದಿನ ೧ ನೆಯವನಾದರೆ ಹಲ ದಿನ ೨ ನೆಯವನಾಗಿಯೂ ಮತ್ತೆ ಕೆಲ ದಿನ ೩ ನೆಯವನಾಗಿ ಉತ್ತಮ ಪರಿಭ್ರಮಣದಲ್ಲಿರುವುದರಿಂದ ಕಳೆದ ಅನೇಕ ವರ್ಷಗಳಿಗಿಂತ ಈ ವರ್ಷ ಹೆಚ್ಚು ಪ್ರಗತಿಪರವೂ ದೊಡ್ಡ ಪ್ರತಿಷ್ಠೆಯದೂ ವಿಪುಲ ಲಾಭವನ್ನುಂಟುಮಾಡುವಂಥದೂ ಆಗಿರುವುದು ನಿಶ್ಚಿತ. ಉದ್ಯೋಗದಲ್ಲಿ ಹೆಚ್ಚಳವಾಗುವುದಲ್ಲದೆ ಆ ಮಾನದಿಂದ ಪತ್ತು ಮತ್ತು ದ್ರವ್ಯಲಾಭಗಳು ಕೂಡ ಒಂದೇ ಪ್ರಮಾಣದಲ್ಲಿ ಹೆಚ್ಚುತ್ತಿರುವವು. ನಿಮ್ಮ ಸದ್ಯದ ಉದ್ಯೋಗಕ್ಕೆ ಪೂರಕವಾಗಿರುವ ಇನ್ನೊಂದು ಉದ್ಯೋಗವನ್ನು ಪ್ರಾರಂಭಿಸುವ ಯೋಗವಿದೆ. ಹಾಗೆ ಮಾಡಿದರೆ ಅದರಲ್ಲೂ ಅಪೇಕ್ಷೆಗಿಂತ ಹೆಚ್ಚು ಯಶ ದೊರೆಯತೊಡಗುವುದು. ಆದರೆ ಜನವರಿ ೨೧ ರಿಂದ ಫೆಬ್ರುವರಿ ೨೮ರ ವರೆಗಿನ ಅವಧಿಯಲ್ಲಿ ದೊಡ್ಡದೊಂದು ಹೊಣೆಯನ್ನು ಹೊತ್ತುಕೊಳ್ಳುವ ಪ್ರಸಂಗ ಬರುವುದಾದರೂ ಅದರಿಂದಲೂ ಕೊನೆಗೆ ಒಳ್ಳೆಯ ಯಶಸ್ವಿಯಾಗಿಯೇ ಮುಕ್ತರಾಗುವಿರಿ. ೨ ನೆಯ ಗುರುವಿದ್ದಾಗ ಅಂದರೆ ಜನವರಿ ೮ರ ವರೆಗೆ ಹಾಗು ಮತ್ತೆ ಮಾರ್ಚ್ ೨೪ ರಿಂದ ಅಗಸ್ಟ ೩೧ರ ವರೆಗೆ ಬುದ್ಧಿ ವಿಷಯಕ ಉದ್ಯೋಗಸ್ಥರಿಗೆ ಲೌಕಿಕ ಹಾಗು ಲಾಭ ವಿಶೇಷವಾಗುವುದು. ಅದರಂತೆಯೆ, ನೌಕರದಾರರಿಗೆ ಸಹ ಈ ವರ್ಷ ಒಳ್ಳೆಯ ಯಶಸ್ಸು ಹಾಗು ತುಂಬ ಲಾಭ ದೊರೆಯುವುದಲ್ಲದೆ ಬಹುತರರ ಸ್ಥಾನಮಾನದಲ್ಲಿ ಹೆಚ್ಚಳವುಂಟಾಗುವುದು. ಈ ಯೋಗ ನವೆಂಬರ್ ೩೦ ರಿಂದ ಮೇ ೨೪ ಇಲ್ಲವೆ ಜೂನ್ ೧೯ ರಿಂದ ಅಗಸ್ಟ ೮ರ ವರೆಗಿನ ಅವಧಿಯಲ್ಲಿದೆ. ವರಿಷ್ಠರ ಕೃಪೆ ಸದಾಕಾಲ ಚೆನ್ನಾಗಿಯೇ ಉಳಿಯುವುದು. ಆದರೆ ಅದು ಸಹನವಾಗದ ಕೆಲವರು ಫೆಬ್ರುವರಿ ೨೮ ರಿಂದ ಎಪ್ರಿಲ್ ೭ರ ವರೆಗಿನ ಅವಧಿಯಲ್ಲಿ ವರಿಷ್ಠರ ಕಿವಿಯೂದಲು ಪ್ರಯತ್ನಿಸುವ ಯೋಗವಿದೆ. ಆದರೆ ಇದೇ ವೇಳೆಯಲ್ಲಿ ಗುರುವಿನ ಭ್ರಮಣ ಪೂರ್ಣ ಅನುಕೂಲವಿರುವುದರಿಂದ ಅದರಿಂದ ಯಾವ ಅನಿಷ್ಟ ಪರಿಣಾಮವೂ ಆಗುವುದಿಲ್ಲ. ಬದಲಿಯಾದರೆ ಅದು ಎಲ್ಲ ಅನುಕೂಲತೆಗಳುಳ್ಳ ಊರಿಗೆಯೇ ಆಗುವುದು. ಕೈಕೆಳಗಿನವರು ೩ ನೆಯ ಗುರುವಿನ ಕಾಲಕ್ಕೆ ಅಂದರೆ ಅಗಸ್ಟ ೩೧ರ ನಂತರ ಏರಿದವರಂತೆ ವರ್ತಿಸುವರು. ದ್ರವ್ಯಸಂಗ್ರಹ ತುಸು ಆಗಲಾರಂಭಿಸಿದೆನ್ನುವಷ್ಟರಲ್ಲಿಯೇ ವೆಚ್ಚದ ಪ್ರಸಂ

ಗಗಳು ಬರತೊಡಗುವವು. ಆದರೆ ಈ ವೆಚ್ಚ ಅಯೋಗ್ಯ ಇಲ್ಲವೆ ಅಶುಭ ಕಾರ್ಯಗಳಿಗಾಗಿಯಾಗದೆಯೇ ಶುಭ ಹಾಗು ಯೋಗ್ಯ ಕಾರಣಗಳಿಗಾಗಿಯೇ ಆಗಲಿದೆ. ಒಳ್ಳೆಯ ಮಿತ್ರಸುಖ ದೊರೆಯುವುದಲ್ಲದೆ ಹೊಸ ಮಿತ್ರರೂ ದೊರೆಯುವರು.

ದಾವೆ, ಫಿರ್ಯಾದಿ ಇಲ್ಲವೆ ಇತರ ಸ್ಪರ್ಧೆಯ ಕೆಲಸಗಳಲ್ಲಿ ಸಾಧಾರಣ ಅರ್ಧಕ್ಕಿಂತ ಹೆಚ್ಚು ಯಶಸ್ವಿಯಾಗುವವು. ಆದರೆ ವಿರುದ್ಧವಾಗುವ ಕೆಲವುಗಳಲ್ಲೊಂದರಲ್ಲಿ ಬಹಳ ಹಾನಿಯಾಗುವುದು ಅಥವಾ ಮನಸ್ಸಿಗೆ ಅತ್ಯಂತ ಖೇದವುಂಟಾಗುವುದು.

ಈ ರಾಶಿಯ ಗರ್ಭಿಣಿಯರು ಜನವರಿ ೩ ರಿಂದ ೨೩, ಫೆಬ್ರುವರಿ ೯ ರಿಂದ ೨೬, ಮೇ ೨ ರಿಂದ ೧೯ ಹಾಗು ಅಕ್ಟೋಬರ್ ೧ ರಿಂದ ೨೩ರ ಅವಧಿಯಲ್ಲಿ ಪ್ರಸೂತರಾದರೆ ತುಸು ತೊಂದರೆಯಾಗುವ ಸಂಭವವಿದೆ ಹಾಗು ಹೆರಿಗೆ ಇತರ ಸಮಯದಲ್ಲಾದರೆ ಅದು ಸುಲಭವಾಗುವುದಲ್ಲದೆ ಯಾರ ಜನ್ಮಕುಂಡಲಿಯಲ್ಲಿ ಗುರುವು ವಿಷಮ ರಾಶಿಯಲ್ಲಿ ಅಂದರೆ ಮೇಷ, ಮಿಥುನ, ಸಿಂಹ, ತುಲಾ, ಧನು, ಇಲ್ಲವೆ ಕುಂಭದಲ್ಲಿದ್ದರೆ ಅವರಿಗೆ ಹೆಣ್ಣು ಮಗುವಾಗುವುದು ; ಆದರೆ ಸಮರಾಶಿಯಲ್ಲಿ ಅಂದರೆ ವೃಷಭ, ಕರ್ಕ, ಕನ್ಯಾ, ವೃಶ್ಚಿಕ, ಮಕರ ಇಲ್ಲವೆ ಮೀನದಲ್ಲಿದ್ದರೆ ಗಂಡು ಮಗುವಾಗುವ ಸಂಭವವಿದೆ.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ೧ ಅಥವಾ ೩ನೆಯ ಗುರುವಿನಲ್ಲಾದರೆ ಅವರಿಗೆ ಕ್ಲಾಸ್ ಕೂಡ ದೊರೆಯಬಹುದು ಹಾಗು ೨ ನೆಯ ಗುರುವಿನಲ್ಲಿ ಅಂದರೆ ಜನವರಿ ೮ ರ ವರೆಗೆ ಹಾಗು ನಂತರ ಮಾರ್ಚ್ ೨೪ ರಿಂದ ಅಗಸ್ಟ್ ೩೧ರ ವರೆಗಿನ ಅವಧಿಯಲ್ಲಾದರೆ ಕನಿಷ್ಠ ಉತ್ತೀರ್ಣರಾಗುವರು.

ಅಧಿಕಾರ

ಅಧಿಕಾರವೆಂಬುವದು ಘನಘೋರ ವಿಷವಹುದು;
ಮೊದಲ ರುಚಿಗೇ ನೆತ್ತಿಗೇರುವವು ಕಣ್ಣು !
ಮೈಯುಂಡರಾಯ್ತು, ನರಭಕ್ಷಕನ ಮದಬಹುದು;
ನಂಜುಂಡನನು ಮಾಡಬಲ್ಲುದಿದು ಹಣ್ಣು !

— ಎಂ. ಅಕಬರ ಅಲಿ

# ಮಿಥುನ

ಈ ವರ್ಷ ಈ ರಾಶಿಯುವರಿಗೆ ಗುರು ೧೨ ನೆಯುವನಿರುವಾಗಿನ ಕಾಲವೊಂದನ್ನುಳಿದು ಇತರ ಸಮಯವೆಲ್ಲ ಯಶ, ಸುಖ ಹಾಗು ಭಾಗ್ಯದಾಯಕವೆಂದು ನಿಶ್ಚಿತ ತಿಳಿಯಬೇಕು.

ಈ ವರ್ಷವಿಡೀ ಅಷ್ಟಮ ಅಂದರೆ ಮೃತ್ಯುಸ್ಥಾನದಲ್ಲಿ ಶನಿಯ ಭ್ರಮಣವು ಬಹಳ ದಿನ ೯ ನೆಯ ಹಾಗು ಕೆಲ ದಿನ ೧೦ ನೆಯ ಈ ರೀತಿ ಶುಭಸ್ಥಾನಗಳಲ್ಲಾಗುವುದರಿಂದ ಈ ರಾಶಿಯ ಜನರ ಆರೋಗ್ಯ ಉತ್ತಮವಾಗಿರುವುದು. ಆದರೆ ಜನವರಿ ೮ ರಿಂದ ಮಾರ್ಚ್ ೨೪ರ ವರೆಗೆ ಇರುವ ೧೨ ನೆಯ ಗುರುವು ತೀವ್ರ ಮಾನಸಿಕ ಹಾಗು ತುಸು ಶಾರೀರಕ ಕಷ್ಟ ಕೊಡುವನು. ಇತರ ವಿಷಯಗಳಲ್ಲಿ ೧ ಮತ್ತು ೨ ನೆಯ ಗುರುವಿನ ಕಾಲಕ್ಕೆ ಅಂದರೆ ವರ್ಷಾರಂಭದಿಂದ ಜನವರಿ ೭ರ ವರೆಗೆ ಹಾಗು ಮಾರ್ಚ್ ೨೪ರ ನಂತರದ ಕಾಲವೆಲ್ಲ ಅತ್ಯುತ್ಸಾಹಕರವಿರುವುದಲ್ಲದೆ ಮನಸ್ಸಿನಲ್ಲಿ ಯೋಜಿಸಿದ ಕೆಲಸಗಳಲ್ಲಿ ಹೆಚ್ಚಿನವು ಮನಸ್ಸಿನಂತೆ ಪೂರ್ಣವಾಗುವವು.

ಸ್ತ್ರೀಸುಖಕ್ಕೆ ೧ ಮತ್ತು ೨ ನೆಯ ಗುರು ಉತ್ತಮರೇ ಆಗಿದ್ದಾರೆ. ಆದರೆ ಅವನು ೧೨ ನೆಯವನಾಗಿದ್ದಾಗ ಅವಳಿಗೆ ಒಂದೆರಡು ತಿಂಗಳು ಮೂಗು ಅಥವಾ ಗಂಟಲು ನೋವಿನ ವಿಕಾರದಿಂದ ತುಸು ತೊಂದರೆಯಾಗುವ ಸಂಭವವಿದೆ. ಅಲ್ಲದೆ ಕ್ಷುಲ್ಲಕ ಕಾರಣಗಳಿಂದಾಗಿಯೇ ಉಭಯತರಲ್ಲೂ ಮೇಲಿಂದ ಮೇಲೆ ಮತಭೇದವಾಗುತ್ತಲೇ ಇರುವುದು. ಈ ರಾಶಿಯ ಅವಿವಾಹಿತರ ವಿವಾಹವಾಗುವುದಿದ್ದರೆ, ೧೨ ನೆಯ ಹಾಗು ೨ ನೆಯ ಗುರುವಿನಗಿಂತ ೧ ನೆಯ ಗುರುವಿನ ಕಾಲಕ್ಕೆ ಹೆಚ್ಚು ಸುಲಭವಾಗಿ ಹೊಂದುವುದು ಹಾಗು ಯಾವುದೇ ಅಡೆತಡೆಯಿಲ್ಲದೆ ಪೂರ್ಣವಾಗುವುದು ಕೂಡ. ವಧು ಇಲ್ಲವೆ ವರ ರೂಪ ಹಾಗು ಗುಣಗಳಿಂದ ಬಹಳ ಉತ್ತಮರಾಗಿರುವರಾದರೂ ತುಸುವಾದರೂ ನೇತ್ರದೋಷವಿರುವ ಸಂಭವವಿದೆ. ೧೨ ನೆಯ ಗುರುವಿದ್ದಾಗ ವಿನಾಕಾರಣ ವೆಚ್ಚ ಬಹಳವಾಗುವುದಾದರೂ ಒಟ್ಟಿನಲ್ಲಿ ಒಳ್ಳೆಯ ಪ್ರಾಪಂಚಿಕಸುಖ ದೊರೆಯುವುದು.

ನಿಮ್ಮ ಮಕ್ಕಳ ವಿವಾಹ ಮಾಡುವದಿದ್ದರೆ ಅದಕ್ಕೆ ಸಹ ಗುರುವು ೧ನೆಯವನಾಗಿದ್ದಾಗಿನ ಕಾಲ ತುಂಬ ಅನುಕೂಲವಿದು ಅದು ಅಲ್ಪಾಯಾಸದಿಂದ ಹೊಂದುವುದು. ೨ನೆ ಗುರುವಿನಲ್ಲಿ ಮಾತ್ರ ಅದಕ್ಕಾಗಿ ಬಹಳ ಪ್ರಯತ್ನ ಮಾಡಬೇಕಾಗುವುದು. ಸೊಸೆ ಇಲ್ಲವೆ ಅಳಿಯ ನಿಮ್ಮ ಮನಸ್ಸಿಗೊಪ್ಪಿತರಾಗಿರುವಷ್ಟು ನಿಮ್ಮ ಹೆಂಡತಿ ಹಾಗು ಆಪ್ತರಲ್ಲಿನ ಕೆಲ ಸ್ತ್ರೀಯರ ಮನಸ್ಸಿಗೆ ಬರುವುದಿಲ್ಲ. ೧೨ ನೆಯ ಗುರುವಿನಲ್ಲಿ ಮಕ್ಕಳ ಉತ್ಕರ್ಷಕ್ಕೆ ಬಹಳ ಅಡೆತಡೆಗಳು ಬರುವವಾದರೂ ಗುರುವು ೧ ಹಾಗು ೨ ನೆಯವನಾಗಿರುವಾಗ ಮತ್ತು ಶನಿಯು ೬ ನೆಯವನಾಗಿರುವಾಗ ಅಂದರೆ ಮೇ ೧೧ ರಿಂದ ಸಪ್ಟೆಂಬರ್ ೭ ರ ವರೆಗಿನ ಅವಧಿಯಲ್ಲಿ ಅದಕ್ಕೆ ಬಹಳ ಉತ್ತಮವಿದೆ ಹಾಗು ನಿಮ್ಮೊಂದಿಗೆ ಅವರು ಚೆನ್ನಾಗಿ ಕೂಡಿ ನಡೆಯುವರು.

ಉದ್ಯೋಗ, ಧಂದೆಗಳಿಗೆ ಈ ವರ್ಷ ಬಲಿಷ್ಠ ಶನಿಯಿಂದಾಗಿ ಉತ್ತಮ ಕಾಲವಿದ್ದು, ಅದರಲ್ಲೂ ಮಂಗಳನು ೭, ೮, ೯, ೧೧ ಹಾಗು ೧ ನೆಯವನಾಗಿರುವಾಗಲಂತೂ ಭಾರಿ ಭರಭರಾಟಿಯುಂಟಾಗುವುದು. ಗುರು ೧೨ ನೆಯವನಾಗಿದ್ದಾಗ ಯಾತಾಯಾತ ಬಹಳವೆನಿಸಿದರೂ ಕೊನೆಗೆ ಅದು ಸಾರ್ಥಕವೂ ಅನಿಸುವುದು. ವಿಶೇಷತಃ ಎಪ್ರಿಲ್ ೭ ರಿಂದ ಮೇ ೧೮ ಹಾಗು ಜೂನ್ ೩೦ ರಿಂದ ಅಗಸ್ಟ್ ೧೫ ರ ವರೆಗಿನ ಕಾಲವು ವಿಶೇಷ ಲಾಭಕರವೆನಿಸುವುದು. ಅದರಂತೆಯೆ ನೌಕರದಾರರಿಗೆ ಸಹ ಈ ವರ್ಷ ಒಳ್ಳೆಯ ಲಾಭದಾಯಕ ಹಾಗು ಭಾಗ್ಯದರ್ಶಕವಿದೆ. ೧೨ ನೆಯ ಗುರುವು ಕೆಲಸದ ಭಾರವನ್ನು ಹೆಚ್ಚಿಸಬಲ್ಲನಾದರೂ ವರಿಷ್ಠರ ಕೃಪೆಯಲ್ಲಿ ಕಡಿಮೆ ಮಾಡಲಾರನು. ಗುರು ೧ ಹಾಗು ೨ ನೆಯವನಾಗಿದ್ದಾಗಲಂತೂ ವರಿಷ್ಠರ ಸಿಫಾರಸಿನಿಂದಲೇ ಭಾಗ್ಯದಲ್ಲಿ ಹೆಚ್ಚಳವಾಗುವುದು. ನಿಮ್ಮ ಮಾತಿಗೆ ಎಲ್ಲರೂ ಮನ್ನಣೆಯೀಯುವರು. ಅದರಂತೆಯೆ, ಮಂಗಳನು ೧೦ ನೆಯವನಾಗಿರುವಾಗ ಅಂದರೆ

ಫೆಬ್ರುವರಿ ೨೮ ರಿಂದ ಎಪ್ರಿಲ್ ೭ ರ ವರೆಗಿನ ಅವಧಿಯಲ್ಲಿ ಮಹತ್ವದ ಕೆಲಸಕ್ಕಾಗಿ ನೀವು ನಿಯಮಿಸಲ್ಪಡುವ ಸಂಭವವಿದೆಯಾದರೆ ೨ ನೆಯ ಗುರುವಿನಲ್ಲಿ ಬಡತಿ ಸಹ ಸಿಗಬಹುದು. ರಾಹು ೧೨ ನೆಯವನಿರುವಾಗ ಅಂದರೆ ಜೂನ್ ೨೪ ರ ವರೆಗೆ ಬದಲಿಯಾದರೆ ನಿಮ್ಮ ಮನಸ್ಸಿಗೊಪ್ಪುವ ಸ್ಥಳಕ್ಕೇ ಆಗುತ್ತದೆ; ಆದರೆ ಅವನು ೧೧ ನೆಯವನಾದನಂತರ ಅಂದರೆ ಜೂನ್ ೨೪ರ ನಂತರ ಆದರೆ ತದ್ವಿರುದ್ಧವಾಗುತ್ತದೆ. ಉತ್ತಮ ವಾಹನಸುಖ ದೊರೆಯುತ್ತದೆ. ಉತ್ಕೃಷ್ಟ ವಾಹನಗಳಲ್ಲಿ ಮೇಲಿಂದ ಮೇಲೆ ಓಡಾಡುವ ಯೋಗವಿದೆ. ಕೈಕೆಳಗಿನ ನೌಕರ-ಚಾಕರರು ಕಾರ್ಯತತ್ಪರತೆಯಿಂದ ವರ್ತಿಸುವರಾದರೂ ಅಕ್ಟೋಬರ್ ೨೮ ರಿಂದ ಜನವರಿ ೩೦ ರ ವರೆಗೆ ಹಾಗು ಮೇ ೨ ರಿಂದ ಜೂನ್ ೩ ರ ವರೆಗಿನ ಅವಧಿಯಲ್ಲಿ ಮಾತ್ರ ಅವರ ನಡತೆ ತುಸು ವಿಚಿತ್ರವಿದ್ದು ನಿಮ್ಮ ಕೆಲ ದೋಷಗಳನ್ನು ನಿಮ್ಮ ಹಿತ-ಶತ್ರುವಿನೆದುರು ಉಸುರಬಹುದಾಗಿದೆ. ೨ ನೆಯ ಗುರುವಿನಲ್ಲಿ ದ್ರವ್ಯ ಹಾಗು ವಿವಿಧ ವಸ್ತುಗಳನ್ನು ಸಾಕಷ್ಟು ಸಂಗ್ರಹಿಸಲು ಸಾಧ್ಯವಾಗುವುದು. ೧೧ ನೆಯ ರಾಹುವಿನಲ್ಲಿ ಉತ್ತಮ ಮಿತ್ರಸುಖ ದೊರೆಯುವುದಾದರೂ ಅದಕ್ಕಾಗಿ ಮನೆಯಲ್ಲಿಯ ಅನೇಕರಿಗೆ ನಿಮ್ಮ ಬಗ್ಗೆ ತಿರಸ್ಕಾರವೆನಿಸಬಹುದಾಗಿದೆ. ೧ ನೆಯ ಗುರುವಿನಲ್ಲಾಗುವ ಪ್ರವಾಸ ಹೆಚ್ಚು ಸುಖಕರವೂ ಧಾರ್ಮಿಕ ಇಲ್ಲವೆ ವ್ಯಾವಹಾರಿಕ ಮಹತ್ವವನ್ನು ಹೆಚ್ಚಿಸುವಂಥದೂ ಆಗುವದು. ಬುದ್ಧಿಜೀವಿಗಳಿಗಿಂತ ಶ್ರಮಜೀವಿಗಳಿಗೆ ಈ ಸಲ ಹೆಚ್ಚು ಯಶ ದೊರೆಯಬಹುದಾಗಿದೆ.

ದಾವೆ, ಫಿರ್ಯಾದಿ ಇಲ್ಲವೆ ಇತರ ಸ್ಪರ್ಧೆಯ ಕೆಲಸಗಳಲ್ಲಿ ಕೇತು ೬ ನೆಯವನಾಗಿದ್ದಾಗ ಅಂದರೆ ಜೂನ್ ೨೪ ರೊಳಗೆಯೇ ಆಗುವ ನಿರ್ಣಯಗಳು ನಿಮಗೆಷ್ಟು ಯಶೋದಾಯಕವಿರುವವೊ ಅನಂತರ ಅವನು ೫ ನೆಯವನಾದ ಮೇಲೆ ಇರಲಾರವು. ಆದರೂ ಶತ್ರುವಿಗಿಂತ ನಿಮ್ಮದೇ ಮೇಲುಗೈಯಿರುವುದು.

ಈ ರಾಶಿಯ ಗರ್ಭಿಣಿಯರು ೧೨ ನೆಯ ಗುರುವಿನಲ್ಲಿ ಪ್ರಸೂತರಾದರೆ ತುಸು ಕಷ್ಟವೆನಿಸಬಹುದಾದರೂ ಅವರ ಅಥವಾ ಜನಿಸುವ ಮಗುಗಳ ಜೀವಕ್ಕೆ ಅಪಾಯವಿಲ್ಲ. ಇತರ ಸಮಯದಲ್ಲಾದರೆ ಹೆರಿಗೆ ಪೂರ್ಣ ಸುಲಭವಾಗುವುದಲ್ಲದೆ ಹಾಗು ೧೨ ನೆಯ ಗುರುವಿನಲ್ಲಾದರೆ ಬಹುತರರಿಗೆ ಪುತ್ರ ಲಾಭವೇ ಆಗುತ್ತದೆ.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ೧೨ ನೆಯ ಗುರುವಿನಲ್ಲಿ ಅಂದರೆ ಜನವರಿ ೮ ರಿಂದ ಮಾರ್ಚ್ ೨೩ರ ವರೆಗಾದರೆ ಯಶಸ್ಸು ಸಂಶಯಾಸ್ಪದವೇ ಇದೆ. ಆದರೆ ೧ ಹಾಗು ೨ ನೆಯ ಗುರುವಿನಲ್ಲಾದರೆ ಉತ್ತೀರ್ಣರಾಗುವುದು ಮಾತ್ರವಲ್ಲ, ೧ ನೆಯ ಗುರುವಿನಲ್ಲಾದರೆ ಕ್ಲಾಸ್ ಕೂಡ ದೊರಕಿಸುವರು.

## ಕರ್ಕ

ಈ ರಾಶಿಯವರಿಗೆ ಈ ವರ್ಷ ಕೆಲ ಕಾಲ ಸುಖಕರವಾದುದಾದರೆ ಹಲ ಕಾಲ ಕಷ್ಟಕರವೆಂಬುದಾಗಿ ಗ್ರಹಿಸಿಕೊಂಡು ನಡೆಯಬೇಕು.

ಈ ರಾಶಿಯವರ ಆರೋಗ್ಯ ಜೂನ್ ೨೪ ರಿಂದ ಅಗಸ್ಟ್ ೩೧ ವರೆಗೆ ಅಷ್ಟೊಂದು ಸರಿಯಿರಲಾರದು. ಯಾಕೆಂದರೆ ಈ ಅವಧಿಯಲ್ಲಿ ಶನಿ ೮ ನೆಯವನು, ಗುರು ೧೨ ನೆಯವನು, ಹಾಗು ಕೇತು ೪ ನೆಯವನು ಈ ರೀತಿ ಗ್ರಹಸ್ಥಿತಿ ಅನಿಷ್ಟವಾಗಿರುತ್ತದೆ. ಆದರೆ ಉಳಿದ ಸಮಯವೆಲ್ಲ ಆರೋಗ್ಯ ಸರಿಯಾಗಿರುತ್ತದೆ. ಕ್ಲೇಶ ನಿವಾರಣಾರ್ಥ ಮೇಲಿನ ಮೂರೂ ಗ್ರಹಗಳ ಜಪ ಮಾಡಬೇಕು, ಇಲ್ಲವೆ ದಾನಾದಿಗಳನ್ನು ಮಾಡಬೇಕು. ಇತರ ವಿಷಯಗಳಲ್ಲಿ ಜನವರಿ ೮ ರಿಂದ ಮಾರ್ಚ್ ೨೪ ಹಾಗು ಮೇ ೧೨ ರಿಂದ ಸಪ್ಟೆಂಬರ್ ೬ ರ ವರೆಗಿನ ಅವಧಿಗಳಲ್ಲಿ ಒಳ್ಳೆಯ ಸುಖ ಸಿಗಬಹುದಾಗಿದೆ.

ಹೆಂಡತಿಯ ಆರೋಗ್ಯ ಮಂಗಳ ೮ ನೆಯವನಾಗಿದ್ದಾಗ ಅಂದರೆ ಜನವರಿ ೨೧ ರಿಂದ ಫೆಬ್ರುವರಿ ೨೮ ರ ವರೆಗಿನ ಅವಧಿಯಲ್ಲಿ ತುಸು ಕೆಡುವ ಸಂಭವವಿದೆ ಅದೂ ಚಿಕ್ಕದೊಂದು ಅಪಘಾತ ಕಾರಣದಿಂದಾಗಿ. ಆದರೆ ಅವಳ ಪ್ರಾಣಕ್ಕೆ ಮಾತ್ರ ಯಾವ ಅಪಾಯವೂ ಇಲ್ಲ. ಗುರು ೧೨ ನೆಯವನಾಗಿರುವಾಗ ಅಂದರೆ ಜನವರಿ ೮ರ ವರೆಗೆ ಹಾಗು ಪುನಃ ಮಾರ್ಚ್ ೨೪ ರಿಂದ ಅಗಸ್ಟ್ ೩೧ ರ ವರೆಗೆ ಉಭಯತರಲ್ಲಿ ಅನೇಕ ವೇಳೆ ಮತಭೇದವಾಗುವುದರಿಂದ ವಾತಾವರಣದಲ್ಲಿ ಕಾವು ಇದ್ದೇ ಇರುವುದು; ಆದರೆ ಅದರಿಂದ ನಿಮ್ಮ ಬಗ್ಗೆ ಅವಳಲ್ಲಿರುವ ಆದರ ಮತ್ತು ಭೀತಿಗಳಿಗೆಷ್ಟೂ ಚ್ಯುತಿ ಬರುವುದಿಲ್ಲ. ಶನಿ ೮ ನೆಯವನಿರುವಾಗ ಕುಟುಂಬದಲ್ಲಿಯ ಇತರರೊಂದಿಗೆ ನಿಮಗೆ ಕೂಡಿ ನಡೆಯುವುದಿಲ್ಲವಿಷ್ಟೇ ಅಲ್ಲ, ಕೇತುವು ೪ ನೆಯವನಾದಾಗ ಅನೇಕರಿಗೆ ಬೇರೆಯಾಗಬೇಕಾದ ಪ್ರಸಂಗವೂ ಬರಬಹುದು ಈ ರಾಶಿಯ ಅವಿವಾಹಿತರ ವಿವಾಹವಾಗುವುದಿದ್ದಲ್ಲಿ ೧೧ ನೆಯ ಗುರುವಿದ್ದಾಗ ಅಂದರೆ ಜನವರಿ ೮ ರಿಂದ ಮಾರ್ಚ್ ೧೪ರ ವರೆಗಿನ ಅವಧಿಯಲ್ಲಿ ಅಲ್ಪಾಯಾಸದಿಂದಲೇ ಆಗುವುದು ಹಾಗು ವಧು ಇಲ್ಲವೆ ವರ ಅನುರೂಪರಾಗಿರುವರು.

ಅದರಂತೆಯೇ ನಿಮ್ಮ ಮಕ್ಕಳ ಮದುವೆ ಮಾಡುವುದಿದ್ದರೆ ಅದಕ್ಕೆ ಕೂಡ ಮೇಲಿನ ಅವಧಿಯು ಪೂರ್ಣ ಅನುಕೂಲವೆಂಬುದು ನಿಶ್ಚಿತ. ಆದರೆ ಒಂದು ವೇಳೆ ಆಗ ಆಗದಿದ್ದರೆ ೧ನೆಯ ಗುರುವಿದ್ದಾಗ ಅಂದರೆ ಸಪ್ಟೆಂಬರ್ ೧ರ ನಂತರ ಅದು ಪ್ರತ್ಯಕ್ಷ ಆಗದಿದ್ದರೂ ನಿಶ್ಚಯವಾಗುವುದಂತೂ ಖಂಡಿತ. ಸೊಸೆ ಇಲ್ಲವೆ ಅಳಿಯ ರೂಪದಿಂದ ಸುಂದರರಿರುವರಲ್ಲದೆ ಒಳ್ಳೆಯ ದೈವವುಳ್ಳವರೂ ಆಗಿರುವರು. ಆದರೆ ಸ್ವಭಾವದಿಂದ ಮನಟಕರಾಯನಂತೆ ಹಾಗೂ ಮತ್ಸರಿಯೂ ಆಗಿರಬಹುದಾಗಿದೆ. ಜೂನ್ ೨೪ ರ ವರೆಗಿರುವ ೫ ನೆಯ ಕೇತುವಿನಿಂದಾಗಿ ಮಕ್ಕಳೊಂದಿಗೆ ಅಷ್ಟಾಗಿ ಹೊಂದುವುದಿಲ್ಲ. ಅವರ ಉತ್ಕರ್ಷಕ್ಕೆ ಈ ವರ್ಷ ನವೆಂಬರ್ ೫ ರ ವರೆಗೆ, ಹಾಗೂ ನಂತರ ಡಿಸೆಂಬರ್ ೧೪ ರಿಂದ ಜನವರಿ ೧೪ರ ವರೆಗೆ, ಮಾರ್ಚ್ ೧ ರಿಂದ ಎಪ್ರಿಲ್ ೭ರ ವರೆಗೆ, ಮೇ ೧೮



ರಿಂದ ಜೂನ್ ೩೦ ರ ವರೆಗೆ ಹಾಗೂ ಸಪ್ಟೆಂಬರ್ ೩೦ ರ ನಂತರದ ಕಾಲವೆಲ್ಲ ಉತ್ತಮವಿರುವುದು.

ಉದ್ಯೋಗ, ಧಂಧೆಗಳಿಗೆ ಶನಿ ಹಾಗು ರಾಹು ಉತ್ತಮರೇ ಆಗಿದ್ದಾರೆ. ಆದರೆ ಗುರು ೧೨ನೆಯವನಾಗಿರುವವರೆಗೆ ಅಂದರೆ ಜನೆವರಿ ೮ ರ ವರೆಗೆ ಹಾಗು ಮತ್ತೆ ಮಾರ್ಚ್ ೨೪ ರಿಂದ ಅಗಸ್ಟ್ ೩೧ ರ ವರೆಗೆ ಲಾಭವಾಗಬೇಕಾದಷ್ಟು ಆಗುವುದಿಲ್ಲ. ಅಲ್ಲದೆ ವಿಪರೀತ ವೆಚ್ಚದ ಪ್ರಸಂಗಗಳು ಆಕಸ್ಮಿಕವಾಗಿ ಒದಗುವವು. ಖರೀದಿ ಇಲ್ಲವೆ ವಿಕ್ರಿಯ ಸಂಬಂಧದಲ್ಲಿ ಬರುವ ಕ್ಷುಲ್ಲಕ ವಿಷಯಗಳಿಂದಲೇ ಉಳಿದುಕೊಳ್ಳಬೇಕಾದರೆ ಸಾಕುಬೇಕಾಗಿ ಹೋಗುವುದು. ಆದರೆ ಗುರುವು ೧೧ ಹಾಗು ೧ ನೆಯವನಾಗಿರುವಾಗ ಮನಸ್ವೀ ಲಾಭವಾಗುವುದಲ್ಲದೆ ಸ್ವಕ್ಷೇತ್ರಿಯಾಗಿರುವ ೬ನೆಯ ಶನಿಯಿಂದಾಗಿ ಆಕಸ್ಮಿಕ ದ್ರವ್ಯ ಲಾಭವಾಗುವುದೂ ನಿಶ್ಚಿತ. ೧೨ ನೆಯ ಗುರುವಿದ್ದಾಗ ಸಾಲವಿದ್ದರೆ ಅದು ಸ್ವಲ್ಪಾದರೂ ತೀರಬಹುದು ಇಲ್ಲವೆ ಬಹುದಿನಗಳಿಂದ ಬಗೆಹರಿಯದ ವ್ಯವಹಾರವೊಂದು ನಿಮ್ಮ ಮನಸ್ಸಿನಂತೆಯೇ ಮುಕ್ತಾಯವಾಗಬಹುದು. ನೌಕರದಾರರಿಗೆ ೬ನೆಯ ಶನಿಯಿದ್ದಾಗ ವರಿಷ್ಠರ ತೊಂದರೆ ಮೇಲಿಂದಮೇಲೆ ಅನಿಸಬಹುದಾದರೂ ಅವನು ೯ನೆಯವನಿದ್ದಾಗ ಮೇ ೧೧ ರಿಂದ ಸಪ್ಟೆಂಬರ್ ೭ ರ ವರೆಗಿನ ಅವಧಿಯಲ್ಲಿ ಅವರ ಕೃಪೆಯಿಂದಲೇ ಬಡತಿ ದೊರೆಯುವ ಯೋಗವಿದೆ ಬದಲಿಯಾದರೆ ಅದು ಯೋಗ್ಯಸ್ಥಳಕ್ಕೆ ಆಗುವದಲ್ಲದೆ ನೌಕರಿಯಲ್ಲಿಯ ಕಾರ್ಯಕುಶಲತೆಯ ಬಗ್ಗೆ ಸರ್ವತ್ರ ಪ್ರಶಂಸೆ ದೊರೆಯುವುದು. ಹೇಳಿಕೊಳ್ಳುವಷ್ಟು ಹೊಸ ಸಂಗ್ರಹವೇನಾಗದಿದ್ದರೂ ದೊಡ್ಡ ವೆಚ್ಚದ ಪ್ರಸಂಗಗಳು ಬರಬಹುದು. ಆದರೆ ಅವನ್ನು ನಿರಾಯಾಸವಾಗಿ ತೂಗಿಸಲು ಸಾಧ್ಯವಾಗುವುದು. ವಾಹನಸುಖ ಸಾಮಾನ್ಯ. ೧ನೆಯ ಗುರುವಿದ್ದಾಗ ಸಮೀಪದ ಯಾತ್ರೆಯೊಂದು ಒದಗಬಹುದು. ೧೨ನೆಯ ಗುರುವಿದ್ದಾಗ ಮೇಲಿಂದಮೇಲೆ ಶುಭಸೂಚಕ ಸ್ವಪ್ನಗಳನ್ನು ಕಾಣುವಿರಿ.

ದಾವೆ, ಫಿರ್ಯಾದಿ ಇಲ್ಲವೆ ಇತರ ಸ್ಪರ್ಧೆಯ ಕೆಲಸಗಳ ನಿರ್ಣಯ ೧೨ನೆಯ ಗುರುವನ್ನುಳಿದು ಇತರ ಕಾಲದಲ್ಲಾದರೆ ನಿಶ್ಚಿತವಾಗಿಯೂ ಅನುಕೂಲವಿಯುವದು. ಆದರೆ ೬ನೆಯ ಶನಿಯಲ್ಲಿ ಹೊಸ ಶತ್ರುಗಳು ಹುಟ್ಟಿಕೊಳ್ಳುವ ಭೀತಿಯಿದೆ.

ಈ ರಾಶಿಯ ಗರ್ಭಿಣಿಯರ ಪ್ರಸೂತಿ ೫ ನೆಯ ಕೇತುವಿನಲ್ಲಿ ಅಂದರೆ ಜೂನ್ ೨೪ ರ ಮೊದಲೇ ಆದರೆ ತುಸು ಕಷ್ಟವೆನಿಸಬಹುದಾದರೂ ಪ್ರಾಣಭಯವೇನೂ ಇಲ್ಲ ಹಾಗೂ ಮಗು ಒಳ್ಳೆಯ ಸದೃಢವಿರುವುದು. ೧೧ ಹಾಗು ೧ ನೆಯ ಗುರುವಿದ್ದಾಗ ಹೆರಿಗೆಯಾದರೆ ಬಹುತರರಿಗೆ ಪುತ್ರರತ್ನ ಜನಿಸುವ ಸಂಭವವಿದೆ.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ಗುರು ೧೨ ನೆಯವನಿರುವಾಗಾದರೆ ಅವರಿಗೆ ತುಸು ಕಠಿಣವೆನಿಸಬಹುದಾಗಿದೆ; ಆದರೆ ಅದೇ ಗುರು ೧೧ ಹಾಗೂ ೧ ನೆಯವನಾಗಿರುವಾಗ ಉತ್ತೀರ್ಣರಾಗುವ ಭರವಸೆ ನೂರಕ್ಕೆ ೯೦ ಪಾಲಾದರೂ ಇದೆ.

## ಸಿಂಹ

ಈ ವರ್ಷ ಈ ರಾಶಿಯವರಿಗೆ ಕಷ್ಟಗಳಿಗಿಂತ ಬಹಳ ಪಾಲು ಹೆಚ್ಚು ಸುಖವೇ ದೊರೆಯುವುದು ಹಾಗು ಚಿಂತಾನಾಶವಾಗುವುದು ಎಂಬುದರಲ್ಲಿ ಸಂದೇಹವಿಲ್ಲ.

ಈ ರಾಶಿಯವರ ಆರೋಗ್ಯ ಮೇ ೧೧ ರಿಂದ ಸಪ್ಟೆಂಬರ್ ೭ ರ ವರೆಗಿನ ಅವಧಿಯಲ್ಲಿ ೮ ನೆಯ ಶನಿಯಿಂದಾಗಿ ತುಸು ಕೆಡಬಹುದಾದರೂ ಇತರ ವೇಳೆಯಲ್ಲಿ ಅವನು ೭ ನೆಯವನಾಗಿರುವುದರಿಂದ ಅದು ಉತ್ತಮವಾಗಿರುವುದು. ಅಗಸ್ಟ್ ೩೧ರ ವರೆಗೆ ಕೆಲ ದಿನ ೧೦ ನೆಯ ಹಾಗು ಕೆಲ ದಿನ ೧೧ ನೆಯ ಈ ರೀತಿ ಗುರುವಿನ ಶುಭ ಭ್ರಮಣವಿರುವುದರಿಂದ ಬಹುತರರ ಮನೋತ್ಸಾಹ ಉತ್ತಮವಿರುವುದು. ಅಗಸ್ಟ್ ೩೧ರ ನಂತರ ಬರುವ ೧೨ ನೆಯ ಗುರುವು ಕೆಲ ವಿಷಯಗಳನ್ನು ನಿಮ್ಮ ಮನಸ್ಸಿನ ವಿರುದ್ಧ ಮಾಡುವನು.

ಭಾರ್ಯಾಸ್ಥಾನದಲ್ಲಿರುವ ಶನಿಯು ಸ್ವಕ್ಷೇತ್ರಿಯಾಗಿರುವುದರಿಂದ ಹಾಗು ಮಧ್ಯಂತರದಲ್ಲಿ ಕೆಲ ದಿನ ೮ ನೆಯವನಾದಾಗಲೂ ಅವನು ಮಿತ್ರಕ್ಷೇತ್ರಿಯಾಗಿರುವುದರಿಂದ ಮತ್ತು ವರ್ಷಾರಂಭದಲ್ಲಿ ಭಾರ್ಯಾಸ್ಥಾನವು ಗುರುವಿನ ಶುಭದೃಷ್ಟಿಯಲ್ಲಿರುವುದರಿಂದ ಹೆಂಡತಿಯ ಆರೋಗ್ಯ ಉತ್ತಮವೇ ಉಳಿಯುವುದು. ಆದರೆ ಜುಲೈ ೫ರ ನಂತರ ಅವನು ವಕ್ರಿಯಾಗಿರುವುದರಿಂದ ಅವಳು ಅಷ್ಟಿಷ್ಟು ಕಾರಣಕ್ಕಾಗಿಯೇ ಸಿಟ್ಟಿಗೇಳತೊಡಗುವಳು. ಈ ರಾಶಿಯ ಅವಿವಾಹಿತರ ವಿವಾಹವು ಆಗುವುದಿದ್ದರೆ ಗುರುವು ೧೦ ನೆಯವನಿದ್ದಾಗ ಅಂದರೆ ಜನೆವರಿ ೮ ರಿಂದ ಮಾರ್ಚ್ ೨೪ ರ ವರೆಗೆ ಹೊಂದಲು ಬಹಳ ಕಷ್ಟವಾಗುವುದು. ಅವನು ೧೨ ನೆಯವನಾದಾಗ ಅಂದರೆ ಸಪ್ಟೆಂಬರ್ ೧ ರ ನಂತರ ಒಂದು ವೇಳೆ ನಿಶ್ಚಯವಾದರೂ ಪ್ರತ್ಯಕ್ಷ ವಿವಾಹವಾಗುವುದಿಲ್ಲ; ಆದರೆ ಅವನು ೧೧ ನೆಯವನಿದ್ದಾಗ ಮಾತ್ರ ಒಮ್ಮೆಲೆ ಹೊಂದಿ ನಿರ್ವಿಘ್ನದಿಂದ ಪೂರ್ತಿಗೊಳ್ಳುವುದು. ವಧು ಇಲ್ಲವೆ ವರರು ಪರಸ್ಪರ ಪೂರ್ಣ ಅನುರೂಪ ಲಕ್ಷಣ ಹಾಗು ಸ್ಥಿತಿಯಲ್ಲಿರುವವರೇ ಇರುವರಲ್ಲದೆ ಬಹುಶಃ ಪೂರ್ವಪರಿಚಿತರೂ ಇರುವರು.

ನಿಮ್ಮ ಮಕ್ಕಳ ವಿವಾಹ ಮಾಡುವುದಿದ್ದರೆ ೧೧ ನೆಯ ಗುರುವಿನ ಕಾಲಕ್ಕೆ ಅಲ್ಪಾಯಾಸದಿಂದ ಹೊಂದುವುದು ಹಾಗು ತೊಂದರೆಯಿಲ್ಲದೆ ಪೂರ್ತಿಗೊಳ್ಳುವುದು; ೧೨ ನೆಯ ಗುರುವಿದ್ದಾಗ ಮಧ್ಯಮ

ಬಲವಿರುತ್ತದೆ, ಆದರೆ ೧೦ ನೆಯ ಗುರುವಿದ್ದಾಗ ನಿಶ್ಚಯವಾದರೂ ಅನಿರೀಕ್ಷಿತ ಅಡತಡೆಯಿಂದಾಗಿ ವಿವಾಹವಾಗುವುದೂ ಕಠಿಣ. ಸೊಸೆ ಇಲ್ಲವೆ ಅಳಿಯ ರೂಪ ಹಾಗು ಗುಣಗಳಿಂದ ಎಲ್ಲರಿಗೂ ಒಪ್ಪಿತರಾಗುವರು ಮತ್ತು ಒಳ್ಳೆಯ ಸುದ್ದಿಗಳೆಂಬುದೂ ಮುಂದೆ ಅನುಭವಕ್ಕೆ ಬರದಿರದು. ಎಲ್ಲ ಮಕ್ಕಳಿಂದಲೂ ಮನಸ್ಸಿನಂತೆ ಸುಖ ದೊರೆಯುವುದಂತೂ ನಿಜ; ಅದರಲ್ಲೂ ಏಕಕಾಲಕ್ಕೆ ಕೇತುವು ೩ ನೆಯವನೂ ಗುರು ೧೧ ನೆಯವನೂ ಇದ್ದಾಗ ಅಂದರೆ ಜೂನ್ ೨೩ ರಿಂದ ಆಗಸ್ಟ್ ೩೧ ರ ವರೆಗಿನ ಅವಧಿಯಲ್ಲಿ ಕೆಲವರಿಂದ ವಿಶೇಷ ಒಪ್ಪಿಟ್ಟುಕೊಳ್ಳುವಂತಹ ಸುಖ ದೊರೆಯಲಿದೆ.

ಉದ್ಯೋಗಸ್ಥರಿಗೆ ಗುರು ೧೦ ಹಾಗೂ ೧೧ ನೇಯವನಾಗಿದ್ದಾಗ ಭರ್ಜರಿ ಲಾಭವಾಗುವುದಲ್ಲದೆ ಒಬ್ಬರ ಕೃಪೆ ಅಥವಾ ವಶೀಲಿಯಿಂದ ದುಸ್ಸಾಧ್ಯವೆನಿಸುವಂತಹ ಕೆಲಸ ಸಹ ಸುಲಭದಲ್ಲೇ ಕೈಗೂಡಬಹುದು. ವಿಶೇಷತಃ ನವೆಂಬರ್ ೫ ರಿಂದ ಫೆಬ್ರುವರಿ ೨೮ ಹಾಗೂ ಎಪ್ರಿಲ್ ೭ ರಿಂದ ಆಗಸ್ಟ್ ೧೫ ಈ ಅವಧಿಯಲ್ಲಿ ಪತ್ತು, ಪ್ರತಿಷ್ಠೆಗಳು ಬಹಳ ಹೆಚ್ಚುವವು ಮತ್ತು ನಿಮ್ಮ ಉದ್ಯೋಗದ ಉಪಶಾಖೆಯೊಂದನ್ನು ತೆರೆಯುವ ಅವಕಾಶವೂ ಒದಗುವುದು. ನೌಕರದಾರರಿಗೆ ೧೨ ನೆಯ ಗುರುವನ್ನುಳಿದು ಸರ್ವಕಾಲವೂ ಅತ್ಯಂತ ಉತ್ಸಾಹದಾಯಕವಿದ್ದು ವರಿಷ್ಠರ ಕೃಪೆಯು ಅವರ್ಣನೀಯವೆನಿಸುವಷ್ಟು ಇರುವುದು. ಅದರಂತೆ ಪೂರ್ಣ ಲೋಕ ಸಹಾನುಭೂತಿ ದೊರೆಯುವುದಲ್ಲದೆ ಬದಲಿಯಾಗುವಂಥ ಖಾತೆಯಲ್ಲಿದ್ದರೆ ನಿಶ್ಚಿತ ಬದಲಿಯಾಗುವುದು. ೩ನೆಯ ಕೇತುವಿನಲ್ಲಿ ಅಂದರೆ ಜೂನ್ ೨೪ ರ ನಂತರ ಬದಲಿಯಾದರೆ ಬಹಳ ಸುಖಸೋಯಿಗಳುಳ್ಳ ಉತ್ತಮ ಸ್ಥಳಕ್ಕೆಯೇ ಆಗುವುದು. ಶ್ರಮಜೀವಿಗಳಿಗಿಂತ ಬುದ್ಧಿಜೀವಿಗಳಿಗೆ ಈ ವರ್ಷ ಹೆಚ್ಚು ಲಾಭ ಹಾಗು ಲೌಕಿಕ ದೊರೆಯುವವು. ೧೨ ನೆಯ ಗುರುವಿನಲ್ಲಿ ಮಾತ್ರ ಚಿಕ್ಕದೊಂದು ಕಳವು ಸಂಭವಿಸಬಹುದಾಗಿದೆ ಹಾಗು ಮುಂದೆಂದಾದರೂ ಕಳವಾದ ಮಾಲು ಮರಳಿ ದೊರೆತರೆ ಕಳವು ಮಾಡಿದವರು ಬಹುಶಃ ಆಪ್ತರಲ್ಲಿಯೇ ಒಬ್ಬರೆಂದು ಗೊತ್ತಾಗದಿರದು. ಕೆಲವು ಉಚ್ಚವಸ್ತುಗಳ ಸಂಗ್ರಹ ಮಾಡಲು ಸಾಧ್ಯವಾಗಬಹುದು. ೧೦ನೆಯ ರಾಹು ಅರ್ಥಾತ್ ೪ ನೆಯ ಕೇತುವಿದ್ದಾಗ ತಂದೆ, ತಾಯಿಗಳ ಆರೋಗ್ಯ ಸರಿಯಿರಲಾರದು ಅದರಂತೆಯೇ ಆಪ್ತರು ಹಾಗು ನೆರೆಹೊರೆಯವರೊಂದಿಗೆ ತಂಟೆಯ ಪ್ರಸಂಗಗಳು ಮೇಲಿಂದಮೇಲೆ ಬರಬಹುದಲ್ಲದೆ ಮನೆಯಲ್ಲಿನ ನೌಕರ ಚಾಕರರು ಮೇಲಿಂದಮೇಲೆ ಕೆಲಸ ತಪ್ಪಿಸಿ ಕಿರುಕಳ ಕೊಡುವರು.

ದಾವೆ, ಫಿರ್ಯಾದಿ ಇಲ್ಲವೆ ಇತರ ಸ್ಪರ್ಧೆಯ ಕೆಲಸಗಳಲ್ಲಿ ನಿರ್ಣಯವು ೧೨ನೆಯ ಗುರು ಬರುವವರೆಗೆ ಅಂದರೆ ಆಗಸ್ಟ್ ೩೧ ರ ವರೆಗೆ ಪೂರ್ಣ ಅನುಕೂಲವಿರುವುದು. ೧೨ ನೆಯ ಗುರುವಿದ್ದಾಗ ನಿರರ್ಥಕ ಶತ್ರುಗಳು ಬಹಳ ಬೆಳೆಯಬಹುದಾಗಿದೆಯಲ್ಲದೆ ಅವರೊಂದಿಗೆ ಕಾದುವುದಕ್ಕಿಂತ ಅವರಿಂದ ದೂರವಿರುವುದೇ ಹಿತಕರವೆನಿಸಬಹುದು.

ಈ ರಾಶಿಯ ಗರ್ಭಿಣಿಯರ ಪ್ರಸೂತಿ ೩ ನೆಯ ಕೇತು ಹಾಗು ೧೧ ನೆಯ ಗುರುವಿದ್ದಾಗ ಅಂದರೆ ಜೂನ್ ೨೪ ರಿಂದ ಆಗಸ್ಟ್ ೩೧ ರ ವರೆಗಿನ ಅವಧಿಯಲ್ಲಾದರೆ ಎಷ್ಟೂ ಕಷ್ಟವಾಗದೆ ಬಹುಶಃ ಪುತ್ರ ಲಾಭವೇ ಆಗುವುದು. ಆದರೆ ಇತರ ಸಮಯದಲ್ಲಿ ಕಷ್ಟವಾಗುವ ಹಾಗು ಕನ್ಯೆ ಜನಿಸುವ ಯೋಗವಿದೆ. ಆದರೆ ಎಲ್ಲರ ಮಗುಗಳೂ ಸಶಕ್ತ, ಸುಂದರವಾಗಿರುತ್ತವೆ. ೧೧ ನೆಯ ಗುರುವಿನಲ್ಲಿ ಕೆಲವರಿಗೆ ಅವಳಿ ಮಕ್ಕಳಾಗುವ ಸಂಭವವಿದೆ.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆಯು ಗುರು ೧೧ ನೆಯವನಾಗಿರುವಾಗ ಅಂದರೆ ಜನೆವರಿ ೮ ರ ಮೊದಲು ಹಾಗು ಮಾರ್ಚ್ ೨೪ ರಿಂದ ಆಗಸ್ಟ್ ೩೧ ರ ವರೆಗಿನ ಅವಧಿಯಲ್ಲಿ ಆದರೆ ಅವರು ಉತ್ತೀರ್ಣರಾಗುವುದು ಮಾತ್ರವಲ್ಲ ಕ್ಲಾಸನ್ನೂ ದೊರಕಿಸುವರು ಆದರೆ ೧೦ ಅಥವಾ ೧೨ ನೆಯ ಗುರುವಿನಲ್ಲಿದ್ದಾಗ ಪರೀಕ್ಷೆಯಾಗುವುದಾದರೆ ಉತ್ತೀರ್ಣರಾಗುವ ಸಂಭವ ಸುಮಾರು ನೂರಕ್ಕೆ ೬೦ರಷ್ಟು ಮಾತ್ರ.

# ಕನ್ಯಾ

ಈ ವರ್ಷ ಒಳ್ಳೆಯ ಭಾಗ್ಯೋದಯದ, ವಿಪುಲ ಲಾಭದ, ಶತ್ರು ಮತ್ತು ಸಂಕಟಗಳ ಮೇಲೆ ಜಯದ ಹಾಗು ಕಷ್ಟಕ್ಕಿಂತ ಹೆಚ್ಚು ಸುಖಪ್ರದವೆಂಬುದು ನಿಶ್ಚಿತ.

ಈ ರಾಶಿಯವರಿಗೆ ಈ ವರ್ಷವಿಡೀ ಗುರುಬಲ ಬಹಳ ಉತ್ತಮವಿದೆ. ಅಂದರೆ ಜನೆವರಿ ೮ರ ವರೆಗೆ ಹಾಗು ಮತ್ತೆ ಮಾರ್ಚ್ ೨೪ ರಿಂದ ಆಗಸ್ಟ್ ೩೧ ರ ವರೆಗೆ ಗುರು ೧೦ ನೆಯವನು; ಮಧ್ಯಂತರದಲ್ಲಿ ಅಂದರೆ ಜನೆವರಿ ೮ ರಿಂದ ಮಾರ್ಚ್ ೨೪ ರ ವರೆಗೆ ವಕ್ರಗತಿಯಿಂದಾಗಿ ೯ ನೆಯವನು: ಹಾಗು ಆಗಸ್ಟ್ ೩೧ರ ನಂತರ ೧೧ ನೆಯವನು ಅಂದರೆ ಭಾಗ್ಯ, ಕರ್ಮ ಹಾಗು ಲಾಭ ಈ ಶುಭ ಮತ್ತು ಉನ್ನತ ಸ್ಥಾನಗಳಲ್ಲಿರುವುದರಿಂದ ಸಹಸಾ ಎಂಥ ಚಿಂತೆಗೂ ಅವಕಾಶವಿಲ್ಲ. ಆರೋಗ್ಯವೂ ಉತ್ತಮವಿರುತ್ತದೆ. ಆದರೆ ಜೂನ್ ೨೪ ರಿಂದ ಬರುವ ೮ ನೆಯ ರಾಹು ಹಾಗು ೨ ನೆಯ ಕೇತುವಿನಿಂದಾಗಿ ಗೃಹಕಲಹವಾರಂಭವಾಗುವುದರಿಂದಾಗಿ ಮನಸ್ಸಿನ ಮೇಲೆ ತೀವ್ರ ಪರಿಣಾಮವಾಗುವುದರಿಂದ ಪಿತ್ತಾಂಶ ಇಲ್ಲವೆ ರಕ್ತದ ಒತ್ತಡದ ತೊಂದರೆಯಾಗಬಹುದು. ಆಗೀಗ ಭೂತ ಚೇಷ್ಟೆಗಳಂತಹ ಘಟನೆಗಳು ನಡೆದು ಮನಸ್ಸು ಭಯಭೀತವಾಗಬಹುದು, ಅಥವಾ ಮೃತ ಪೂರ್ವಜರಲ್ಲೊಬ್ಬರು ಮನೆಯನ್ನು ಪ್ರವೇಶಿಸಿದಂತೆ ಭಾಸವಾಗಬಹುದು. ಆದರೂ ಒಟ್ಟಿನಲ್ಲಿ ದೇಹಸುಖ ಚೆನ್ನಾಗಿಯೇ ದೊರೆಯುವುದೆಂದು ಗ್ರಹಿಸಲಡ್ಡಿಯಿಲ್ಲ.

ಈ ರಾಶಿಯ ಅವಿವಾಹಿತರ ವಿವಾಹವಾಗುವುದಿದ್ದಲ್ಲಿ ಅದು ಈ ವರ್ಷ ನಿಶ್ಚಿತ ಆಗುವುದು. ಗುರು ೯ ನೆಯವನಿರುವಾಗ ಅಂದರೆ ಜನೆವರಿ ೮ ರಿಂದ ಮಾರ್ಚ್ ೨೪ ರ ವರೆಗಿನ ಅವಧಿಯಲ್ಲಿ ಹೊಂದಿದರೆ ವಧು ಇಲ್ಲವೆ ವರ ಅದೇ ಊರವರಾಗಿರುವರು ಇಲ್ಲವೆ ಹೆಚ್ಚೆಂದರೆ ೨೦–೩೦ ಮೈಲು ಅಂತರದಲ್ಲಿರುವ ಊರವರೇ ಆಗಿರುವರು ೧೦ ನೆಯ ಗುರುವಿನಲ್ಲಿ ವಿವಾಹ ನಿಶ್ಚಯವಾದರೆ ಅದು ಹತ್ತಿರದ ಹಾಗು ಬಹುಶಃ ಪೂರ್ವಪರಿಚಿತ ಕುಟುಂಬದಲ್ಲಿಯೇ ಆಗಿರಬಹುದಾಗಿದೆ, ಇಲ್ಲವೆ ಅದು ಪ್ರೇಮ ವಿವಾಹವೂ ಆಗಿರಬಹುದು. ೧೦ ನೆಯ ಗುರುವಿನ ಅವಧಿಯು ಜನೆವರಿ ೮ರ ವರೆಗೆ ಹಾಗು ನಂತರ ಮಾರ್ಚ್ ೨೪ ರಿಂದ ಆಗಸ್ಟ್ ೩೧ ರ ವರೆಗಿದೆ ವಿವಾಹ ೧೧ ನೆಯ ಗುರುವಿನಲ್ಲಿ ಹೊಂದಿದರೆ ಅದು ದೂರದ ಮನೆತನದೊಡನೆಯಾಗಿರಬಹುದಲ್ಲದೆ ಆ ಮನೆತನ ನಿಮಗಿಂತ ಹೆಚ್ಚು ಸುಸ್ಥಿತಿಯಲ್ಲಿನದಾಗಿರಬಹುದಾಗಿದೆ. ಆದರೆ ಮದುವೆ ಯಾವಾಗ ಗೊತ್ತಾದರೂ ವಧೂವರರು ರೂಪ, ಗುಣ ಹಾಗು ಶಿಕ್ಷಣಾದಿ ವಿಷಯಗಳಲ್ಲಿ ಸಮಸಮೀಪ ಒಂದೇ ವಿಧವಾಗಿರುವರು. ಒಟ್ಟಿನಲ್ಲಿ ಈ ವರ್ಷ ಉತ್ತಮ ಸ್ತ್ರೀಸುಖ ದೊರೆಯುವುದು. ಆದರೆ ೨ ನೆಯ ಕೇತು ಬಂದ ನಂತರ ಮನೆಯಲ್ಲಿಯ ಕೆಲವರು ಅವಳೊಡನೆ ಬೇಕೆಂದೇ ಮತ್ಸರದಿಂದ ವರ್ತಿಸುವರು

ನಿಮ್ಮ ಮಕ್ಕಳ ವಿವಾಹ ಮಾಡುವುದಿದ್ದರೆ

ಅದಕ್ಕೆ ಸಹ ೧೦ ನೆಯ ಗುರುವಿಗಿಂತ ೯ ಹಾಗು ೧೧ ನೆಯ ಗುರುವಿನಲ್ಲಿ ಮೊದಲು ಹೊಂದಲೇ ವಿಪರೀತ ಅಡೆತಡೆಗಳು ಬರುವವಲ್ಲದೆ ಒಂದು ವೇಳೆ ಹೊಂದಿದರೆ ಮುಂದೆ ವೆಚ್ಚ ಮುಂತಾದುವೆಲ್ಲ ವಿಷಯಗಳಲ್ಲೂ ತೊಂದರೆಗಳುದ್ಭವಿಸುವವು. ಆದರೆ ಇಲ್ಲವೆ ೧೧ ನೆಯ ಗುರುವಿನಲ್ಲಿ ನೀವು ಮನೆಯಲ್ಲಿ ಕುಳಿತಲ್ಲೇ ಮದುವೆ ಹೊಂದುವುದು ಮಾತ್ರವಲ್ಲ, ನಿಶ್ಚಿತ ಸಮಯಕ್ಕೆ ನಿರಾಯಾಸ ಪೂರ್ತಿಗೊಳ್ಳುವುದು. ಸೊಸೆ ಅಥವಾ ಅಳಿಯ ರೂಪ ಗುಣ ಹಾಗು ದೈವ ಈ ಎಲ್ಲ ದೃಷ್ಟಿಯಿಂದಲೂ ಕಲ್ಪನೆಗಿಂತ ಹೆಚ್ಚು ಉತ್ತಮರೇ ಲಭಿಸುವರು. ಅದರಂತೆಯೆ, ಮಕ್ಕಳಲ್ಲಿ ಅನೇಕರ ಭಾಗ್ಯೋದಯದ ಯೋಗವೀಸಲವಿದ್ದು ಅವರೊಂದಿಗೆ ನಿಮ್ಮದು ಚನ್ನಾಗಿ ಕೂಡಿ ನಡೆಯುವುದು. ಅವರಲ್ಲೊಬ್ಬನಿಗೆ ಜಾಗತಿಕ ಕೀರ್ತಿಯೂ ದೊರೆಯಬಹುದಾಗಿದೆ.

ಉದ್ಯೋಗ, ಧಂದೆಗಳಿಗಂತೂ ಈ ವರ್ಷ ಹಿಂದಿನ ಅನೇಕ ವರ್ಷಗಳಿಗಿಂತಲೂ ಹೆಚ್ಚು ಭರಭರಾಟೆಯದಾಗಿದ್ದು, ಅದರಲ್ಲೂ ಬುದ್ಧಿ ಪ್ರಧಾನವಾದಂಥ ಉದ್ಯೋಗದಲ್ಲಿರುವವರಿಗಂತೂ ವೈಭವ ಹಾಗು ಪ್ರತಿಷ್ಠೆಗಳಲ್ಲಿ ತುಂಬ ಹೆಚ್ಚಳವಾಗುವುದು ವ್ಯಾಪಾರಿಗಳಿಗೆ ತುಂಬ ದ್ರವ್ಯಲಾಭವಾಗುವುದಲ್ಲದೆ ಪತ್ತು, ಪ್ರತಿಷ್ಠೆಗಳೂ ಚೆನ್ನಾಗಿ ಉಳಿಯುವವು ೧೦ ನೆಯ ಗುರುವಿನಲ್ಲಿ ದುಸ್ಸಾಧ್ಯವೆನಿಸುವಂಥ ಕಾರ್ಯಗಳು ಸಹ ಪೂರ್ಣ ಯಶಸ್ವಿಯಾಗುವವು. ಗುರು ೧೧ ನೆಯವನಾಗಿರುವಾಗ ಅಂದರೆ ಅಗಸ್ಟ್ ೩೧ ರ ನಂತರದ ಕಾಲದಲ್ಲಿ ಮಿತ್ರ ಹಾಗು ಆಪ್ತರಿಂದ ನಾನಾಪ್ರಕಾರದ ಸಹಾಯು ದೊರೆಯುವುದು, ಮತ್ತು ಇದೇ ಅವಧಿಯಲ್ಲಿ ಅವರಲ್ಲಿಯ ಕೆಲವರ ತುಂಬ ಉತ್ಕರ್ಷವೂ ಆಗಬಹುದು. ಅದರಂತೆಯೆ, ನೌಕರದಾರರಿಗೆ ಸಹ ಈ ವರ್ಷ ತುಂಬ ಪ್ರಗತಿಪರವಾಗಿರುವುದಲ್ಲದೆ ೬ ನೆಯ ಶನಿಯಲ್ಲಿ ಅಂದರೆ ಮೇ ೧೧ ರ ಪೂರ್ವದಲ್ಲಿ ಹಾಗು ಅದಕ್ಕಿಂತ ಹೆಚ್ಚಾಗಿ ಸಪ್ಟೆಂಬರ್ ೭ ರ ನಂತರ ಬಡತಿ ನಿಶ್ಚಿತ ಸಿಗುವುದು ಈ ವ.ಧ್ಯಂತರದ ಅವಧಿಯಲ್ಲಿ ಅಂದರೆ ಮೇ ೧೧ ರಿಂದ ಸಪ್ಟೆಂಬರ್ ೭ ರ ವರೆಗೆ ಮಹತ್ವದ ಕೆಲಸವೊಂದಕ್ಕಾಗಿ ನೇಮಿಸಲ್ಪಡುವುದರಿಂದ ದೂರ ಪ್ರವಾಸವೊಂದು ಅನಾಯಾಸ ಲಭ್ಯವಾಗುವ ಸಂಭವವಿದೆ. ವರಿಷ್ಠರ ಕೃಪೆ ಸದಾಕಾಲ ಉತ್ತಮವಿರುವುದಲ್ಲದೆ ಕೈ ಕೆಳಗಿನವರೂ ಆದರದಿಂದ, ನಿಷ್ಠೆಯಿಂದ ವರ್ತಿಸುವರು. ಬದಲಿಯಾದರೆ ಅದು ಯೋಗ್ಯ ಸ್ಥಳಕ್ಕೆಯೇ ಆಗುವುದಲ್ಲದೆ ಅಲ್ಲಿ ಕೂಡ ಮಹತ್ವ ಬೆಳೆಯುವುದು. ತುಂಬ ದ್ರವ್ಯಲಾಭವಾಗುವುದಲ್ಲದೆ ಮೇಲಿನ ಹಣವನ್ನು ಕೂಡಿ ಹಾಕಲೂ ಸಾಧ್ಯವಾಗಬಹುದು. ಆದರೆ ೨ ನೆಯ ಕೇತುವಿನಲ್ಲಿ ಮನೆಯವರಲ್ಲೇ ಒಬ್ಬರು ಹಟದಿಂದ ಹುಚ್ಚು ವೆಚ್ಚ ಮಾಡಲಾರಂಭಿಸುವ ಭಯವೂ ಇದೆ. ೯ ನೆಯ ಗುರುವಿನಲ್ಲಿ ಒಂದು ಯಾತ್ರೆ ಜರುಗಬಹುದಾದರೆ ೧೧ ರಲ್ಲಿ ಮನೋರಂಜನೆಗಾಗಿಯೇ ಪ್ರವಾಸ ಮಾಡುವ ಅವಕಾಶ ವೊದಗಬಹುದು. ಒಳ್ಳೆಯ ವಾಹನಸುಖ ದೊರೆಯಬಹುದಲ್ಲದೆ ಯಾರ ಜನ್ಮಕುಂಡಲಿಯಲ್ಲಿ ಗುರುವು ನವಮ, ದಶಮ ಏಕಾದಶ ಇಲ್ಲವೆ ಚತುರ್ಥ ಸ್ಥಾನದಲ್ಲಿರುವನೊ ಅವರಿಗೆ ಸ್ವಂತ ವಾಹನ ಕೊಳ್ಳುವಂತಹ ಭಾಗ್ಯವೂ ಒದಗಬಹುದು.

ದಾವೆ, ಫಿರ್ಯಾದಿ ಇಲ್ಲವೆ ಇತರ ಸ್ಪರ್ಧೆಯ ಕೆಲಸಗಳಲ್ಲಿ ನಿರ್ಣಯವು ಶನಿ ೬ ನೆಯವನಿದ್ದಾಗಲಾದರೆ ಯಶೋದಾಯಕವೇ ಇರುತ್ತದೆ, ಆದರೆ ಅವನು ೭ ನೆಯವನಿದ್ದಾಗ ಮಾತ್ರ ತದ್ವಿರುದ್ಧ ಆಗುವ ಸಂಭವವಿದೆ. ಆದರೆ ಒಟ್ಟಿನಲ್ಲಿ ಪ್ರತಿಪಕ್ಷಿಗಳು ತೀರ ಮೆತ್ತಗಾಗಿಯೇ ಇರುವರು.

ಈ ರಾಶಿಯ ಗರ್ಭಿಣಿಯರ ಪ್ರಸೂತಿ ಅಥವಾ ೧೧ ನೆಯ ಗುರುವಿನಲ್ಲಾದರೆ ಏನೂ ತೊಂದರೆಯಾಗುವುದಿಲ್ಲ, ಆದರೆ ಬಹುತರರಿಗೆ ಕನ್ಯೆಯೇ ಜನಿಸುವ ಸಂಭವವಿದೆ. ಹರಿಗೆ ೧೦ ನೆಯ ಗುರುವಿನಲ್ಲಾದರೆ ತುಸು ಕಷ್ಟವಾದರೂ ಪುತ್ರಲಾಭವಾಗುವುದರಿಂದ ಅದು ಅಪ್ರಿಯೆನಿಸುವುದಿಲ್ಲ. ಮಗು ರೂಪದಿಂದ ಸಾಮಾನ್ಯವಿದ್ದರೂ ಆರೋಗ್ಯದಿಂದ ಸಶಕ್ತವಿರುವುದು.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ೧೦ ನೆಯ ಗುರುವಿನಲ್ಲಿ ಅಂದರೆ ಜನವರಿ ೮ ರ ಮೊದಲು ಇಲ್ಲವೆ ಮಾರ್ಚ್ ೨೪ ರಿಂದ ಅಗಸ್ಟ್ ೩೧ ರ ವರೆಗಿನ ಅವಧಿಯಲ್ಲಾದರೆ ಅವರು ಉತ್ತೀರ್ಣರಾಗುವ ಮಟ್ಟಿಗಾದರೂ ಗುಣ ದೊರಕಿಸುವರು; ಆದರೆ ಅದೇ ಉಳಿದ ಸಮಯದಲ್ಲಾದರೆ ಅವರಿಗೆ ಪ್ರಥಮವಲ್ಲದಿದ್ದರೆ ದ್ವಿತೀಯ ಶ್ರೇಣಿಯ ಗೌರವವಾದರೂ ದೊರೆತೇತೀರುವುದು.

# ತುಲಾ

ಈ ವರ್ಷ ಪ್ರಾಪಂಚಿಕ ಸುಖಕ್ಕೆ ಅಷ್ಟೊಂದು ಚನ್ನಾಗಿಲ್ಲವಾದರೂ ವ್ಯಾವಸಾಯಿಕ ಉನ್ನತಿಗೆ, ಲಾಭಕ್ಕೆ ಹಾಗು ಪ್ರತಿಷ್ಠೆಗೆ ಉತ್ತಮವೆಂಬುದು ನಿಶ್ಚಿತ.

ಈ ರಾಶಿಯವರು ೮ ನೆಯ ರಾಹುವಿರುವವರೆಗೆ ಅಂದರೆ ಜೂನ್ ೨೪ ರ ವರೆಗೆ ಆರೋಗ್ಯವನ್ನು ತುಸು ಜಪ್ಪಿಸಿಕೊಂಡಿರಬೇಕು. ಯಾಕೆಂದರೆ, ಕೆಲವರಿಗೆ ಪಿಶಾಚಬಾಧೆಯಾದರೆ ಹಲವರಿಗೆ ಚಿತ್ತಭ್ರಮೆ ಮತ್ತೆ ಕೆಲವರಿಗೆ ರಕ್ತದ ಒತ್ತಡದ ಉಪದ್ರವಾಗುವ ಸಂಭವವಿದೆ ಅನಂತರ ಮಾತ್ರ ಆರೋಗ್ಯ ಬಹಳ ಉತ್ತಮವಿರುವುದು. ರಾಹುವಿನಂತೆಯೆ ೮ ನೆಯ ಗುರುವಿನಲ್ಲೂ ಅಂದರೆ ಜನವರಿ ೮ ರಿಂದ ಮಾರ್ಚ್ ೨೪ರ ವರೆಗೆ ವಿಶೇಷ ಜಪ್ಪಿಸಿಕೊಂಡಿರಬೇಕು. ಇತರ ವಿಷಯಗಳಲ್ಲಿ ಒಳ್ಳೆಯ ದೇಹಸುಖ ದೊರೆಯುವುದಲ್ಲದೆ ಅನೇಕ ಸಂಗತಿಗಳು ಮನಸ್ಸಿನಂತೆಯೇ ಜರುಗುವವು.

ಹೆಂಡತಿಯೊಂದಿಗೆ ಸಾಮಾನ್ಯವಾಗಿಯೇ ಉತ್ತಮ ಸಾಮರಸ್ಯವಿರುವುದೆಂಬುದಾಗಿ ವರ್ಷಾರಂಭದಲ್ಲಿ ದ್ವಿತೀಯ ಅಂದರೆ ಕುಟುಂಬಸ್ಥಾನದಲ್ಲಿ ರಾಶಿಸ್ವಾಮಿ ಶುಕ್ರನೊಂದಿಗೆ ಆಗಿರುವ ಭಾರ್ಯೇಶ ಮಂಗಳನ ಯುತಿಯು ಸೂಚಿಸುತ್ತದೆ. ಆದರೆ ಜೂನ್ ೨೪ ರಿಂದ ಬರುವ ೭ ನೆಯ ರಾಹುವಿನಿಂದಾಗಿ ನಿಮ್ಮ ಆರೋಗ್ಯ ಉತ್ತಮವಾಗತೊಡಗುವಂತೆಯೇ ಅವಳ ಆರೋಗ್ಯ ಕೆಡಲಾರಂಭಿಸುವ ಸಂಭವವಿದೆ; ಆದರೆ ಈ ಕ್ಲೇಶ ಕಿರುಕಳ ಸ್ವರೂಪದ್ದಾಗಿರುವುದು. ಈ ರಾಶಿಯ ಅವಿವಾಹಿತರ ವಿವಾಹವಾಗುವುದಿದ್ದಲ್ಲಿ ಅದಕ್ಕೆ ಜನವರಿ ೮ ರ ವರೆಗೆ ಹಾಗು ಅನಂತರ ಮಾರ್ಚ್ ೨೪ ರಿಂದ ಅಗಸ್ಟ್ ೩೧ರ ವರೆಗಿನ ಅವಧಿಯಲ್ಲಿ ಗುರುಬಲ ಸಾಮಾನ್ಯವಿದ್ದು ಮುಂದೆ ಮಾತ್ರ ಉತ್ತಮವಿದೆ. ಚಾತುರ್ಮಾಸ್ಯವೆಂದು ಪ್ರತ್ಯಕ್ಷ ವಿವಾಹವಾಗದಿದ್ದರೂ ನಿಶ್ಚಯವಂತೂ ಆಗಿ ಉಳಿಯುವುದು. ವಧೂವರರು ಪೂರ್ಣ ಅನುರೂಪರಾಗಿರುವರಲ್ಲದೆ ವಿಚಾರ



ಮತ್ತು ಸ್ವಭಾವಾದಿಗಳಲ್ಲೂ ಸಮಾನರೇ ಇರುವರು. ಆದರೆ ವಿವಾಹ ಯಾವಾಗ ಆದರೂ ಅದು ಪೂರ್ಣವಾಗುವ ವರೆಗೆ ಅನಿರೀಕ್ಷಿತ ಅಡೆತಡೆಗಳನೇಕ ಬರುವುದರಿಂದ ತೊಂದರೆ ಹಾಗು ಮನೋಭಂಗವಾಗುವುದಲ್ಲದೆ ಕೊಡತಕ್ಕೊಳ್ಳುವುದರ ವಿಷಯದಲ್ಲೂ ಪರಸ್ಪರ ಸರಿಹೋಗುವುದಿಲ್ಲ.

ಉದ್ಯೋಗಸ್ಥರಿಗೆ ೬ ನೆಯ ಶನಿಯಿರುವಾಗ ಅಂದರೆ ಮೇ ೧೨ ರಿಂದ ಸಪ್ಟೆಂಬರ್ ೬ ರ ವರೆಗಿನ ಕಾಲವು ಮಹತ್ವಪೂರ್ಣ ಘಟನೆಗಳಿಂದ ಕೂಡಿರುವುದಲ್ಲದೆ, ೮ ನೆಯ ಗುರು ಅಂದರೆ ಜನವರಿ ೮ ರಿಂದ ಮಾರ್ಚ್ ೨೪ ರ ಮಧ್ಯದ ಕಾಲವೊಂದನ್ನುಳಿದರೆ ಉಳಿದ ಸಮಯ ಲಾಭಕ್ಕೆ ಅತ್ಯುತ್ತಮವೆನಿಸಿದೆ. ಬುದ್ಧಿ ಜೀವಿಗಳಿಗಂತೂ ಕನಸಿನಲ್ಲೂ ಕಾಣಸಿಗದಷ್ಟು ಹಣ ಲಭ್ಯವಾಗುವುದು. ನೌಕರದಾರರಿಗೆ ಆಗಸ್ಟ್ ೩೧ರ ನಂತರ ಬರುವ ೧೦ ನೆಯ ಗುರುವಿನಲ್ಲಿ ಬಡ್ತಿ ನಿಶ್ಚಿತ ದೊರೆಯುವುದು. ಬದಲಿಯಾಗುವ ಯೋಗ ಕಡಿಮೆಯೇ ಇದ್ದು ಒಂದು ವೇಳೆ ಆದರೆ ಅದು ನಿಮ್ಮ ಮನಸ್ಸಿಗೊಪ್ಪದ ಹಾಗು ಪ್ರತಿಕೂಲ ಸ್ಥಳಕ್ಕಾಗುವುದು. ನೌಕರಿ ಖಾಸಗಿಯಾಗಿದ್ದರೂ ೧೦ ನೆಯ ಗುರುವು ಸಂಬಳ ಹಾಗೂ ದರ್ಜೆಯನ್ನು ಹೆಚ್ಚಿಸುವನು. ೭ ನೆಯ ಶನಿಯಲ್ಲಿ ವರಿಷ್ಠರು ಅತ್ಯಂತ ಸಂತುಷ್ಟರಾಗಿರುವರು. ೯ ನೆಯ ಗುರುವಿನಲ್ಲಿ ಉತ್ತಮ ಮಿತ್ರಸುಖ ದೊರೆಯುವುದಲ್ಲದೆ, ಸುಖಕರ ಪ್ರವಾಸವಾಗಿ ಅದರಲ್ಲಿ ಇಚ್ಛಾಪೂರ್ತಿಯಾಗಿ ಹೊಸ ಮೈತ್ರಿಯ ಲಾಭವೂ ಆಗುವುದು. ಈ ಹೊಸ ಮೈತ್ರಿಯ ಉಪಯೋಗ ಮುಂದೆಂದಾದರೂ ಒಳ್ಳೆಯ ಮಹತ್ವದ ಕಾರ್ಯದಲ್ಲಾಗಬಹುದು. ಬಹುತರರಿಗೆ ಸಾಕಷ್ಟು ಹಣವನ್ನು ಇಲ್ಲವೆ ಅಲಂಕಾರದ ಉಚ್ಚ ವಸ್ತುಗಳನ್ನು ಸಂಗ್ರಹಿಸಲು ಸಾಧ್ಯವಾಗಬಹುದು. ವಿಶೇಷ ಮಹತ್ವದ ಕಾರ್ಯಗಳಿಗೆ ನವೆಂಬರ್ ೫ ರಿಂದ ಡಿಸೆಂಬರ್ ೧೪, ಮಾರ್ಚ್ ೧ ರಿಂದ ಮೇ ೧೮ ಹಾಗು ಸಪ್ಟೆಂಬರ್ ೩ ರಿಂದ ಮುಂದಿನ ಕಾಲವೆಲ್ಲ ಯಶೋಕಾರಕವಿದೆ. ಆಪ್ತಸುಖ ಕೆಲವಂಶ ಹೀಗಿದ್ದರೆ ಹಲವಂಶ ಹಾಗೆ ಈ ರೀತಿ ಸಂಮಿಶ್ರವಾಗಿರುವುದು. ೧೦ ನೆಯ ಗುರುವಿನಲ್ಲಿ ವಿಶೇಷ ಉತ್ತಮ ವಾಹನ ಸುಖ ಸಿಗುವುದು. ಆದರೆ ಈ ಸಲ ರಾಹು ಮತ್ತು ಕೇತು ಅನುಕೂಲರಾಗಿಲ್ಲದ ಮೂಲಕ ಚಿಕ್ಕ ದೊಡ್ಡ ಧಾರ್ಮಿಕ ಕಾರ್ಯಗಳನ್ನು ಮನಸ್ಸಿನಲ್ಲಿ

## ನಮ್ಮ ವಿದ್ಯಾವಂತ



ವಿಜ್ಞಾನವೋ, ಕಲೆಯೊ, ಸಾಮಾಜಿಕಾಭ್ಯಾಸ
ಅಷ್ಟಿಷ್ಟು ಕಲಿತು ವಿದ್ಯಾವಂತನಾದ ;
ಆಮೇಲೆ ಓದೆನಲು, ಹಾಲುಬಟ್ಟಲ ಕಂಡ
ಬೀರಬಲ್ಲನ ಬೆಕ್ಕಿನೊಲು ಬಾಲಮುರಿದ !

— ಎಂ ಅಕಬರ ಅಲಿ

ನಿರ್ಧರಿಸಿದ ಸಮಯವನ್ನು ಬದಲಿಸಿ ಮಾಡಬೇಕಾಗಬಹುದು. ೮ ನೆಯ ರಾಹುವಿನಲ್ಲಿ ವಿಚಿತ್ರ ಹಾಗು ಮೈ ನಡುಗಿಸುವಂಥ ಅನೇಕ ಕನಸುಗಳನ್ನು ಕಾಣುವಿರಿ

ಮ್ಮ ಮಕ್ಕಳ ವಿವಾಹ ಮಾಡುವುದಿದ್ದರೆ ಅದಕ್ಕೆ ೯ನೆಯ ಗುರುವೇ ಹೆಚ್ಚು ಅನುಕೂಲನೆಂದು ತಿಳಿಯಬೇಕು. ಆಗ ಅದು ಅನಾಯಾಸವಾಗಿ ಹಾಗು ಅಲ್ಪ ವೆಚ್ಚದಲ್ಲೇ ಆಗಬಹುದು. ಈ ಕಾಲವೆಂದರೆ ಜನವರಿ ೮ ರ ವರೆಗೆ ಹಾಗು ನಂತರ ಮಾರ್ಚ್ ೨೪ ರಿಂದ ೩೧ ರ ವರೆಗೆ. ಸೊಸೆ ಇಲ್ಲವೆ ಅಳಿಯ ಮೈಬಣ್ಣದಲ್ಲಿ ನಿಮ್ಮ ಅಪೇಕ್ಷೆಗೆ ತೀರ ವಿರುದ್ಧವಾಗಿದ್ದರೂ ಗುಣ ಹಾಗು ದೈವದಿಂದ ಸಾ ರದಲ್ಲೊಬ್ಬನಂತೆ ಇರುವರು. ಮಕ್ಕಳೆಲ್ಲರ ಉತ್ಕರ್ಷಕ್ಕೂ ಈ ವರ್ಷ ಉತ್ತಮವೇ ಎಂಬುದು ನಿಜವೇ ಆದರೂ ಶನಿಯು ವಕ್ರನಾಗಿರುವ ಕಾಲದಲ್ಲಿ ಅಂದರೆ ನವೆಂಬರ್ ೧೪ರ ವರೆಗೆ ಹಾಗು ಮತ್ತೆ ಜುಲೈ ೫ರ ನಂತರ ಕೆಲವರು ಅಕ್ರಿಯವಾಗಿ ಹಾಗು ಮರ್ಯಾದೆಗೆ ಕುಂದು ತರುವ ರೀತಿಯಲ್ಲಿ ವರ್ತಿಸಬಹುದು.

ದಾನ, ಧರ್ಮಾದಿ ಇಲ್ಲವೆ ಇತರ ಸ್ಪರ್ಧೆಯ ಕೆಲಸಗಳಲ್ಲಿ ೬ ನೆಯ ಶನಿ, ೯ ನೆಯ ಗುರು ಹಾಗು ೭ ನೆಯ ರಾಹು ಏಕಕಾಲಕ್ಕೆ ಇರುವಾಗ ಅಂದರೆ ಜೂನ್ ೨೪ ರಿಂದ ಅಗಸ್ಟ್ ೩೧ರ ವರೆಗಿನ ಅವಧಿಯಲ್ಲಿ ಪೂರ್ಣ ಯಶಸ್ಸು ದೊರೆಯುವುದು; ಆದರೆ ೭ ನೆಯ ರಾಹುವಿನಲ್ಲಿ ಉದ್ಯೋಗ, ಅಣ್ಣತಮ್ಮಂದಿಕೆ ಇಲ್ಲವೆ ಪ್ರಣಯಗಳಂತಹ ಖಾಸಗಿ ಸ್ಪರ್ಧೆಗಳಿಗೆ ತುಂಬ ಏರಿಕೆಯ ಕಾಲವಿದೆ.

ಈ ರಾಶಿಯ ಗರ್ಭಿಣಿಯರ ಪ್ರಸೂತಿ ೮ ನೆಯ ಗುರುವಿನಲ್ಲಿ ಹಾಗೂ ವಿಶೇಷತಃ ಜನವರಿ ೨೧ ರಿಂದ ಫೆಬ್ರುವರಿ ೨೮ರ ವರೆಗಿನ ಅವಧಿಯಲ್ಲಿರುವ ೧೨ ನೆಯ ಮಂಗಳನಲ್ಲಿ ಆದರೆ ಅವರಿಗೆ ಬಹಳ ಕಷ್ಟವಾಗುವ ಸಂಭವವಿರುವುದರಿಂದ ಮೊದಲೇ ಯೋಗ್ಯ ವೈದ್ಯಕೀಯ ಸಲಹೆ ಪಡೆಯುವುದುತ್ತಮ. ೯ ಹಾಗು ೧೦ ನೆಯ ಗುರುವಿನಲ್ಲಿ ಸುಲಭ ಹೆರಿಗೆಯಾಗುವುದು. ಆದರೆ ೯ ನೆಯ ಗುರುವಿನಲ್ಲಾದರೆ ಪುತ್ರನೂ ೧೦ ನೆಯ ಗುರುವಿನಲ್ಲಾದರೆ ಕನ್ನೆಯೂ ಜನಿಸುವ ಸಂಭವವಿದೆ.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ೮ ನೆಯ ಗುರು, ಹಾಗು ೮ ಮತ್ತು ೯ ನೆಯ ಮಂಗಳರಿರುವಾಗ ಅಂದರೆ ಅನುಕ್ರಮವಾಗಿ ಜನವರಿ ೮ ರಿಂದ ಮಾರ್ಚ್ ೨೪, ನಂತರ ಮೇ ೧೮ ರಿಂದ ಜೂನ್ ೩೦ ಹಾಗು ಅಗಸ್ಟ್ ೧೫ ರಿಂದ ಸಪ್ಟೆಂಬರ್ ೩ ರ



ದೀಪಾವಳಿಯು ಸರ್ವರಿಗೂ ಸುಖಪ್ರದವಾಗಲಿ

ವರೆಗಿನ ಅವಧಿಯಲ್ಲಾದರೆ ಅವರು ಬಹು ಪ್ರಯಾಸ ಪೂರ್ವಕ ಅಭ್ಯಾಸ ಮಾಡಿದ್ದರೆ ಮಾತ್ರ ಅಷ್ಟರ ಮಟ್ಟಿಗೆ ಉತ್ತೀರ್ಣರಾಗುವ ಸಂಭವವಿದೆ ಆದರೆ ಪರೀಕ್ಷೆ ಇತರ ಸಮಯದಲ್ಲಾದರೆ ಕ್ಲಾಸ್ ದೊರೆಯದಿದ್ದರೂ ಸಹಜವಾಗಿ ಉತ್ತೀರ್ಣರಾಗುವುದಂತೂ ನಿಶ್ಚಿತ.

## ವೃಶ್ಚಿಕ

ಒಟ್ಟಿನಲ್ಲಿ ಈ ವರ್ಷವು ಮಂದಗತಿಯದಾದರೂ ಉತ್ಕರ್ಷದ ದಾರಿಯಲ್ಲೇ ನಡೆದಿರುವಂಥದೆಂಬುದರಲ್ಲಿ ಎಷ್ಟೂ ಸಂದೇಹವಿಲ್ಲ.

ರಾಶಿ ಸ್ವಾಮಿ ಮಂಗಳನು ವರ್ಷಾರಂಭಕ್ಕೆ ಇದೇ ರಾಶಿಯಲ್ಲೇ ಇರುವುದರಿಂದ ಯಾವುದೇ ಕೆಲಸ ಮಾಡಬಲ್ಲೆನೆಂಬ ಹುಮ್ಮಸ್ಸು ತರುಣರಿಗೆ ಮಾತ್ರವಲ್ಲ, ವಯಸ್ಸಾದವರಿಗೆ ಕೂಡ ವಿಪುಲ ಪ್ರಮಾಣದಲ್ಲಿರುವುದು. ನಿರಾಶೆಯ ಶಬ್ದ ತಪಿ ಕೂಡ ಬಾರದು. ಆರೋಗ್ಯಕ್ಕೆ ಕೂಡ ಈ ಯೋಗ ಕೆಟ್ಟದ್ದಲ್ಲ. ಆದರೆ ಎಂದಿಗಿಂತ ಉಷ್ಣತೆ ಮಾತ್ರ ತುಸು ಹೆಚ್ಚೆನಿಸಬಹುದು. ಆದರೂ ೮ ನೆಯ ಗುರು ಮತ್ತು ೭ ನೆಯ ರಾಹು ಏಕಕಾಲಕ್ಕೆಯೇ ಇರುವಾಗ ಅಂದರೆ ಜನೆವರಿ ೮ ರವರೆಗೆ ಹಾಗು ಮಾರ್ಚ್ ೨೪ ರಿಂದ ಜೂನ್ ೨೪ ರ ವರೆಗೆ ಆರೋಗ್ಯ ತುಸು ಕಿರಿಕಿರಿಯದಾಗಿರಬಹುದು. ಬಹುತರ ವಿಷಯಗಳಲ್ಲಿ ಆವಶ್ಯಕ ದೇಹಸುಖವು ಜೂನ್ ೨೪ ರಂದು ಬರುವ ೬ನೆಯ ರಾಹುವಿನಿಂದಾಗಿ ದೊರೆಯಲಾರಂಭಿಸುವುದು. ಯಾಕೆಂದರೆ ೬ ನೆಯ ರಾಹುವು ರೋಗ, ಶತ್ರು ಹಾಗು ಸಂಕಟಗಳ ಸಂಪೂರ್ಣ ಸಂಹಾರಕನಾಗಿದ್ದಾನೆ.

ಅದರಂತೆಯೆ, ವರ್ಷಾರಂಭದಲ್ಲಿಯೆ ಭಾರ್ಯೇಶ ಶುಕ್ರನು ಸಹ ಇದೇ ರಾಶಿಯಲ್ಲಿರುವುದರಿಂದ ಬಹಳ ಉತ್ತಮ ಸ್ತ್ರೀಸುಖ ದೊರೆಯುವುದು ಹಾಗು ಪರಸ್ಪರ ಪ್ರೇಮ, ವಿಶ್ವಾಸ, ಆದರಗಳು ಮೊದಲಿಗಿಂತ ಹೆಚ್ಚುವವು. ಆದರೆ ೮ ನೆಯ ಗುರುವಿರುವಾಗ ಅಂದರೆ ಜೂನ್ ೨೪ ರ ವರೆಗೆ ಅವಳ ಆರೋಗ್ಯವೂ ಅಷ್ಟಕ್ಕಷ್ಟೇ ಇದ್ದು ನಿತ್ಯ ಒಂದಿಲ್ಲೊಂದು ತಕರಾರು ಇದ್ದೇ ಇರುವುದು. ಔಷಧ, ಪಥ್ಯ ಮೊದಲಾದವುಗಳ ವಿಷಯಕ್ಕೆ ಅಲಕ್ಷ್ಯವಾಗುವುದರಿಂದ ಆಗೀಗ ವಾಗ್ವಾದಕ್ಕೂ ತೊಡಗಬಹುದಾಗಿದೆ. ;ಅಂತೆಯೆ, ೭ ನೆಯ ರಾಹುವಿನಲ್ಲಿ ಒಂದೆರಡು ಸಲ ೧೫-೨೦ ದಿನಗಳ ಮಟ್ಟಿಗೆ ಅವಳು ಬೇರೆಡೆ ಹೋಗುವುದರಿಂದ ಸಹವಾಸವೂ ತಪ್ಪಬಹುದಾಗಿದೆ. ಈ ರಾಶಿಯ ಅವಿವಾಹಿತರ ವಿವಾಹವಾಗುವುದಿದ್ದರೆ ಅದಕ್ಕೆ ೭ ನೆಯ ಗುರುವಿನಲ್ಲಿ ಉತ್ತಮ ಬಾಸಿಂಗಬಲವಿದೆ. ಅಂದರೆ ಜನೆವರಿ ೮ ರಿಂದ ಮಾರ್ಚ್ ೨೪ರ ವರೆಗಿನ ಕಾಲ ವಿಶೇಷ ಅನುಕೂಲವೆಂದು ತಿಳಿಯಬಹುದು. ಆದರೆ ಅವನು ೮ ನೆಯವನಿರುವಾಗ ಅಂದರೆ ಜನೆವರಿ ೮ರ ವರೆಗೆ ಹಾಗು ಪುನಃ ಮಾರ್ಚ್ ೨೪ ರಿಂದ ಅಗಸ್ಟ್ ೩೧ ರ ವರೆಗಿನ ಅವಧಿಯಲ್ಲಿ ವಿವಾಹ ಹೊಂದುವ ಚಿಹ್ನೆಗಳು ತೋರಿಬರುವವಾದರೂ ಹಾಗಾಗುವ ಸಂಭವವಿಲ್ಲ. ಆದರೆ ಅವನು ೧ನೆಯವನಾಗಿರುವಾಗ ತೀರ ಕಷ್ಟದಿಂದ ಹೊಂದಬಹುದಾಗಿದೆ. ಆದರೆ ವಧೂವರರು ಭವಿಷ್ಯತ್ಕಾಲದಲ್ಲಿ ಪರಸ್ಪರರನ್ನು ಎಲ್ಲ ವಿಷಯಗಳಲ್ಲೂ ಪೂರ್ಣ ಸುಖಿಗಳನ್ನಾಗಿ ಮಾಡಲು ಶಕ್ತರಾಗುವಂಥ ಸುದೈವಿಗಳಾಗಿರುತ್ತಾರೆ.

ನಿಮ್ಮ ಮಕ್ಕಳ ವಿವಾಹ ಮಾಡುವುದಿದ್ದರೆ ಅದಕ್ಕೆ ಬಾಸಿಂಗಬಲ ೮ ನೆಯ ಗುರುವಿನಲ್ಲಿ ಕಷ್ಟಸಾಧ್ಯ, ೭ ನೆಯದರಲ್ಲಿ ಮಧ್ಯಮ ಹಾಗು ೯ ನೆಯದರಲ್ಲಿ ಉತ್ತಮವಿದೆ. ೯ ನೆಯ ಗುರುವಿನಲ್ಲಿ ಮದುವೆ ಹೊಂದಿದರೆ ಪ್ರತಿಸ್ಥಳವು ನಿಮಗಿಂತ ಹೆಚ್ಚು ಸುಸ್ಥಿತಿಯಲ್ಲಿನದಿರುವುದು ೮ ನೆಯದರಲ್ಲಾದರೆ ಸೊಸೆ ಇಲ್ಲವೆ ಅಳಿಯ ನಿಮ್ಮ ಮನಸ್ಸಿಗಷ್ಟೊಂದು ಒಪ್ಪಿತವಾಗದಿದ್ದರೂ ಕೇವಲ ಒಬ್ಬ ದೊಡ್ಡ ಮನುಷ್ಯರ ಆಗ್ರಹ ಇಲ್ಲವೆ ಮಧ್ಯಸ್ಥಿಯಿಂದ ಒಪ್ಪಬೇಕಾದ ಪ್ರಸಂಗ ಬರುವ ಸಂಭವವಿದೆ. ಆದರೆ ೭ ನೆಯ ಅಥವಾ ೯ ನೆಯ ಗುರುವಿನಲ್ಲಾದರೆ ನಿಮ್ಮ ಮನಸ್ಸಿಗೆ ಪೂರ್ಣ ಒಪ್ಪಿತವಾಗುವ ರೀತಿಯಲ್ಲೇ ನಡೆಯುವುದು ಮಕ್ಕಳಿಂದ ಈ ಸಲ ಒಟ್ಟಿನಲ್ಲಿ ಒಳ್ಳೆಯ ಸುಖ ದೊರೆಯುವುದು ನಿಜವಾದರೂ ೫ ನೆಯ ಶನಿಯಲ್ಲಿ ಅಂದರೆ ಮೇ ೧೧ ರಿಂದ ಸಪ್ಟೆಂಬರ್ ೭ ರ ವರೆಗಿನ ಅವಧಿಯಲ್ಲಿ ಅವರಲ್ಲೊಬ್ಬನಿಂದ ಖೇದಜನಕವೆನಿಸುವಂಥ ಒಂದೆರಡು ಸಂಗತಿಗಳು ಘಟಿಸಿ ನಿಮ್ಮ ಪ್ರತಿಷ್ಠೆಗೆ ಧಕ್ಕೆ ಬರುವ ಭಯವಿದೆ. ಅವರ ಉನ್ನತಿಗೆ ೯ ನೆಯ ಗುರುವು ಒಳ್ಳೆಯ ಸಹಾಯಕನಾಗಿದ್ದಾನೆ.

**ಕೆಲಸಕ್ಕೆ ಚಾಲನೆ**



ಮೋಟರಿಗೊ ಪೆಟ್ರೋಲು, ಕತ್ತೆಗೋ ಹಿಡಿಕೂಳು;
ಕೆಲಸ ಮಾಡಲು ಚಾಲನೆಯು ಬೇಕೆಬೇಕು.
ಆದರೀ ಹರೆಬಂದ ಹುಚ್ಚು ಹುಡುಗಗೆ ಮಾತ್ರ
ಹುಬ್ಬು ಹಾರಿಸುವಂಥ ಹೆಣ್ಣು ಸಾಕು!

—ಎಂ. ಅಕಬರ ಅಲಿ

ಉದ್ಯೋಗ, ಧಂದೆಗಳ ದೃಷ್ಟಿಯಿಂದ ನೋಡಿದಾಗ ರಾಹುವು ೭ ನೆಯವನಿರುವಾಗ ಉದ್ಯೋಗಸ್ಥರಿಗಾದರೆ ಅನಂತರ ೬ ನೆಯವನಾದಾಗ ಅಂದರೆ ಜೂನ್ ೨೪ ರ ನಂತರ ನೌಕರದಾರರಿಗೆ ಹೆಚ್ಚು ಹಿತ ಮತ್ತು ಉತ್ಕರ್ಷಕರವೆನಿಸಿದೆ. ೯ ನೆಯ ಗುರು ಬಂದ ನಂತರ ಅಂದರೆ ಅಗಸ್ಟ್ ೩೧ರ ನಂತರ ಪ್ರತಿಷ್ಠೆ ಹಾಗು ದರ್ಜೆ ಬಹಳ ವರ್ಧಿಸುವಂತಹ ಘಟನೆಗಳು ಜರುಗುವವು. ಬುದ್ಧಿಜೀವಿಗಳಿಗಿಂತ ಶ್ರಮಜೀವಿಗಳಿಗೆಯೇ ಈ ವರ್ಷ ಹೆಚ್ಚು ಉತ್ಸಾಹಕರವಾಗಿರುವುದು. ಆದರೆ ವರ್ಷಾರಂಭದ ಮೊದಲ ತಿಂಗಳು ಮಾತ್ರ ಲಾಭರಹಿತವೂ ವಿಪರೀತ ವೆಚ್ಚದ್ದೂ ಆಗಿರಬಹುದಾಗಿದೆ. ೮ ನೆಯ ಗುರುವಿನಲ್ಲಿ ತುಸು ಆಕಸ್ಮಿಕ ದ್ರವ್ಯಲಾಭದ ಸಂಭವವಿದೆ. ವಿಶೇಷ ಲಾಭಕ್ಕೆ ಅಕ್ಟೋಬರ್ ೨೭ ರಿಂದ ಜನೆವರಿ ೩, ಜನೆವರಿ ೨೩ ರಿಂದ ಫೆಬ್ರುವರಿ ೯, ಫೆಬ್ರುವರಿ ೧... ರಿಂದ ಮೇ ೨, ಮೇ ೧೯ ರಿಂದ ಅಗಸ್ಟ್ ೨೭, ಸಪ್ಟೆಂಬರ್ ೧೩ ರಿಂದ ೩೦ ಹಾಗು ಅಕ್ಟೋಬರ್ ೨೩ ನಂತರದ ಕಾಲವೆಲ್ಲ ಬಹಳ ಉತ್ತಮವಿದೆ. ಉದ್ಯೋಗದಲ್ಲಿ ಮಿತ್ರರಿಗಿಂತ ಹೆಚ್ಚಾಗಿ ವಿರೋಧಿಗಳ ಸ್ಪರ್ಧೆಯೇ ನಿಮಗೆ ಹೆಚ್ಚು ಉಪಕಾರವೆನಿಸಬಹುದು. ನೌಕರದಾರರಿಗೆ ಬಡತಿಯು ೯ ನೆಯ ಗುರುವಿನಲ್ಲಿ ಸಿಗಬಹುದಾದರೂ ದೂರದ ಊರಿಗೆ ಬದಲಿಯಾಗುವುದರಿಂದ ಮನಸ್ಸು ಅಸ್ವಸ್ಥಗೊಳ್ಳುವುದು. ವರಿಷ್ಠರ ಕೃಪೆಯು ಚಂದ್ರನಂತೆಯೇ ಕೆಲ ಕಾಲ ವರ್ಧಿಸುತ್ತಿದ್ದರೆ ಮತ್ತೆ ಕೆಲ ಕಾಲ ಕ್ಷಯಿಸುತ್ತಿರುವುದು. ೫ ನೆಯ ಶನಿಯಿರುವಾಗ ಕೈಕೆಳಗಿನವರು ಮೋಸದಿಂದ ವರ್ತಿಸುವರು. ಅನೇಕ ಸಲ ಹಾಗು ದೂರದ ಪ್ರವಾಸ ಕೈಕೊಳ್ಳಬೇಕಾಗಬಹುದು. ಭೆಟ್ಟಿ ಹಾಗು ಲೇಖನ ಕೆಲಸಗಳು ತುಂಬ ತೊಂದರೆಯ ನಂತರ ಮನಸ್ಸಿನಂತಾಗುವವು.

ದಾವೆ, ಫಿರ್ಯಾದಿ ಇಲ್ಲವೆ ಸ್ಪರ್ಧೆಯ ಇತರ ಕೆಲಸಗಳಲ್ಲಿ ನಿರ್ಣಯವು ೭ ನೆಯ ರಾಹುವಿನಲ್ಲಾದರೆ ಬಹುಶಃ ನಿಮ್ಮ ವಿರುದ್ಧವೇ ಇರುವುದು. ಆದರೆ ೬ ನೆಯ ರಾಹುವಿನಲ್ಲಾದರೆ ತುಸು ಹೆಚ್ಚು ಕಡಿಮೆ ನಿಮಗನುಕೂಲವೇ ಆಗುವುದು.

ಈ ರಾಶಿಯ ಗರ್ಭಿಣಿಯರು ೭ ಅಥವಾ ೮ ನೆಯ ಗುರುವಿನಲ್ಲಿ ಪ್ರಸೂತರಾದರೆ ತುಸು ಕಷ್ಟವಾಗಬಹುದಾದರೂ ಬಹುತರರಿಗೆ ಪುತ್ರಲಾಭವೇ ;ಆಗುವುದು ಹಾಗು ೯ ನೆಯ ಗುರುವಿನಲ್ಲಾದರೆ ಸುಲಭ ಪ್ರಸೂತಿಯಾಗುವುದಾದರೂ ಬಹುತರರಿಗೆ ಕನ್ಯೆ ಜನಿಸುವ ಯೋಗವಿವೆ.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ೭ ಅಥವಾ ೮ ನೆಯ ಗುರುವಿನಲ್ಲಿ ಅಂದರೆ ಜನೆವರಿ ೮ ರಿಂದ ಮಾರ್ಚ್ ೨೪ರ ವರೆಗೆ ಹಾಗು ಸಪ್ಟೆಂಬರ್ ೧... ನಂತರ ಆದರೆ ಉತ್ತೀರ್ಣರಾಗುವಲ್ಲಿ ಸಂದೇಹವಿಲ್ಲ. ಆದರೆ ೮ ನೆಯ ಗುರುವಿನಲ್ಲಾದರೆ ಒಳ್ಳೆಯ ಪರಿಶ್ರಮಪೂರ್ವಕ ಅಭ್ಯಾಸ ಮಾಡಿದ್ದವರಿಗೆ ಮಾತ್ರ ಯಶಸ್ಸು ಸಿಕ್ಕರೆ ಸಿಗುವ ಸಂಭವ ಇದೆ.

# ಧನು

ಒಟ್ಟಿನಲ್ಲಿ ಈ ವರ್ಷ ಕೆಲಕಾಲ ಕಷ್ಟಕರವಾದರೆ ಕೆಲಕಾಲ ಸುಖಪ್ರದ. ಈ ರೀತಿ ಸಂಮಿಶ್ರ ಫಲವುಳ್ಳದ್ದಾಗಿದೆ ಎಂದು ಹೇಳಬಹುದು.

ರಾಶಿಸ್ವಾಮಿ ಗುರು ೭ ನೆಯವನಾಗಿರುವಾಗ ಅಂದರೆ ವರ್ಷಾರಂಭದಿಂದ ಜನವರಿ ೮ ರ ವರೆಗೆ ಹಾಗು ಅನಂತರ ಮತ್ತೆ ಮಾರ್ಚ್ ೨೪ ರಿಂದ ಅಗಸ್ಟ್ ೩೧ ರ ವರೆಗೆ ಆರೋಗ್ಯ ವಿಷಯಕ್ಕೆ ಯಾವ ತೊಂದರೆಗಳೂ ಸಹಸಾ ಇರುವುದಿಲ್ಲ. ಆದರೆ ಅವನು ೬ ನೆಯವನಿರುವಾಗ ಅಂದರೆ ಜನವರಿ ೮ ರಿಂದ ಮಾರ್ಚ್ ೨೪ ರ ವರೆಗಿನ ಅವಧಿಯಲ್ಲಿ ಗ್ಯಾಸ್ ಅಥವಾ ಗಂಟಲುನೋವಿನ ತೊಂದರೆ ತುಸು ಆಗಬಹುದು. ಅವನು ೮ ನೆಯವನಿರುವಾಗ ತನ್ನದೇ ಉಚ್ಚರಾಶಿಯಾದ ಕರ್ಕದಲ್ಲಿರುವುದರಿಂದ ೭ ನೆಯವನಿರುವಾಗಿನಕ್ಕಿಂತಲೂ ಹೆಚ್ಚು ನಿರೋಗಿಯಾಗಿರುವಿರಿ. ಆದರೆ ಆಗ ಗೃಹಕಲಹದಿಂದಾಗಿ ಇಲ್ಲವೆ ಇತರ ಆಪ್ತರಲ್ಲಿಯ ಕೆಲ ಸ್ತ್ರೀಯರ ಅತಿ ಮತ್ಸರದಿಂದಾಗಿ ಮಾನಸಿಕ ತೊಂದರೆ ಮಾತ್ರ ಉಲ್ಬಣಿಸುವ ಸಂಭವವಿದೆ. ಇತರ ವಿಷಯಗಳಲ್ಲಿ ದೇಹಸುಖ ೭ ನೆಯ ಗುರುವಿನಲ್ಲುಳಿದು ಇತರ ಕಾಲದಲ್ಲಿ ಅಷ್ಟೊಂದು ಸರಿಯಾಗಿ ಸಿಗಲಾರದು. ಯಾಕೆಂದರೆ ವೃಶ್ಚಿಕದಲ್ಲಿರುವ ಮಂಗಳನು ವರ್ಷಾ-ರಂಭದಿಂದಲೇ ವ್ಯಯಸ್ಥಾನದಲ್ಲಿದ್ದು ನಿತ್ಯ ಏನಾದರೊಂದು ಕಟಕಟಿಯನ್ನುಹುಟ್ಟಿಸುತ್ತಲೇ ಇರುವನು.

ಹೆಂಡತಿಯ ಆರೋಗ್ಯ ಒಟ್ಟಿನಲ್ಲಿ ನಿರೋಗಿಯಾಗಿಯೇ ಇರುವುದಾದರೂ ವರ್ಷಾರಂಭದಲ್ಲಿ ಭಾರ್ಯಾಸ್ಥಾನದ ಮೇಲಿರುವ ಮಂಗಳನ ದೃಷ್ಟಿಯಿಂದಾಗಿ ಅವಳಿಗೆ ಆಗೀಗ ಕಣ್ಣು ಅಥವಾ ತಲೆನೋವು ಇಲ್ಲವೆ ಮಾಸಿಕ ರಜೋದರ್ಶನಕ್ಕೆ ಸಂಬಂಧಿಸಿದ ಕೆಲ ತೊಂದರೆಗಳುಂಟಾಗಬಹುದಾಗಿದೆ. ಆದರೆ ಭಾರ್ಯೇಶ ಬುಧನು ಲಾಭಸ್ಥಾನದಲ್ಲಿರುವುದರಿಂದ ಭಾರ್ಯಾಸ್ಥಾನದಲ್ಲಿರುವ ದೇಹೇಶ ಗುರುವಿನೊಂದಿಗೆ, ಆಗಿರುವ ಪೂರ್ಣ ದೃಷ್ಟಿಯ ನವಪಂಚಮಯೋಗದಿಂದಾಗಿ ಉಭಯತರಲ್ಲೂ ಪೂರ್ಣ ಪ್ರೇಮ, ಚಿಕ್ಕ ದೊಡ್ಡ ವಿಷಯಗಳೆಲ್ಲವುಗಳಲ್ಲೂ ಪೂರ್ಣ ಮತ್ಯೈಕ್ಯ ಹಾಗು ಪರಸ್ಪರರ ವಿಷಯದಲ್ಲಿ ಎಲ್ಲ ವಿಚಾರಗಳಲ್ಲೂ ಏಕನಿಷ್ಠೆಯಿರುವುದು. ಆದರಂತೆಯೆ, ಈ ರಾಶಿಯ ಅವಿವಾಹಿತರ ವಿವಾಹ ಈ ಸಲ ಆಗುವುದಿದ್ದರೆ ೭ ನೆಯ ಗುರುವಿನಲ್ಲಿ ಅಲ್ಪಾಯಾಸದಿಂದಾಗುವುದು ಹಾಗು ೮ ನೆಯ ಗುರುವಿನಲ್ಲಿ ತುಸು ದಗದಗಿಯಿಂದ ಸಾಧ್ಯವಾಗುವುದು. ಆದರೆ ೬ ನೆಯ ಗುರುವಿನಲ್ಲಿ ಅದಕ್ಕಾಗಿ ಪ್ರಯತ್ನಿಸದಿರುವುದೇ ಒಳಿತು. ವಧೂವರರು ಪರಸ್ಪರರಿಗೆ ರೂಪ, ಗುಣಗಳೆರಡರಲ್ಲೂ ಪೂರ್ಣ ಅನುರೂಪರಾಗಿರುವರಲ್ಲದೆ ಪರಸ್ಪರರು ಪೂರ್ಣ ಪರಿಚಿತರಾಗಿರುವ ಸಂಭವವೇ ಹೆಚ್ಚು. ಆದರೆ ವರ್ಷಾರಂಭದಲ್ಲಿ ಸ್ತ್ರೀಸುಖದರ್ಶಕ ಶುಕ್ರನು ವ್ಯಯಸ್ಥಾನದಲ್ಲಿರುವುದರಿಂದ ಯೋಗ್ಯ ಕಾರಣಗಳಿಂದಾಗಿಯೇ ಅನೇಕ ಸಲ ಸಹವಾಸದಲ್ಲಿ ವ್ಯತ್ಯಯ ಬರಬಹುದು.

ನಿಮ್ಮ ಮಕ್ಕಳ ವಿವಾಹ ಮಾಡುವುದಿದ್ದರೆ ಅದಕ್ಕೆ ೬ ನೆಯ ಗುರುವು ಹೆಚ್ಚು ಅನುಕೂಲನಿದ್ದು ೭ ನೆಯ ಗುರು ಸಾಮಾನ್ಯನೆಂದು ತಿಳಿಯಬೇಕು. ಆದರೆ ೮ ನೆಯ ಗುರುವಿನಲ್ಲಿ ಮಾಡಿದ ಪ್ರಯತ್ನ ವ್ಯರ್ಥವಾಗಬಹುದಾಗಿದೆ. ಆದರೆ ಸೊಸೆ ಇಲ್ಲವೆ ಅಳಿಯ ೬ನೆಯ ಗುರುವಿಗಿಂತ ೭ನೆಯ ಗುರುವಿನಲ್ಲಿ (ಒಂದು ವೇಳೆ ವಿವಾಹವಾದರೆ) ಹೆಚ್ಚು ಮನ ಒಪ್ಪುವಂತಿರುವರು. ೬ ನೆಯ ಗುರುವಿನಲ್ಲಾದರೆ ನಿಮ್ಮನ್ನು ಬದಿಗಿರಿಸಿ ಮಕ್ಕಳು ತಾವೇ ತಮ್ಮ ವಿವಾಹ ಹೊಂದಿಸಿಕೊಳ್ಳುವ ಸಂಭವವಿದೆ. ಮಕ್ಕಳ ಉತ್ಕರ್ಷಕ್ಕೆ ಈ ವರ್ಷ ಸಾಧಾರಣವೇ ಇದೆ. ಆದರೆ ನವೆಂಬರ್ ೫ರಿಂದ ಜನವರಿ ೨೧, ಎಪ್ರಿಲ್ ೭ ರಿಂದ ಮೇ ೧೮ ಇಲ್ಲವೆ ಜೂನ್ ೩೦ ರಿಂದ ಅಗಸ್ಟ್ ೧೫ರ ವರೆಗಿನ ಅವಧಿಯಲ್ಲಿ ಕೆಲವರ ಉತ್ಕರ್ಷ ಸಾಧ್ಯವಿದೆ. ಅವರ ಆರೋಗ್ಯಕ್ಕೆ ಈ ವರ್ಷ, ಈ ಸ್ಥಳದ ಮೇಲಿರುವ ಶನಿಯ ದೃಷ್ಟಿಯಿಂದಾಗಿ ಅಷ್ಟೇನೂ ಅನುಕೂಲವಾದುದಲ್ಲ. ಅದರಂತೆಯೆ, ಅನೇಕ ವಿಷಯಗಳಲ್ಲಿ ಅವರಿಂದ ನಿಮ್ಮ ಮನಸ್ಸಿನ ವಿರುದ್ಧ ಇಲ್ಲವೆ ನಿಮಗೆ ಅಪ್ರಿಯವಾದಂಥ ಘಟನೆಗಳು ಸಂಭವಿಸುವವು. ಆದರೆ ಅವರಲ್ಲೊಬ್ಬನು ನೌಕರಿ ಅಥವಾ ಶಿಕ್ಷಣದ ನಿಮಿತ್ತ ವಿದೇಶಕ್ಕೆ ಪ್ರಯಾಣಿಸುವ ಸಂಭವವಿದೆ.

ಉದ್ಯೋಗ, ಧಂದೆಗಳಿಗೆ ಈ ವರ್ಷ ೩ನೆಯ ಶನಿಯಲ್ಲಿ ಅಂದರೆ ಮೇ ೧೧ ರ ವರೆಗೆ ಹಾಗು ಮತ್ತೆ ಸಪ್ಟೆಂಬರ್ ೬ ರ ನಂತರದ ಅವಧಿ ತುಂಬ ರಭಸದ್ದಾಗಿದೆ. ಅದರಂತೆಯೆ, ೮ ನೆಯ ಗುರುವಿರುವಾಗ ಕನಸುಮನಸಿನಲ್ಲೂ ಇರದಂತಹ ಉತ್ತಮೋತ್ತಮ ಲಾಭದ ಹಾಗು ಲೌಕಿಕ ಸುಯೋಗಗಳು ಅನೇಕ ಒದಗುವವು. ಕೆಲ ವಿಷಯಗಳಲ್ಲಿ ಪ್ರಾರಂಭದಲ್ಲಿಯೇ ವೆಚ್ಚಕ್ಕಾಗಿ ಬಹಳ ತೊಂದರೆಪಡಬೇಕಾಗುವುದಾದರೂ ಮುಂದೆ ಅದರ ಹತ್ತು ಪಟ್ಟು ಲಾಭವಾಗಿ ಅದೆಲ್ಲ ತುಂಬಿಬರುವದೆಂದು ನಿಶ್ಚಿತ ತಿಳಿಯಬೇಕು. ಬುದ್ಧಿಜೀವಿ ಹಾಗು ಶ್ರಮಜೀವಿಗಳಿಬ್ಬರಿಗೂ ಅಷ್ಟೇ ಲಾಭ. ೭ನೆಯ ಗುರುವಿನಲ್ಲಿ ವ್ಯಾಪಾರ ಬಹು ರಭಸದಿಂದ ನಡೆಯುವದು ಅದರಂತೆಯೆ, ನೌಕರದಾರರಿಗೆ ಸಹ ಲಾಭದ ದೃಷ್ಟಿಯಿಂದ ಈ ವರ್ಷ ಬಹಳ ಉತ್ತಮವಿದ್ದು ೬ ನೆಯ ಗುರುವಿನಲ್ಲಿ ಅನೇಕರಿಗೆ ನಿಶ್ಚಿತ ಬಡತಿ ದೊರೆಯುವುದು. ವರಿಷ್ಠರು, ನೀಗದಷ್ಟು ಭಾರವಾದ ಕೆಲಸವನ್ನು ನಿಮಗೊಪ್ಪಿಸಬಹುದಾದರೂ ಇತರ ವಿಷಯಗಳಲ್ಲಿ ಅತ್ಯಂತ ಸಂತುಷ್ಟರಾಗಿರುತ್ತಾರೆ. ಹಾಗು ಬದಲಿಯಾದರೆ ವೆಚ್ಚದ ದೃಷ್ಟಿಯಿಂದ ತುಟ್ಟಿಯೆನಿಸಿದರೂ ನೀರು, ಹವೆ ಮುಂತಾದವುಗಳ ದೃಷ್ಟಿಯಿಂದ ಅತ್ಯಂತ ಸುಖಸೋಯಿಸ್ಕರ ಸ್ಥಳಕ್ಕಾಗುವುದು. ಈ ಸಲ ಆದಾಯ ಹೇಗೆ ಹೆಚ್ಚುವುದೊ ಅದೇ ಪ್ರಮಾಣದಲ್ಲಿ ವೆಚ್ಚದ ಪ್ರಸಂಗಗಳು ಕೂಡ ಹೆಚ್ಚುತ್ತಲೇ ಬರುವವು. ಇಷ್ಟೇಕೆ ಅನೇಕರು ತುಸು ಸಾಲವನ್ನೂ ಮಾಡಬೇಕಾಗುವುದು. ಆದರೆ ಸಮಾಧಾನವೆಂದರೆ ಆ ರೀತಿ ಸಾಲ ತೆಗೆದುದರ ಉದ್ದೇಶ ಪೂರ್ಣ ಈಡೇರುವುದು. ೮ನೆಯ ಗುರು ಅನೇಕರಿಗೆ ದ್ರವ್ಯ ಅಥವಾ ಸ್ಥಿರಾಸ್ಥಿಯ ರೂಪದಲ್ಲಿ ಆಕಸ್ಮಿಕ ಲಾಭವನ್ನು ಕೊಡಬಹುದು. ಮನೆಯಲ್ಲಿ ಅನೇಕ ಮಂಗಲ ಅಥವಾ ಧಾರ್ಮಿಕ ಕಾರ್ಯಗಳಾಗಬಹುದು. ಮಿತ್ರರು ಮಾತ್ರ ತುಸು ಅಷ್ಟಕ್ಕಷ್ಟೆ. ಒಂದೆರಡು ಸಲ ಪರಸ್ತ್ರೀ ವಿಷಯಕ್ಕೆ ಪಾಪ ವಿಚಾರ ಬಹಳ ಬರಬಹುದು.

ದಾವೆ, ಫಿರ್ಯಾದಿ ಇಲ್ಲವೆ ಇತರ ಸ್ಪರ್ಧೆಯ ವಿಷಯಗಳಲ್ಲಿ ರಾಹು ೬ ನೆಯವನಿರುವಾಗ ಆಗುವ ನಿರ್ಣಯದಲ್ಲಿ ಪೂರ್ಣ ಯಶಸ್ಸು ದೊರೆಯುವುದು ಹಾಗು ಅವನು ೫ ನೆಯವನಿರುವಾಗ ನಿಮ್ಮ ವಿರುದ್ಧ ನಿರ್ಣಯ ದೊರೆಯುವುದು.

ಈ ರಾಶಿಯ ಗರ್ಭಿಣಿಯರು ೭ ನೆಯ ಗುರುವಿನಲ್ಲಿ ಪ್ರಸೂತರಾದರೆ ಹೆರಿಗೆ ಸುಲಭವಾಗಿ ಬಹುತರರಿಗೆ ಪುತ್ರಲಾಭವಾಗುವುದು; ೬ ನೆಯ ಗುರುವಿನಲ್ಲಾದರೆ ಹೆರಿಗೆ ಕಷ್ಟಕರವಾಗುವುದಲ್ಲದೆ ಮಗು ಬಹಳ ಅಶಕ್ತವಿರಬಹುದು ; ಹಾಗು ೮ ನೆಯ ಗುರುವಿನಲ್ಲಾದರೆ ಹೆರಿಗೆ ಸುಲಭವಾಗುವುದಾದರೂ ಅದು ಮನಸ್ಸಿನ ವಿರುದ್ಧದ ಸ್ಥಳದಲ್ಲಿ ಆಗುವುದಲ್ಲದೆ ಬಹುತರರಿಗೆ ಕನ್ಯೆ ಜನಿಸುವ ಸಂಭವವಿದೆ

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ೭ನೆಯ ಗುರುವಿನಲ್ಲಿ ಅಂದರೆ ಜನವರಿ ೮ರ ವರೆಗೆ ಹಾಗು

ನಂತರ ಮಾರ್ಚ್ ೨೪ ರಿಂದ ಅಗಸ್ಟ್ ೩೧ರ ವರೆಗಿನ ಅವಧಿಯಲ್ಲಾದರೆ ಯಶಸ್ಸು ನಿಶ್ಚಿತ ಮತ್ತು ಅನೇಕರಿಗೆ ಕ್ಲಾಸ್ ಕೂಡ ದೊರೆಯಬಹುದು. ೮ ನೆಯ ಗುರುವಿನಲ್ಲಾದರೆ ಹೇಗೂ ಉತ್ತೀರ್ಣರಾಗಬಹುದಾದರೆ ೬ನೆಯ ಗುರುವಿನಲ್ಲಿ ಮಾತ್ರ ಯಶ ಎಷ್ಟೂ ನಿಶ್ಚಿತವಲ್ಲ.

## ಮಕರ

ಒಟ್ಟಿನಲ್ಲಿ ಈ ವರ್ಷ ಪ್ರತಿಯೊಂದು ವಿಷಯದಲ್ಲಿ ಮೊದಲು ಬಹಳ ದಗದಗಿಯದಾದರೂ ಕೊನೆಗೆ ತುಂಬ ಯಶಸ್ಸು ತರುವಂತಹದಾಗಿದೆಯೆಂದು ತಿಳಿಯಬೇಕು.

ಹಿಂದಿನ ಐದಾರು ವರ್ಷಗಳಂತೆಯೆ ಈ ರಾಶಿಗೆ ಈ ವರ್ಷವೂ ಸಾಡೇಸಾತಿಯಿದ್ದೇಯಿದೆ. ಆದರೆ ಈ ಸಲ ಅದು ಮುಕ್ತಾಯದ ಹಂತವನ್ನು ಪ್ರಾರಂಭಿಸುತ್ತದೆ. ಅಂದರೆ ಮೇ ೧೧ರ ವರೆಗೆ ಹಾಗು ಮತ್ತೆ ಸಪ್ಟೆಂಬರ್ ೭ರ ನಂತರ ಸಾಡೇಸಾತಿಯ ಕರ್ತನಾದ ಶನಿಯು ಕುಂಭದಲ್ಲಿದ್ದು ೨ನೆಯವನಾಗಿರುವದರಿಂದ ಸಾಡೇಸಾತಿಯಿರುವುದು. ಆದರೆ ಅದೇ ಮಧ್ಯಂತರ ಕಾಲದಲ್ಲಿ ಅವನು ೩ನೆಯವನಾಗಿರುವದರಿಂದ ಅದಿರುವುದಿಲ್ಲವೆಂದು ತಿಳಿಯಬೇಕು. ಕುಂಭವು ಶನಿಯ ರಾಶಿಯೇ ಆಗಿರುವುದರಿಂದ ಹಾಗು ಮೀನವು ಅವನ ಮಿತ್ರರಾಶಿಯಾಗಿರುವುದರಿಂದ ತುಸು ಮಾನಸಿಕ ತೊಂದರೆಯನ್ನು ಸಹಿಸಬೇಕಾಗುವುದಾದರೂ ಪ್ರತ್ಯಕ್ಷ ಕಂಡುಬರುವಂತಹ ಯಾವುದೇ ಕ್ಲೇಶ ಅಥವಾ ಹಾನಿ ಸಂಭವಿಸಲಾರದು ಎಂಬುದು ನಿಶ್ಚಿತ. ಅಲ್ಲದೆ ೬ನೆಯ ಗುರು ಹಾಗು ೪ನೆಯ ರಾಹು ಏಕಕಾಲಕ್ಕಿರುವ ಕಾಲ ಅಂದರೆ ಜೂನ್ ೨೪ ರಿಂದ ಅಗಸ್ಟ್ ೩೧ರ ವರೆಗಿನ ಅವಧಿಯನ್ನುಳಿದು ಇತರ ವೇಳೆ ಆರೋಗ್ಯ ಕೂಡ ಒಳ್ಳೆಯ ನಿರೋಗಿಯಾಗಿರುವುದು. ಆದರೆ ಈ ಮೇಲಿನ ಅವಧಿಯಲ್ಲಿ ತೀರ ಬೇಕಾದ ಒಬ್ಬ ಆಪ್ತ ಇಲ್ಲವೆ ತಂದೆ, ತಾಯಿಗಳಲ್ಲೊಬ್ಬರ ವಿಯೋಗದ ಆಘಾತದಿಂದಾಗಿ ತುಂಬ ಮಾನಸಿಕ ಕಷ್ಟವಾಗುವುದರಿಂದ ಔದಾಸೀನ್ಯವುಂಟಾಗಿ ಶಕ್ತಿಕ್ಷೀಣವಾಗುವ ಸಂಭವವಿದೆ. ಇತರ ವಿಷಯಗಳಲ್ಲಿ ದೇಹಸುಖಕ್ಕೆ ಗ್ರಹಮಾನ ಅನುಕೂಲವೇ ಇದೆ ಹಾಗು ಗುರುವು ೫ ಹಾಗು ೭ನೆಯವನಿರುವಾಗ ಅಂದರೆ ಜನವರಿ ೮ ರಿಂದ ಮಾರ್ಚ್ ೨೪ ಮತ್ತು ಅಗಸ್ಟ್ ೩೧ರ ನಂತರದ ಕಾಲದಲ್ಲಿ ಒಳ್ಳೆಯ ದೇಹಸುಖವೇ ದೊರೆಯುವುದು.

ಸ್ತ್ರೀಸುಖಕ್ಕೆ ಹಾಗು ಅವಳ ಆರೋಗ್ಯಕ್ಕೆ ಸಹ ಈ ವರ್ಷದ ಬಹುಕಾಲ ಉತ್ತಮವೇ ಇದೆಯಾದರೂ ಅಗಸ್ಟ್ ೧೫ ರಿಂದ ಸಪ್ಟೆಂಬರ್ ೩ರ ವರೆಗಿನ ಅವಧಿಯಲ್ಲಿ ಚಿಕ್ಕ ಅಪಘಾತವೊಂದರಿಂದಾಗಿ ಅವಳಿಗೆ ತುಸು ಕ್ಲೇಶವುಂಟಾಗುವ ಸಂಭವವಿದೆ. ಆದರೆ ಉಭಯತರಲ್ಲಿ ಉತ್ತಮ ಪ್ರೇಮಾದರಗಳುಳಿಯುವವು.

ಈ ರಾಶಿಯ ಅವಿವಾಹಿತರ ವಿವಾಹವಾಗುವುದಿದ್ದಲ್ಲಿ ಅದಕ್ಕೆ ೫ನೆಯ ಗುರುವಿಗಿಂತ ೬ನೆಯ ಗುರು ಹೆಚ್ಚು ನೆಟ್ಟಗೆ ಮತ್ತು ೭ನೆಯ ಗುರು ಅದಕ್ಕಿಂತಲೂ ಉತ್ತಮವೆಂದು ತಿಳಿದು ಪ್ರಯತ್ನ ಮಾಡಿದರೆ ಅದು ಸಹಜವಾಗಿಯೇ ಹೊಂದಿ ಪೂರ್ತಿಗೊಳ್ಳಬಹುದಾಗಿದೆ. ವಧೂವರರು ನೋಡಲು ತುಸು ಇಜ್ಜೋಡೆನಿಸಬಹುದಾದರೂ ಸುಖ ಇತ್ಯಾದಿ ಇತರ ವಿಷಯಗಳಲ್ಲಿ ಪರಸ್ಪರ ಪೂರ್ಣ ಅನುರೂಪರೇ ಇರುವರು ಹಾಗು ವರ ಅಥವಾ ವಧುವು ದೂರದ ಊರಿನವರಾಗಿರದೆಯೆ ಸಮೀಪದಲ್ಲಿಯವರೇ ಆಗಿರುತ್ತಾರೆ.

ನಿಮ್ಮ ಮಕ್ಕಳ ವಿವಾಹ ಮಾಡುವುದಿದ್ದರೆ ಅದಕ್ಕೆ ೫ ಹಾಗು ೭ ನೆಯ ಗುರು ವಿಶೇಷ ಅನುಕೂಲರು. ಆದರೆ ೫ ನೆಯ ಗುರುವಿನಲ್ಲಿ ನಿಶ್ಚಯವಾದರೆ ಅಪೇಕ್ಷಿತ ಮುಹೂರ್ತಕ್ಕೆ ಮಾಡಲು ಸಾಧ್ಯವಾಗದೆಯೆ ಮುಂದಿನ ಮುಹೂರ್ತ ನೋಡಬೇಕಾಗುವುದಷ್ಟೆ. ಸೊಸೆ ಇಲ್ಲವೆ ಅಳಿಯ ರೂಪ ಹಾಗು ಗುಣಗಳಿಂದ ಉತ್ತಮರಿದ್ದೇ ಇರುವರಾದರೂ ಸ್ವಭಾವದಿಂದ ತುಸು ಹಟಮಾರಿ ಇಲ್ಲವೆ ಲಹರಿಯಾಗಿರಬಹುದು. ಮಕ್ಕಳೆಲ್ಲರ ಉತ್ಕರ್ಷಕ್ಕೆ ಈ ವರ್ಷ ಉತ್ತಮವಿದ್ದು ಅನೇಕರ ಉತ್ಕರ್ಷವು ಅಕ್ಟೋಬರ್, ೩೦ ರ ವರೆಗೆ ಇಲ್ಲವೆ ನವೆಂಬರ್ ೨೯ ರಿಂದ ಮಾರ್ಚ್ ೩೦ ಇಲ್ಲವೆ ಎಪ್ರಿಲ್ ೨೮ ರಿಂದ ಮೇ ೨೪ ಅಥವಾ ಜೂನ್ ೧೯ ರಿಂದ ಜುಲೈ ೧೪ ಅಥವಾ ಅಗಸ್ಟ್ ೮ ರಿಂದ ಸಪ್ಟೆಂಬರ್ ೨ ಈ ಅವಧಿಯಲ್ಲಾದುದು ಅನುಭವಕ್ಕೆ ಬರಬಹುದು. ಆದರೆ ಗುರು ೫ ನೆಯವನಿರುವಾಗಲಾದರೂ ಅಂದರೆ ಜೂನ್ ೨೪ ರ ವರೆಗೆ ಅವರು ಯಾರಿಂದಲೂ ಸ್ವತಃ ನಿಮಗೆ ಹೇಳಿಕೊಳ್ಳುವಂತಹ ಸಮಾಧಾನಕರ ಸುಖ ದೊರೆಯುವುದಿಲ್ಲ. ನಿತ್ಯವೂ ಚಿಕ್ಕ, ದೊಡ್ಡ ಹಾಗು ಸಾಮಾನ್ಯ ಅಥವಾ ವಿಶೇಷ ವಿಷಯಗಳಿಗಾಗಿ ವಾದವಿವಾದವಾಗುತ್ತಲೇ ಇರುವುದು; ಆದರೆ ೫ ನೆಯ ಗುರುವಿರುವಾಗ ಕೆಲವರಿಂದ ಅಭಿಮಾನಾಸ್ಪದವಾದ ಹಾಗು ಲೌಕಿಕವನ್ನು ಹೆಚ್ಚುವಂತಹ ಒಂದೆರಡು ಘಟನೆಗಳು ಸಂಭವಿಸಬಹುದು.



ಪಂಚ–ಕೆಂಚ

ಜಾತಿ-ಪಂಥದ ಬಲವೊ, ಮೈಸೊಕ್ಕು-ಧನಮದವೊ
ಸಿಕ್ಕ ದಾರಿಯ ತುಳಿದು ಆದ ಸರಪಂಚ
ದರಕಾರವಿಲ್ಲದೆಯೆ ದರಬಾರ ನಡೆಯಿಸಿದ;
ಹಿಂದಿ ಹಿಪ್ಪೆಯದಾದ ಬಡ ಹಳ್ಳಿಕೆಂಚ !

— ಎಂ. ಅಕಬರ ಅಲಿ

ಉದ್ಯೋಗಸ್ಥರಿಗೆ ಈ ವರ್ಷ ಸದಾ ಪ್ರಗತಿ, ಪ್ರತಿಷ್ಠೆ ಹಾಗು ತುಂಬ ಲಾಭದಾಯಕವೆನಿಸುವುದು ಹಾಗು ಅದರಿಂದಾಗಿ ಸಾಡೇಸಾತಿ ಮುಗಿದುಹೋಗಿದೆಯೇನೋ ಎಂದೂ ಒಮ್ಮೊಮ್ಮೆ ಭಾಸವಾಗಬಹುದು. ಯಾಕೆಂದರೆ ವರ್ಷಾರಂಭದಲ್ಲಿಯೆ ಭಾಗ್ಯೇಶ ಬುಧನು ಕರ್ಮಸ್ಥಾನದಲ್ಲಿ, ಕರ್ಮೇಶ ಶುಕ್ರನು ಲಾಭಸ್ಥಾನದಲ್ಲಿ ಲಾಭೇಶ ಮಂಗಳನಿಂದ ಯುಕ್ತನು, ಧನೇಶ ಶನಿಯು ಧನಸ್ಥಾನದಲ್ಲಿ ಈ ರೀತಿ ಅಪೂರ್ವ ಶುಭಯೋಗವಾಗಿದೆ. ಅನೇಕರಿಗೆ ಹಾನಿಯೆ ಸಂಭವಿಸುವುದೇನೊ ಎನಿಸಿದ್ದ ವಸ್ತುಗಳಲ್ಲಿ ಸಹ ಒಮ್ಮೆಲೇ ತೇಜಿಯುಂಟಾಗಿ ಎಣಿಕೆಗೆ ನಿಲುಕದಾದಷ್ಟು ಲಾಭವಾಗುವುದು ಹಾಗು ೭ ನೆಯ ಗುರು ಈ ಸಂಗತಿಯನ್ನ ಸಾಕಷ್ಟು ಪ್ರತ್ಯಕ್ಷದಲ್ಲೇ ತಂದು ತೋರಿಸುವನು. ಅದರಂತೆಯೆ, ನೌಕರದಾರರಿಗೆ ಸಹ ಲಾಭದ ದೃಷ್ಟಿಯಿಂದ ಈ ಸಲ ಅತ್ಯನುಕೂಲವೇ ಇದೆ. ಅದು ಗುರು ೫ ಹಾಗು ೭ ನೆಯವನಿರುವಾಗ ಅಂದರೆ ಜನವರಿ ೮ ರಿಂದ ಮಾರ್ಚ್ ೨೪ ಹಾಗು ಸಪ್ಟೆಂಬರ್ ೧ ರಿಂದ ಮುಂದಿನ ಕಾಲದಲ್ಲಿ ವಿಶೇಷವಾಗುವುದು. ೬ ನೆಯ ಗುರು ವರಿಷ್ಠರ ಕೃಪೆಗೆ ಉತ್ತಮ ಹಾಗು ಆಗಲೆಯೆ ಅನೇಕರಿಗೆ ಅವರು ಮನಸಾ ಬಯಸಿದ ಊರಿಗೆಯೆ ವರ್ಗವಾಗಬಹುದು. ಆದರೆ ನವೆಂಬರ್ ೫ ರಿಂದ ಡಿಸೆಂಬರ್ ೧೪ ಹಾಗು ಅಗಸ್ಟ್ ೧೫ ರಿಂದ ಸಪ್ಟೆಂಬರ್ ೩ ರ ವರೆಗಿನ ಅವಧಿಯಲ್ಲಿ ಸಂಬಳದ ಹೊರತು ವಾಯುಮಾರ್ಗದಿಂದ ಬಿಡಿ ಕಾಸನ್ನೂ ಸ್ವೀಕರಿಸದಷ್ಟು ದಕ್ಷತೆವಹಿಸಬೇಕು; ಯಾಕೆಂದರೆ ಆಗ ಅನುಕ್ರಮವಾಗಿ ೧೨ ಹಾಗು ೭ ನೆಯ ಅಂದರೆ ಅನಿಷ್ಟ ಮಂಗಳನಿರುತ್ತಾನೆ. ಈ ವರ್ಷ ತುಸು ಹಣ ಹಾಗು ಹಲವು ಅಮೂಲ್ಯ ವಸ್ತುಗಳನ್ನು ಸಂಗ್ರಹಿಸಲು ಸಾಧ್ಯವಾಗುವುದು. ಆದರೆ ೭ ನೆಯ ಗುರುವಿನಲ್ಲಿ ಚಿಕ್ಕ ದೊಡ್ಡ ಕಳವು ಸಂಭವಿಸಬಹುದಾಗಿದೆ. ಒಳ್ಳೆಯ ಮಿತ್ರಸುಖ ದೊರೆಯುವುದಾದರೂ ೫ ನೆಯ ಕೇತುವಿನಿಂದಾಗಿ ವಿನಾಕಾರಣ ನೀವೇ ಒಬ್ಬನ ಮನನೋಯಿಸಬಹುದಾಗಿದೆ. ೫ ನೆಯ ಗುರುವಿನಲ್ಲಿ ಒಂದು ತೀರ್ಥಯಾತ್ರೆ ಅಥವಾ ದೊಡ್ಡ ಧಾರ್ಮಿಕ ಕಾರ್ಯವೊಂದು ನಡೆಯಬಹುದಾಗಿದೆ.

ದಾವೆ, ಫಿರ್ಯಾದಿ ಇಲ್ಲವೆ ಇತರ ಸ್ಪರ್ಧೆಯ ಕೆಲಸಗಳಲ್ಲಿ ನಿರ್ಣಯವು ೬ ನೆಯ ಗುರು ಹಾಗು ೪ ನೆಯ ರಾಹುವಿರುವಾಗಲಾದರೆ ಬಹುಶಃ ನಿಮ್ಮ ವಿರುದ್ಧವೇ ಆಗುವುದು, ಆದರೆ ಇತರ ಸಮಯದಲ್ಲಾದರೆ ಪೂರ್ಣ ಅನುಕೂಲವೇ ಇರುವುದು.

ಈ ರಾಶಿಯ ಗರ್ಭಿಣಿಯರ ಪ್ರಸೂತಿ ೫ ನೆಯ ಗುರು ಹಾಗು ರಾಹುವಿನಲ್ಲಾದರೆ ಬಹಳ ಕಷ್ಟವಾಗುವುದು. ಗುರು ೬ ನೆಯವನಿರುವಾಗ ತುಸು ಕಷ್ಟವಾದರೂ ಬಹುತರರಿಗೆ ಪುತ್ರಲಾಭವಾಗುವುದು ಹಾಗು ೭ ನೆಯ ಗುರುವಿನಲ್ಲಾದರೆ ಹೆರಿಗೆ ಸುಲಭವಾಗುವುದಲ್ಲದೆ ಬಹುತರರಿಗೆ ಕನ್ಯೆ ಜನಿಸುವ ಸಂಭವವಿದೆ.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ೫ ನೆಯ ಗುರುವಿನಲ್ಲಿ ಅಂದರೆ ಡಿಸೆಂಬರ್ ೮ರಿಂದ ಮಾರ್ಚ್ ೨೪ ರ ವರೆಗಾದರೆ ಅವರಿಗೆ ಕ್ಲಾಸ್ ಕೂಡ ದೊರೆಯುವುದು. ಆದರದೇ ೬ ನೆಯ ಗುರುವಿನಲ್ಲಾದರೆ ಯಶಸ್ಸು ಅಷ್ಟೊಂದು ನಿಶ್ಚಿತವಲ್ಲ. ೭ ನೆಯ ಗುರುವಿನಲ್ಲಾದರೆ ಕನಿಷ್ಠ ಮೂರನೆಯ ಶ್ರೇಣಿಯಲ್ಲಾದರೂ ಉತ್ತೀರ್ಣರಾಗುವರು.

## ಕುಂಭ

ಒಟ್ಟಿನಲ್ಲಿ ಈ ವರ್ಷ ಕೆಲವು ಚಿಕ್ಕ ಪುಟ್ಟ ವಿಷಯಗಳನ್ನು ಬಿಟ್ಟರೆ ಉಳಿದೆಲ್ಲ ವಿಷಯಗಳಲ್ಲೂ ಉತ್ಕರ್ಷದ್ದೇ ಆಗಿದೆಯೆಂಬುದು ನಿಶ್ಚಿತ.

ಈ ರಾಶಿಗೆ ಸ್ವಸ್ವಾಮಿಯಾದ ಶನಿಯ ಸಾಡೇ ಸಾತಿಯಿದ್ದು ಶನಿಯು ಈ ಸಲ ಮೇ ೧೧ ರ ವರೆಗೆ ಹಾಗು ಮತ್ತೆ ಸಪ್ಟೆಂಬರ್ ೭ ರ ನಂತರ ಇದೇ ರಾಶಿಯಲ್ಲಿರುತ್ತಾನೆಯಾದರೆ, ಈ ಮಧ್ಯಂತರ ಅವಧಿಯಲ್ಲಿ ಅಂದರೆ ಮೇ ೧೧ ರಿಂದ ಸಪ್ಟೆಂಬರ್ ೭ ರ ವರೆಗೆ ಮೀನದಲ್ಲಿ ಅಂದರೆ ೨ ನೆಯವನಾಗಿರುತ್ತಾನೆ ಈ ರಾಶಿಗಳೆರಡೂ ಅವನಿಗೆ ಅನುಕ್ರವಾಗಿ ಸ್ವಂತ ಮತ್ತು ಮಿತ್ರರಾಶಿಯಾಗಿರುವುದರಿಂದ ಸಹಸಾ ಯಾವ ಕ್ಲೇಶವೂ ಆಗವ ಸಂಭವವಿಲ್ಲವೆಂಬುದು ನಿಶ್ಚಿತ. ಆದರೆ ಗುರು ಹಾಗು ರಾಹು ಏಕಕಾಲಕ್ಕೆ ೪ ನೆಯವರಾಗಿರುವಾಗ ಆರೋಗ್ಯ ತುಸು ಕಿರಿಕಿರಿಯದಾಗಿರಬಹುದಾಗಿದೆ. ಈ ಕಾಲ ಜನವರಿ ೮ರಿಂದ ಮಾರ್ಚ್ ೨೪ರ ವರೆಗೆ ಮಾತ್ರವಿದೆ. ಶನಿ ೧ ನೆಯವನಾಗಿದ್ದಾಗ್ಯ ಅಂದರೆ ಇದೇ ರಾಶಿಯಲ್ಲಿರುವಾಗ ಆತ್ಮೋನ್ನತಿಯು, ಹಾಗು ೨ ನೆಯ ಅಂದರೆ ಮೀನದಲ್ಲಿರುವಾಗ ಕೌಟುಂಬಿಕ ಉತ್ಕರ್ಷದ ಒಂದೆರಡು ಒಡೆದುಕಾಣುವಂಥ ಘಟನೆಗಳಾದರೂ ಜರಗುವವು. ಗುರು ೫ ನೆಯವನಿರುವಾಗ ಅಂದರೆ ಜನವರಿ ೮ ರ ವರೆಗೆ ಹಾಗು ಮತ್ತೆ ಮಾರ್ಚ್ ೨೪ ರಿಂದ ಅಗಸ್ಟ್ ೩೧ ರ ವರೆಗೆ ಯೋಚಿಸಿದ ಕೆಲಸಗಳಲ್ಲಿ ಹೆಚ್ಚಿನವು ಮನಸ್ಸಿನಂತೆಯೇ ಆಗುವವು. ಆದರೂ ಶನಿಯ ಸ್ವಾಭಾವಿಕ ಗುಣಧರ್ಮಾನುಸಾರ ಮನಸ್ಸು ಒಂದಿಲ್ಲೊಂದು ಗೂಢ ಚಿಂತೆಯಿಂದ ವ್ಯಗ್ರವಾಗಿರಬಹುದಾಗಿದೆ.

ಸ್ತ್ರೀಸುಖಕ್ಕೆ ೪ ನೆಯ ರಾಹು ಅನುಕೂಲನಲ್ಲ ಆವಳ ಆರೋಗ್ಯ ಸರಿಯಿರುವುದಾದರೂ ಮಹತ್ವದ ವಿಷಯವೊಂದರ ಬಗೆಗೆ ಉಭಯತರಲ್ಲಿ ಬಹಳ ಮತಭೇದವುಂಟಾಗಿ ಮೇಲಿಂದ ಮೇಲೆ ಸಿಡಿಮಿಡಿ ನಡೆದೇಯಿರುವುದು. ಕೆಲವೇಳೆ ಅದು ಒಮ್ಮೊಮ್ಮೆ ದೀರ್ಘಕ್ಕೂ ಹೋಗಬಹುದು. ಆದರೆ ಜೂನ್ ೨೪ ರಂದು ಅವನು ೩ ನೆಯವನಾದ ನಂತರದಿಂದ ಉಭಯತರಲ್ಲಿ ಪೂರ್ಣ ಐಕಮತ್ಯ ಮೂಡಿ ಪ್ರೇಮ ಹೆಚ್ಚುವುದು. ಈ ರಾಶಿಯ ಅವಿವಾಹಿತರ ವಿವಾಹವಾಗುವುದಿದ್ದಲ್ಲಿ ಅದಕ್ಕೆ ಯಾವಾಗಲೂ ಉತ್ತಮ ಬಾಸಿಂಗಬಲ ಇಲ್ಲವೇಯಿಲ್ಲವೆಂದು ಹೇಳಬೇಕು. ಆದರೆ ಅದರಲ್ಲೇ ೫ ನೆಯ ಗುರುವಿರುವಾಗ ಅಂದರೆ ಜನವರಿ ೮ ರ ವರೆಗೆ ಹಾಗೂ ಪುನಃ ಮಾರ್ಚ್ ೨೪ ರಿಂದ ಅಗಸ್ಟ್ ೩೧ ರವರೆಗೆ ಬಹಳ ಪ್ರಯತ್ನ ಪಟ್ಟರೆ ವಿವಾಹವಾಗುವ ಶಕ್ಯತೆಯಿದೆ. ವಧೂ-ವರರು ರೂಪದಿಂದ ಸಾಮಾನ್ಯರೂ ತುಸು ಅಹಂಕಾರಿಗಳೂ ಆಗಿದ್ದರೂ ಕರ್ತೃತ್ವಶಾಲಿಗಳೂ ಉತ್ತಮ ಸುದ್ಯೆವಿಗಳೂ ಆಗಿರುತ್ತಾರೆ.

ನಿಮ್ಮ ಮಕ್ಕಳ ವಿವಾಹ ಮಾಡುವುದಿದ್ದರೆ ಅದಕ್ಕೆ ಮಾತ್ರ ೫ ನೆಯ ಗುರುವು ಬಹಳ ಉತ್ತ-ಮನು ಹಾಗು ೬ ನೆಯವನು ಮಧ್ಯಮನು ಎಂದು ತಿಳಿಯಬೇಕು ಆದರೆ ಗುರು ೪ ನೆಯವನಿರುವಾಗ ನಿಮ್ಮ ಮನಸ್ಸಿನಲ್ಲಿ ಆ ಬಗ್ಗೆ ಎಷ್ಟೇ ಖಾತ್ರಿ ಎನಿಸಿದ್ದರೂ ಅದು ಹೊಂದುವುದು ಹಾಗು ಆಗುವುದು ಕಠಿಣ. ಸೊಸೆ ಇಲ್ಲವೆ ಅಳಿಯ ೫ ನೆಯ ಗುರುವಿನಲ್ಲಾದರೆ ತೀರ ಮನವೊಪ್ಪುವಂತಿರುವರಾದರೆ ೬ನೆಯದರಲ್ಲಾದರೆ ಅವರ ಬಗ್ಗೆ ನಿಮಗಷ್ಟೊಂದು ಆತ್ಮೀಯತೆ ಎನಿಸುವುದಿಲ್ಲ. ಮಕ್ಕಳ ಉತ್ಕರ್ಷಕ್ಕೆ ಈ ವರ್ಷ ಬಹಳ ಉತ್ತಮವಿದ್ದು, ಅದರಲ್ಲೂ ೩ ನೆಯ ರಾಹು ಮತ್ತು ೫ ನೆಯ ಗುರುವಿದ್ದಾಗ ಅಂದರೆ ಜೂನ್ ೨೪ ರಿಂದ ಅಗಸ್ಟ್ ೩೧ ರ ವರೆಗಿನ ಅವಧಿಯಲ್ಲಿ ನಿಶ್ಚಿತ ಉತ್ಕರ್ಷವಾಗುವುದಲ್ಲದೆ, ಬಹುತರರಿಂದ ಅಪೇಕ್ಷಿಸಿದಂತೆ ಸುಖವೂ ದೊರೆಯುವುದು.

ಉದ್ಯೋಗಸ್ಥರಿಗಂತೂ ಈ ವರ್ಷ ಅತ್ಯಂತ ಭರಭರಾಟೆಯದೇ ಆಗಿದೆ. ಯಾಕಂದರೆ ವರ್ಷಾರಂಭದಲ್ಲಿಯೇ ದೇಹಸ್ವಾಮಿ ಅರ್ಥಾತ್ ರಾಶಿಪತಿ ಶನಿಯು ದೇಹಸ್ಥಾನದಲ್ಲಿ, ಲಾಭೇಶ ಗುರು ೫ ನೆಯವನಾಗಿರುವುದರಿಂದ ಅವನ ದೃಷ್ಟಿ ಪೂರ್ಣ ಲಾಭಸ್ಥಾನದ ಮೇಲೆ ಮತ್ತು ಅದರಂತೆಯೆ ಭಾಗ್ಯ ಹಾಗು ದೇಹಸ್ಥಾನದ ಮೇಲೆ ಕೂಡ, ದಶಮ ಅಂದರೆ ಕರ್ಮಸ್ಥಾನದಲ್ಲಿ ಮಂಗಳನು ಭಾಗ್ಯೇಶ ಶುಕ್ರನಿಂದ ಯುಕ್ತನು. ಅಲ್ಲದೆ ಅಲ್ಲಿಯೇ ಇರುವ ಕೇತುವಿಗೆ ಈ ರಾಶಿಯ ಹರ್ಷಿತ ಸಂಜ್ಞಕವಾಗಿದೆಯಾದ್ದರಿಂದ ಮತ್ತು ನವಮ ಅಂದರೆ ಭಾಗ್ಯಸ್ಥಾನದಲ್ಲಿ ಪಂಚಮೇಶ ಬುಧನು, ಸಪ್ತಮೇಶ ರವಿ ಹಾಗು ಷಷ್ಠೇಶ ಚಂದ್ರನು ನೆಪ್ಚೂನ್‌ನಿಂದ ಯುಕ್ತ, ಈ ರೀತಿ ಅಪೂರ್ವ ಬಲಿಷ್ಠ ಯೋಗವಾಗಿರುತದೆ. ವಿಶೇಷತಃ ೫ನೆಯ ಗುರುವಿರುವ ಕಾಲ ಅಂದರೆ ಜನವರಿ ೮ ರ ವರೆಗೆ ಹಾಗು ಮತ್ತೆ ಮಾರ್ಚ್ ೨೪ ರಿಂದ ಅಗಸ್ಟ್ ೩೧ರ ವರೆಗೆ ಈ ವಿಲಕ್ಷಣ ಉತ್ಕರ್ಷಕಾರಕ, ಪತ್ತು ಹಾಗು ಪ್ರತಿಷ್ಠೆಗಳು ಅಮರ್ಯಾದಿತ ಪ್ರಮಾಣದಲ್ಲಿ ಹೆಚ್ಚುವಂತಹ ಮತ್ತು ಎಣಿಕೆಗೆ ನಿಲುಕದಂತಹ ಪ್ರಗತಿಕಾರಕ ಸಮಯವೇ ಆಗಿದೆ. ಉದ್ಯೋಗಸ್ಥರಲ್ಲಿ ಬುದ್ಧಿಜೀವಿ ಮತ್ತು ಶ್ರಮಜೀವಿಗಳಿಬ್ಬರಿಗೂ ಅಷ್ಟೇ ಅನುಕೂಲವಿದೆ. ನೌಕರದಾರರಿಗೆ ೫ ಕ್ಕಿಂತ ೬ನೆಯ ಗುರುವಿನ ಕಾಲ ಹೆಚ್ಚು ಉತ್ತಮ ಹಾಗು ೩ನೆಯ ರಾಹು ಬಂದ ನಂತರ ಅನೇಕರಿಗೆ ಬಡತಿ ಸಿಗಬಹುದು. ೪ ನೆಯ ಗುರು ಮತ್ತು ರಾಹುವಿರುವಾಗ ವರಿಷ್ಠರು ತುಸು ಮುನಿದಿರಬಹುದಾದರೂ ಗುರು ೫ ಹಾಗು ೬ನೆಯವನಿರುವಾಗ ಮಾತ್ರ ಒಳ್ಳೆಯ ಸಂತುಷ್ಟರಾಗಿರುವರು. ಅದರಂತೆಯೇ ಈ ಗ್ರಹಗಳೆರಡೂ ೪ನೆಯವಿದ್ದಾಗ ಬದಲಿಯಾದರೆ ಅದು ಅನನುಕೂಲ ಸ್ಥಳಕ್ಕೆ ಹಾಗು ಇತರ ಸಮಯದಲ್ಲಾದರೆ ಅತ್ಯನುಕೂಲ ಸ್ಥಳಕ್ಕೆ ಎಂದು ತಿಳಿಯಬೇಕು. ಈ ಸಲ ನಿರೀಕ್ಷೆಗಿಂತ ಹೆಚ್ಚು ಸಂಗ್ರಹ ಸಾಧ್ಯವಾಗಬಹುದು. ಆದರೆ ೩ನೆಯ ರಾಹು ಹಾಗು ೬ನೆಯ ಗುರುವಿದ್ದಾಗ ತುಸು ಮಟ್ಟಿಗೆ ಅಣ್ಣತಮ್ಮಂದಿಕೆಯ ಪ್ರಭಾವವೂ ಬೀಳಬಹುದು. ೫ನೆಯ ಗುರುವಿನಲ್ಲಿ ಯಾತ್ರೆ ಅಥವಾ ಬಹಳ ಪುಣ್ಯಕಾರ್ಯಗಳು ಜರುಗಬಹುದು. ವರ್ಷಾರಂಭದಲ್ಲಿಯೆ ರವಿ, ಚಂದ್ರ, ಬುಧ ಹಾಗು ನೆಪ್ಚೂನ್ ಈ ಚತುರ್ಗ್ರಹಗಳು ನವಮದಲ್ಲಿರುವುದರಿಂದ ಬಹಳ ಶುಭಸೂಚಕ ಸ್ವಪ್ನಗಳನ್ನು ಮೇಲಿಂದ ಮೇಲೆ ಕಾಣುವಿರಿ. ೫ನೆಯ ಗುರುವಿನಲ್ಲಿ ಉತ್ತಮ ಮಿತ್ರಸುಖ ದೊರೆಯುವದಾದರೂ ಅವನು ೬ನೆಯವನಾದಾಗ ಅನೇಕರೊಂದಿಗೆ ವಿತುಷ್ಟಿ ಬರಬಹುದಾಗಿದೆ.

ದಾವೆ, ಫಿರ್ಯಾದಿ ಇಲ್ಲವೆ ಇತರ ಸ್ಪರ್ಧೆಯ

### ಗೂರ್ಖ–ಮೂರ್ಖ



ಪೇಟೆ ಕಾವಲಿಗೆ ಗಸ್ತಿ ಹಾಕಲಿಕೆ
ಬಂದುಬಿಟ್ಟ ಗೂರ್ಖ;
"ರಾತ್ರಿ-ಗಳಿಕೆಗಿವ ಕತ್ರಿ"ಯಿಂದು ಪೋ-
ಲೀಸನತ್ತ ಮೂರ್ಖ!

— ಎಂ. ಅಕಬರ ಅಲಿ

ಕೆಲಸಗಳಲ್ಲಿ ನಿರ್ಣಯವು ರಾಹು ಹಾಗು ಗುರು ೪ ನೆಯವರಿದ್ದಾಗಾದರೆ ಅದು ಬಹುಶಃ ನಿಮ್ಮ ವಿರುದ್ಧವೇ ಆಗುವುದು. ಆದರೆ ಇತರ ವೇಳೆಯಲ್ಲಾದರೆ ಅನುಕೂಲವಾಗಬಹುದು. ಅದರಲ್ಲೂ ನಿರ್ಣಯ ೩ನೆಯ ರಾಹುವಿನಲ್ಲಾದರೆ ಶತ್ರುವಿನ ಪೂರ್ಣ ಪರಾಭವವಾಗಬಹುದು.

ಈ ರಾಶಿಯ ಗರ್ಭಿಣಿಯರ ಪ್ರಸೂತಿ ರಾಹು ಹಾಗು ಗುರು ೪ನೆಯವರಿದ್ದಾಗ ಆಗುವುದಾದರೆ ಯೋಗ್ಯ ವೈದ್ಯಕೀಯ ಸಲಹೆಯನ್ನು ಮೊದಲೇ ಪಡೆಯುವದುತ್ತಮ. ಆದರೆ ೫ನೆಯ ಗುರುವಿನಲ್ಲಾದರೆ ಹೆರಿಗೆ ಸುಲಭವಾಗುವದು ಮತ್ತು ೩ನೆಯ ಗುರುವಿನಲ್ಲಾದರೆ ಬಹುತರರಿಗೆ ಪುತ್ರಲಾಭದ ಸಂಭವವಿದೆ.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ೫ ನೆಯ ಗುರುವಿನಲ್ಲಾದರೆ ನಿಶ್ಚಿತ ಉತ್ತೀರ್ಣರಾಗುವರು. ೬ನೆಯ ಗುರುವಿನಲ್ಲಿ ನೂರಕ್ಕೆ ೫೦ರಷ್ಟು ಉತ್ತೀರ್ಣರಾಗುವರು; ಆದರೆ ೪ನೆಯ ಗುರುವಿನಲ್ಲಿ ಮಾತ್ರ ನಿಶ್ಚಿತ ಹೇಳಲು ಬರುವಂತಿಲ್ಲ.

---

# ಮೀನ

ಒಟ್ಟಿನಲ್ಲಿ ಈ ವರ್ಷ ಎಲ್ಲ ವಿಷಯಗಳಲ್ಲಿ ಮಂದಪ್ರಗತಿಯದು, ಆದರೆ ಅಪಾಯ ರಹಿತ ಎಂಬುದು ಖಂಡಿತವೆಂದು ತಿಳಿಯಬೇಕು.

ಹಿಂದಿನ ಎರಡು ರಾಶಿಗಳಾದ ಮಕರ ಹಾಗು ಕುಂಭಗಳಂತೆಯೆ ಈ ರಾಶಿಗೂ ಸದ್ಯ ಸಾಡೇಸಾತಿಯಿದ್ದು ಅದರ ಮೊದಲಭಾಗ ಊರ್ಜಿತದಲ್ಲಿದೆ, ಅಂದರೆ ಶನಿ ೧೨ನೆಯವನಾಗಿದ್ದಾನೆ. ಆದರೆ ಈ ವರ್ಷ ಮೇ ೧೧ ರಿಂದ ಸಪ್ಟೆಂಬರ್ ೭ ರ ವರೆಗೆ ಅವನು ಇದೇ ರಾಶಿಯನ್ನು ಪ್ರವೇಶಿಸಿ ಸಾಡೇಸಾತಿಯ ಎರಡನೆಯ ಭಾಗದಲ್ಲಿ ಬರುವನು ಮತ್ತು ನಂತರ ಮತ್ತೆ ವಕ್ರಗತಿಯಿಂದ ಕುಂಭವನ್ನು ಪ್ರವೇಶಿಸಿ ಈ ರಾಶಿಗೆ ೧೨ ನೆಯವನಾಗುವನು. ಅವನು ೧೨ನೆಯವನಿರುವಾಗ ಮನೋಭಂಗ, ದಗದಗಿ ಹಾಗು ಅತಿ ವೆಚ್ಚ ಮುಂತಾದ ಫಲಗಳನ್ನಿತ್ತರೆ ೧ನೆಯವನಿರುವಾಗ ಲಾಭ, ಯಶಸ್ಸು, ಪರಾಕ್ರಮ ಸಿದ್ಧಿ ಹಾಗು ಬಹುದಿನಗಳಿಂದ ಹಾಗೆಯೇ ಉಳಿದು ಬಿಟ್ಟಿದ್ದ ಕೊಡತಕ್ಕೊಳ್ಳುವ ವ್ಯವಹಾರಗಳಲ್ಲಿ ಕೆಲವು ನಿಮ್ಮ ಮನಸ್ಸಿನಂತೆಯೇ ಬಗೆಹರಿಯುವಿಕೆ ಮುಂತಾದ ಫಲಗಳನ್ನೀಯುವನು. ಆರೋಗ್ಯಕ್ಕೆ ೫ನೆಯ ಗುರು ಅತ್ಯುತ್ತಮನು ಹಾಗು ೩ ಮತ್ತು ೪ನೆಯ ರಾಹು ಸಾಮಾನ್ಯನೆಂದು ತಿಳಿಯಬೇಕು. ದೇಹಸುಖಕ್ಕೆ ೩ನೆಯ ರಾಹು ಎಷ್ಟು ಅನುಕೂಲನೋ ಅಷ್ಟು ಜೂನ್ ೧೪ ರಂದು ಬರುವ ೧೨ನೆಯವನು ಅನುಕೂಲನಲ್ಲ. ಅಲ್ಲದೆ ಅವನು ಗೃಹಕಲಹವನ್ನು ತುಂಬ ಹೆಚ್ಚಿಸಬಹುದು.

ಹೆಂಡತಿಯ ಆರೋಗ್ಯವು ೧ ನೆಯ ಶನಿ ಹಾಗು ೮ನೆಯ ಕೇತು ಏಕಕಾಲಕ್ಕಿದ್ದಾಗ ಅಂದರೆ ಜೂನ್ ೨೪ ರಿಂದ ಸಪ್ಟೆಂಬರ್ ೭ ರ ವರೆಗಿನ ಅವಧಿಯಲ್ಲಿ ಸರಿಯಿರಲಾರದು. ತಲೆಶೂಲಿ ಅಥವಾ ಚಿತ್ತಭ್ರಮೆಯಿಂದ ತುಸು ಕಷ್ಟವಾಗಬಹುದು. ಅಂತೆಯೆ, ಕ್ಲೇಶ ಪರಿಹಾರಾರ್ಥ ಶನಿಯ ೨೩,೦೦೦ ಹಾಗು ಕೇತುವಿನ ೧೭,೦೦೦ ಜಪ ಮಾಡಿಸಬೇಕು. ಅವಳೊಂದಿಗೆ ನಿಮ್ಮ ಒಳ್ಳೇ ಐಕಮತ್ಯವುಳಿಯುವುದಲ್ಲದೆ ಅವಳ ಸಹವಾಸದಲ್ಲಿ ಸಹಸಾ ವ್ಯತ್ಯಯ ಬರಲಾರದು. ಈ ರಾಶಿಯ ಅವಿವಾಹಿತರ ವಿವಾಹವಾಗುವುದಿದ್ದಲ್ಲಿ ಅದಕ್ಕೆ ೪ ನೆಯ ಗುರುವು ಪೂರ್ಣ ಪ್ರತಿಕೂಲನು; ಆದರೆ ೩ ಹಾಗೂ ೫ ನೆಯ ಗುರುವಿನಲ್ಲಿ ಅಂದರೆ ಜನವರಿ ೮ ರಿಂದ ಮಾರ್ಚ್ ೨೪ ಮತ್ತು ಅಗಸ್ಟ್ ೨೪ ರ ನಂತರದ ಕಾಲವು ಪೂರ್ಣ ಅನುಕೂಲವಿದ್ದುದರಿಂದ ಆಗ ಅಲ್ಪಾಯಾಸದಿಂದಲೇ ಆಗಬಹುದಾಗಿದೆ. ಒಂದು ವೇಳೆ ೧೨ ನೆಯ ಶನಿಯಿಂದಾಗಿ ಪ್ರಮಾಣ ಮೀರಿ ವೆಚ್ಚಮಾಡಬೇಕಾದ ಪ್ರಸಂಗ ಬರಬಹುದಾದರೂ ಇತರಯಾವ ಅಡೆತಡೆಗಳೂ ಬರಲಾರವು. ವಧೂವರರು ನೋಡುವುದಕ್ಕೆ, ಬುದ್ಧಿ ಹಾಗು ಸ್ವಭಾವಗಳಲ್ಲಿ, ದೈವದಲ್ಲಿ ಸಮಸಮೀಪ ಸಮತೂಕದವರೇ ಆಗಿರುತ್ತಾರೆ.

ನಿಮ್ಮ ಮಕ್ಕಳ ವಿವಾಹ ಮಾಡುವುದಿದ್ದಲ್ಲಿ ಅದಕ್ಕೆ ಎಲ್ಲಕ್ಕಿಂತಲೂ ಹೆಚ್ಚಾಗಿ ೫ ನೆಯ ಗುರುವಿನಲ್ಲಿ ಉತ್ತಮ ಬಾಸಿಂಗಬಲವಿದೆ. ೩ ನೆಯ ಗುರುವಿನಲ್ಲಿ ವಿವಾಹ ಕಷ್ಟಸಾಧ್ಯ. ಸೊಸೆ ಇಲ್ಲವೆ ಅಳಿಯ ಎಲ್ಲ ದೃಷ್ಟಿಯಿಂದಲೂ ಉತ್ತಮರೆನಿಸಿದರೂ ಸ್ವತಃ ನಿಮಗೆ ಮಾತ್ರ ಅಷ್ಟೊಂದು ಒಪ್ಪಿತವಾಗುವುದಿಲ್ಲ. ಯಾಕೆಂದರೆ ವರ್ಷಾರಂಭದಲ್ಲಿ ರಾಶಿಸ್ವಾಮಿ ಗುರು ೪ ನೆಯವನು, ಬುಧ ಮತ್ತು ರವಿ ೮ ನೆಯವರು ಹಾಗು ಶನಿ ೧೨ ನೆಯವನು ಇರುವುದು ವಿಚಾರ ವಿಕೃತಿಯನ್ನುಂಟು ಮಾಡುವ ಯೋಗವಾಗಿದೆ. ಮಕ್ಕಳ ಉತ್ಕರ್ಷಕ್ಕೆ ಈ ವರ್ಷ ೫ ನೆಯ ಗುರು ಹಾಗು ೧ ನೆಯ ಶನಿ ಅಂದರೆ ಅಗಸ್ಟ್ ೩೧ ರಿಂದ ಸಪ್ಟೆಂಬರ್ ೭ ರ ವರೆಗಿನ ಕಾಲವು ಒಳ್ಳೆಯ ಪೋಷಕವಾದುದಾಗಿದೆ. ಆದರೆ ಅದು ನಿಮ್ಮ ಅಪೇಕ್ಷೆಯಂತೆ ಪರಿಣಾಮ ನೀಡುವುದು ಒಬ್ಬನ ವಿಷಯಕ್ಕೆ ಮಾತ್ರ. ರಾಹು ೩ ನೆಯವನಾಗಿರುವಾಗ ಅಂದರೆ ಜೂನ್ ೨೪ ರ ವರೆಗೆ ಅವರು ಎಷ್ಟೊಂದು ಸರಳವಾಗಿ ವರ್ತಿಸುವರೊ ಮುಂದೆ ಅವನು ೨ ನೆಯವನಾದ ನಂತರ ವರ್ತಿಸುವುದಿಲ್ಲ.

ಉದ್ಯೋಗ, ಧಂದೆಗಳು ಈ ವರ್ಷಾರಂಭದಲ್ಲಿಯೆ ಭಾಗ್ಯೇಶ ಮಂಗಳ ಹಾಗೂ ಪರಾಕ್ರಮೇಶ ಶುಕ್ರರು ಕೇತುವಿನೊಂದಿಗೆ ಇದೇ ಸ್ಥಾನದಲ್ಲಿರುವುದರಿಂದ ಬಹಳ ಪ್ರಗತಿ, ಒಳ್ಳೆಯ ಪ್ರತಿಷ್ಠೆ ಮತ್ತು ೩ ಹಾಗೂ ೫ ನೆಯ ಗುರುವಿನಲ್ಲಿ ತುಂಬ ಲಾಭಕರವೂ ಆಗಿವೆಯೆಂಬುದರಲ್ಲಿ ಸಂದೇಹವಿಲ್ಲ. ಆದರೆ ಮೂಲತಃ ಲಾಭೇಶ ಶನಿಯು ವ್ಯಯಸ್ಥಾನದಲ್ಲಿ ಅದೂ ಸ್ವಗೃಹದಲ್ಲಿಯೇ ಇರುವುದರಿಂದ ವೆಚ್ಚದ ಹಲವಾರು ಪ್ರಸಂಗಗಳನ್ನು ಎದುರಿಸಬೇಕಾಗಿ ಬರುವುದರಿಂದ ಹಣವೆಷ್ಟೇ ಬಂದರೂ ಯಾವುದಕ್ಕೂ ಸಾಲದಾಗುತ್ತದೆ. ಆದರೆ ಒಂದೇ ಸಮಾಧಾನವೆಂದರೆ ಯಾವುದಕ್ಕೆ ವೆಚ್ಚ ಮಾಡುವಿರೊ ಆ ಉದ್ದೇಶಗಳೆಲ್ಲ ಕೊನೆಗೆ ಬಹಳ ಮಟ್ಟಿಗೆ ಸಫಲವಾಗುವುದೆಂಬುದು. ಉದ್ಯೋಗಸ್ಥರಿಗಿಂತ ನೌಕರದಾರರಿಗೆ ಈ ವರ್ಷ ಹೆಚ್ಚು ಅನುಕೂಲವಿದೆ. ನವೆಂಬರ್ ೫ ರ ವರೆಗೆ. ಡಿಸೆಂಬರ್ ೧೪ ರಿಂದ ಜನವರಿ ೨೧ ರ ವರೆಗೆ, ಫೆಬ್ರುವರಿ ೨೮ ರಿಂದ ಜೂನ್ ೩೦ ರ ವರೆಗೆ ಹಾಗೂ ಸಪ್ಟೆಂಬರ್ ೩ರ ನಂತರ ಈ ಕಾಲಾವಧಿಯೆಲ್ಲ ಪ್ರತ್ಯಕ್ಷ ಲಾಭಕ್ಕೆ ಉತ್ತಮ. ಒಂದು ವೇಳೆ ಬದಲಿಯಾದರೆ ಅದು ಕೆಲಸದ ದೃಷ್ಟಿಯಿಂದ ತೊಂದರೆಯದಾದರೂ ಇತರ ದೃಷ್ಟಿಯಿಂದ ಸೋಯಿಸ್ಕರವಾದ ಊರಿಗೆ ಬಹುಶಃ ೪ ನೆಯ ಗುರುವಿನಲ್ಲಿ ಅಂದರೆ ಡಿಸೆಂಬರ್ ೮ ರ ಮೊದಲು ಅಥವಾ ಮಾರ್ಚ್ ೨೪ ರಿಂದ ಅಗಸ್ಟ್ ೩೧ ರ ವರೆಗಿನ ಅವಧಿಯಲ್ಲಾಗಬಹುದಾಗಿದೆ. ಆದರೆ ಇತರ ಸಮಯದಲ್ಲಿ ಬದಲಿ ಮಾಡಿಸಿಕೊಳ್ಳಬೇಕಾದಲ್ಲಿ ಅದಕ್ಕಾಗಿ ಬಹಳ ಪ್ರಯತ್ನಿಸಬೇಕಾಗುವುದು. ಈ ಸಲ ಹಣದ ಸಂಗ್ರಹವಾಗುವುದು ಕಷ್ಟಕರ, ಆದರೆ ಇದ್ದ ಸಂಗ್ರಹಕ್ಕೆ ಕೈ ಹಚ್ಚಬೇಕಾಗುವುದಿಲ್ಲವೆಂಬುದೇ ದೇವರ ದಯೆಯೆಂದು ತಿಳಿಯಬೇಕು. ತುಸು ಆಕಸ್ಮಿಕ ದ್ರವ್ಯ ಲಾಭವಾಗುವ ಸಂಭವವಿದೆ. ೫ ನೆಯ ಗುರುವಿನಲ್ಲಿ ಮಂಗಲ ಅಥವಾ ಧಾರ್ಮಿಕ ಕಾರ್ಯಗಳು ಕೆಲವು ಜರುಗಬಹುದು. ೧ ನೆಯ ಶನಿಯಿರುವಾಗ ಆತ್ಮವಿಶ್ವಾಸ ವರ್ಧಿಸುವುದು.

ದಾವೆ, ಫಿರ್ಯಾದಿ ಇಲ್ಲವೆ ಇತರ ಸ್ಪರ್ಧೆಯ ಕೆಲಸಗಳಲ್ಲಿ ನಿರ್ಣಯವು ೩ ನೆಯ ರಾಹುವಿರುವಾಗಲಾದರೆ ಪೂರ್ಣ ಅನುಕೂಲವಿರುವುದು, ಆದರೆ ಅವನು ೨ ನೆಯವನಿರುವಾಗಾದರೆ ಬಹುಶಃ ಪ್ರತಿಕೂಲವೇ ಇರುವುದು.

ಈ ರಾಶಿಯ ಗರ್ಭಿಣಿಯರ ಪ್ರಸೂತಿ ೫ ನೆಯ ಗುರುವಿನಲ್ಲಾದರೆ ಅತಿ ಸುಲಭ, ೩ ನೆಯ ಗುರುವಿನಲ್ಲಿ ಸಾಧಾರಣ ಕಷ್ಟಕರ; ಆದರೆ ೪ ನೆಯ ಗುರುವಿನಲ್ಲಿ ಮಾತ್ರ ತೀರ ಆಯಾಸದಿಂದಾಗುವ ಸಂಭವವಿದೆ. ಈ ಸಲ ಬಹುತರರಿಗೆ ಕನ್ಯೆಯೇ ಜನಿಸುವ ಯೋಗವಿದೆ.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ೪ ನೆಯ ಗುರುವಿನಲ್ಲಿ ಅಂದರೆ ಡಿಸೆಂಬರ್ ೮ ರ ಮೊದಲಿನ ಹಾಗು ಮಾರ್ಚ್ ೨೪ ರಿಂದ ಅಗಸ್ಟ್ ೩೧ ರ ವರೆಗಿನ ಅವಧಿಯಲ್ಲಾದರೆ ಯಶಸ್ಸು ನಿಶ್ಚಿತವಲ್ಲವಾದರೂ ಅವನು ೩ ಹಾಗೂ ೫ ನೆಯವನಿರುವಾಗಾದರೆ ಯಶಸ್ಸು ನಿಶ್ಚಿತವಿಷ್ಟೇ ಅಲ್ಲ ೫ ನೆಯವನಿರುವಾಗವಾದರೆ ಕ್ಲಾಸ್ ಕೂಡ ದೊರೆಯುವುದು.

॥ ಶುಭಂ ಭವತು ॥

# "ಹರನೆಂಬುದೇ ಸತ್ಯ; ಸತ್ಯವೆಂಬುದು ಹರನು"

ಮಹಾಕವಿ ರಾಘವಾಂಕನು ಚಿತ್ರಿಸಿದ ಸತ್ಯದ ಹಲವು ಮುಖಗಳ ವಿವೇಚನೆ

ಸತ್ಯದ ಆರಾಧನೆಯು ಎಲ್ಲ ದೇಶಗಳ ದಾರ್ಶನಿಕರ ವೈಶಿಷ್ಟ್ಯವಾಗಿದೆ. ಅದರಲ್ಲಿಯೂ ವೇದೋಪನಿಷತ್ತುಗಳ ಕಾಲದಿಂದಲೂ ಸತ್ಯವನ್ನು ಕಾಣಬೇಕು, ಇದಿಯಾಗಿ ಕಾಣಬೇಕು— ಎಂಬ ಹಂಬಲ ಭಾರತೀಯ ತತ್ತ್ವಜ್ಞಾನಿಗಳಲ್ಲಿ ವಿಶೇಷವಾಗಿ ಕಂಡುಬರುತ್ತದೆ. ತತ್ತ್ವಜ್ಞಾನಿಯಂತೆ ವಿಜ್ಞಾನಿ ಮತ್ತು ಕವಿ ಇವರೂ ಸತ್ಯವನ್ನು ಸಾಕ್ಷಾತ್ಕರಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ನಿರಾಕಾರ, ನಿರ್ಗುಣ ಪರಬ್ರಹ್ಮನ ಸ್ವರೂಪವನ್ನು ಬದಿಗಿಟ್ಟು ಸಗುಣೋಪಾಸನೆಯತ್ತ ನಾವು ನಮ್ಮ ಲಕ್ಷ್ಯವನ್ನು ತಿರುಗಿಸಿದರೆ ನಾವು ಕಾಣುವುದೇನು ? "ಸತ್ಯಂ, ಶಿವಂ, ಸುಂದರಂ"- ಇದು ಸಂಕ್ಷಿಪ್ತವಾಗಿ ಸಗುಣ ಪರಮಾತ್ಮನ ಸ್ವರೂಪದ ವರ್ಣನೆಯಾಗಿದೆ. ಈ ಮೂರು ಮುಖ್ಯ ಗುಣಗಳಲ್ಲಿ ಸತ್ಯಕ್ಕೆ ಪ್ರಥಮಸ್ಥಾನವನ್ನು ಕೊಡಲಾಗಿದೆ. ವಿಜ್ಞಾನಿಯು ಕಾಣುವ ಸತ್ಯವು ಭೌತಿಕ ಪ್ರಪಂಚದ್ದಾಗಿದ್ದರೆ; ದಾರ್ಶನಿಕನು ಕಾಣುವ ಸತ್ಯವು ಸನಾತನವೂ, ತ್ರಿಕಾಲಾಬಾಧಿತವೂ ಆಗಿದ್ದು ಸ್ವರೂಪದಲ್ಲಿ ಆಧ್ಯಾತ್ಮಿಕವಾಗಿರುತ್ತದೆ. ಈ ಇಬ್ಬರಲ್ಲಿ ಶಾಸ್ತ್ರಕಾರನ ನಿರ್ದಯವಾದ, ನಿಶಿತವಾದ, ಖಂಡಿತವಾದ ದೃಷ್ಟಿಯು ವ್ಯಕ್ತವಾಗುತ್ತದೆ. ಆದರೆ ಕವಿಯು ಸತ್ಯವನ್ನು ಕಂಡು, ತನ್ನ ಕಾವ್ಯದ ಮೂಲಕ ಲೋಕಕ್ಕೆ ಅದನ್ನು ತೋರಿಸುವ ರೀತಿಯು ಕಟುವಾಗಿರದೆ, ಮಧುರವಾಗಿರುತ್ತದೆ, ಹಿತವಾಗಿರುತ್ತದೆ, ಆಕರ್ಷಕವಾಗಿರುತ್ತದೆ. ಕವಿಗೆ. ಅದರಲ್ಲಿಯೂ ಹುಟ್ಟುಕವಿಗೆ, ಸತ್ಯದ ಆರಾಧನೆಯು ಸೌಂದರ್ಯದ ಆರಾಧನೆಗಿಂತ ಭಿನ್ನವಾಗಿ ತೋರುವುದಿಲ್ಲ. ಕವಿಯು ಸದಾ ಸತ್ಯವನ್ನು ಸುಂದರವಾಗಿ ಕಾಣುತ್ತಾನೆ, ಶಿವವಾಗಿಯೂ ಕಾಣುತ್ತಾನೆ. ಅದರಂತೆ ತನ್ನ ಕೃತಿಗಳಲ್ಲಿಯೂ ಅದೇ ಬಗೆಯಾಗಿ ಸತ್ಯವನ್ನು ಚಿತ್ರಿಸುತ್ತಾನೆ. ಮಹಾಕವಿ ರಾಘವಾಂಕನು "ಹರಿಶ್ಚಂದ್ರಕಾವ್ಯ" ದಲ್ಲಿ ಹೇಗೆ ಸತ್ಯವನ್ನು ಹುಟ್ಟುಕಲಾವಿದನ ರೀತಿಯಲ್ಲಿ ಕಂಡು, ಅದನ್ನು ಹರಿಶ್ಚಂದ್ರನ ವ್ಯಕ್ತಿತ್ವ ಕ್ರಿಯಾಶೀಲತೆಗಳಲ್ಲಿ ನಾನಾ ರೀತಿಯಿಂದ ಹೇಗೆ ನಿರೂಪಿಸಿದ್ದಾನೆಂಬುದನ್ನು ಸಂಕ್ಷಿಪ್ತವಾಗಿ ವಿವೇಚಿಸುವುದೇ ಈ ಲೇಖನದ ಉದ್ದೇಶ.

ಹರಿಶ್ಚಂದ್ರನ ಕಥೆ ಪ್ರಾಚೀನವಾದದ್ದು. ಐತರೇಯ ಬ್ರಾಹ್ಮಣದಲ್ಲಿ ಮತ್ತು ಪ್ರಾಚೀನವಾದ ಪುರಾಣಗಳಲ್ಲಿ ನಿರೂಪಿತವಾದಂತೆ ಹರಿಶ್ಚಂದ್ರನು ಸುಪ್ರಸಿದ್ಧರಾದ ಷೋಡಶ ಅರಸರಲ್ಲಿ ಒಬ್ಬನು, ಸತ್ಯಸಂಧತೆಗೆ ಹೆಸರಾದವನು–ಎಂದರೆ ಕೊಟ್ಟ ವಚನವನ್ನು ತಪ್ಪದೆ ಪಾಲಿಸುವವನು. ಮಾತಿಗೆ ಎಂದೂ ತಪ್ಪುವವನಲ್ಲ. ಇಲ್ಲಿ "ಸತ್ಯ" ಎಂದರೆ ನುಡಿದಂತೆ ನಡೆಯುವುದು. ಎಂಥ ಕಠಿಣ ಪ್ರಸಂಗ ಬಂದಾಗಲೂ ಮಾತು ಬದಲಿಸದೆ ತನ್ನ ವಚನವನ್ನು ಪೂರ್ತಿಗೊಳಿಸುವುದು–ಎಂಬ ಅಭಿಪ್ರಾಯವಿದೆ. ಆದರೆ ರಾಘವಾಂಕನು ಚಿತ್ರಿಸಿದ ಹರಿಶ್ಚಂದ್ರನ ಸತ್ಯಸಂಧತೆ ವಿಶಾಲವಾಗಿದೆ, ವ್ಯಾಪಕವಾಗಿದೆ. ಇಲ್ಲಿ ಸತ್ಯವು ವ್ಯಕ್ತಿಯ ಅಂತರಂಗವನ್ನೆಲ್ಲ ವ್ಯಾಪಿಸಿ, ಅವನ ಇಡಿಯ ಜೀವನದ ಎಲ್ಲ ಚಟುವಟಿಕೆಗಳಿಗೆ ಮೂಲಾಧಾರವಾಗಿ, ಪ್ರೇರಕಶಕ್ತಿಯಾಗಿದೆ. ಅಂತೆಯೇ ಹರಿಚಂದ್ರನು ಯಾವ ಸ್ಥಿತಿಯಲ್ಲಿಯೇ ಇರಲಿ, ಕೇವಲ ಕೊಟ್ಟ ವಚನವನ್ನು ಪಾಲಿಸುವುದು ಮಾತ್ರವಲ್ಲದೆ; ಪರಿಪೂರ್ಣ ಮಾನವನಾಗಿ ವರ್ತಿಸುತ್ತಾನೆ. ಇಲ್ಲಿ ಸತ್ಯವೆಂಬುದು ಎಷ್ಟು ವ್ಯಾಪಕವಾಗಿದೆ ಎಂದರೆ ಅದು ಸರ್ವಾಂತರ್ಯಾಮಿಯಾದ ಶಿವನಂತಿದೆ, ಎಲ್ಲವೂ ನಾಶವಾದ ಮೇಲೆ ಶಾಶ್ವತವಾಗಿ ಉಳಿಯುವುದು ಒಂದೇ ಒಂದು ತತ್ತ್ವವಲ್ಲವೆ? ಅದನ್ನು ನಾವು ಪರವಸ್ತು, ಪರಬ್ರಹ್ಮ, ಪರಮಾತ್ಮ ಎಂಬ ಯಾವ ಹೆಸರಿನಿಂದಲಾದರೂ ಕರೆಯಬಹುದು. ಈ ಮಹಾತತ್ತ್ವವು ಸತ್ಯ ಸ್ವರೂಪಿಯಾಗಿದೆ. ಈ ವ್ಯಾಪಕವಾದ ಅರ್ಥದಲ್ಲಿಯೇ ರಾಘವಾಂಕನು ತನ್ನ "ಹರಿಶ್ಚಂದ್ರ


ಪ್ರೊ. ಜಿ. ಡಿ. ನಾಡಕರ್ಣಿ

(ಜಿ. ಎಸ್. ಎಸ್. ಕಾಲೇಜ್, ಧಾರವಾಡ)


ಕಾವ್ಯ"ದ ಕೊನೆಗೆ "ಹರನೆಂಬುದೇ ಸತ್ಯ: ಸತ್ಯವೆಂಬುದು ಹರನು ಎರಡಿಲ್ಲ" ಎಂದು ಸಾರಿದ್ದಾನೆ.

ಇದಕ್ಕೆ ಮೊದಲನೆಯ ಮಹತ್ವದ ಉದಾಹರಣೆಯೆಂದರೆ ವಿಶ್ವಾಮಿತ್ರನ ಕೋಪದಿಂದ ಹುಟ್ಟಿದ ಹೊಲತಿಯರನ್ನು ಹರಿಶ್ಚಂದ್ರನು ಮದುವೆಯಾಗಲಿಕ್ಕೆ ಒಪ್ಪದೆ ಇರುವುದು. ವಿಶ್ವಾಮಿತ್ರನ ಮಾಯೆಯಿಂದ ಹುಟ್ಟಿದ ಹಂದಿಯನ್ನು ಬೆಂಬತ್ತಿ ಹರಿಶ್ಚಂದ್ರನು ಆ ಮುನಿಯ ಆಶ್ರಮಕ್ಕೆ ಬರುತ್ತಾನೆ. ಆಗ ಹೊಲತಿಯರು ತಮ್ಮ ಮಧುರವಾದ ಸಂಗೀತದಿಂದ ಅರಸನ ಮನಸ್ಸನ್ನು ಸಂತೋಷಗೊಳಿಸಿ, ಅದಕ್ಕೆ ಕಾಣಿಕೆಯಾಗಿ ಅರಸನ ಶ್ವೇತಛತ್ರವನ್ನು ಬೇಡುತ್ತಾರೆ. ವಿಶ್ವಾಮಿತ್ರನ ಆಜ್ಞೆಯಂತೆ ತಮ್ಮ ಮಾಯದ ಬಲೆಯಲ್ಲಿ ಹರಿಶ್ಚಂದ್ರನನ್ನು ತೊಡಗಿಸಲು ಬಂದ ಮಾಯದಬಲೆಯರು ಅವರು. ಹರಿಶ್ಚಂದ್ರ ಮತ್ತು ಆ "ಗಾನರಾಣಿಯರ" ಉತ್ತರ ಪ್ರತ್ಯುತ್ತರಗಳ ಚಮತ್ಕಾರದಿಂದ ಕೂಡಿದ ಆ ಸಂಭಾಷಣೆಯು ಕನ್ನಡ ಸಾಹಿತ್ಯದಲ್ಲಿಯೇ ಹೆಸರಾದ ರಸಸ್ಥಾನಗಳಲ್ಲಿ ಒಂದಾಗಿದೆ. ಅವರ ಸಂಗೀತಕ್ಕೆ ಮೆಚ್ಚಿ ಮೊದಲು ಅನೇಕ ರತ್ನಾಭರಣಗಳನ್ನು ಕಾಣಿಕೆಯಾಗಿ ಹರಿಶ್ಚಂದ್ರನು ಕೊಡಲು ಅವರು ಅವುಗಳನ್ನು ತಿರಸ್ಕರಿಸಿ, "ಬಡತನದ ಹೊತ್ತು ಆನೆ ದೊರಕಿ ಫಲವೇನು? ನೀರಡಸಿರ್ದ ಹೊತ್ತು ಅಜ್ಯ ದೊರಕಿ ಫಲವೇನು? ಕಡುವಿಸಿಲು ಹೊಡೆದು ಬೆಂಡಾಗಿ ಬೀಳ್ವ ಎಮಗೆ ನೀನೊಲಿದು ಮಣಿದೊಡಿಗೆಗಳನಿತ್ತು ಫಲವೇನು? " ಎಂದು ಪ್ರಶ್ನಿಸುತ್ತಾರೆ, ಕೊನೆಗೆ "ನಿನ್ನ ಮುತ್ತಿನ ಸತ್ತಿಗೆಯನಿತ್ತು ಸಲುಹು, ಭೂಭುಜ" ಎಂದು ಬೇಡುತ್ತಾರೆ. ಅದಕ್ಕೆ ಹರಿಶ್ಚಂದ್ರನು ಒಪ್ಪದಿರಲು ಆ ಹೊಲತಿಯರು–"ನೀನೆಮಗೆ ವಲ್ಲಭನಾಗಿ ಚಿತ್ತದುಮ್ಮಳಿಕೆಯಂ ಕಳೆ" ಎಂಬ ದಿಟ್ಟ ಬಯಕೆಯನ್ನು ಅರಸನೆದುರು ಇಡುತ್ತಾರೆ. ಇದು ಕ್ಷತ್ರಿಯನಾದ ಹರಿಶ್ಚಂದ್ರನ ಕುಲಾಭಿಮಾನವನ್ನು ಅಲ್ಲಾಡಿಸಿ ನೋಡುವ ಪ್ರಯತ್ನವೆಂದು ಕೆಲವು ವಿಮರ್ಶಕರು ಅಭಿಪ್ರಾಯಪಟ್ಟಿದ್ದಾರೆ. ಆದರೆ ರಾಘವಾಂಕನ ಕೃತಿಯ ಮುಖ್ಯ ಉದ್ದೇಶವನ್ನು ಪರೀಕ್ಷಿಸಿದರೆ ಇದು ಕೇವಲ ಕುಲದ ಪ್ರಶ್ನೆಯಾಗಿರದೆ ಹರಿಶ್ಚಂದ್ರನ ಸತ್ಯದ ಒಂದು ಮುಖವೆಂಬ ಮಾತು ಮನವರಿಕೆಯಾಗದಿರದು. ಏಕೆಂದರೆ ಮುಂದೆ ವಿಶ್ವಾಮಿತ್ರನು ಬಂದು "ಎನ್ನಯ ಕುಮಾರಿಯರ ಮದುವೆಯಾಗು ಎಲ್ಲಾ ನಿರೋಧಮಂ ಬಿಡುವೆನು" ಎನ್ನುತ್ತಾನೆ. ವಿಶ್ವಾಮಿತ್ರನಿಗೆ ಹರಿಶ್ಚಂದ್ರನ ಕುಲಾಚಾರವನ್ನು ಕೆಡಿಸುವುದರಿಂದ ಯಾವ ಪ್ರಯೋಜನವೂ ಆಗುವಂತಿಲ್ಲ. ಅವನಿಗೆ ಬೇಕಾದದ್ದು ಹರಿಶ್ಚಂದ್ರನು ಅಸತ್ಯದ ಮಾರ್ಗವನ್ನು ಹಿಡಿದಿದ್ದಾನೆ ಎಂಬುದನ್ನು ತೋರಿಸುವುದು ಮಾತ್ರ. ಆದ್ದರಿಂದ ಹರಿಶ್ಚಂದ್ರನು ಮುನಿಯ ಕೋಪದ ಹೊಲೆತನದಿಂದ ಹುಟ್ಟಿದ ಆ ಹೊಲತಿಯರನ್ನು ಮದುವೆಯಾದರೆ ಸತ್ಯದ ದಾರಿಯಿಂದ ದೂರವಾದಂತೆ "ಹುಸಿಕ"ನಾದಂತೆ! ಎಂದರೆ ಕ್ಷತ್ರಿಯನಾದ ಹರಿಶ್ಚಂದ್ರನು ಆಗಿನ ಸಾಮಾಜಿಕ ರೂಢಿಯಂತೆ ನಡೆಯದೆ, ಹೊಲತಿಯರನ್ನು ಮದುವೆಯಾದರೆ ಅಸತ್ಯವನ್ನು ಅಪ್ಪಿಕೊಂಡಂತಾಗುತ್ತದೆ. ವಿಶ್ವಾಮಿತ್ರನು ಈ ವಿಷಯದಲ್ಲಿ ಇಷ್ಟು ಮಟ್ಟಿಗೆ ಅರಸನನ್ನು ಆಗ್ರಹಪಡಿಸುವುದಕ್ಕೆ ಇದೇ ಕಾರಣವಾಗಿದೆ. ರಾಘವಾಂಕನ ಪ್ರಕಾರ, ಸತ್ಯಕ್ಕೆ ತ್ರಿಕಾಲಾಧಿತವಾದ ಸ್ವರೂಪವಿದ್ದಂತೆ, ಸ್ಥಳ-ಕಾಲಗಳನ್ನು ಅವಲಂಬಿಸಿದ ಎಂದರೆ ಸಾಮಾಜಿಕ-ರೂಢಿ ಸಂಪ್ರದಾಯಗಳ ಸ್ವರೂಪವೂ ಇದೆ. ಮರ್ಯಾದಿತವಾಗಿದ್ದರೂ ಆಯಾ ಕಾಲದ ರೂಢಿ-ಸಂಪ್ರದಾಯಗಳು ಸತ್ಯದ ಒಂದು ಮಹತ್ವದ ಮುಖವಾಗಿವೆ ಎಂಬುದೇ ಕವಿಯ ಆಶಯ.

ಹರಿಶ್ಚಂದ್ರನ ಸತ್ಯದ ಪರೀಕ್ಷೆ ಇನ್ನಿಷ್ಟು ತೀವ್ರವಾಗಿ ನಡೆಯುವುದು ರಾಣಿ ಚಂದ್ರಮತಿಯು ರೋಹಿತಾಶ್ವನ ಶವವನ್ನು ಸಂಸ್ಕಾರ ಮಾಡಲು ಸ್ಮಶಾನಕ್ಕೆ ಬಂದಾಗ. ಈಗ ಹರಿಶ್ಚಂದ್ರನು ತನ್ನನ್ನು ವೀರ

ಬಾಹುಕನಿಗೆ ಮಾರಿಕೊಂಡು ಸ್ಮಶಾನದ ಕಾವಲುಗಾರನಾಗಿದ್ದಾನೆ. ಮಧ್ಯರಾತ್ರಿಯಲ್ಲಿ ಚಂದ್ರಮತಿಯು ಏಕಾಕಿಯಾಗಿ ಮಗನ ಶವವನ್ನು ತೆಗೆದುಕೊಂಡು ಸ್ಮಶಾನಕ್ಕೆ ಬರುತ್ತಾಳೆ. ಇದೊಂದು ರುದ್ರರಮಣೀಯವಾದ, ಕರುಣರಸಪರಿಪೂರ್ಣವಾದ ದುರಂತ ಸನ್ನಿವೇಶ. ಈ ಸನ್ನಿವೇಶದಲ್ಲಿ ಧರ್ಮವೂ ಕಾವ್ಯಧರ್ಮವೂ ಸೊಗಸಾಗಿ ಬೆರೆತಿವೆ. ಇಂಥ ಸನ್ನಿವೇಶದಲ್ಲಿ ಸಿಕ್ಕಾಗ ಹರಿಶ್ಚಂದ್ರನ ಘನತೆ, ಅವನ ಸತ್ಯದ ಹಿರಿಮೆಗಳು ಬೆಳಕಿಗೆ ಬರುತ್ತವೆ. ಹರಿಶ್ಚಂದ್ರ-ಚಂದ್ರಮತಿಯರಿಗೆ ಪರಸ್ಪರ ತಾವು ಯಾರು ಎಂಬುದು ಮೊದಲು ಕೆಲ ಕಾಲ ತಿಳಿಯುವುದಿಲ್ಲ. ಆದರೆ ವಾಚಕರಿಗೆ ಈ ವಿಷಯ ಗೊತ್ತಿರುವುದರಿಂದ ಇಡಿಯ ದೃಶ್ಯವು ಅತ್ಯಂತ ನಾಟಕೀಯವೂ, ಹೃದಯವಿದ್ರಾವಕವೂ ಆಗಿದೆ. ತನ್ನ ಒಡೆಯನಾದ ವೀರಬಾಹುಕನ ಆಜ್ಞೆಯಂತೆ ಹರಿಶ್ಚಂದ್ರನು, ಅಗ್ನಿಸಂಸ್ಕಾರಕ್ಕೆಂದು ಅಲ್ಲಿ ತಂದ ಶವಶಿರದ ಅಕ್ಕಿಯನ್ನೂ, ಬಟ್ಟೆಯನ್ನೂ ತೆಗೆದುಕೊಳ್ಳುವುದು ಹಾಗೂ ಸ್ಮಶಾನದ ಬಾಡಿಗೆಯೆಂದು "ಹಾಗ" (ಒಂದು ಸಣ್ಣ ಬೆಲೆಯ ನಾಣ್ಯ)ವನ್ನು ತೆಗೆದುಕೊಳ್ಳಬೇಕು. ತನ್ನ ಪತ್ನಿಯು ತನ್ನ ಏಕೈಕ ಪುತ್ರನ ಶವವನ್ನು ಸುಡುವುದಕ್ಕೆ ತಂದಾಗಲೂ ಹರಿಶ್ಚಂದ್ರನು ಸತ್ಯನಿಷ್ಠುರನಾಗಿ–"ತೆರೆಯನಿಕ್ಕದೆ ಸುಡಲ್‌ಬಾರದು ಉಳ್ಳಡೆ ಕೊಡು ಇಲ್ಲದೊಡೆ ಸುಡುವ ಗೊಡವೆ ಬೇಡ" ಎಂದು ಖಂಡಿತವಾದ ಮಾತನ್ನು ನುಡಿಯುತ್ತಾನೆ. ಈ ಪ್ರಸಂಗದಲ್ಲಿ ಕೆಲವು ಅಂಶಗಳು ಗಮನಾರ್ಹವಾಗಿದೆ. ರಾತ್ರಿಯಲ್ಲಿ ತನ್ನ ಮಗನ ಶವವನ್ನು ಸುಡುವುದಕ್ಕೆ ಇಂಥ ಒಂದು ಚಿಕ್ಕ ನಾಣ್ಯದ ಬಾಡಿಗೆಯನ್ನು ತೆಗೆದುಕೊಳ್ಳದಿದ್ದರೆ ಅದೇನು ಮಹಾಪರಾಧವೇ? ಇತ್ಯಾದಿ "ವ್ಯಾವಹಾರಿಕವಾದ" ಮಾತುಗಳಾವುವೂ ಹರಿಶ್ಚಂದ್ರನ ಮನಸ್ಸಿನಲ್ಲಿ ಬರಲಿಲ್ಲ. ಕಠೋರ ಸತ್ಯವು ಹರಿಶ್ಚಂದ್ರನ ಮನಸ್ಸಿನಲ್ಲಿ ಬೇರೂರಿ ನೆಲೆಯಾಗಿ ನಿಂತಿದೆ. ಆದ್ದರಿಂದ ಯಾವ ರಿಯಾಯತಿಯೂ ಇಲ್ಲಿ ಸ್ವಂತ ಮಗನ ಶವಸಂಸ್ಕಾರಕ್ಕೂ ದೊರೆಯುವಂತಿಲ್ಲ. ಸತ್ಯದ ಸ್ವರೂಪವನ್ನೂ, ಘನತೆ—ಹಿರಿಮೆಗಳನ್ನೂ ಬಿಂಬಿಸಿ ತೋರಿಸಲು ಇಲ್ಲಿ ಸ್ಮಶಾನದ ಬಾಡಿಗೆಯು ಅತ್ಯಂತ ಅಲ್ಪವಾದ ಒಂದು ನಾಣ್ಯ(ಹಾಗ)ವಾಗಿದೆ. ಆದ್ದರಿಂದ ಇದು ಹೆಚ್ಚು ತಾತ್ತ್ವಿಕ ಪ್ರಶ್ನೆಯಾಗಿದೆ. ಸತ್ಯವು ಎಂದೂ ಗಾತ್ರದಲ್ಲಿ ಅಳೆಯಲ್ಪಡಲಾರದು. ಅದು ಸದಾ ಗುಣದಲ್ಲಿ ಅಳೆಯಲ್ಪಡುತ್ತದೆ. ಆದ್ದರಿಂದ ಹರಿಶ್ಚಂದ್ರನು ಪಡಬಾರದ ಕಷ್ಟಗಳನ್ನು ಅನುಭವಿಸಿ ವಿಶ್ವಾಮಿತ್ರನಿಗೆ ಕೊಡಬೇಕಾದ ದಕ್ಷಿಣೆಯನ್ನೂ ಕೊಡುವುದರಲ್ಲಿ ತಪ್ಪುವದಿಲ್ಲ. ಅದರಂತೆಯೇ ತನ್ನ ಹೆಂಡತಿಯಿಂದ ಕೂಡ "ಮಸಣವಾಡಗೆಯ ಹಾಗ"ವನ್ನು ಪಡೆಯುವುದರಲ್ಲಿ ತಪ್ಪುವುದಿಲ್ಲ. ದಕ್ಷಿಣೆಯ ಗಾತ್ರವೋ, ರಾಘವಾಂಕನೇ ಹೇಳುವಂತೆ– "ಪಿರಿಯ ಕರಿಯಂ ಮೆಟ್ಟಿ ಅವಡೆಯಂ ಮಿಡಿದಡೆ ಎನಿತುದ್ದಕ್ಕೆ ಹೋಹುದು. ಅದರ ಸರಿಯೆನಿಸಿ ಸುರಿದ ಹೊಸ ಹೊನ್ನ ರಾಶಿ!" ತದ್ವಿರುದ್ಧವಾಗಿ ಸ್ಮಶಾನದ ಬಾಡಿಗೆಯೋ ಒಂದು ಚಿಕ್ಕ ನಾಣ್ಯ! ವ್ಯವಹಾರದಲ್ಲಿ ಇವೆರಡರಲ್ಲಿ ಅಜಗಜಾಂತರವಿದ್ದರೂ ತತ್ತ್ವತಃ ಇವೆರಡೂ ಒಂದೇ. ಆದ್ದರಿಂದಲೇ ಹರಿಶ್ಚಂದ್ರನು ತನ್ನ ಮಡದಿಗೆ ನಿಷ್ಠುರದ ಮಾತುಗಳನ್ನಾಡಿ ಬಾಡಿಗೆಯ ಆ ನಾಣ್ಯದನ್ನು ಭಿಕ್ಷೆ–ಬೇಡಿಯೋ, ಸಾಲವಾಗಿ ಪಡೆಯಲೋ ನಗರಕ್ಕೆ ಕಳಿಸುತ್ತಾನೆ. ಇಲ್ಲಿ ಸತ್ಯದ ತಾತ್ತ್ವಿಕ ಸ್ವರೂಪವು ವರ್ಣಿತವಾಗಿರುವುದಲ್ಲದೆ ಹರಿಶ್ಚಂದ್ರನ ಕರ್ತವ್ಯನಿಷ್ಠೆಯು ವ್ಯಕ್ತವಾಗಿದೆ. ಹರಿಶ್ಚಂದ್ರನನ್ನು ಮಾರಿಕೊಂಡ ತೆಗೆದುಕೊಂಡ ಹೊಲೆಯ ವೀರಬಾಹುಕನಿಗೆ ಕೂಡ ಅರಸನ ಆಚರಣೆಯು ವಿಚಿತ್ರವೆನಿಸುತ್ತದೆ. ಅಂತೆಯೇ ಅವನು ಕೇಳುತ್ತಾನೆ:

"ಎಲವೋ, ನೀ ದಿಟ ರಾಯನಾದೊಡೆ ಅರಸನೆ ಬಂದು|  
ನೆಲದಲ್ಲಿ ಕುಳ್ಳಿರ್ಪೆ, ಸತ್ಕುಲಜನಾದೊಡಂ  
ಹೊಲೆಯನಾದೆನ್ನ ಕಾಲಂ ಹೊರುವೆ,  
ಮುನಿಮತೋಚಿತ ಶಿವಾರ್ಚಕನಾದಡೆ||  
ಹೊಲಸಿನಟ್ಟುಳಿಗೆ ಕೊಕ್ಕರಿಸದಿಹೆ, ರಾಜ್ಯಸಿರಿ  
ತೊಲಗಿದಡೆ ಪೂರ್ವಗುಣವಳಿವುದೇ?"

ಈ ಪ್ರಶ್ನೆಗೆ ಹರಿಶ್ಚಂದ್ರನ ಉತ್ತರವು ಅಷ್ಟೇ ಸಮಾಧಾನಕರವಾಗಿದೆ

"ಪಸುವನಳಿ, ಹಾರುವನನಿರಿ, ಮಾತೆಪಿತರ ಬಾ-|  
–ಧಿಸು, ಸುತನ ತಿವಿ, ಸತಿಯ ಕೊಲು,  
ಮಾರಿಗೊರೆನಬ್ಬು

## ನಿದ್ದೆ–ಬುದ್ಧಿ

ಬುದ್ಧಿವಂತಗೊ ನಿದ್ದೆ, ನಿದ್ದೆಗಾದರೊ ಬುದ್ಧಿ —  
ಇಲ್ಲೆಂಬ ಜಾಣನುಡಿ ಒಪ್ಪಿಕೊಳುವೆ;  
ವರುಷದಲಿ ಮೂರ್ನಾಲ್ಕು ಮಾಸಗೊರಕೆಯ ಹೊಡೆಯು-  
ವಂಥ ಪ್ರೊಫೆಸರ ಬಗ್ಗೆ ಏನೆನ್ನುವೆ

— ಎಂ. ಅಕಬರ ಅಲಿ

ವಿಷವ ಕುಡಿ, ಹಾವ ಹಿಡಿ, ಹುಲಿಗೆ ಮಲೆ,
ವಳ್ಳುರಿಯೊಳಡಗು ಹೋಗೆಂದೊಡೆಯನು||
ಬೆಸಸಿದಡೆ ನಾನಾರೆನೆನಬಾರದು ಸೆಡೆದನಾಡೆಡೆ
ಕೊಟ್ಟ

ಬೆಸನ ನಡೆಸುವೆನೆಂಬ ನುಡಿ ಸಡಿಲವಾಗದೇ?"
ಅರ್ಥಾತ್ ಸೇವಕನಿಗೆ ಒಡೆಯನ ಆಜ್ಞಾಪಾಲ ವೆಯೇ ಕರ್ತವ್ಯ, ಅದೇ ಪರಮಸತ್ಯ. ಹೀಗೆ ಅರಸನಾಗಿದ್ದಾಗ ಹರಿಶ್ಚಂದ್ರನು ತನ್ನ ಕರ್ತವ್ಯವನ್ನು ಸರಿಯಾಗಿ ನಿರ್ವಹಿಸಿದನು. ಹೊಲೆಯನಿಗೆ ಆಳಾಗಿ ಸುಡುಗಾಡ ಕಾಯುವಾಗಲೂ ಅವನು ತನ್ನ ಕರ್ತವ್ಯ ದಲ್ಲಿ ಚ್ಯುತನಾಗಲಿಲ್ಲವೆಂಬುದನ್ನು ಸೂಕ್ಷ್ಮವಾಗಿ ರಾಘವಾಂಕನು ಚಿತ್ರಿಸಿದ್ದಾನೆ. ಇಲ್ಲಿ ಸತ್ಯದ ಮತ್ತೊಂದು ಮುಖದ ಚಿತ್ರವಿದೆ: ಸತ್ಯವೆಂದರೆ ಕರ್ತವ್ಯನಿಷ್ಠೆ.

ಸತ್ಯವು ಒಂದೇ ಆಗಿದ್ದರೂ ವ್ಯವಹಾರದಲ್ಲಿ ಸತ್ಯದ ತಾರತಮ್ಯ ಭಾವವು ಕಂಡು ಬರುತ್ತದೆ. ಅಂಥ ಪರಿಸ್ಥಿತಿಯಲ್ಲಿ ಯಾವುದು ಸತ್ಯ? — ಈ ಜಟಿಲ ಸಮಸ್ಯೆಯ ಸೂಕ್ಷ್ಮ ನಿರೂಪಣೆಯೂ "ಹರಿಶ್ಚಂದ್ರ ಕಾವ್ಯ"ದಲ್ಲಿ ಬಂದಿದೆ. ಉದಾಹರಣೆಗೆ ಹರಿಶ್ಚಂದ್ರನು ಕ್ಷತ್ರಿಯ ಕುಲದವನು; ಎಂದರೆ ಹಿಂದಿನ ಕಾಲದ ಕಲ್ಪನೆಯ ಪ್ರಕಾರ ಉಚ್ಚ ಕುಲದವನು. ಇಂಥವನು ವೀರಬಾಹುಕನೆಂಬ ಹೊಲೆಯನಿಗೆ ಆಳಾಗಿ, ಸ್ಮಶಾನ ಕಾಯ್ದು, ಶವಶಿರದಕ್ಕಿಯನ್ನು ಉಂಡು ಜೀವಿಸಿ ಕುಲಾಚಾರವನ್ನು ಮೀರಿದ್ದರಿಂದ ಅಧರ್ಮದ ಜೀವನ ವಾಗಲಿಲ್ಲವೇ? ಈ ಸಂದೇಹವು ಸದಾ ಹರಿಶ್ಚಂದ್ರ ನನ್ನೂ ಕಾಡುತ್ತಿತ್ತು; ಕೊನೆಗೆ ವಿಶ್ವೇಶ್ವರನು ಪ್ರಕಟ ನಾದಾಗ ಹರಿಶ್ಚಂದ್ರನು ತನ್ನ ಮನದ ಸಂದೇಹ ವನ್ನು ವ್ಯಕ್ತಪಡಿಸುತ್ತಾನೆ:

"ನೆನೆದು ಚಾಂಡಾಲ ಕಿಂಕರನಾಗಿ ಹೊಲೆವೇಷ|
ವನು ಹೊತ್ತು ಸುಡುಗಾಡ ಕಾದು ಶವಶಿರದಕ್ಕಿ|
ಯನು ಹೇಸದುಂಡು ಜೀವಿಸುವ ವರಪುತ್ರ
ನಳಿದುದನು ಕಣ್ಣಾರೆ ಕಂಡು||

ಘನ ಪತಿವ್ರತೆಯಪ್ಪ ನಿಜ ಸತಿಯ ಕೊಂದ ನೀ-|
ಚನ ಮೂರ್ಖನಾನೆನ್ನ ಠಾವಿಂಗಿದೇಕೆ ಪಾ-|
ವನ ಮೂರ್ತಿ ನೀವು ಬಿಜಯಂಗೆಯ್ದಿರಿ?"

ಅರ್ಥಾತ್ ಕುಲಧರ್ಮವನ್ನು ಬಿಟ್ಟದ್ದು ಅಸತ್ಯ ವಾಗಲಿಲ್ಲವೆ? ಅಧರ್ಮವಾಗಲಿಲ್ಲವೆ?- ಎಂಬುದು ಹರಿಶ್ಚಂದ್ರನ ಮಾರ್ಮಿಕ ಪ್ರಶ್ನೆ. (ಪ್ರಾಚೀನ ಕಾಲದಲ್ಲಿ ಕುಲಾಚಾರಕ್ಕೆ ತುಂಬಾ ಮಹತ್ವವಿದ್ದಿತು ಎಂಬು ದನ್ನು ಮರೆಯುವಂತಿಲ್ಲ) ಈ ಪ್ರಶ್ನೆಗೆ ಈಶ್ವರನು ಕೊಡುವ ಉತ್ತರವು ಸತ್ಯದ ಸ್ವರೂಪವನ್ನೂ, ಮಹಿಮೆಯನ್ನೂ ಚೆನ್ನಾಗಿ ಬಿಚ್ಚಿಸುತ್ತದೆ.

"ಘನ ಸತ್ಯವೇ ಜೀವವೆಂದಿರ್ದ ನಿನ್ನ ಹೊಲೆ-|
ಯನ ಸೇವೆ ಗುರುಸೇವೆ,ಹೊತ್ತ ಹೊಲೆವೇಷ ಪಾ-|
ವನ ಪುಣ್ಯವೇಷ, ಸುಡಗಾಡ ರಕ್ಷಿಸುವಿರವು
ತಾ ಯಜ್ಞ ರಕ್ಷೆಯಿರವು||"

ಎಂದರೆ ಘನ ಸತ್ಯಕ್ಕಾಗಿ ಕೇವಲ ಸಾಮಾಜಿಕ ವಾದ (ಎಂದರೆ ದೇಶ ಕಾಲೋಚಿತವಾದ) ನಿಯಮ- ನಿರ್ಬಂಧಗಳನ್ನು ಮೀರಬಹುದು. ಪರಮ ಸತ್ಯಕ್ಕಾಗಿ ತ್ರಿಕಾಲಾಬಾಧಿತವಾದ ಸತ್ಯಕ್ಕಾಗಿ, ಒಂದು ಕಾಲದಲ್ಲಿ ಮಾತ್ರ ಸಮಾಜವು ಒಪ್ಪಿದ ಸತ್ಯವನ್ನು ಮೀರ ಬಹುದು ಎಂಬುದು ಇಲ್ಲಿ ಕವಿಯ ಅಭಿಪ್ರಾಯ ವಾಗಿದೆ.

ಸತ್ಯದ ಆರಾಧನೆಯಿಂದ ಓರ್ವ ವ್ಯಕ್ತಿಯು ಸತ್ಕುಲಜನಾಗುತ್ತಾನೆ. ಅಸತ್ಯದ ಮಾರ್ಗವನ್ನು ಹಿಡಿ ದವನು ಹೀನ ಕುಲಜನಾಗುತ್ತಾನೆ. ಈ ಮಾತನ್ನು ರಾಘವಾಂಕನು ವಿಶ್ವೇಶ್ವರನ ಮುಖದಿಂದ ಸ್ಪಷ್ಟಪಡಿ ಸಿದ್ದಾನೆ :

"ಅತಿ ಹುಸಿವ ಯತಿ ಹೊಲೆಯ,
ಹುಸಿಯದಿಹ ಹೊಲೆಯನು-|
ನ್ನತ ಯತಿವರನು..."

ಇದಲ್ಲದೆ ಸತ್ಯದ ಸಾಮಾನ್ಯ ಕಲ್ಪನೆಯನ್ನೂ ರಾಘವಾಂಕ ಕವಿಯು ತುಂಬಾ ಉಜ್ವಲವಾಗಿ ಚಿತ್ರಿಸಿದ್ದಾನೆ, "ನುಡಿದಂತೆ ನಡೆ" ಎಂಬುದೇ ಹೆಚ್ಚಾಗಿ ವ್ಯವಹಾರದಲ್ಲಿ ಸತ್ಯದ ಸ್ವರೂಪವಾಗಿದೆ. ಓರ್ವ ವ್ಯಕ್ತಿಯು ತಿಳಿದು ನುಡಿಯಲಿ, ಅಥವಾ ತಪ್ಪಿ ನುಡಿ ಯಲಿ,—ಆ ಮಾತನ್ನು ಕೃತಿಯಲ್ಲಿ ತಂದು ತೋರಿ ಸಲೇ ಬೇಕು. ಆವಾಗಲೇ ಅದು ತ್ರಿಕರಣಪೂರ್ವಕ ವಾದ ಸತ್ಯದ ಆರಾಧನೆಯಾಗುತ್ತದೆ. ಉದಾಹರಣೆಗೆ ವಿಶ್ವಾಮಿತ್ರನು ತನ್ನ ಮಾಯೆಯಿಂದ ಹುಟ್ಟಿದ ಮಕ್ಕ ಳನ್ನು ಮದುವೆಯಾಗು ಎಂದು ಹರಿಶ್ಚಂದ್ರನನ್ನು ಮತ್ತೆ ಮತ್ತೆ ಒತ್ತಾಯ ಮಾಡಲು ಆಗ ಅವನು — "ಎನ್ನ ಸರ್ವ ರಾಜ್ಯವನಾದಡಂ ನಿಮಗೆ ಕೊಡಹಡೆವೆನ್ನೆಸಲ್ಲದೆ ಈಯೊಂದು ತೇಜಮಂ ಕೊಡೆನು" ಎಂದು ನುಡಿಯುತ್ತಾನೆ. ಆಗ ವಿಶ್ವಾಮಿತ್ರನು ಅವಸರದಿಂದ ಈ ಸಂಧಿಯನ್ನು ಸಾಧಿಸಿ —"ತಥಾಸ್ತು: ಪಡೆದೆಂ, ಪಡೆದೆಂ! ದಾನಿಲಲಾಮ, ಸತ್ಯಾವತಂಸ" ಎಂದು ಬಿಡದೆ ಹೊಗಳುತ್ತಾನೆ. ಮುಂದೆ ಅರಸನು ರಾಜ್ಯವನ್ನೆಲ್ಲ ಸಮರ್ಪಿಸಿದ ಬಳಿಕ ವಿಶ್ವಾಮಿತ್ರನು—"ಬಹುಸುವರ್ಣಯಾಗವ ಮಾಡಿ ದಂದು ನೀನೆನಗೆ ದಕ್ಷಿಣೆಗಿತ್ತ ಧನವನು ಈವುದು" ಎನ್ನುತ್ತಾನೆ. ಆಗ ಹರಿಶ್ಚಂದ್ರನು—"ಹೇರನು ಒಪ್ಪಿಸಿ ದವಂಗೆಲ್ಲಿಯದು ಸುಂಕ?" ಎಂದು ಪ್ರಶ್ನಿಸುತ್ತಾನೆ. ಅದಕ್ಕೆ ಮುನಿಯು—"ಧಾರೆಯಂ ಕೊಡು ವಾಗ ದಕ್ಷಿಣೆಯ ಧನವು ಅದರೊಳದೆ ಎಂದು ನುಡಿ ದುದು ಉಂಟೆ?" ಎಂದು ಕೇಳುತ್ತಾನೆ. ಹೀಗಾಗಿ ಕೇವಲ ತಪ್ಪಿ ನುಡಿದಿದ್ದರೂ ಹರಿಶ್ಚಂದ್ರನು ತನ್ನ ಮಾತನ್ನು ಸತ್ಯವಾಗಿಸುವುದಕ್ಕಾಗಿ ಮುಂದೆ ಕಾಶಿಗೆ ಹೋಗಿ ಪತ್ನಿ-ಪುತ್ರರನ್ನೂ ತನ್ನನ್ನೂ ಮಾರಿಕೊಂಡು ಮುನಿಯ ದಕ್ಷಿಣೆಯ ಹಣವನ್ನು ಮುಟ್ಟಿಸಬೇಕಾಗುತ್ತದೆ.

ಇನ್ನೊಂದು ಪ್ರಸಂಗದಲ್ಲಿಯೂ ಹೀಗೇ ನಡೆಯುತ್ತದೆ. ಹರಿಶ್ಚಂದ್ರನು ತನ್ನನ್ನು ಮಾರಿಕೊಳ್ಳುವಾಗ ಕೊಂಡುಕೊಳ್ಳಲು ಜಾತಿಯಿಂದ ಹೊಲೆಯನಾದ ವೀರಬಾಹುಕನು ಮುಂದೆ ಬರುತ್ತಾನೆ. ಅದನ್ನು ಕಂಡು ಅರಸನಿಗೆ ತನ್ನ ಕುಲಾಭಿಮಾನವು ಜಾಗೃತ ವಾಗಿ ಅವನಿಗೆ ಕೋಪ ಬರುತ್ತದೆ. ಆಗ ವೀರಬಾಹು ಕನು-"ಹೊನ್ನುಳ್ಳಧನಿಕರು ಆರಾದೊಡಂ ಕೊಂಬವರ ಬನ್ನಿ ಎನ್ನಂ ಮಾರುಗುಡುವೆಂ ಎಂದೆವೆ, ದಿಟಂ ನನ್ನಿಯುಳ್ಳವನೆಂದು ಬಗೆದು ಬೇಡಿದೆಂ; ಉತ್ತಮ ದ್ವಿಜರು ಕೊಂಬುದು ಎಂದು ನೀವಾಡಿದುಂಟೇ ಹೇಳು ಭೂಪಾಲ" ಎನ್ನುತ್ತಾನೆ. ಮುಂದುವರಿದು ಅವನು "ನಿನ್ನ ನುಡಿ ಎನಗೆ ಹಗೆಯಾಯ್ತು: ಈ ಹೊಲೆ ಹುಸಿಯ ಹೊರುವವಂ ಹೊಲೆಯನಲ್ಲದೆ ಬಳಿಕ್ಕಾರು ?" ಎಂದು ಕೇಳುತ್ತಾನೆ. ಆಗ ಅರಸನು ತಪ್ಪಿ ನುಡಿದುದಕ್ಕೆ ಮಾದಿಗನಿಗೆ ಆಳಾಗಬೇಕಾಗುತ್ತದೆ. ಈ ಪ್ರಸಂಗದಲ್ಲಿ ಕವಿಯು ಮತ್ತೊಮ್ಮೆ, "ವ್ಯಕ್ತಿಯು ಜಾತಿಯಿಂದ ಹೊಲೆಯನಾಗುವುದಿಲ್ಲ; ಆದರೆ ಹುಸಿಯಿಂದ ಎಂದರೆ ಅಸತ್ಯದಿಂದ ಎಂಥ ಉಚ್ಚಕುಲದವನು ಕೂಡ ಹೊಲೆಯನಾಗುತ್ತಾನೆ" ಎಂಬ ಸನಾತನ ಸತ್ಯವನ್ನು ಸಾರಿದ್ದಾನೆ.

ಹರಿಶ್ಚಂದ್ರನ ಸತ್ಯಸಂಧತೆಯು ಅವನ ಅರ್ಧಾಂಗಿ ಯಾದ ಚಂದ್ರಮತಿಗೂ ಸೋಂಕದೆ ಹೋಗಲಿಲ್ಲ. ಅವನ ವ್ಯಕ್ತಿತ್ವದ ಪ್ರಭಾವವು ಅವಳ ಮೇಲೆ ಆಗದೆ ಹೋಗಬಹುದೆ? ರಾಜ್ಯವನ್ನು ವಿಶ್ವಾಮಿತ್ರನಿಗೆ ಸಮರ್ಪಿಸಿ ಅವರು ಕಾಶಿಗೆ ಹೊರಟಾಗ ದಾರಿಯಲ್ಲಿ ಮುನಿಯ ಮಾಯೆಯಿಂದ ಕಾಡುಕಿಚ್ಚು ಹೊತ್ತಿಕೊಂಡು ಹರಿಶ್ಚಂದ್ರ-ಚಂದ್ರಮತಿ ಮೊದಲಾದವರನ್ನು ಮುತ್ತಿಬಿಡುತ್ತದೆ. ಆಗ ಚಂದ್ರಮತಿಯು ತನ್ನ ಪಾತಿವ್ರತ್ಯವನ್ನು ಪಣಕ್ಕೆ ಹಚ್ಚಿ, ತಾನು ಪತಿ ವ್ರತೆಯಿದ್ದುದು ನಿಜವಾದರೆ ಈ ಕಾಡುಕಿಚ್ಚು ನಂದಿ ಹೋಗಲಿ ಎಂದು ಹೇಳುತ್ತ ಆ ಉರಿಯಲ್ಲಿ ಧುಮುಕುತ್ತಾಳೆ. ಆಗ ಅವಳ ಸತ್ವದೆದುರು ಆ ಮಾಯೆಯ ಕಾಡುಕಿಚ್ಚು ಆರಿಹೋಗುತ್ತದೆ. ಆಗ ಕವಿಯು— "ಉತ್ತಮರ ಮುಂದಾವ ಶಕ್ತಿ ರಲಾಪುದು ?" ಎಂದು ಉದ್ಗಾರ ತೆಗೆದಿದ್ದಾನೆ. ಎಂದರೆ ಸತಿಯಾದ ಚಂದ್ರಮತಿಗೆ ಪಾತಿವ್ರತ್ಯವು ಸತ್ಯದ ಒಂದು ಮಹತ್ವದ ಮುಖವಾಗಿದೆ ಎಂಬುದನ್ನು ರಾಘವಾಂಕನು ಇಲ್ಲಿ ಸೂಚಿಸಿದ್ದಾನೆ.

ಹೀಗೆ ಕವಿಯು "ಹರಿಶ್ಚಂದ್ರಕಾವ್ಯ"ದಲ್ಲಿ ಸತ್ಯದ ನಾನಾಮುಖಗಳನ್ನು ಚಿತ್ರಿಸಿದ್ದಾನೆ. ಸತ್ಯವೆಂದರೆ ತ್ರಿಕರಣಪೂರ್ವಕವಾದ ಶುದ್ಧಾಚರಣೆ, ಆಜ್ಞಾಪಾಲನೆ ಕರ್ತವ್ಯಪಾಲನೆ, ಪಾತಿವ್ರತ್ಯ- ಹೀಗೆ ಅನೇಕ ಸದ್ಗುಣಗಳ ಸಮುದಾಯ. ಋತ ಅಥವಾ ಧರ್ಮಕ್ಕೆ ಯಾವ ವ್ಯಾಪಕವಾದ ಅರ್ಥವ್ಯಾಪ್ತಿ ಇದೆಯೋ ರಾಘವಾಂಕನ ದೃಷ್ಟಿಯಲ್ಲಿ ಸತ್ಯಕ್ಕೂ ಅಷ್ಟೇ ವ್ಯಾಪಕತೆಯಿದೆ. ಇಂಥ ಸತ್ಯವನ್ನು ಕವಿಯು ಸರಸವಾಗಿ ಹೇಳಿದ್ದಾನೆ ಕಾಂತಾಸಮ್ಮಿತಿಯಿಂದ ಚಿತ್ರಿಸಿದ್ದಾನೆ. ಧರ್ಮವನ್ನೂ, ಕಾವ್ಯಧರ್ಮವನ್ನೂ ಒಂದುಗೂಡಿಸಿ ಕಾವ್ಯವನ್ನು ರಚಿಸಿದ್ದೇನೆಂದು ಪಂಪನು ಹೇಳಿದ್ದಾನೆ. ಅದೇ ರೀತಿಯಲ್ಲಿ ಮಹಾಕವಿ ರಾಘವಾಂಕನು ಸತ್ಯವನ್ನು ಸೌಂದರ್ಯಯುಕ್ತವಾಗಿ ಹೇಳಿ ಭಾರತೀಯ ಮಹಾಕವಿಗಳ ಪಂಕ್ತಿಯಲ್ಲಿ ಅಗ್ರಗಣ್ಯನಾಗಿದ್ದಾನೆಂದು ಹೇಳಿದರೆ ಯಾವ ಅತಿಶಯೋಕ್ತಿಯೂ ಇಲ್ಲ.





# ವಧುವಲ್ಲರಿ

← ಪಂಚನದಿಗಳ ನಾಡು ಪಂಜಾಬಿನ ವಧು

ನಸುಕಿನಲ್ಲಿ 'ಚೂಡಾ' ಸಮಾರಂಭದ ನಂತರ ಬಾರಾತ ಹೊರಟುಬಂದು ಸಮಾರಂಭದ ಸವಿ ನೆನಪಿಗಾಗಿ ಪ್ರಸಿದ್ಧ ಭಾಂಗಡಾ ನೃತ್ಯ ನಡೆಯುತ್ತದೆ.

ಲಕ್ನವೀ ಮುಸ್ಲಿಮ್ ವಧು →

ಇಷ್ಟೊಂದು ವೈಭವದಿಂದ ಕನ್ಯೆಯನ್ನು ಸಿಂಗರಿಸುವುದು ಬೇರೆಡೆಗಳಲ್ಲಿ ಅಪರೂಪ. ಲಖನೌದ ಹೆಸರಾಂತ ಕಸೂತಿ ಈ ವಧುವಿನ ಚೆಲುವಿನ ಚಿನ್ನಕ್ಕೆ ಕುಂದಣವಿಟ್ಟಂತಿರುತ್ತದೆ.



## ನೃತ್ಯವಿಲಾಸಿನಿ ಮಣಿಪುರಿ ವಧು →

ಶ್ರೀಕೃಷ್ಣ ಸಂಕೀರ್ತನವೇ ಮಣಿಪುರಿ ವಿವಾಹಕ್ಕೆ ಓಂಕಾರ. ಅದರ ಎಳೆಯನ್ನರಸಿಕೊಂಡೇ ಬರುವುದು ಪ್ರಖ್ಯಾತ ಮಣಿಪುರಿ ನೃತ್ಯ. ವಧೂವರರಿಗೆ ·ಗೌರವ ಪುರಸ್ಸರ ಪುಷ್ಪವರ್ಷಿಸಿದ ನಂತರ ಪರಸ್ಪರ ಹೂಹಾರ ತೊಡಿಸಿದಾಗಲೇ ವಿವಾಹಬಂಧನ.





## ← ರಾಜಸ್ತಾನದ ಮಾರವಾಡಿ ವಧು

'ಗಢಬಂಧನ' ಸಮಾರಂಭದ ನಂತರ ತವರ್ಮನೆಯ ಹೊಸಲು ದಾಟಿ ನವಗೃಹ ಪ್ರವೇಶಿಸುತ್ತಾಳೆ. ಅಗ ಅವಳ ಗೌರವಾರ್ಥ ಅವಳ ಗೆಳತಿಯರು 'ಘುಮಾರ್' ನೃತ್ಯ ಮಾಡುತ್ತಾರೆ.



← ಯಾದವರ ನಾಡು ಸೌರಾಷ್ಟ್ರದ ವಧು

ಅವಳ ಮೇಲೆ ಕೇಶರ ಸಿಂಪಡಿಸಿ 'ಮಣೇಕ್ ಸ್ತಂಭ' ನಿಲ್ಲಿಸುವುದರೊಂದಿಗೆ ಅವಳ ವಿವಾಹ ದಲ್ಲಿ 'ಫೆರಾ' ಹಾಗು 'ಸಪ್ತಪದಿ'ಗಳಿಗೆ ತುಂಬ ಮಹತ್ವ. ಆದರೆ ಸಮಾರಂಭಕ್ಕೆ ಕಳಸವಿಡು ವಂತಿರುವುದು ಸಾಂಪ್ರದಾಯಿಕ 'ರಾಸನೃತ್ಯ'.

ಹಾಲು ಜೇನಿನ ನಾಡು ಕೊಡಗಿನ ವಧು →

ಇವಳ ವಿವಾಹ ಇನ್ನೆಲ್ಲಿಗಿಂತಲೂ ಬೇರೆ ಯಾಗಿದೆ ಮಾತ್ರವಲ್ಲ, ವೈಶಿಷ್ಟ್ಯಪೂರ್ಣವೂ ಆಗಿದೆ. ಇವಳ ವಿವಾಹಕ್ಕೆ; ಪುರೋಹಿತನ ಅವಶ್ಯಕತೆಯಿಲ್ಲ, ಹಿರಿಯರ ಸಮ್ಮತಿ ಸಾಕು.



## ವಂಗ ವಧು →

ವಂಗನಾಡು ಬಂಗಾಲ. ಇವಳಿಗೆ ವರನ ಆಗಮನವನ್ನು ತಿಳಿಸುವುದು ಶಂಖಘೋಷ. ಇವಳ ತಾಯಿ 'ಬರನ್' ಪೂಜೆ ನೆರವೇರಿಸಿದ ನಂತರ 'ಶುಭದೃಷ್ಟಿ' ನಡೆಯಲೇಬೇಕಾದ ಕಾರ್ಯಕ್ರಮ. ರಾತ್ರಿ 'ಬಶೋರ ಘರ'ದಲ್ಲಿ ವಧುವಿನ ಬೈತಲಿನಲ್ಲಿ ವರ ಸಿಂಧೂರ ಹಾಕಿದಾಗಲೇ ಇವಳು ಸೌಭಾಗ್ಯವತಿ.



ವಧುವಲ್ಲರಿ ಫೋಟೊಗಳು!

ಶ್ರೀ ಪ್ರಭಾಕರ ಮಹಡೀಕ

ಮುಂಬಯಿ

# ಕಣ್ಣುತೆರೆ ಆಯೂಬ




ಕಣ್ಣುತೆರೆ ಆಯೂಬ ! ಇನ್ನಾದರೂ ನಿನ್ನ
ಕಪಟ ಕಾರಸ್ಥಾನ ನಿಲ್ಲಲೇಬೇಕಲ್ಲ !
ಸರ್ವಾಧಿಕಾರಿಯಂತಾಡುವದು ಒಳಿತಲ್ಲ !
ಸ್ವಾತಂತ್ರ್ಯಕೆರವಾದ ನಿನ್ನ ಜನವೇ ನಿನ್ನ
ಕೋಪದಿಂ ಮೆಟ್ಟಿ ಪಾತಾಳಕಟ್ಟುವ ಮುನ್ನ
ಎಚ್ಚೆತ್ತು ಸತ್ಯಲೋಕಕ್ಕಿಳಿದು ಬರ್ಪೆಯಾ ?
ಜನನಾಯಕನಿಗುಚಿತ ರೀತಿಯನು ತೋರ್ಪೆಯಾ ?
ಇಲ್ಲದಿರೆ ನಾಯಬಾಲದ ಡೊಂಕದಂತೆನ್ನ
ಪರಿಯಿಂದು ಚೀನ-ಪಾಶ್ಚಾತ್ಯರನ್ನು ಕೈಕೊಂಡು
ಮಿಂಡೆತನದಿಂದವರನಿವರನಂಜಿಸಿಕೊಂಡು
ಮೆರೆದಾಡಿ ಮನೆಮುರುಕತನಕೆ ಮನವನು ನೀಡಿ
ನೆರೆಹೊರೆಯ ಜನರನ್ನು ಕೆಣಕದಿರು ಹೇಡಿ
ಕೇಳದಿಹುದೇ ವೀರಭಾರತದ ಗರ್ಜನೆಯು !
ಮಿಸುಕಿದೊಡನಾದೀತು ನಿನ್ನ ಪರಿಮಾರ್ಜನೆಯು !

ದ. ಲ. ಕೆರೂರ

# ಎರಡು ಮನೆಗಳ ನಡುವೆ....

ಅಕ್ಕ- ಪಕ್ಕದ ಮನೆಗಳವು. ಆಚೆಮನೆ ಖಾಲಿಯಾಗಿ ಒಂದು ತಿಂಗಳಾಗುತ್ತ ಬಂದಿತ್ತು. ಜನ ಬಂದು ನೋಡಿ ಹೋಗುವುದು ನಡೆದೇ ಇತ್ತು. ಒಂದು ತಿಂಗಳಲ್ಲಿ ಬರುವ ಜನರ ಕೇಳಿಕೆಯ ಮೇರೆಗೆ ಆ ಮನೆಯ ಅಡಿಗೆ ಕೋಣೆ ಬಚ್ಚಲು ಕೋಣೆ ನಾನಾ ರೂಪ ತಾಳಿದವು.

ಕುಳಿತು ಅಡಿಗೆ ಮಾಡುವ ಪ್ರಯೋಗದಿಂದ, ನಿಂತು ಮಾಡುವುದು...... ಬಚ್ಚಲು ಕಟ್ಟೆ ತೆಗೆಸಿ, ವಿಶಾಲ ಬಚ್ಚಲು ಎಲ್ಲವೂ ಸಿದ್ಧವಾಯಿತು.

ಮನೆಯೆದುರಿಗೆ ಹಿಂದಿನವರಾರೋ ನೆಟ್ಟಿದ್ದ ದೊಡ್ಡದೊಂದು ನಿಂಬೆಗಿಡ- ಹಿಂಬದಿಯಲ್ಲಿದ್ದ ರತ್ನ ಗಂಧಿ ಮರ ಕಡಿದು ಎಲ್ಲವೂ ಬಯಲಾಯಿತು.ಬರುವ ಜನಕ್ಕಾಗಿ ಸ್ವಾಗತದ ಸಿದ್ಧತೆಯಾಯಿತು.

ಈಚೆ ಮನೆಯ ಸಂಸಾರಕ್ಕೆ ದಿನವೂ ಹೊಸಬರನ್ನು ನೋಡುವ ಕುತೂಹಲ! ಬಂದವರನ್ನು ಕಂಡಾಗ ತಾವು ಅವರೊಂದಿಗೆ ಜೊತೆಗೂಡಿ ಕಳೆಯುವ ದಿನಗಳ ಕಲ್ಪನೆಯ ಕನಸು ಮನದಲ್ಲೇ ಮೊಳಕು ಹಾಕುವ ಬಯಕೆ.ದಿನವೂ ಮುಚ್ಚಿದ್ದ ಬಾಗಿಲು ಕಂಡು ಆಸೆ ತಡೆಯುವುದು.

ಒಂದು ದಿನ! ಮುಚ್ಚಿದ್ದ ಬಾಗಿಲು ತೆರೆಯಿತು! ಕಸ ತೆಗೆಯುವ ಸದ್ದು- ಪಾತ್ರೆ, ಕೈ ಬಳೆಗಳ ನಿನಾದ... ಮೆಲ್ಲ ಮೆಲ್ಲನೆ ನಗು- ಮಾತಿನ ಧ್ವನಿ ಕೇಳಿಸಿತು.

ಈ ಮನೆಯ ಜನರ ಕಿವಿ ನಿಮಿರಿ ನೆಟ್ಟಗಾಯಿತು

ರಾತ್ರಿಯೇ ಬಂದಿರಬೇಕು... ತಮ್ಮ ಕುತೂಹಲ ಕಣ್ಣುಗಳಿಗೆ ಕಾಣದೆ ಹೋದ ಬಗೆಗೆ ಉತ್ತರ ದೊರೆಯಿತು. ಯಾರೆಲ್ಲ ಇರಬಹುದು? ಹೇಗಿರಬಹುದು? ತಮ್ಮ ಜೊತೆಗೆ ಜೊತೆಯಾಗಬಲ್ಲವರಿರಬಹುದೇ ? ಹೀಗೆ ಹಲವಾರು ಪ್ರಶ್ನೆಗಳು ನಿಮಿಷದಲ್ಲಿ ತಲೆಯೊಳಗೆ ಸುಳಿದು ನೆನಪಿನಲ್ಲುಳಿದುಬಿಟ್ಟಿತು.

ಆರು ವರ್ಷದ ಪ್ರೀತಿ, ಬಾಲ್ಕನಿಯಲ್ಲಿ ನಿಂತು ಯೋಚಿಸುತ್ತಿದೆ "ಗೊಂಬೆಯಾಟ ಆಡಲು ತನ್ನಂಥ ಪುಟ್ಟ ಹುಡುಗಿ ಇರಬಾರದೇ?"

ನೀಳವಾದ ಕರಿಯ ಪಟ್ಟ ಕೂದಲುಗಳ ಸಿಕ್ಕು ಬಿಡಿಸುತ್ತಾ ಕನ್ನಡಿ ಎದುರಿಗೆ ನಿಂತು ಸುಮಿತ್ರಾ ತನ್ನಲ್ಲೇ ಅಂದುಕೊಳ್ಳುವಳು, "ಕಾಲೇಜಿನ ದಾರಿಯಲ್ಲಿ ತನ್ನೊಂದಿಗೆ ನಡೆದು ಬರುವ ಸರಸ ಸಂಗಾತಿ ಇದ್ದರೆ?"

[illegible] ನಿಂತಿದ್ದ ಮನೆಯೊಡತಿ [illegible] ಮಾತಿನ [illegible]

ವಿಚಾರ ಎಲ್ಲರಲ್ಲೂ ಸುಳಿ ಸುಳಿದು ಮಾಯವಾಯಿತು. ಸ್ವಲ್ಪ ಸಮಯದ ಬಳಿಕ ಮನೆಯಲ್ಲಿಯ ಸದ್ದಡಗಿತು. ಈ ಮನೆಯಲ್ಲಿ ಕಾಫಿ ಕುಡಿಯಲು

---

ಕತೆಗಾರ್ತಿ :

ಗೀತಾ ಕುಲಕರ್ಣಿ

---



" ಬಾ ಮಗು ಒಳಕ್ಕೆ ಬಾ ಏನು ಬೇಕಾಗಿತ್ತು? "

[illegible] ಎಳೆಯ ಹುಡುಗಿಯ ಕಂಠ ಕೇಳಬಂತು.

"ಆಂಟಿ...... ಆಂಟಿ..."

"ಯಾರು ? ಯಾರಲ್ಲಿ?"

"ನಾನು...... ರೀಟಾ..."

ಕಾಫಿ ಕುಡಿಯುತ್ತಿದ್ದ ಕೈಗಳೆಲ್ಲ ಅಲ್ಲೆ ಇಳಿಸಿಬಿಟ್ಟವು ಕಪ್ಪುಗಳನ್ನು! ನಾಲ್ಕು ಮುಖಗಳೂ ಒಂದಕ್ಕೊಂದು ನೋಡಿ, ಎದ್ದು ನಿಂತವು.

"ನಿನ್ನ ಹೆಸರೇ... ರೀಟಾ!"

"ನಮ್ಮ ಪ್ರೀತಿಗೆ ಆಡಲು ಒಳ್ಳೆಯ ಜೊತೆಯಾಯಿತು...."

"ಬಾ ಮಗು...ಒಳಕ್ಕೆ ಬಾ...ಏನು ಬೇಕಿತ್ತು?"

ಬಹು ಸಂಭ್ರಮದ ಸ್ವಾಗತ ರೀಟಾಳನ್ನ ಬರಮಾಡಿಕೊಂಡಿತು. ಕಾಫಿ ಕುಡಿದ ಹುಡುಗಿ ಮತ್ತೆ ಮೆಲ್ಲನೆ ನುಡಿಯಿತು. "ಆಂಟಿ..ನಾನು ಹೋಗಬೇಕು. ಸ್ವಲ್ಪ ಶುಗರ್ ಬೇಕಿತ್ತು. ಮಮ್ಮಿ ಬೇಗ ಬಾ ಎಂದಿದ್ದರು."

"ಅಷ್ಟೇನೇ? .. ಬರಿ ಸಕ್ಕರೆ ಸಾಕೇ? ಹಾಲು!"

"ಬರಿ ಶುಗರ್ ಸಾಕು ..."




"ಲೋಕ ವ್ಯವಹಾರದಿಂದ ದೂರವಿರುವುದು" ಕೆಲವು ವೇಳೆ ಲೇಸೆನಿಸುತ್ತದೆ. ಆದರೆ ಜೀವನ ಸಮಸ್ಯೆಗಳನ್ನು ಎದುರಿಸಿ ಜವಾಬ್ದಾರಿಯ ಹೊಣೆ ಹೊರುವುದು ಲೇಸು.

ನೀವು, ನಿಮ್ಮ ಸಂಸಾರದ ಮುಂದಿನ ಅವಶ್ಯಕತೆಗಳಿಗೆ, ಕ್ರಮವಾಗಿ, ಸಾಕಷ್ಟು ಉಳಿತಾಯ ಮಾಡುತ್ತಿದ್ದೀರಾ?

ದಿ ಬ್ಯಾಂಕ್ ಆಫ್ ಇಂಡಿಯಾ ಉಳಿತಾಯಕ್ಕೆ ವಿಶೇಷ ಉತ್ತೇಜನ ನೀಡುವುದು.

■ ಸೇವಿಂಗ್ಸ್ ಬ್ಯಾಂಕ್ ಖಾತೆಗಳು ■ ಬಡ್ಡಿದರ 4% ■ ವರ್ಷದಲ್ಲಿ 150 ಸಲ ಚೆಕ್ ಮುಖೇನ ಹಣಪಡೆಯಬಹುದು ■ ಹಣಪಡೆಯಲು ಮುಂಸೂಚನೆ ಬೇಕಿಲ್ಲ ■ ಅವಧಿಯ ಠೇವಣಿಗಳು: ಬಡ್ಡಿ 7½%.



**ದಿ ಬ್ಯಾಂಕ್ ಆಫ್ ಇಂಡಿಯಾ ಲಿಮಿಟೆಡ್**

ಟಿ.ಡಿ. ಕನ್ಸಾರಾ, ಜನರಲ್ ಮ್ಯಾನೇಜರ್

AAAS/B/56 KAN

ದೀಪಾವಳಿಯು ಸರ್ವರಿಗೂ ಸುಖಸಂಪದವನ್ನೀಯಲಿ . . . .

"ಅದೃಷ್ಟವಂತೆ ನೀನು ನೋಡಮ್ಮಾ..ನಿನಗೊಳ್ಳೆ ಜೊತೆ ಸಿಕ್ಕಂತಾಯಿತು. ನನಗೋ ಈ ಸ್ತ್ರೀರಾಜ್ಯದಲ್ಲಿ ಸಾಕಾಗಿದೆ. ಆ ದೇವರು ನನ್ನ ಮೊರೆ ಕೇಳಿಯಾದರೂ ಒಬ್ಬ ಫ್ರೆಂಡನ್ನ ದಯಪಾಲಿಸಬಾರದೇ?"

"ಅಣ್ಣ... ನಿನ್ನ ಪ್ರಾರ್ಥನೆ ದೇವರು ಜರೂರು ಕೇಳಿದ್ದಾನೆ. ನಿನ್ನೇ ನಿನಗೆ ಹೇಳಬೇಕೂಂತಿದ್ದೆ. boy friend ಅಲ್ಲ... girl friend ಅಂತೂ ಇದ್ದಾಳೆ."

ಮಮತಾ ಮುಂದೆ ತನ್ನ ಬೆನ್ನ ಮೇಲೆ ಬೀಳಬಹುದಾದ ಏಟಿನಿಂದ ಪಾರಾಗಲು ತಾಯಿಯ ಬದಿಗೆ ಓಡಿ ಬಂದು ಕುಳಿತು ಅಣಕಿಸಿದಳು.

ಸುರಮಾ ಕೈತೊಳೆದು ಅರೆಕ್ಷಣವೂ ತಡಮಾಡದೆ ಆ ಮನೆಯೊಳಕ್ಕೆ ಕಾಲಿರಿಸಿದಳು.

"ಬನ್ನಿ...ಬನ್ನಿ... ಸಕ್ಕರೆ ಕೊಟ್ಟದ್ದಕ್ಕೆ ತುಂಬ ಥ್ಯಾಂಕ್ಸ್ ನೋಡಿ, ಒಳ್ಳೆಯ ನೇಬರ್ಸ್ ಬೇಕೂಂತ ನಮಗೂ ತುಂಬ ಆಸೆ ಇತ್ತು. ಇಲ್ಲಿಗೆ ಬಂದಾಗಿನಿಂದಲೂ ರೀಟಾನ ಸಂತಸಕ್ಕೆ ಎಣೆ ಇಲ್ಲದಂತಾಗಿದೆ. ಅದೇನು ಪವಾಡ ಮಾಡಿದ್ದೀರೊ ನಿಮ್ಮದೇ ಸುದ್ದಿ... ನಿಮ್ಮ ಮನೆಯದೇ ವಿಷಯ..."

"ಛಿ...ಛಿ... ಅಂಥದ್ದೇನಿದೆ? ರೀಟಾ ತುಂಬ ಚುರುಕು ಬುದ್ಧಿವಂತ ಮಗು. ಅದೇ–ಮನೆಯಲ್ಲೂ ನಮ್ಮ ಮಾತು ಅಲ್ನೋಡಿ.. ಅವರಿಬ್ಬರ ಆಟದ ಚಂದ ನೋಡಿ.... ಎಷ್ಟು ತಲ್ಲೀನರಾಗಿದ್ದಾರೆ?"

ಮುಂದೆ ಎರಡೂ ಮನೆ ಜನರ ವಿಷಯವಾಗಿ ಮಾತು ಕತೆಯಾಯಿತು. ಚಹಾ ಕುಡಿದು ಸುರಮಾ ಮನೆಗೆ ಬಂದಾಗ ಮಗ ಕೋಪದಿಂದ ಕುದಿಯುತ್ತಿದ್ದ

"ಏನಮ್ಮಾ... ಕಾಫಿ ಕೊಡದೇ ಹೋಗಿಬಿಟ್ಟೆ... ನಾಳೆಯಿಂದ ಮನೆಯ ನೆನಪೂ ಮರೆತೀತು!"

ತನ್ನ ಮೈಮರೆವಿಗಾಗಿ ಸುರಮಾ ತನ್ನಲ್ಲೇ ನೊಂದುಕೊಂಡಳು. ಊಟಮಾಡುತ್ತ ಕುಳಿತಾಗ ಸುರಮಾ ಪತಿಯೊಂದಿಗೆ ಆಡುತ್ತಿದ್ದ ಮಾತಿನಲ್ಲಿ ಆ ಮನೆಯ ವಿಷಯವೇ ಮುಖ್ಯವಾಗಿತ್ತು. ಮನೆಯಲ್ಲಿ ತಾಯಿ ಇಬ್ಬರು ಹುಡುಗಿಯರು ಮಾತ್ರ! ಪತಿ ದೂರದ ಔರಂಗಾಬಾದಿನಲ್ಲಿ. ಸರಕಾರಿ ಹುದ್ದೆಯಲ್ಲಿದ್ದ ಅವನು. ಏನೋ ವಿರಸವಿರಬೇಕು. ಮನೆಯ ಬಗ್ಗೆ ಗಮನಕೊಟ್ಟಂತಿಲ್ಲ. ಇದೇ ಕಾರಣ ಸುರಮಾ, ಹೆಣ್ಣಿನ ಗುಣಧರ್ಮಕ್ಕನುಸಾರವಾಗಿ ಆ ಮನೆಯ ಬಗ್ಗೆ




" Boy friend ಅಲ್ಲ... ಗರ್ಲ್ ಫ್ರೆಂಡ್ ಅಂತೂ ಇದ್ದಾಳೆ "

"ಅಲ್ಲ ಮಗೂ... ನಮ್ಮಲ್ಲಿ ಸಂಕೋಚ ಬೇಡ. ನೀನು ಬೇಕಾದಾಗ ಬಂದು ನಮ್ಮ ಪ್ರೀತಿಯೊಂದಿಗೆ ಆಟವಾಡಿಕೊಂಡಿರು..."

ರೀಟಾ ಸಕ್ಕರೆಯೊಂದಿಗೆ ಹೊರಟು ಹೋದಳು. ತುಂಬ ಚಂದದ ಹುಡುಗಿ, ಚುರುಕಾಗಿದ್ದಾಳೆ. ಎಂಥ ನಯ-ವಿನಯ! ಒಳ್ಳೇ ರೀತಿ-ನೀತಿ! ಮಾತೂ ಹಾಗೆ. ಅಂತೂ ಬಹುದಿನಗಳಿಂದ ಬಯಸಿದಂತ ಒಳ್ಳೆಯ ನೆರೆ ಬಂದಂತಾಯಿತು. ಆ ರಾತ್ರಿಯೆಲ್ಲ ರೀಟಾನ ವಿಷಯದಲ್ಲೇ ಮಾತಾಯಿತು. ಪ್ರೀತಿ ಚಪ್ಪಾಳೆ ತಟ್ಟಿ ಕುಣಿದದ್ದೇ ಕುಣಿದದ್ದು.

ಮಾರನೆಯ ದಿನ ರೀಟಾ ಬಂದು ಪ್ರೀತಿಯನ್ನು ಆಟಕ್ಕಾಗಿ ಕರೆದಾಗ ಈ ಮನೆಯ ಜನಕ್ಕೆ ಆದ ಹಿಗ್ಗು ಅಷ್ಟಿಷ್ಟಲ್ಲ. ಹಂಬಲಿಸಿದ್ದ ಕನಸು ನನಸಾಗಿತ್ತು. ಕಪಾಟಿನ ಮೂಲೆಯಲ್ಲಿ ಮುದುಡಿ ಬಿದ್ದಿದ್ದ ಗೊಂಬೆ ಅಡಿಗೆಯ ಸಾಮಾನುಗಳು ಸಂಭ್ರಮದಿಂದ ಹೊರಬಂದವು.

ಅಬ್ಬಾ! ಒಮ್ಮೆ ಗೆದ್ದುಕೊಂಡೆ.... ಹಗಲು-ರಾತ್ರಿ ಈ ಪ್ರೀತಿಯಿಂದ ಬಿಡುಗಡೆ ಇಲ್ಲದಂತಾಗಿತ್ತು. ತಾನಿನ್ನು ಸ್ವತಂತ್ರಳು ಮಧ್ಯಾಹ್ನದ ಸುಖ ನಿದ್ರೆ ತನ್ನದಾಯಿತು ಎಂದು ಬಟಾಟೆಯ ಸಿಪ್ಪೆ ಸುಲಿಯುತ್ತಿದ್ದ ಸುರಮಾ ಯೋಚಿಸಿದಳು.

"ಆಂಟಿ... ನಿಮ್ಮನ್ನ ಮಮ್ಮಿ ಮನೆಗೆ ಕರೆದಿದ್ದಾರೆ.!.. ಬೇಗ ಬರಬೇಕಂತೆ.. ."

ಇಷ್ಟು ಹೇಳಿದ ರೀಟಾ ಓಡುತ್ತ ಮತ್ತೆ ಆಟಕ್ಕಾಗಿ ಹೊರಟು ಹೋದಳು.

ಸ್ನಾನ ಮುಗಿಸಿ ಬಂದ ಮಗ ಶೇಖರ ತಾಯಿಯತ್ತ ನೋಡುತ್ತ ನಕ್ಕು ನುಡಿದ,

ಹೆಚ್ಚು ಅನುಕಂಪ ತೋರಿದಳು.

ಹತ್ತು ಗಂಟೆಗೆ ಮನೆಗೆಲಸ ಮುಗಿಸಿ ಸುನಂದಮ್ಮ ಸಮಾಜ ಕಲ್ಯಾಣ ಕೇಂದ್ರಕ್ಕೆ ಹೊರಟರೆ ಮರಳಿ ಬರುತಿದ್ದದ್ದು ಐದು ಗಂಟೆಯ ನಂತರ. ಆ ನಡುವೆ ಹುಡುಗಿಯರಿಬ್ಬರು ತಮ್ಮ ತಮ್ಮ ಸ್ನಾನ-ಊಟ ವೇಷಾಲಂಕಾರ ಮುಗಿಸಿ ಸ್ಕೂಲು ಕಾಣಬೇಕು.

"ಆಂಟಿ... ಅಕ್ಕ ನನ್ನ ಹೊಡೆಯುತ್ತಾಳೆ... ಮಮ್ಮಿ ಮನೇಲಿ ಇಲ್ಲದಾಗ ಇವಳದು ಇದೇ ಆಟ..."

—ದೂರಿನೊಂದಿಗೆ ಅಳುತ್ತ ಬಂದ ರೀಟಾನ್ನ ಬಳಿಯಲ್ಲಿ ಕುಳ್ಳಿರಿಸಿಕೊಂಡು, ಅವಳ ತಲೆಗೂದಲನ್ನು ಬಾಚಿ ಜಡೆ ಕಟ್ಟಿ, ಊಟ ಮಾಡಿಸಿ, ಅವರ ಮನೆಯೊಳಕ್ಕೆ ಕರೆದ್ಯೊದು, ಅಕ್ಕ ನಿರ್ಮಲಾಗೆ-

"ನೀನು ಹೀಗೆ ಏಟು ಕೊಟ್ಟರೆ ಹೇಗಮ್ಮ... ಇನ್ನು ಚಿಕ್ಕವಳು...ತಿಳಿಯದೆ ತಪ್ಪು ಮಾಡುತ್ತಾಳೆ.. ಚಿಕ್ಕಂದಿನಲ್ಲಿ ನೀನೂ ಹೀಗೆ ಅಲ್ಲವೇ?" ಎಂದು ಬುದ್ಧಿ ಹೇಳಿ, ಸ್ಕೂಲಿಗೆ ಹೋಗೋವರೆಗೂ ಅಲ್ಲೇ ನಿಂತು ಮನೆಗೆ ಹಾಕಿದ ಬೀಗ ಕಂಡು– ಕೀಲಿ ಕೈ ತನ್ನ ಕೈಗಿರಿಸಿದ್ದನ್ನು ಗೊಂಚಲಲ್ಲಿ ಸಿಕ್ಕಿಸಿ ಸೊಂಟದಲ್ಲಿಟ್ಟುಕೊಂಡು ಹೊರಟಾಗಲೇ ಸುರಮಾಗೆ ನೆಮ್ಮದಿ!"

"ನಿಮ್ಮಂಥ ನೇಬರ್ಸ್ ನಮಗೆ ದೊರತದ್ದೇ ಸೌಭಾಗ್ಯ! ರೀಟಾ ನಿರ್ಮಲೆಯರ ಅದೃಷ್ಟ ಪ್ರೀತಿಯ ಆಂಟಿ- ಸಿಸ್ಟ್‌ರ್ಸ್ ದೊರಕಿದ್ದಾರೆ..."

ಆ ದಿನ ರಾತ್ರಿಯ ತಿಂಗಳು ಬೆಳಕಿನಲ್ಲಿ ಊಟ ಮುಗಿಸಿ ಮನೆಯಂಗಳದ ಹುಲ್ಲು ಹಾಸಿಗೆಯಲ್ಲಿ ಎಲ್ಲರೂ ಹರಟೆ ಕೊಚ್ಚುತ್ತ ಕುಳಿತಾಗ ಸುನಂದಮ್ಮ ನಗುತ್ತ ನುಡಿದರು.

ಹುಡುಗಿಯರು ತಮ್ಮ ಗುಂಪಿನಲ್ಲಿ ನಗುವಿನ ಅಲೆಗಳೊಂದಿಗೆ ಒಂದಾಗಿದ್ದರು.

ಸುರಮಾನ ದೃಷ್ಟಿ ಒಳಕ್ಕೆ ನೆಟ್ಟಾಗ ಪತಿಯು ಓದುವ ಕೋಣೆಯಲ್ಲಿ ಉರಿಯುತ್ತಿದ್ದ ದೀಪ ಕಂಡಳು. ಮತ್ತೇನು ಯೋಚನೆ ಬಂತೋ...

"ನೋಡಿ ಸುನಂದಕ್ಕಾ ನಮ್ಮ ಶೇಖರ ಇನ್ನೂ ಮನೆಗೇ ಬಂದಿಲ್ಲ... ಎಷ್ಟು ಹೇಳಿದರೂ ಅವನ ಬುದ್ಧಿ "ನಾಯಿ ಬಾಲ ಓಟೆಯಲ್ಲಿ ಹಾಕಿದಂತೆ ಎನ್ನುತ್ತಾರಲ್ಲ... ಹಾಗೆ!"

"ಗಂಡಸರ ಬುದ್ಧಿಯೇ ಹಾಗೇ... ಅದನ್ನು ಸರಿಪಡಿಸಲು ಬ್ರಹ್ಮನಿಗೂ ಆಗದ ಕೆಲಸ. ನಮ್ಮವರು ನೋಡಿ... ಬಂದ ಹಣ ಅಲ್ಲೇ ನೀರಿನಂತೆ ಖರ್ಚು ಮಾಡಿ ಮುಗಿಸುತ್ತಾರೆ. ಇಲ್ಲಿ ನಾನು ಕಷ್ಟಪಟ್ಟು ಮಕ್ಕಳನ್ನು ಸಾಕಿ ಸಲುಹದಿದ್ದರೆ ಇವುಗಳ ಗತಿ ಏನಾಗುತ್ತಿತ್ತು? ಶೇಖರನೂ ಒಂದು ದಿನ ಅದೇ ದಾರಿಯಲ್ಲಿ!"

"ಅಲ್ಲ... ನೀವೂ ಮಕ್ಕಳೊಂದಿಗೆ ಅಲ್ಲೇ ಇದ್ದುಬಿಟ್ಟರೆ ಆಗದೆ?"

"ಅವರನ್ನು ನಂಬಿದರೆ ಅಲ್ಲಿಗೆ ಮುಗಿಯಿತು ನಮ್ಮ ಕಥೆ!"

- ಮಾತು ಅಲ್ಲಿಗೆ ನಿಂತುಬಿಟ್ಟಿತು. ಆದರೆ ಸುರಮಾಗೆ ಒಂದು ಮಾತು ಆ ರಾತ್ರಿಯ ನಿದ್ದೆ ಕೆಡಿಸಲು ಸಾಕಾಯಿತು.

—ಶೇಖರನೂ ಒಂದು ದಿನ ಅದೇ ದಾರಿಯಲ್ಲಿ!! ಏಕೋ ಸುನಂದಮ್ಮನ ಈ ಮಾತು ಅವಳಿಗೆ ಹೇಳಲಾರದ ವ್ಯಥೆ ಕೊಟ್ಟಿತು. ಹೃದಯದ ಮೂಲೆಯೊಂದರಲ್ಲಿ ನೋವಿನ ಎಳೆಯೊಂದು ಗೀಚಿತು.

—ಅಂದೊಮ್ಮೆ ದಿನ ಸುರಮಾ ಹಿಂಬದಿಯ ಬಾಗಿಲಲ್ಲಿ ಕುಳಿತು ಪ್ರೀತಿಯ ಮೈಗೆ ಎಣ್ಣೆ ತಿಕ್ಕುತ್ತಿದ್ದಳು. ನಿರ್ಮಲಾ ಹೊರಕ್ಕೆ ಬಂದಳು. ಅದೇ ಕ್ಷಣ ನೋಡಿಯೂ ನೋಡದವಳಂತೆ ಒಳಗೆ ಹೋಗಿ ಬಿಟ್ಟಳು.

ಸುರಮಾಗೆ ಅಚ್ಚರಿ! ಇದೇನು ಹೊಸ ಬಗೆ? ಕಾರಣ—ಅದೂ ತಿಳಿಯದು... ಗಡಿಬಿಡಿಯಲ್ಲಿ ನಿರ್ಮಲಾ ಒಳಕ್ಕೆ ಹೋಗಿ ಬರಹುದೇನೋ... ಪುರುಷ ಧ್ವನಿ ಆಲಿಸಿದ ಅವಳು ಸುನಂದಮ್ಮನ ಪತಿ ಬಂದಿದ್ದರೆ? ಎಂದು ಕೊಂಡಳು. ಬಂದವರು ಪತಿಯಾಗಿರಲಿಲ್ಲ. ಪತಿಯಾಜ್ಞೆಯಂತೆ ತನ್ನ ಬಿಡುವಿಲ್ಲದ ದುಡಿತದಲ್ಲೂ ಮನೆಯಲ್ಲಿಳಿದ ಯುವಕರಿಬ್ಬರಿಗೆ ಎಲ್ಲ ಸೌಕರ್ಯ ಒದಗಿಸಿಕೊಟ್ಟಿದ್ದರು ಸುನಂದಮ್ಮ.

ಪತಿಯಿಂದ ವಂಚಿತಳಾಗಿದ್ದರೂ ಪತಿಯಾಜ್ಞೆ ಪಾಲಿಸಿದ ಸಾಧ್ವಿ! ಸುನಂದಮ್ಮನ ದೊಡ್ಡ ಗುಣಕ್ಕೆ ಮನದಲ್ಲೇ ಮೆಚ್ಚಿಕೊಂಡ. ಸುರಮಾ ಮೌನಿಯಾದಳು.

ನಾಲ್ಕಾರು ದಿನಗಳಲ್ಲಿ ಆ ಮನೆಯ ಜನರು ಮೊದಲಿನಂತೆ ತುಂಬ ಆತ್ಮೀಯರಾಗಿ ನಡೆದುಕೊಳ್ಳುವುದರಲ್ಲಿ ಏನೋ ಚ್ಯುತಿ ಬಂದಂತೆ ಕಂಡು ಬಂತು. ಅಡಿಗೆ— ತಿಂಡಿ ಆಗಾಗ ಅಲ್ಲಿಂದ ಬರುತ್ತಿರುವುದು ಕಡಿಮೆಯಾದಂತೆನಿಸಿತು. ತಾನೇ ಕಳುಹಿಸುತಿದ್ದರೂ. ಅದು ಕೆಲಸದಾಳಿಗೆ ಹೋಗುತಿದ್ದುದು ತಿಳಿದು ಬಂದಾಗ ಸುರಮಾ ಬೆಚ್ಚಿಬಿದ್ದಳು. ಎಲ್ಲಿಯಾದರೂ ಹೊರಗೆ ಬಂದಾಗ ಕಂಡರೆ ಮಾತ್ರ ಸುನಂದಮ್ಮ ಮಾತಾಡುತ್ತಿದ್ದರು. ಅದೂ ಧಾಟಿ ಬೇರೆಯಾಗಿತ್ತು.

"ನಮ್ಮವರು ತುಂಬ ನ್ಯಾಯ ನಿಷ್ಠುರರು- ಯಾವುದನ್ನೂ ಅಪೇಕ್ಷಿಸರು ಜನಕ್ಕೆ ಸಹಾಯ ಮಾಡಿದಷ್ಟು ಸಾಲದು- ಧಾರಾಳ ಮನಸ್ಸು..."

—ಒಂದು ತಿಂಗಳು ಹೀಗೆ ಕಳೆದುಬಿಟ್ಟಿತು.

ಬೆಳಗ್ಗಿನ ಎಂಟು ಗಂಟೆಯ ಸುಮಾರಿಗೆ ಮನೆಯ ಮುಂದೆ ಟಾಂಗಾದಲ್ಲಿ ಪೆಟ್ಟಿಗೆ, ಸೂಟು ಕೇಸು ಇಟ್ಟು ಕೊಂಡು ಊರಿಗೆ ಹೊರಟು ಹೋದರು.

ಸುರಮಾ ನಿಂತಲ್ಲಿಗೆ ನಿರ್ಮಲೆ ಬಂದು ಸಿಡಿ ಮಿಡಿಗೊಂಡೇ ನುಡಿದಳು.

"ನೋಡಿ ಆಂಟಿ... ಇವರು ಎಂಥ ಜನ! ನಾವು ಇವರನ್ನು ಎಷ್ಟು ಚೆನ್ನಾಗಿ ನೋಡಿಕೊಂಡೆವು! ಕೊನೆಗೂ ಹಣ ಕೊಡದೆ ಹೊರಟು ಹೋದರು."

"ಅವರು ನಿಮ್ಮ ಡ್ಯಾಡಿಯ ಕಡೆಯವರಲ್ಲವೆ?" ಜೋರಾಗಿ ಕೇಳಿದಳು ಸುರಮಾ.

"ಛಿ... ಛಿ... ನಮಗೇನೂ ಅವರು ಸಂಬಂಧಿಕರಲ್ಲ! ಮಮ್ಮಿಗೆ ಯಾರಿಗೆ ಎಷ್ಟು ಸಹಾಯ ಮಾಡಿದರೂ ಸಾಲದು. ಅವರ ಫ್ರೆಂಡು ಸುಲಭಾ ಅವರ ಒತ್ತಾಯಕ್ಕೆ ನಮ್ಮಲ್ಲಿ ಸ್ಥಳ ಕೊಟ್ಟಿದ್ದೆವು. ಅಲ್ಲದೆ ಡ್ಯಾಡಿ...ಇಂದೇ ರಾತ್ರಿ ಮನೆಗೆ ಬರುವವರಿದ್ದಾರೆ..."

—ಯಾವ ಕೆಲಸದಲ್ಲೂ ಮನಸ್ಸು ತೊಡಗಿಸಿದರೂ ಸುರಮಾಗೆ ನೆಮ್ಮದಿ ತೋರದು. ಒಂದೇ ಯೋಚನೆ— ಒಂದೇ ಮಾತು! ದೂರದ ಬೆಟ್ಟ ಕಣ್ಣಿಗೆ ನುಣ್ಣಗೆಯಂತೆ. ಈವರೆಗೂ ಮುಸುಕು ಮುಸುಕಾಗಿದ್ದ ಯಾವುದೋ ಅದೃಷ್ಟ ಬುದ್ಧಿ ಇಲ್ಲಿ ಆಟವಾಡಿಸುತ್ತಿರುವುದು ಸುರಮಾಗೆ ಗೋಚರಿಸದೆ ಹೋಗಲಿಲ್ಲ.

ಮಳೆಗಾಲದ ಮಳೆ ಪ್ರಾರಂಭವಾಗಿತ್ತು. ಗುಡುಗು— ಮಿಂಚಿನ ಆರ್ಭಟ ಜೋರಾಗಿತ್ತು. ಹಸಿದು ಕಂಗಾಲಾಗಿದ್ದ ಗಿಡ ಮರಗಳು ತೃಪ್ತಿಯಿಂದ ನರ್ತಿಸಿದವು.

ಮಳೆಯಲ್ಲಿ ಒದ್ದೆಯಾಗಿ ಸಿನೇಮಾದಿಂದ ಕೆಸರು ನೆಲ ತುಳಿಯುತ್ತ ಬಂದ ಮಮತಾ, ಮನೆ ಸೇರಿ ಅದೇ ರಾತ್ರಿ ಜ್ವರದಿಂದ ಮಲಗಿ ಬಿಟ್ಟಳು. ಮೂರು-ನಾಲ್ಕು ದಿನಗಳಾದರೂ ಜ್ವರದ ಜೋರು ಕಡಿಮೆಯಾಗಿರಲಿಲ್ಲ.

—ರೀಟಾ ಈ ಎರಡು ದಿನಗಳಿಂದಲೂ ಇತ್ತ ಕಡೆ ಬರುವುದು ನಿಂತಿತ್ತು.

## ಸದಾನಂದಿ



ಮುಂದಾಗುವವನನ್ನೆ ಮುಂದುಮುಂದಕೆ ದೂಕಿ
ಹಿಂದುಳಿವ ಕಾಯಕದಿ ಇವ ಸದಾ ನಂದಿ ;
ಯಾರೇನು ಎಂದರೂ, 'ಹೌದು ಹೌದೆಂ'ದೆನುತ
ತಲೆ ಹಾಕಬಲ್ಲ ; ಎಂದೇ ಸದಾನಂದಿ !

— ಎಂ. ಅಕಬರ ಅಲಿ

ಹಿಂದಿನ ದಿನ ಕೆಲಸದ ಯಮುನಾ ಅತ್ತು ಹೇಳಿದ ಮಾತು ನೆನಪಿಗೆ ಬಂತು.

"ಅಮ್ಮಾ...ನೀವು ತಿಳಿದಿರುವಷ್ಟು ಒಳ್ಳೆ ಜನ ಅವರಲ್ಲ...ಸಾಕಷ್ಟು ಉರಿದಾಡಿ—ನಿಮ್ಮೆದುರು ದೇವತೆಯ ಸೋಗು ಹಾಕಿದ್ದಾರೆ. ನನ್ನಮ್ಮ ಇವರ ಮನೆಯಲ್ಲಿ ಹಿಂದೆ ಮಾಡಿದ್ದಳು. ಗಂಡ ಸಾಕಾಗಿ, ಇನ್ನೊಬ್ಬಳೊಂದಿಗೆ ಇದ್ದು ಬಿಟ್ಟಿದ್ದಾನೆ. ಇವರ ಮುಖ ನೋಡಲೂ ತಯಾರಿಲ್ಲ. ನಿಮ್ಮ ಮಾತಿಗೆ ಮರ್ಯಾದೆ ಕೊಟ್ಟು ಅಲ್ಲಿ ಕೆಲಸ ಮಾಡಿದ್ದಕ್ಕೆ ನಾನು "ಕಳ್ಳಿ" ಎಂದು ಕರೆಸಿಕೊಂಡೆ."

"ನಾನಿನ್ನು ಅವರ ಮುಖವನ್ನು ನೋಡಲಾರೆ. ಕೈಕಾಲು ಗಟ್ಟಿಯಾಗಿದೆ. ಮಕ್ಕಳನ್ನು ಸಾಕಬಲ್ಲೆ. ನನಗೂ ಐಶ್ವರ್ಯಕ್ಕೂ ಬಹುದೂರ. ಆಡಂಬರ—ಅಧಿಕಾರ ನನಗೆ ಸೇರದು...."

ಸುನಂದಮ್ಮ ಹಿಂದೊಮ್ಮೆ ಆಡಿದ ಮಾತು ನೆನಪಿಗೆ ಬಂತು ಸುರಮಾಗೆ. ಜ್ವರ ಬಿಟ್ಟಿದ್ದರೂ ಮಮತಾ ತುಂಬ ಕ್ಷೀಣಳಾಗಿದ್ದಳು. ಹೊರಗಿನ ವರಾಂಡಾವಲ್ಲಿ ಆರಾಮ ಖುರ್ಚಿಯಲ್ಲಿ ಮಲಗಿ ಓದುತಿದ್ದ ಮಮತಾ, ಹಿಂಬದಿಯಿಂದ ಬಂದ ಧ್ವನಿಗೆ ಬೆಚ್ಚಿ ಬಿದ್ದು ಕತ್ತೆತ್ತಿ ನೋಡಿದಳು.

ನಿರ್ಮಲಾ ಚಪ್ಪಾಳೆ ತಟ್ಟಿ ನಗುತ್ತಿದ್ದಳು. ಕಾರಣ ತಿಳಿಯದೆ ಮಮತಾಳ ತುಟಿಯಲ್ಲೂ ನಗೆ ಮಿಂಚಿತು.

"ಮಮತಾ... ನನ್ನ ಡ್ಯಾಡಿ ಇಂದೇ ಬರ್ತಾರೆ. ಇನ್ನು ಇಲ್ಲಿಯೇ!"

ಮಾತು ಇನ್ನೂ ಮುಗಿದಿರಲಿಲ್ಲ. ಸುನಂದಮ್ಮನ ಕರೆಗೆ ನಿರ್ಮಲಾ ಅದೇ ಕ್ಷಣ ಕಾಲು ಕಿತ್ತಳು.

ಆ ಮನೆಯಿಂದ ಸುನಂದಮ್ಮ ಗದರಿಸುವ ಧ್ವನಿ ಮಮತಾಳ ಕಿವಿಗಳಿಗೆ ಬೀಳದೆ ಹೋಗಲಿಲ್ಲ. ಮುಖದಲ್ಲಿ ಉದಾಸೀನತೆ ಮೂಡಿಬಿಟ್ಟಿತು.

ನಮ್ಮ ಗ್ರಾಹಕವೃಂದಕ್ಕೆಲ್ಲ ದೀಪಾವಳಿಯು ಸುಖಪ್ರದವಾಗಲಿ!

# ಹಬ್ಬದ ಈ ದಿನಗಳಲ್ಲಿ...

ನಾನಾ ತರದ, ಆಕರ್ಷಕವಾದ ಕರೋನಾ ಪಾದರಕ್ಷೆಗಳಲ್ಲಿ
ನಿಮಗೆ ಬೇಕಾದುದನ್ನು ಆರಿಸಿರಿ! ಹಾಕಿಕೊಳ್ಳಲು
ಸುಖಕರವಾಗುವಂತೆ ವಿಶೇಷ ನಮೂನೆಗಳಲ್ಲಿ ತಯಾರಿಸಲ್ಪಡುವ
ಕರೋನಾ ಪಾದರಕ್ಷೆಗಳು ಬಹಳ ಬಾಳಿಕೆ ಬರುತ್ತವೆ—
ಆದರೂ ಅತ್ಯಂತ ನ್ಯಾಯವಾದ ಬೆಲೆಗಳಿಗೆ ದೊರೆಯುತ್ತವೆ.



## ಕರೋನಾ ಪಾದರಕ್ಷೆಗಳು

ಮನೆಯವರೆಲ್ಲರಿಗೂ ಅತ್ಯಂತ ಯೋಗ್ಯ!



ಸೀತಾ



ವಾಕ್‌ವೆಲ್



ಈಸಿವಾಕ್



ಮನ್‌ಪಸಂದ್




**ಕರೋನಾ ಸಾಹು ಕಂ. ಲಿಮಿಟೆಡ್**

ರಿಜಿಸ್ಟರ್ಡ್ ಆಫೀಸು : 221, ದಾದಾಭಾಯ್ ನವರೋಜಿ ರೋಡ್, ಬೊಂಬಾಯಿ-1

JWT-CSC.3167



‘ ನಮ್ಮವರು ನ್ಯಾಯ ನಿಷ್ಠುರರು ’

— ನಡುರಾತ್ರಿಗೆ ಮನೆಯ ಆಚೆಗಿರುವ ಟೀ ಕ್ಲಬ್ಬಿನಲ್ಲಿ ಮಗುವಿನ ಅಳುವ ಸ್ವರ ಕೇಳಿ ಸುರುಮಾಗೆ ಎಚ್ಚರವಾಯಿತು. ಮಕ್ಕಳೂ ಎದ್ದು ಕುಳಿತರು. ಮನೆಯಲ್ಲಿ ದೀಪ ಉರಿಯಿತು. ಹೆಂಗಸರಿಲ್ಲದ ಮನೆಯಲ್ಲಿ ಅದೂ ಮಧ್ಯರಾತ್ರಿಗೆ ಅಳುವ ಕಂದ ಹೇಗೆ ಬಂತು? ಮಗು ಅಳುತ್ತಲೇ ಇತ್ತು. ಸುರುಮಾಗೆ ನಿದ್ದೆ ಬಾರದು... ಆ ಅಳು ಅವಳ ಹೃದಯಕ್ಕೆ ನೇರವಾಗಿ ತಟ್ಟುತ್ತಲೇ ಇತ್ತು. ದೀಪವಾರಿಸಿದಳು.

ಇನ್ನೂ ಐದು ಗಂಟೆಯ ಸಮಯಕ್ಕೆ ಅಂಗಡಿಯ ಚಂದೂ ಬಂದು ಬಾಗಿಲು ತಟ್ಟಿದ.

ಸುರುಮಾ ಬಾಗಿಲು ತೆರೆದಾಗ—ಚಂದೂ ಲೋಟಿಯನ್ನು ಮುಂದಕ್ಕೆ ಹಿಡಿದು ಹೇಳಿದ,

“ಅಮ್ಮಾ...ರಾತ್ರಿ ಒಬ್ಬಳು ಹೆಂಗಸು-ಎಳೆಯ ಮಗುವಿನೊಂದಿಗೆ ಬಂದು ಬಿಟ್ಟಳು. ಇಡೀ ರಾತ್ರೆ ಅತ್ತಿದೆ ಮಗು! ಅಂಗಡಿಯಲ್ಲೂ ಹಾಲಿರಲಿಲ್ಲ. ಹೊರಟು ಹೋಗು ಎನ್ನಲು ಮನಸ್ಸು ಒಪ್ಪಲಿಲ್ಲ. ಒಳ್ಳೆಯ ಮನೆಯ ಹೆಣ್ಣನಂತಿದ್ದಾಳೆ.”

ಪ್ರೀತಿ–ಮಮತಾ ಮೆಲ್ಲನೆ ಅಲ್ಲಿಂದ ನುಸುಳಿ ಅಂಗಡಿಗೆ ಹೋಗಿ ಬಂದು, ಬಾಗಿಲಲ್ಲಿ ನಿಂತಿದ್ದ ತಾಯಿಗೆ “ಮಾತು ನಿಜವೆಂದು” ವರದಿ ಒಪ್ಪಿಸಿಯಾಯಿತು.

— ಚಂದೂ ಹಾಲು ತುಂಬಿದ ಲೋಟಾದೊಂದಿಗೆ ಹೊರಟು ಹೋದ.

ಆಚೆ ಮನೆಯಲ್ಲಿ ಹಬ್ಬದ ಸಡಗರ ನಡೆದಂತಿತ್ತು. ಡ್ಯಾಡಿ ಬಂದಿದ್ದರು. ಜೊತೆಯಲ್ಲಿ ಹೊರಲಾರದ ಸಾಮಾನು ತುಂಬಿದ ಟ್ರಂಕ್ಕು ಬಂದು ಮನೆಯೆದುರು ನಿಂತಿತ್ತು! ರೀಟಾ ಇಲ್ಲದ ಆಟ ಪ್ರೀತಿಗೆ ಹಟಕ್ಕೆ ಕಾರಣ! ಅವಳ ಅಳುವಿಗೆ ಸುರಮಾವ ಕೈಯ ಏಟು ಬಿದ್ದಾಗಲೇ ಮುಕ್ತಾಯ. ಕರೆದು ಮಾತನ್ನಾಡಿಸುವ ಅವರೆಲ್ಲ ಕಂಡೂ ಕಾಣದಂತೆ ಹೋಗುತ್ತಿದ್ದರೆ ಸುರುಮಾ...ಮನದಲ್ಲೇ ಕೊರಗುವಳು. ಸುನಂದಮ್ಮ ಪೂರ್ಣ ಬದಲಾಗಿದ್ದರು...ಕೈಗೊಂದು ಕಾಲಿಗೊಂದು ಕೆಲಸಕ್ಕೆ ಆ ಆಳು—ಕಾಳು! ದಿನಕ್ಕೊಂದು ಬಗೆಯ ವೇಷ ಭೂಷಣ—ಕಾರು—ಟಾಂಗಾ ಇಲ್ಲದೆ ಕಾಲುಗಳು ಹೊರಬೀಳುತ್ತಿರಲಿಲ್ಲ. ಸಾಮಾನು ತುಂಬಿದ ಚೀಲ ಹಿಂಬದಿಯ ಬಾಗಿಲಲ್ಲಿ ಬಂದು ಒಳಕ್ಕೆ ಸೇರಿದಾಗ ಸುನಂದಮ್ಮನ ಬಾಯಿಯಿಂದ ಹರುಷದ ಗೀತ ಗುಂಯ ಗುಣಿಸುತ್ತಿತ್ತು!

ಮುಂದೆ ಒಂದೆರಡು ದಿನಗಳ ಬಳಿಕ ಚಂದೂನಿಂದ ಸುದ್ದಿ ತಿಳಿದ ಸುರುಮಾ ಗಾಬರಿಯಾದಳು.

ಆ ರಾತ್ರಿ ಬಂದಿದ್ದ ಹೆಣ್ಣು ಆಚೆ—ಮನೆಯ ಯಜಮಾನನ ಜೊತೆಗಾರ್ತಿ! ಮಗು ಅವನ ನೆನಪಿಗಾಗಿ ಅವಳಲ್ಲಿ ಉಳಿದಿದ್ದ ಪ್ರತೀಕ! ನಡುಮಧ್ಯೆ ಕೈಬಿಡಲು ಕಾರಣ?

ಆಸ್ಪತ್ರೆಯಲ್ಲಿ ನರ್ಸಾಗಿ ದುಡಿಯುತ್ತಿದ್ದ ಅವಳನ್ನು ನೂರೊಂದು ಹುಚ್ಚು ಆಸೆ ಹುಟ್ಟಿಸಿ ಕೊನೆಯವರೆಗೂ ಜೊತೆಯಲ್ಲಿ ಬಾಳುವ ಭರವಸೆ ಇತ್ತು ತನ್ನೊಂದಿಗೆ ಹೋದಲ್ಲೆಲ್ಲ ಕರೆದೊಯ್ದು ನಂಬಿಸಿ, ಈಗ ಕೈ ಬಿಟ್ಟು ಬಂದಿದ್ದನಂತೆ. ನಾಲ್ಕು ದಿನಗಳಿಂದ ಹಗಲು—ರಾತ್ರಿ ಎನ್ನದೆ ಮಗುವನ್ನೆತ್ತಿಕೊಂಡು ತಿರುಗಿ—ಒಂದು ದಿನ ಕಣ್ಣಿಗೆ ಬಿದ್ದಾಗ ಅವನಾಡಿದ ಮಾತಿದು—

“ನಿನ್ನ ಗುರುತಿಲ್ಲ...ಹೆಚ್ಚು ಮಾತನ್ನಾಡದೆ ಹೊರಟು ಹೋಗು!”

—ಹಗಲೆಲ್ಲ ಹೋಳಿಯಾಡಿ- ಇರುಳು ಮನೆ ಸೇರಿದಂತೆ ಸುನಂದಮ್ಮನ ಜೀವನದರಥ ಎಳೆದಂತೆ ಭಾಸವಾಯಿತು ಸುರಮಾಗೆ.

ಆ ಎರಡು ಮನೆಗಳ ನಡುವೆ ಗೋಡೆ ಅಡ್ಡ ನಿಂತಂತೆ ಈಗ ಎರಡು ಮನಗಳ ನಡುವೆ ಅದೃಷ್ಟ ಶಕ್ತಿ ತೆರೆ ಎಳೆದಿತ್ತು!!

# ನಮಗೆ ಶತ್ರುಗಳಿರಲಿ

ಬರೆದವರು : ಶ್ರೀಮತಿ ಗೀತಾ ದೇಸಾಯಿ, ಬೆಂಗಳೂರು

ಇತ್ತೀಚಿಗೆ ಪಾಕಿಸ್ತಾನ ಹಾಗು ಚೀನಗಳು ಶಾಂತಿ ಪ್ರಿಯ ಭಾರತದ ವಿರುದ್ಧ ಒಂದೇಸವನೆ ಕತ್ತಿಮಸೆದು ಅದನ್ನು ದುರ್ಬಲಗೊಳಿಸಲು ಅವಿರತವಾಗಿ ಪ್ರಯತ್ನಿಸುತ್ತಿರುವದನ್ನು ನೋಡಿದರೆ ನಮ್ಮಲ್ಲಿ ಭಾರತೀಯ ಸಂಸ್ಕೃತಿಗನುಗುಣವಾಗಿ ಬಂದ ಸಹಿಷ್ಣುತೆ, ವಿಶ್ವ-ಬಂಧುತ್ವ, ಶಾಂತಿಯುತ ಸಹಜೀವನದಂಥ ಉದಾತ್ತವಾದ ತತ್ವಗಳು ರಾಜಕೀಯದಲ್ಲಿ ಯಶಸ್ವಿಯಾಗುವದು ಸುಲಭಸಾಧ್ಯವಲ್ಲ ಎಂದೆನಿಸದಿರದು. 'ನಮಗೆ ಯಾರ ಬಗೆಗೂ ದ್ವೇಷವಿಲ್ಲೆಂದ ಮೇಲೆ ನಮ್ಮನ್ನು ಯಾರೂ ದ್ವೇಷಿಸಲಾರರು' ಎಂಬ ನಮ್ಮ ನಂಬಿಕೆಗೆ ಬಲವಾದ ಕೊಡಲಿಯೇಟು ಬಿದ್ದಿದೆ, ಬೀಳುತ್ತಲಿದೆ. 'ಅಣ್ಣಾ' ಎಂದು ಪ್ರೀತಿಯಿಂದ ಅಪ್ಪಿಕೊಳ್ಳ ಹೋದರೆ ಬೆನ್ನಲ್ಲಿ ಚೂರಿಯಿಂದಿರಿಯುವಂಥ, 'ಗೆಳೆಯ' ಎಂದು ಸ್ನೇಹ ಹಸ್ತವನ್ನು ನೀಡಿದರೆ ಬಂದೂಕನ್ನೊ ತೋರಿಸುವಂಥ ವಿಶ್ವಾಸಘಾತಕಿಗಳು ಎಡಲಬದಲ್ಲಿರುವರಿಂದ 'ನಮಗೆ ಯಾರೊಡನೆಯೂ ವೈರತ್ವವಿಲ್ಲ; ಯಾರ ಪ್ರದೇಶವನ್ನೂ ಆಕ್ರಮಿಸುವ ಇಚ್ಛೆ ನಮಗಿಲ್ಲ. ನಾವು ಎಲ್ಲರ ಜೊತೆಗೆ ಮೈತ್ರಿಯಿಂದಿರಬಯಸುತ್ತೇವೆ' ಎಂದು ಎಷ್ಟೇ ಘಂಟಾಘೋಷವಾಗಿ ಸಾರಿದರೂ ಪ್ರಯೋಜನವಾಗದೆ ನಮ್ಮ ಮೇಲೆ ಒತ್ತಾಯದಿಂದ ಯುದ್ಧವನ್ನು ಹೇರಲಾಯಿತು. ಈ ರೀತಿ ಸಹಜೀವನಕ್ಕೆ ಪ್ರೇರಕವಾದ ಸ್ನೇಹ, ಯುದ್ಧವನ್ನು ಪ್ರಚೋದಿಸುವದಾದರೆ ಕಷ್ಟಸಾಧ್ಯವಾದ ಮೈತ್ರಿಗೆ ಸಂಧಿಸಾಧಕರ ಈ ಯುಗದಲ್ಲಿ ಬೆಲೆಯೇನೆಂಬುದನ್ನೀಗ ಯೋಚಿಸುವಂತಾಗಿದೆ. ಅಂತೆಯೇ 'ಗೆಳೆಯರನ್ನು ಹೇಗೆ ಗಳಿಸಿಕೊಳ್ಳಬೇಕು,' 'ಸ್ನೇಹದಿಂದಾಗುವ ಪ್ರಯೋಜನಗಳು' ಮುಂತಾದವುಗಳ ಬಗೆಗೆ ಇದುವರೆಗೂ ಬರೆಯಲಾದ ರಾಶಿಗಟ್ಲೆ ಲೇಖನ, ಪುಸ್ತಕಗಳನ್ನು ಓದುವನ್ನು ನಿಲ್ಲಿಸಿ ಶತ್ರುತ್ವದ ಬಗೆಗೆ ಸ್ವಲ್ಪ ವಿಚಾರಮಾಡುವದು ಉಚಿತವಲ್ಲವೆ? ಆದರೆ ಇದಕ್ಕಾಗಿ ನಾವು ರಾಜಕೀಯವನ್ನು ಬದಿಗಿರಿಸಬೇಕು. ಏಕೆಂದರೆ ರಾಷ್ಟ್ರ-ರಾಷ್ಟ್ರಗಳಲ್ಲಿನ ಹಗೆತನ ರಕ್ತಪಾತಕ್ಕೆಳಸಿ ಮಾನವಕುಲಕ್ಕೆ ವಿನಾಶವನ್ನು ತಂದೊಡ್ಡುವದರಿಂದ ಅದನ್ನು ಯಾವ ಸಾಮಾನ್ಯ ಮನುಷ್ಯನೂ ಬಯಸಲಾರ. ನಮ್ಮ ಸಾಮಾಜಿಕ ಜೀವನದಲ್ಲಿ ಶತ್ರುಗಳು ಯಾವ ಪಾತ್ರವನ್ನು ನಿರ್ವಹಿಸುತ್ತಾರೆಂಬುದನ್ನು ವಿವೇಚಿಸುವದೇ ಈ ಲೇಖನದ ಉದ್ದೇಶ.

ನಮ್ಮ ವೈಯಕ್ತಿಕ ಜೀವನದಲ್ಲಿ 'ಶತ್ರು'ಗಳೆಂದರೆ ನಿಮಗೆ ಬೇಡವಾದ ವ್ಯಕ್ತಿಗಳು. ಹಾಗಿರುವಾಗ 'ನಮಗೆ ಶತ್ರುಗಳಿರಲಿ' ಎಂದು ಹೇಳುವದು ಮೂರ್ಖತನವಲ್ಲವೇ ಎಂದು ನೀವು ಕೇಳಬಹುದು. ನಮ್ಮ ಏಳಿಗೆಯ ಬಗೆಗೆ, ನಾವು ಸಾಧಿಸಿದ ಲೌಕಿಕ ಯಶಸ್ಸಿನ ಬಗ್ಗೆ ಮತ್ಸರ ತಾಳುವ ನಮಗೆ ಸದಾ ಅಹಿತವನ್ನೇ ಬಯಸುವ ಇಂಥ ವ್ಯಕ್ತಿಗಳ ಅಗತ್ಯ ನಮಗೇನಿದೆ ಎಂಬ ಪ್ರಶ್ನೆ ನಿಮ್ಮೆದುರು ನಿಲ್ಲಬಹುದು, ಆದರೆ ಮಿತ್ರರಂತೆಯೇ ಅಮಿತ್ರರೂ ಇರಬೇಕೆಂದು ಅನೇಕ ಮಹಾಪುರುಷರು ಮನಗಂಡಿದ್ದಾರೆಂದು ಸೋದಾಹರಣವಾಗಿ ನಾನು ಹೇಳಿದ ಮೇಲೆ 'ನಮಗೆ ಶತ್ರುಗಳಿರಲಿ' ಎಂಬುದು ನಿಮಗೆ ಅಷ್ಟು ವಿಚಿತ್ರವಾಗಿ ತೋರಲಾರದು.

ಗೆಳೆಯ, ಗೆಳೆತನದ ಮಹತಿಯನ್ನು ಕುರಿತ ವಿಶ್ವದ ಮಹಾಮೇಧಾವಿಗಳು, ತತ್ವಜ್ಞಾನಿಗಳು, ರಾಜಕಾರಣಿಗಳು, ಸಾಹಿತಿಗಳು ವಿಧವಿಧವಾಗಿ ಹಾಡಿ ಹೊಗಳಿರುವಂತೆಯೇ ಶತ್ರುತ್ವದ ಹಿರಿಮೆಯ ಬಗೆಗೂ ಹೇಳಿದವರು ಹಲವರಿದ್ದಾರೆ. ಅಜಾತಶತ್ರುವಿನ ನಿರರ್ಥಕತೆಯನ್ನು ವ್ಯಕ್ತಪಡಿಸುವ ಟೆನಿಸನ್ ಕವಿಯ ಈ ಉಕ್ತಿಯನ್ನೇ ನೋಡಿರಿ. 'ಯಾರೊಡನೆಯೂ ವೈರತ್ವವಿಲ್ಲದವನು ಎಂದಿಗೂ ಗೆಳೆಯರನ್ನು ಗಳಿಸಿಕೊಳ್ಳಲಾರ' ಎಂದವನು ಅಂದಿದ್ದಾನೆ. ಆರ್ಸಿನ್ ಹೊಸಾಯ ಎಂಬ ಇನ್ನೊಬ್ಬ ಲೇಖಕ 'ನಮ್ಮ ವೈರಿಗಳ ಬಗ್ಗೆ ಕೆಟ್ಟಮಾತುಗಳನ್ನಾಡಬೇಡಿರಿ. ಏಕೆಂದರೆ ನಮ್ಮನ್ನೆಂದಿಗೂ ಮೋಸಗೊಳಿಸದಿರುವವರೆಂದರೆ ಅವರೇ" ಎಂದು ಶತ್ರುಗಳನ್ನು ಕೊಂಡಾಡಿರುವದು ಅರ್ಥಪೂರ್ಣವಾಗಿದೆ. "Most friendship is feigning, most loving mere folly," ಎನ್ನುವ ಶೇಕ್ಸಪಿಯರ ಮಹಾಕವಿಯ ವಾಣಿಯನ್ನು ಗಮನಿಸಿದರೆ ಶತ್ರುತ್ವಕಿಂತ ಗೆಳೆತನವೇ ಹೆಚ್ಚು ಅಪಾಯಕಾರಿ ಎಂದೆನಿಸದಿರದು. ಇದನ್ನೇ ಥಾಂಪ್ಸನ್‌ನ ಶಬ್ದಗಳಲ್ಲಿ "ವೈರಿಯಿಂದ ನನ್ನ ರಕ್ಷಣೆಯನ್ನು ನಾನು ಮಾಡಿಕೊಳ್ಳಬಲ್ಲೆ; ಆದರೆ ಸ್ನೇಹಿತನ ಸೋಗು ಹಾಕಿ ಮೋಸಗೊಳಿಸುವ ವ್ಯಕ್ತಿಯಿಂದ ಮಾತ್ರ ದೇವರೇ ನನ್ನನ್ನು ಕಾಪಾಡಬೇಕು!" ಎಂದು ಹೇಳಬಹುದು. ವೈರಿಗಳ ಬಗ್ಗೆ ನಾವು ಯಾವಾಗಲೂ ಜಾಗರೂಕರಾಗಿರುವದರಿಂದ ಅವರು ನಮ್ಮನ್ನು ಮೋಸಗೊಳಿಸುವ ಪ್ರಶ್ನೆಯೇ ಏಳುವದಿಲ್ಲ. ಆದರೆ ಮಿತ್ರನೆಂದು ನೆಚ್ಚಿದವನು ಕೈಕೊಟ್ಟಾಗ ಮಾತ್ರ ನಾವು ಎಚ್ಚರದಪ್ಪುವದು ಖಂಡಿತ!

ಸ್ನೇಹ ಶಾಶ್ವತವಾಗಿರುವದಕ್ಕೆ ರಿಪುವಿನ ಅಗತ್ಯವೂ ಇದೆಯೆಂಬುದನ್ನು ವಿಲಿಯಂ ಬ್ಲೇಕನ ಈ ಸಾಲುಗಳು ವ್ಯಕ್ತಪಡಿಸುತ್ತವೆ.

> Thy friendship oft has made my
> heart to ache:
> Do be my enemy for friendship's
> Sake.

ಭಕ್ತಿ ಭಾಂಡಾರಿ ಬಸವಣ್ಣನವರ "ಎನ್ನವರು ಹೊನ್ನ ಶೂಲಕ್ಕಿಕ್ಕಿದರಯ್ಯ ಎನ್ನ ಹೊಗಳಿ ಹೊಗಳಿ", ಎಂಬ ವಚನ ಪರ್ಯಾಯವಾಗಿ ನಿಂದಕರೂ ಇರಲೆಂಬುದನ್ನು ಸೂಚಿಸುವದಿಲ್ಲವೆ? ಮಹಾಪುರುಷರಷ್ಟೇ ಅಲ್ಲ, ನಮ್ಮ ಗ್ರಾಮೀಣ ಮಹಿಳೆಯೂ 'ಭಾಗಾದಿ ಬಲಕ್ಕಿರಲಿ, ವೈರಿ ತಾ ಎಡಕ್ಕಿರಲಿ ಛಾಡಿ ನಿನ ಮನೆ ಮುಂದಿರಲಿ' ಎಂದು ಬಯಸುವದಾದರೆ ನಾವಾದರೂ ಶತ್ರುಗಳಿಗೆ ಹೆದರುವದೇಕೆ? ಈ ಎಲ್ಲ ಉಕ್ತಿಗಳನ್ನೋದಿದ ಮೇಲಾದರೂ ಶತ್ರುಗಳಿರುವದು ಅವಶ್ಯಕವೆಂದು ನಿಮಗೆ ಮನವರಿಕೆಯಾಗಿರಬಹುದು.



ಭಾರತೀಯರಲ್ಲಿ ಮೂಡಿದ ಒಕ್ಕಟ್ಟೇ ಸಾಕ್ಷಿ

ಪ್ರಜಾ ಪ್ರಭುತ್ವದಲ್ಲಿ ವಿರೋಧಿ ಪಕ್ಷದ ಅಗತ್ಯವಿರುವಂತೆ ನಮ್ಮ ಜೀವನದಲ್ಲಿ ಮಿತ್ರರಂತೆ ಅಮಿತ್ರರು ಇರಬೇಕು. ಬರೀ ನಮ್ಮನ್ನು ಹೊಗಳುವವರೇ ಇದ್ದರೆ ನಾವೆಂದಿಗೂ ನಮ್ಮ ತಪ್ಪುಗಳನ್ನು ಸುಧಾರಿಸಿಕೊಳ್ಳಲಾರೆವು ಯಾವದೇ ದೇಶದ ಜನತೆಯ ನೈತಿಕ ಹಾಗೂ ದೈಹಿಕ ಸಾಮರ್ಥ್ಯ ಪ್ರಕಟವಾಗುವದಕ್ಕೆ ವೈರಿಗಳೇ ಕಾರಣರಲ್ಲವೆ? ಶತ್ರುಗಳಿಂದ ಎಂಥ ಅದ್ಭುತ ಪವಾಡಗಳು ಜರಗುತ್ತವೆಂಬುದಕ್ಕೆ ಚೀನ, ಪಾಕಿಸ್ತಾನಗಳ ಆಕ್ರಮಣ ಕಾಲಕ್ಕೆ ಭಾರತೀಯರಲ್ಲಿ ಮೂಡಿದ ಅಪೂರ್ವವಾದ ಭಾವೈಕ್ಯ ಹಾಗೂ ಒಕ್ಕಟ್ಟುಗಳೇ ಸಾಕ್ಷಿಯಾಗಿವೆ. ಭಾರತೀಯರು ಹೇಡಿಗಳಲ್ಲವೆಂದು ಪ್ರಪಂಚ ಅರಿಯುವದಕ್ಕೆ ಅನುವು ಮಾಡಿಕೊಟ್ಟ ನಮ್ಮ ಶತ್ರುಗಳಿಗೆ ಋಣಿಯಾಗಿರಬೇಕು. ಮೃಷ್ಟಾನ್ನಭೋಜನ ರುಚಿಯಾಗಿರುವದಕ್ಕೆ ಉಪ್ಪಿನಕಾಯಿ ಬೇಕಾಗುವಂತೆ ನಮ್ಮ ಬದುಕು ಸ್ವಾರಸ್ಯಮಯವಾಗುವದಕ್ಕೆ ನಮ್ಮನ್ನು ಜರಿಯುವ, ನಮ್ಮ ಶಕ್ತಿಯನ್ನು ಪರೀಕ್ಷಿಸುವ ಅರಿಗಳ ಅಗತ್ಯವಿದೆ.

ವ್ಯಾವಹಾರಿಕ ದೃಷ್ಟಿಕೋನದಿಂದ ಪರಿಶೀಲಿಸಿದರೆ ಶತ್ರುಗಳಿಂದ ನಮಗೆ ಹಲವಾರು ಬಗೆಯ ಪ್ರಯೋಜನಗಳು ಗೋಚರಿಸುತ್ತವೆ. ಏರಿಕೆ ಬೆಲೆಯ ಇಂದಿನ ಕಾಲದಲ್ಲಿ ಹೆಚ್ಚು ಗೆಳೆಯರನ್ನು ಗಳಿಸಿಕೊಳ್ಳುವದಕ್ಕಿಂತ ವೈರಿಗಳನ್ನು ಬೆಳಸಿಕೊಳ್ಳುವದೇ ವಿಹಿತವಾಗಿದೆ. ಏಕೆಂದರೆ ಮಿತ್ರರು ನಿಮ್ಮನ್ನು ಆಫೀಸಿಗೆ ಹೋಗುವ ದಾರಿಯಲ್ಲಿ ತಡೆದು ನಿಲ್ಲಿಸಿ ೫ರೂಪಾಯಿಯಿಂದ ೫೦೦ರೂಪಾಯಿಗಳ ವರೆಗೂ ಸಾಲ ಕೇಳಿ ನಿಮ್ಮನ್ನು ತೊಂದರೆಗೀಡುಮಾಡ

ಬಳಗಲು. ಆದರೆ ಅವುಗಳು ಹಾಗೆಂದೆನೂ ಪಡಬಾರದು. ನೀವು ಶಾಲೆಯಲ್ಲಿ ಕಾಸಿನಂತ ಗೃಹಿಣಿಯಾಗಿದ್ದರೆ ಅವರು ಪಡ ಪೈಸೆ, ಉಪ್ಪಿನಿಂದ ಮೊದಲುಗೊಂಡು ಅಕ್ಕಿಯ ಪರಿಗೆ ಕಡ ಕೇಳಿ ನಿಮ್ಮ ಗೃಹಜೀವನದಲ್ಲಿ ಕಲಿ ಹಾಕಿ ಕೌಟುಂಬಿಕ ಸ್ವಾಸ್ಥ್ಯವನ್ನು ಹಾಳು ಮಾಡಲಾರರು; ಅಲ್ಲದೆ ಹೊತ್ತಿನಲ್ಲಿ ಬಂದು ನಿಮ್ಮ ಪಾಲಿನ ಊಟ ತಿಂಡಿಗಳಲ್ಲಿ ಪಾಲೊಂದನ್ನು ಹಾಳು ಹರಟೆ ಕೊಟ್ಟು ನಿಮ್ಮ ವೇಳೆಯ ಹಾಗೂ ಹಣದ ಅಪವ್ಯಯಕ್ಕೆ ಕಾರಣರಾಗಲಾರರು ಅಥವಾ ನಿಮ್ಮನ್ನು ಹೊಗಳಿ ನಿಮ್ಮಲ್ಲಿಯ ಔದಾರ್ಯವೆಂಬ ಅಪರಂಜಿ ಗುಣದ ದುರುಪಯೋಗ ಪಡಿಸಿಕೊಂಡರ ನಿಮಗೆ ಗೊತ್ತೇ ಇದೆ, ಸಂಬಂಧವಿಲ್ಲದ ಸಂಸ್ಥೆಗಳಿಗಾಗಿ ಸಹಾಯಧನ ಎತ್ತಲಾರರು. ಹೀಗೆಯೇ ವಿಚಾರ ಮಾಡುತ್ತ ಹೋದಂತೆ ವೈರಿಗಳಿಂದಾಗುವ ಇದೇ ಬಗೆಯ ಹತ್ತಾರು ಪ್ರಯೋಜನಗಳು ನಿಮಗೆ ಹೊಳೆಯಬಹುದು.



" ಅಕ್ಕಿಯ ಪರಿಗೆ ಕಡ ಕೇಳಿ . . . "

ವೈರಿಗಳು ನಮಗೆ ಇಷ್ಟೆಲ್ಲ ಉಪಯುಕ್ತ ಇದ್ದರೂ ನಿಮ್ಮ ಲಕ್ಷಕ್ಕೆ ಬಾರದೇ ನೀವು ಅಜಾತ ಶತ್ರುಗಳಾಗಿರುವ ಸಂಭವವಿದೆ. ಆದರೂ ಚಿಂತೆಯಿಲ್ಲ. ಶತ್ರುಗಳನ್ನು ಬೆಳೆಸಿಕೊಳ್ಳುವ ಬಗ್ಗೆ ಕೆಲವು ಸೂಚನೆಗಳನ್ನು ಕೊಡಬಯಸುತ್ತೇನೆ. ಮೊದಲನೆಯದಾಗಿ ನೀವು ನಿಮ್ಮ ದಾಕ್ಷಿಣ್ಯ, ಸಂಕೋಚ ಪ್ರವೃತ್ತಿಗಳನ್ನು ಬದಿಗಿರಿಸಬೇಕು. ಶ್ರೀ ಬೋರಪ್ಪ ನಿಮ್ಮ ಮನೆಗೆ ಬಂದನೆಂದಿಟ್ಟುಕೊಳ್ಳೋಣ. ಆಗ 'ಶನಿ ಬಂತಪ್ಪ' ಎಂದು ಮನಸ್ಸಿನಲ್ಲಿಯೇ ಗೊಣಗಿಕೊಳ್ಳದೆ ಸಾಧ್ಯವಿದ್ದಷ್ಟು ಗಡಿಬಿಡಿಯನ್ನು ಮುಖದ ಮೇಲೆ ಪ್ರದರ್ಶಿಸುತ್ತ, 'ಕ್ಷಮಿಸಿ, ನಾನು ೫ ಗಂಟೆಗೆ ಶ್ರೀ ವೀರಪ್ಪನವರನ್ನು ಕಾಣಲು ಹೋಗಬೇಕಾಗಿತ್ತು. ಆಗಲೇ ೬-೩೦ ಆಗಿ ಹೋಗಿದೆ. ಈಗ ನಾನು ಡ್ರೆಸ್ ಮಾಡಿಕೊಂಡು ಹೊರಡಲೇಬೇಕು; ಎಂದವರೇ ಬಟ್ಟೆ ಧರಿಸಿ, ಬೋರಪ್ಪನವರನ್ನು ಹೊರಗೆ ಎಳೆದುಕೊಂಡೇ ಹೋಗಿಬಿಡಿರಿ. ಅವರನ್ನು ಬೇರೊರೆದು ದಾರಿಯಲ್ಲಿ ಬಿಟ್ಟು, ನೀವು ಅಲ್ಲಿ, ಇಲ್ಲಿ ಸುತ್ತಾಡಿಕೊಂಡು, ನಿಮ್ಮ ಪೂರ್ವ ಯೋಜನೆಯಂತೆ ನಿಮ್ಮ ಪ್ರಿಯಪತ್ನಿಯೊಡನೆ ಹಾಯಾಗಿ ಉಳಿದ ಸಮಯವನ್ನು ಕಳೆಯಲು ಮರಳಿ ಮನೆಗೆ ಬಂದುಬಿಡಬಹುದು !

ನಮಗೆ ಬೇಡಾದ ಜನರನ್ನು ದೂರವಿರಿಸುವದಕ್ಕೆ ಇನ್ನೊಂದು ಉಪಾಯವಿದೆ. ಶ್ರೀ ಬೋರಪ್ಪನಂಥವರು ನಿಮ್ಮ ಮನೆಗೆ ಆಗಮಿಸಿದ ಕೂಡಲೇ, "ಒಳ್ಳೆ ಸಮಯಕ್ಕೆ ಬಂದಿರಿ ಬೋರಪ್ಪ. ನನಗೆ ಅರ್ಜಂಟಾಗಿ ಎರಡುನೂರು ರೂಪಾಯಿ ಬೇಕಾಗಿದ್ದವು. ನಾನೇ ಈಗ ನಿಮ್ಮ ಮನೆಯ ಕಡೆಗೆ ಬರುವವನಿದ್ದೆ. ಈ ಸಮಯದಲ್ಲಿ ನೀವಲ್ಲದೆ ನನಗೆ ಇನ್ನಾರು ಸಹಾಯ ಮಾಡಬೇಕು. ? ದಯವಿಟ್ಟು ಕೊಡುತ್ತೀರಾ ? " ಎಂದು ಒಳ್ಳೇ ದೈನ್ಯದಿಂದ ಕೇಳಿರಿ. ಆಗ ಬೋರಪ್ಪ ಏನಾದರೂ ಕುಂಟು ನೆವ ಹೇಳಿ ತಾನಾಗಿಯೇ ನಿಮ್ಮ ಮನೆಯಿಂದ ಕಾಲ್ತೆಗೆಯುತ್ತಾನೆ. ( ನಿಮ್ಮ ಮಾತು ಮುಗಿಯುವ ಮೊದಲೇ ಅವನು ನಿಮ್ಮ ಮನೆಯ ಬಾಗಿಲು ದಾಟಿರುವ ಸಂಭವವು ಇದೆ. ! ) ಅಲ್ಲಿಂದ ಮುಂದೆ ತಿಂಗಳೆರಡು ತಿಂಗಳುಗಳ ವರೆಗಾದರೂ ಅವನು ನಿಮ್ಮ ಬೀದಿಯ ಕಡೆಗೆ ಸುಳಿಯಲಾರ !

ಅದೇ ರೀತಿ ನೆರೆಮನೆಯವರು ಯಾವುದಾದರೂ ಸಾಮಾನು ಕೇಳಲು ಬಂದಾಗ ತಮಗೆ ಅನಾನುಕೂಲ ಮಾಡಿಕೊಂಡು ಅದನ್ನು ಕೊಟ್ಟು ಬಿಡುವ ನಿಮ್ಮ ಶ್ರೀಮತಿಯವರಿಗೆ ಕೆಲವು ಸಲವಾದರೂ ನಿರ್ದಾಕ್ಷಿಣ್ಯವಾಗಿ 'ಇಲ್ಲ' ಎಂದು ಹೇಳಿ ಬಿಡಲು ಸೂಚಿಸಿರಿ. ಒಂದು ವೇಳೆ ಅಂಥ ಸಮಯದಲ್ಲಿ ನೀವೇ ಮನೆಯಲ್ಲಿದ್ದರೆ, 'ಏ ಶಾಂತಾ, ಈಗ ಸಂಜೆ ನಾಲ್ಕು ಜನ ಸ್ನೇಹಿತರು ಚಹಾಕ್ಕೆ ಬರುವವರಿದ್ದಾರೆ ಸಕ್ಕರಿ ಅದ ಅಷ್ಟೆ,' ಎಂದು ಅವಿಗೆ ... ಮನೆಗೆ ಕೇಳುವ ಹಾಗೆ ಕೂಗಿದರೆ ಸಕ್ಕರೆ ಕೇಳಲು ಬಂದ

" ನನಗೆ ಅರ್ಜಂಟಾಗಿ ೨೦೦ ರೂ. ಬೇಕಾಗಿದ್ದವು "

ದೀಪಾವಳಿಯ ಶುಭಾಶಯಗಳು





ಉತ್ತಮ ಚಹಾ ಪುಡಿಗಾಗಿ ಇಂದೇ ಸಂದರ್ಶಿಸಿರಿ

## ದಿ ಕೆನೆರಾ ಟೀ ಸೆಂಟರ

ಚಹಾ ಕಾಫಿ ವ್ಯಾಪಾರಸ್ಥರು

**ಸಿಂಪಿಗಲ್ಲಿ, ಹುಬ್ಬಳ್ಳಿ**

●

ಉತ್ತಮ ಚಹಾ ಪುಡಿಗಾಗಿ ಇಂದೇ ಸಂದರ್ಶಿರಿ

## ಟಿ ಸಿಂಡಿಕೇಟ

ಚಹಾ, ಕಾಫಿ, ಶೋಕೆ ವ ಚಿಲ್ಲರೆ ವ್ಯಾಪಾರಸ್ಥರು

ಮಾರ್ಕೆಟ ಹತ್ತರ, ಸಿರ್ಸಿ (N. K.)

●

ಉತ್ತಮ ಚಹಾ ಪುಡಿಗಾಗಿ

**ದುರ್ಗದಬೈಲಿನಲ್ಲಿ**

ಇಂದೆ ತಪ್ಪದೆ ಸಂದರ್ಶಿಸಿರಿ

## ದಿ ಗೌರಿಶಂಕರ ಟ್ರೇಡಿಂಗ ಕಂ.

M.T.S. ಚಹಾ ಕಾಫಿ ಶೋಕೆ ವ ಚಿಲ್ಲರೆ ವ್ಯಾಪಾರಸ್ಥರು

ಸ್ಟಾಕಿಸ್ಟ: ಸನಫ್ಲೊವರ ಮೆಜಸ್ ಪ್ರೊಡಕ್ಟ್ಸ

(ಕಾರವಾರ ಧಾರವಾಡ ಜಿಲ್ಲಾ)

**ಭಾರತ ಇಂಡಸ್ಟ್ರೀಜ ಟ್ರೇಡಿಂಗ ಕಂ.**

ದುರ್ಗದಬೈಲ, ಹುಬ್ಬಳ್ಳಿ.

●

ಸ್ಥಾಪನೆ : ೧೯೬೧    ಹೆ. ಆ. ಹುಬ್ಬಳ್ಳಿ



ನಮ್ಮ ಸಂಘದ ಖರೀದಿದಾರ, ವಿಕ್ರಿದಾರ, ಸದಸ್ಯ, ಹಿತೈಷಿಗಳೆಲ್ಲರಿಗೂ

ದೀಪಾವಳಿಯ ಶುಭಾಶಯಗಳು

ದಸರಾ ಪ್ರಶಸ್ತಿ ಪಡೆದ

## ದಿ ಹಿರೇಮೊರಬ ಗ್ರಾಮ ಸೇವಾ ಸಹಕಾರಿ ಸಂಘ ನಿ., ಹಿರೇಮೊರಬ

ತಾ. ಹಿರೇಕೇರೂರ (ಜಿಲ್ಲಾ: ಧಾರವಾಡ)

**ನಮ್ಮ ಸಂಘವು**

ಮೇಸುವ ಹಾಗು ಬಿತ್ತುವ ಹತ್ತಿಕಾಳು, ರಸಾಯನಿಕ ವ ಮಿಶ್ರಣ ಗೊಬ್ಬರ, ಒಕ್ಕಲತನ ಉಪಕರಣ, ಕ್ರಿಮಿನಾಶಕ ಔಷಧ, ಗೃಹ ಉಪಯೋಗಿ ಹಾಗು ಗ್ರಾಹಕರ ಜೀವನಾವಶ್ಯಕ ಜೀನಸುಗಳನ್ನು ಯೋಗ್ಯ ಬೆಲೆಗೆ ಖರೀದಿ ವ ಮಾರಾಟ ಮಾಡುತ್ತದೆ. ಸರ್ವರೂ ಇದರ ಲಾಭ ಪಡೆಯಬೇಕಾಗಿ ವಿನಂತಿ.

ಬಿ. ಬಿ. ಪಾಟೀಲ — ಕಾರ್ಯದರ್ಶಿ

ಎಸ್. ಬಿ. ಪಾಟೀಲ — ಅಧ್ಯಕ್ಷ



ದೀಪಾವಳಿಯ ಶುಭಾಶಯಗಳು.......

## ಉತ್ತಮ ಪಾದರಕ್ಷೆಗಳಿಗಾಗಿ



ಉತ್ತಮ ಕ್ರೋಮ್ ಲೆದರಿನ

**ಚಪ್ಪಲಿಗಳನ್ನು ತಯಾರಿಸುವ ಸಂಸ್ಥೆ**

ನಿಮ್ಮ ಆರ್ಡರುಗಳಿಗೆ ಸದಾ ಸ್ವಾಗತವಿದೆ. ಪಾರ್ಸಲು ಚಿಕ್ಕದಾದರು ಸಂತೋಷದಿಂದ ಸ್ವೀಕರಿಸಿ ಎಲ್ಲಿಗೆ ಬೇಕಾದರೂ ವ್ಹಿ. ಪಿ. ಮೂಲಕ ರವಾನಿಸುವ ಏರ್ಪಾಡು ನಮ್ಮಲ್ಲಿದೆ.

ಉಚಿತ ಕೆಟಲಾಗಿಗೆ ಬರೆಯಿರಿ :

## Jai Hind Leather Works

**KINNIGOLI** (*S. Kanara*)

ವಿಷಯವೆಷ್ಟು ಅಲ್ಲಿಂದ ಒಂದೇ ಕ್ಷಣದಲ್ಲಿ ಪಲಾಯನವಾಗುವದರಲ್ಲಿ ಸಂದೇಹವಿಲ್ಲ !

ನೀವು ಸಂಭಾಷಣೆಯಲ್ಲಿ ತೊಡಗಿದಾಗ ಬರೀ 'ಹೂಂ'ಗುಟ್ಟುತ್ತ ಕುಳಿತುಕೊಳ್ಳದೆ ಇನ್ನೊಬ್ಬರ ಅಭಿಪ್ರಾಯಗಳನ್ನು ಕಟುವಾಗಿ ಟೀಕಿಸುವುದನ್ನು ಕಲಿತುಕೊಳ್ಳಿರಿ. ಯಾರಾದರೂ ತಾರುಣ್ಯದಲ್ಲಿ ತಾವೆಸಗಿದ ಸಾಹಸಕೃತ್ಯಗಳ ವರ್ಣನೆ ಮಾಡುತ್ತಿದ್ದರೆ ಅವರ ಮಾತಿನಲ್ಲಿ ಮಧ್ಯೆ ಮಧ್ಯೆ ಪ್ರವೇಶಿಸಿ ಅವರಿಗಿಂತಲೂ ಹೆಚ್ಚಿನ ಸಾಹಸದ ಕಥೆಗಳನ್ನು ಕಟ್ಟಿ ಬುರುಡೆ ಬಿಂದಾಚಾರಿಯಂತೆ ಬುರುಡೆಗಳನ್ನುರುಳಿಸುವುದಕ್ಕೆ ಹಿಂಜರಿಯ ಬೇಡಿರಿ. ತಮ್ಮ ಮಾತಿಗೆ ಮೇಲಿಂದ ಮೇಲೆ ವ್ಯತ್ಯಯ ಉಂಟಾಗುವದನ್ನು ನೋಡಿ ಅವರು ಮಾತನಾಡುವದನ್ನೇ ನಿಲ್ಲಿಸಿ ಕೊನೆಗೆ ಅಲ್ಲಿಂದೆದ್ದು ಹೋಗಬಹುದು.

ಈ ಎಲ್ಲ ಸೂಚನೆಗಳನ್ನು ಕಾರ್ಯರೂಪಕ್ಕೆ ತಂದರೆ ನಿಮಗೆ ಕೆಲವು ಶತ್ರುಗಳಾದರೂ ದೊರೆಯಬಹುದು. ಯಾವ ಕಟ್ಟುನಿಟ್ಟುಗಳಿಲ್ಲದೆ ಮನ ಬಂದಂತೆ ವರ್ತಿಸುವುದು, ಮಾತನಾಡುವುದರಿಂದ ನಿಮಗೆ ಒಂದು ಬೇರೆ ಬಗೆಯ ಆನಂದ ಸಿಗುವದರಲ್ಲಿ ಸಂದೇಹವಿಲ್ಲ. ಮನೆಯ ಮಡದಿಯಿಂದ ಮೊದಲುಗೊಂಡು ಮೇಲಧಿಕಾರಿಯವರೆಗೆ ಎಲ್ಲರಿಗೂ 'ಎಸ್ ಸರ' ಎಂದು ತಲೆ ತಗ್ಗಿಸಿ ಲಾಂಗೂಲಚಾಲನೆ ಮಾಡಿ ಮಾಡಿ ಬೇಸತ್ತ ನಿಮಗೆ ಈ ಕಲೆಯ ಕೆಲವು ವಿಧಾನಗಳು ಉಪಯೋಗವಾಗುವವು. ಆದರೆ ಬರಬರುತ್ತ ನಿಮಗೆ ಈ ಕಲೆಯ ಅಭ್ಯಾಸ ಅತಿಯಾಗಿ ನೀವು ಅದರ ಗುಲಾಮನಾಗುವ ಸಂಭವವಿದೆ. ಅಲ್ಲಿಯೇ ಅಪಾಯವಿದೆ. ಉಳಿದೆಲ್ಲ ಕಲೆಗಳಂತೆ ಶತ್ರುಗಳನ್ನು ಬೆಳೆಸಿಕೊಳ್ಳುವ ಕಲೆಯನ್ನು ಕರಗತಮಾಡಿಕೊಂಡು ಅದರಲ್ಲಿ ಪರಿಪೂರ್ಣತೆಯನ್ನು ಸಾಧಿಸಲೆತ್ನಿಸುವದೆಂದರೆ ಶುದ್ಧ ಅವಿವೇಕತನವಾದೀತು. ಏಕೆಂದರೆ ಎಲ್ಲರನ್ನೂ ವೈರಿಗಳಂತೆ ಕಾಣುವ ಹುಚ್ಚು ನಿಮ್ಮ ತಲೆಯಲ್ಲಿ ಸೇರಿದಾಗ ಡಾ. ಜೆಕಿಲ್‌ರ ಪ್ರಯೋಗಗಳಲ್ಲಿ ಕೊನೆಗೆ ಮಿ. ಹಾಯ್ಡ್ ಮಾತ್ರ ಉಳಿಯುವಂತೆ ನಿಮ್ಮ [illegible] ಆಗಿ ಪೇಚಾಡ್ಬೇಕಾಗಬಹುದು, ಜೋಕೆ !



# ಸಂಸ್ಕೃತ ಕವಿಗಳ ವಿಚಿತ್ರ ಉಪನಾಮಗಳು!

ಇಂದಿನ ಹೊಸಗನ್ನಡದ ರಸಸಾಹಿತ್ಯದಲ್ಲಿ ಅನೇಕ ಕವಿಗಳು ಚಿತ್ರವಿಚಿತ್ರವಾದ ಉಪನಾಮಗಳಿಂದ ಪ್ರಸಿದ್ಧರಾಗಿದ್ದಾರೆ. ಶ್ರೀ. ಅಂಬಿಕಾತನಯದತ್ತ ಆನಂದಕಂದ, ತ್ರಿವಿಕ್ರಮ, ಚದುರಂಗ, ಕುವೆಂಪು, ಶ್ರೀರಂಗ, ಬೀಚಿ ಮುಂತಾದ ಕನ್ನಡ ಕವಿಗಳ ಕಾವ್ಯನಾಮಗಳು ಎಲ್ಲರಿಗೂ ಸುಪರಿಚಿತವೇ ಆಗಿವೆ. ಇದರಂತೆ ಮರಾಠಿ ಹಿಂದಿ ಇಂಗ್ಲೀಷ ಮೊದಲಾದ ಭಾಷೆಗಳಲ್ಲಿಯೂ ಇಂಥ ವಿವಿಧ ಉಪನಾಮ ಅಪನಾಮಗಳಿಗೆ ಕೊರತೆ ಇಲ್ಲ. ಇವೆಲ್ಲವುಗಳೂ ಆ ಆ ಕವಿಗಳಿಂದಲೇ ಸ್ವಯಂರಚಿತಗಳಾಗಿವೆ.

ಆದರೆ ಸಂಸ್ಕೃತಕವಿಗಳ ಉಪನಾಮಗಳಲ್ಲಿ ಒಂದು ವೈಶಿಷ್ಟ್ಯವುಂಟು. ಅವಾವೂ ಆ ಆ ಕವಿಗಳಿಂದ ಸ್ವಯಂಕೃತವಲ್ಲ. ಅವರವರ ಕಾವ್ಯನಾಟಕಗಳಲ್ಲಿ ಎದ್ದು ಕಾಣುವ ಗುಣಾವಗುಣ ವೈಚಿತ್ರ್ಯ ವಿಕ್ಷಿಪ್ತತೆಗಳ ಮೂಲಕ ಬಂದುದಾಗಿವೆ. ಸಂಸ್ಕೃತ ಕವಿಗಳ ಉಪನಾಮಗಳು ಆ ಆ ಕವಿಗಳ ವಿಶಿಷ್ಟವಾದ ರಸರೀತಿ ಶೈಲಿ ವಾಜೋಭಂಗಿ ವ್ಯಂಗ್ಯವೈಖರೀ ನಯನೈಪುಣ್ಯಗಳ ನಾನಾ ಬಗೆಗಳ ನಿರೂಪಕನಾಮಗಳಾಗಿವೆ. ಹೀಗೆ ಸಂಸ್ಕೃತ ಕವಿಗಳ ಉಪನಾಮಗಳೆಲ್ಲ ಗುಣಲಬ್ಧವಾದ ಯಥಾರ್ಥನಾಮಗಳೇ ಆಗಿವೆ. ಅಂಥ ಕೆಲವು ಮಹಾಕವಿಗಳ ಅಡ್ಡ ಹೆಸರು ಅಥವಾ ಮರಿ ಹೆಸರು ಕಿರಿ ಹೆಸರು ಹಾಗೂ ಕಾವ್ಯನಾಮಗಳ ಕಾರಣವಾದ ಹಲವಾರು ಪದ್ಯಗಳನ್ನು ಇಲ್ಲಿ ಉದಾಹರಿಸಿ ಆ ಹೆಸರಿನ ಬಾಲಾಗಸಿಯ ಕಾರಣವನ್ನೂ ಪರಾಮರ್ಶಿಸಲಾಗುವದು.

## ದೀಪಶಿಖಾ-ಕಾಲಿದಾಸ

ಮಹಾಕವಿಯಾದ ಕಾಲಿದಾಸನಿಗೆ ದೀಪಶಿಖಾ ಕಾಲಿದಾಸ ಎಂದು ಅಡ್ಡ ಹೆಸರು ಬಂದಿದೆ. ಇದಕ್ಕೆ ಅವನ ರಘುವಂಶ ಕಾವ್ಯದ ಆರನೇ ಸರ್ಗದಲ್ಲಿಯ ಒಂದು ಪದ್ಯವೇ ಕಾರಣವಾಗಿದೆ.

> "ಸಂಚಾರಿಣೀ ದೀಪಶಿಖೇವ ರಾತ್ರೌ।
> ಯಂ ಯಂ ವ್ಯತೀಯಾಯ ಪತಿಂವರಾ ಸಾ॥
> ನರೇಂದ್ರಮಾರ್ಗಾಟ್ಟ ಇವ ಪ್ರಪೇದೇ।
> ವಿವರ್ಣಭಾವಂ ಸ ಸ ಭೂಮಿಪಾಲಃ॥"

ಇದು ಇಂದುಮತಿಯ ಸ್ವಯಂವರ ಕಾಲದಲ್ಲಿಯ ಒಂದು ಸಂದರ್ಭ. ಸ್ವಯಂವರ ಮಂಟಪದಲ್ಲಿ ಅನೇಕ ರಾಜಕುಮಾರರು ಸಡಗರದಿಂದ ಕುಳಿತುಕೊಂಡಿದ್ದಾರೆ. ರಾಜಕುವರಿಯಾದ ಇಂದುಮತಿಯು ಕೈಯಲ್ಲಿ ಸ್ವಯಂವರದ ಮಾಲೆಯನ್ನು ಹಿಡಿದುಕೊಂಡು ರಾಜರ ಸಾಲಿನಲ್ಲಿ ನಡೆದಿದ್ದಾಳೆ. ಇಂದುಮತಿಯು ಯಾವ ರಾಜನ ಎದುರು ಬಂದುನಿಲ್ಲುವಳೋ ಅವನ ಮುಖವು "ಇವಳು ನನ್ನನ್ನೇ ವರಿಸಬಹುದೆಂಬ ಆಶೆಯಿಂದ ಅರಳಿ ಬೆಳಗಹತ್ತುತ್ತದೆ. ಆದರೆ ಅವಳು ಒಮ್ಮೆ ಆ ರಾಜನತ್ತ ನೋಡಿ ಮನಸ್ಸು ಬಾರದೇ ಮುಂದೆ ನಡೆವಾಗ ಅರಳಿ ಅಗಲವಾದ ಅವರ ಮೋರೆಯು ಒಮ್ಮೆಲೇ ಇಳಿದು ನಿಸ್ತೇಜವಾಗಿ ಬಿಡುತ್ತದೆ. ರಾತ್ರಿಯ ಕಾಲದಲ್ಲಿ ರಾಜಬೀದಿಯಲ್ಲಿಯ ಭವ್ಯ (ಬಂಗಲೆ) ಕಟ್ಟಡಗಳ ಎದುರು ಚಲಿಸುವ ದೀಪದ ಕಂದಿ ಅಥವಾ ಹಿಲಾಲು ಹಿಡಿದಾಗ ಎದುರಿನ ಮನೆ ಮಾಳಿಗೆ ಒಮ್ಮೆಲೆ ಬೆಳಗಿದಂತಾಗಿ ಪ್ರಕಾಶಿಸುತ್ತದೆ. ಆ ಹಿಲಾಲು ಅಥವಾ ದೀಪಜ್ಯೋತಿಯು ಮುಂದೆ ಹೋದಕೂಡಲೇ ಹಿಂದೆ ಬೆಳಗಿದ ಮನೆ ಮಾಳಿಗೆ ಮತ್ತೆ ಮಲಿನವಾಗಿಬಿಡುತ್ತದೆ. ಅದರಂತೆಯೇ ಇಲ್ಲಿಯೂ ಆಯಿತು.

ಇಲ್ಲಿ ಇಂದುಮತಿಯನ್ನು ಜಂಗಮಜ್ಯೋತಿ ಶಿಖೆಗೆ ಹೋಲಿಸಿ ಅವಳು ಎದುರುಬಂದು ನಿಂತಾಗ ಅರಳಿದ ರಾಜರ ಮುಖಗಳನ್ನು ಎದುರು ದೀಪ ಹಿಡಿದಾಗ ಬೆಳಗಿ ಬಳಿಕ ನಿಸ್ತೇಜವಾಗುವ ಅರಮನೆಗಳಿಗೆ ಹೋಲಿಸಿದ್ದು ತುಂಬ ಔಚಿತ್ಯಪೂರ್ಣವೂ ಜನರ ಮನಸ್ಸಿನಲ್ಲಿ ಅಚ್ಚೊತ್ತಿ ನಿಲ್ಲುವಂತಹವೂ ಆಗಿದೆ.

---

**ಪಂಢರೀನಾಥಾಚಾರ್ಯ ಗಲಗಲಿ**
**ಗದಗ**

---

ಸರ್ವೋತ್ಕೃಷ್ಟವಾದ ಈ ದೀಪಶಿಖೆಯ ಸರ್ವೋಪಮೆಯಿಂದ ಕಾಲಿದಾಸನು "ದೀಪಶಿಖಾ ಕಾಲಿದಾಸ" ಎಂದೇ ಪ್ರಸಿದ್ಧನಾದನು.

## ಘಂಟೆಯ ಮಾಘ

"ಶಿಶುಪಾಲ ವಧ" ಎಂಬ ಮಹಾಕಾವ್ಯವನ್ನು ಬರೆದ ಮಹಾಕವಿ ಮಾಘನಿಗೆ "ಘಂಟಾಮಾಘ" ಎಂಬ ಉಪನಾಮ ಬಂದಿದೆ. ಇವನು ಹತ್ತು ಹೀನ ಕೃತಿಗಳನ್ನು ರಚಿಸದೇ ಮುತ್ತಿನಂಥ ಒಂದು ಉತ್ತಮ ಕಾವ್ಯವನ್ನು ರಚಿಸಿ ಸಂಸ್ಕೃತ ಸಾಹಿತ್ಯದಲ್ಲಿ ಚಿರಂಜೀವಿಯಾದ ಚಿಕ್ಕಿಯಂತೆ ಬೆಳಗಿದ್ದಾನೆ. ಅವನ ಕಾವ್ಯಕ್ಕೆ 'ಶಿಶುಪಾಲವಧ' ಎಂದು ಹೆಸರಿಟ್ಟಿದ್ದರೂ ಅದು 'ಮಾಘ ಕಾವ್ಯ' ವೆಂದೇ ಜಗತ್ತಿನಲ್ಲಿ ಪ್ರಸಿದ್ಧವಾಗಿದೆ. "ಮಾಘೇ ಮೇಘೇ ಗತಂ ವಯಃ" ಎಂದು ಜ್ಞಾನಿಗಳು ಹೇಳಿದ್ದಾರೆ. ಇದು ಸಂಸ್ಕೃತದ ಪಂಚಮಹಾಕಾವ್ಯಗಳಲ್ಲಿ ಒಂದು.

ಈ ಮಾಘಕವಿಗೆ ಘಂಟಾಮಾಘ ಎಂಬ ಹೆಸರು ಬರಲಿಕ್ಕೆ ಅವನ ಕಾವ್ಯದಲ್ಲಿಯ ಒಂದು ಪ್ರಭಾತ ವರ್ಣನೆಯ ಪದ್ಯವೇ ಕಾರಣವಾಗಿದೆ.

> "ಉದಯತಿ ವಿತತೋರ್ಧ್ವರಶ್ಮಿರಜ್ಜಾ
> ವಹಿಮರುಚೌ ಹಿಮಧಾಮ್ನಿ ಯಾತಿ ಚಾಸ್ತಂ
> ವಹತಿ ಗಿರಿರಯಂ ವಿಲಂಬಿ ಘಂಟಾ
> ದ್ವಯಪರಿಣತವಾರಣೇಂದ್ರ ಲೀಲಾಮ್॥

"ರೈವತಕ ಪರ್ವತದ ಪೂರ್ವದಿಶೆಯಲ್ಲಿ ಸೂರ್ಯಮಂಡಲವು ಉದಯ ಹೊಂದುತ್ತಲಿದ್ದರೆ ಪಶ್ಚಿಮ ಭಾಗದಲ್ಲಿ ಚಂದ್ರಮಂಡಲವು ಅಸ್ತಹೊಂದುವದರಲ್ಲಿದೆ. ಇದರಿಂದ ರೈವತಕಗಿರಿಯೆಂಬ ಆನೆಯು ಎರಡು ಕಿವಿಗಳಿಗೆ ಎರಡು ಗಂಟೆ ಕಟ್ಟಿ ಕಿರಣದ ಹಗ್ಗದಿಂದ ಎರಡೂ ಕಡೆಗೆ ತೂಗು ಬಿಟ್ಟಂತಾಗಿದೆ" ಎಂದು ಚತುರಚಮತ್ಕಾರದಿಂದ ಬಣ್ಣಿಸಿದ್ದಾನೆ. ಸೂರ್ಯ-ಚಂದ್ರರನ್ನು ಗಿರಿಯ ಗಂಟೆಗಳನ್ನಾಗಿ ರೂಪಿಸಿದುದರಿಂದ ಅವನಿಗೆ 'ಘಂಟೆಯ ಮಾಘ' ಎಂದು ಹೆಸರುಬಂದಿತು.

## ಕೊಡೆಯ ಭಾರವಿ

ಕಿರಾತಾರ್ಜುನೀಯ ಎಂಬ ಮಹಾಕಾವ್ಯವನ್ನು ರಚಿಸಿದ ಭಾರವಿಯು "ಭಾರವೇರರ್ಥಗೌರವಂ" ಎಂಬ ಜಾಣ್ಣುಡಿಯಂತೆ ಭಾವಾರ್ಥಗಂಭೀರತೆಗೆ ಪ್ರಸಿದ್ಧನಾಗಿದ್ದಾನೆ. ಇವನ ಕಿರಾತಾರ್ಜುನೀಯವೂ ಕೂಡ ಸಂಸ್ಕೃತದಲ್ಲಿಯ ರಘುವಂಶ, ಕುಮಾರ ಸಂಭವ, ಶಿಶುಪಾಲವಧ, ನೈಷಧೀಯ ಚರಿತ ಕಿರಾತಾರ್ಜುನೀಯ ಎಂಬ ಪಂಚಮಹಾ ಕಾವ್ಯಗಳಲ್ಲಿ ಒಂದಾಗಿದೆ. ಇವನಾದರೂ ಈ ಒಂದೇ ಕಾವ್ಯದಿಂದ ಎಂದೂ ಅಳಿಸದ ಶಾಶ್ವತ ಕೀರ್ತಿಯನ್ನು ಗಳಿಸಿದ್ದಾನೆ.

ಇವನಿಗೆ "ಕೊಡೆಯ ಭಾರವಿ' ಆತಪತ್ರಭಾರವಿ' ಎಂದು ಸಂಸ್ಕೃತದಲ್ಲಿ ಅಡ್ಡ ಹೆಸರು ಬಂದಿದೆ. ಅದಕ್ಕೆ ಅವನು ತನ್ನ ಕಿರಾತಾರ್ಜುನೀಯದ ಒಂದು ಪದ್ಯದಲ್ಲಿ

> ಉದ್ಧೃತಃ ಸರಸಿಜಸಂಭವಃ ಪರಾಗಃ
> ವಾತ್ಯಾಭಿಃ ವಿಯತಿ ವಿರೇಣ ಭಿರ್ವಿಕೀರ್ಣಃ
> ಸಂಧತ್ತೇ ಕನಕಮಯಾತಪತ್ರಲಕ್ಷ್ಮೀಂ ॥

"ಬಿರುಗಾಳಿ ಬೀಸಿ ಸರೋವರದ ಕಮಲ ಕೋಶಗಳಲ್ಲಿಯ ಪರಾಗವನ್ನೆಲ್ಲ ಮುಗಿಲಿಗೆ ತೂರಿದಾಗ ಅದು ಅಲ್ಲಿ ಚಕ್ರಾಕಾರವಾಗಿ ಸುತ್ತುತ್ತ ಬಂಗಾರದ ಕೊಡೆಯಂತೆ ಕಂಗೊಳಿಸಿತು" ಎಂದು ಬಣ್ಣಿಸಿದ್ದಾನೆ. ಹೊಸ ಮಾದರಿಯ ಈ ಚಿನ್ನದ ಛತ್ರದ ನವೀನ ಕಲ್ಪನೆಯ ಕೌತುಕದಿಂದ ಅವನು ಕೊಡೆಯ ಕವಿ ಎಂದೇ ಪ್ರಖ್ಯಾತನಾದ.

## ಕುದುರೆಯ ಬಾಣ ಭಟ್ಟ

'ಕಾದಂಬರಿ' ಎಂಬ ಮಹಾ ಗದ್ಯ ಪ್ರಬಂಧವನ್ನು ಬರೆದ ಬಾಣ ಭಟ್ಟನು ತನ್ನ ಕಾದಂಬರಿಯಲ್ಲಿ ಇಂದ್ರಾಯುಧ ಎಂಬ ಕುದುರೆಯ ಬಣ್ಣನೆಯನ್ನು ಅದ್ಭುತವಾಗಿ ಮಾಡಿದ್ದಾನೆ. ಬರಿ ಒಂದು ಕುದುರೆಯ ಬಗ್ಗೆ ಜಗತ್ತಿನ ಯಾವ ಭಾಷಾ ಸಾಹಿತ್ಯದಲ್ಲಿಯೂ ಇಷ್ಟು ವಿವರ ವಿಸ್ತಾರವುಳ್ಳ ಸುಂದರ ವರ್ಣನೆಯು ಕಾಣ ಸಿಗುವದಿಲ್ಲ. ಲೋಕೋತ್ತರವಾದ ಈ ತುರಂಗದ ಬಣ್ಣನೆಯಿಂದ ಬಾಣ ಭಟ್ಟನು ತುರಂಗ ಬಾಣ ಅಥವಾ ಕುದುರೆಯ ಬಾಣನೆಂದೇ ಪ್ರಪಂಚದಲ್ಲಿ ಪ್ರಸಿದ್ಧನಾದನು.

ಎಷ್ಟೋ ಸಂದರ್ಭಗಳಲ್ಲಿ ಈ ಉಪನಾಮಗಳಿಂದ ಕವಿಗಳ ಮೂಲ ಹೆಸರು ಮರೆಯಾಗಿ ಹೋಗಿ ಅಡ್ಡ ಹೆಸರುಗಳೇ 'ಕಾಯಂ' ಆಗಿ ಉಳಿದುಬಿಡುತ್ತವೆ. ಸಂಸ್ಕೃತ ಸಾಹಿತ್ಯದಲ್ಲಿ ಉತ್ತರ ರಾಮಚರಿತ್ರಾದಿ ಸುಪ್ರಸಿದ್ಧ ನಾಟಕಗಳನ್ನು ಬರೆದ ಅಮರ ಕವಿಯೆಂದು ಪ್ರಖ್ಯಾತನಾದ ಭವಭೂತಿಯ ಮೂಲ ಹೆಸರು ಶ್ರೀಕಂಠ ಎಂದಿದ್ದಿತು. ಆ ಹೆಸರು ಯಾರಿಗೂ ಗೊತ್ತೇ ಇಲ್ಲ. ಆದರೆ ಅವನ ಉಪನಾಮವಾದ 'ಭವಭೂತಿ' ಎಂಬ ಅಡ್ಡ ಹೆಸರಿನಿಂದಲೇ ಅವನು ದೊಡ್ಡ ಕವಿಯೆಂದು ಖ್ಯಾತನಾಗಿದ್ದಾನೆ. ಅವನಿಗೆ ಭವಭೂತಿ ಎಂದು ಹೆಸರು ಬರಲಿಕ್ಕೆ ಅವನ,

"ತಪಸ್ವೀ ಕಾಂ ಗತೋಽವಸ್ಥಾಮಿತಿ
ಸ್ಮೇರಾನನಾವಿವ
ಗಿರಿಜಾಯಾ ಸ್ತನೌ ವಂದೇ ಭವಭೂತಿ
ಸಿತಾನನೌ ॥

ತಪಸ್ಸಿಗೆ ಸೋಲಿತ ಶಿವನು ಪಾರ್ವತಿಯನ್ನು ಒಲಿದು ಕೈಹಿಡಿದ ಬಳಿಕ ಅವಳನ್ನು ಆಲಿಂಗಿಸಿದ. ಆಗ ಶಿವನ ಮೈ ಬೂದಿಯಿಂದ ಬೆಳ್ಳಗಾದ ಗಿರಿಜೆಯ ಸ್ತನಗಳು 'ಅಯ್ಯೋ ಪಾಪ ತಪಸ್ವಿಯಾದ ಶಿವನ ಅವಸ್ಥೆ ಹೇಗಾಯಿತಲ್ಲ!' ಎಂದು ನಗುವಂತೆ ಕಾಣುತ್ತಿತ್ತು."

ಇಲ್ಲಿ ಬಂದ 'ಭವ ಭೂತಿ' ಶಿವನ ಮೈ ಬೂದಿ ಎಂಬ ಶಬ್ದದಿಂದ ಅವನು ಭವಭೂತಿಯೆಂದೇ ಪ್ರಸಿದ್ಧನಾದ.

## ತಾಳದ ರತ್ನಾಕರ

ಒಂಬತ್ತನೇ ಶತಮಾನದಲ್ಲಿ ಕಾಶ್ಮೀರದ ಮಹಾರಾಜ ಅವಂತಿವರ್ಮನ ಆಸ್ಥಾನದಲ್ಲಿ 'ರತ್ನಾಕರ' ಎಂಬ ಮಹಾಕವಿಯೂ ಇದ್ದನು. ಅವನು 'ಹರ ವಿಜಯ' ಎಂಬ ೫೦ ಸರ್ಗದ ಅತ್ಯಂತ ದೊಡ್ಡದಾದ ಮಹಾಕಾವ್ಯವೊಂದನ್ನು ಬರೆದು ಸಂಸ್ಕೃತ ಸಾಹಿತ್ಯದ ಮಹಾಕವಿಗಳ ಮೇಲ್ಪಂಕ್ತಿಗೆ ಭೂಷಣಪ್ರಾಯನಾಗಿದ್ದಾನೆ. ಇವನಿಗೆ 'ತಾಳದ ರತ್ನಾಕರ' ಎಂದು ಹೆಸರು ಬರಲಿಕ್ಕೆ ಅವನ ಹರ ವಿಜಯ ಕಾವ್ಯದಲ್ಲಿಯ ಒಂದು ಸಂಧ್ಯಾ ವರ್ಣನೆಯ ಪದ್ಯವೇ ಕಾರಣೀಭೂತವಾಯಿತು.

"ಅಸ್ತಾವಲಂಬಿರವಿಬಿಂಬಿತಯೋದಯಾದ್ರಿ-
ಚೂಡೋನ್ಮಿಷತ್ ಸಕಲಚಂದ್ರತಯಾ ಚ
ಸಾಯಂ ॥
ಸಂಧ್ಯಾ ಪ್ರವೃತ್ತಹರಹಸ್ತಗೃಹೀತಕಾಂಸ್ಯ
ತಾಲದ್ವಯೇವ ಸಮದೃಶ್ಯತ ನಾಕಲಕ್ಷ್ಮೀಃ ॥

ಸಾಯಂಕಾಲದಲ್ಲಿ ಅಸ್ತಾಚಲದಲ್ಲಿ ಸೂರ್ಯನು ಮುಳುಗುತ್ತಲಿದ್ದಾನೆ. ಇತ್ತ ಪೂರ್ವಾಚಲದಲ್ಲಿ ಪೂರ್ಣಚಂದ್ರನು ಮೂಡುತ್ತಲಿದ್ದಾನೆ. ಮುಗಿಲಿನ ಎರಡು ಭಾಗದಲ್ಲಿ ಹೊಳೆಯುತ್ತಲಿರುವ ಈ ಸೂರ್ಯ ಚಂದ್ರ ಬಿಂಬಗಳು ಸಂಜೆಯ ಸಮಯದಲ್ಲಿ ನೃತ್ಯ ಮಾಡ ಹೊರಟ ಮಹಾದೇವರು ನಾಟ್ಯ ಭಂಗಿಯಲ್ಲಿ ಕೈಹಿಡಿದ ಎರಡು ಕಂಚಿನ ತಾಳಗಳಂತೆ ತೋರುತ್ತಿದ್ದವು. ಕ್ಷಿತಿಜದ ಎರಡು ಅಂಚುಗಳಲ್ಲಿ ಕಂಗೊಳಿಸುವ ರವಿ ಚಂದ್ರ ಮಂಡಲಗಳನ್ನು ಎರಡು ತಾಳಗಳನ್ನಾಗಿ ರೂಪಿಸಿದ್ದು ಅಪರೂಪವೂ ಅಪೂರ್ವವೂ ಆಗಿದೆ. ಅದ

ನಿಂದ ಅವನಿಗೆ ತಾಳದ ರತ್ನಾಕರ ಎಂಬ ವ್ಯಂಗ್ಯ ನಾಮವು ಪ್ರಾಪ್ತವಾಯಿತು.

## ಮಡಕೆಯ ತುಣುಕಿನ ಕವಿ ಘಟಕರ್ಪರ

ಅನೇಕ ಸಂದರ್ಭಗಳಲ್ಲಿ ಇಂಥ ವ್ಯಂಗ್ಯ ನಾಮಗಳೇ ಉಳಿದು ಬಂದು ಆ ಕವಿಗಳ ಮೂಲ ಹೆಸರೇ ಮೂಲೆಗುಂಪಾದ ಸಂದರ್ಭಗಳೂ ಉಂಟು. ಘಟಕರ್ಪರ ಎಂಬ ಸಂಸ್ಕೃತ ಕವಿಯ ಮೂಲ ಹೆಸರು ಗೊತ್ತೇ ಇಲ್ಲ. ಅವನು ಘಟಕರ್ಪರ ಎಂಬ ಉಪನಾಮದಿಂದಲೇ ಸಂಸ್ಕೃತ ಕವಿ ಪ್ರಪಂಚದಲ್ಲಿ ಪ್ರಸಿದ್ಧನಾಗಿದ್ದಾನೆ. ಇವನು ವಿಕ್ರಮ ರಾಜನ ಆಸ್ಥಾನದಲ್ಲಿದ್ದ ನವರತ್ನಗಳಲ್ಲಿ ಒಬ್ಬನಾಗಿದ್ದನೆಂದು

"ಧನ್ವಂತರಿಕ್ಷಪಣಕಾಮರಸಿಂಹ ಶಂಕು
ವೇತಾಲ ಭಟ್ಟಘಟಖರ್ಪರ ಕಾಳಿದಾಸಾಃ ॥

ಎಂಬ ಪದ್ಯದಿಂದ ತಿಳಿದುಬರುತ್ತದೆ. ಇವನು ಮೇಘದೂತದಂತೆ ಚಿಕ್ಕದಾದ ಒಂದು ಸಂದೇಶ ಕಾವ್ಯವನ್ನು ಬರೆದಿದ್ದಾನೆ. ಅದರಲ್ಲಿ ಪ್ರಿಯನಿಂದ ವಿರಹಿತಳಾದ ಪ್ರೇಯಸಿಯು ತನ್ನ ಪ್ರಿಯಕರನಿಗೆ ಪ್ರೇಮಸಂದೇಶವನ್ನು ಕಳಿಸಿಕೊಡುತ್ತಾಳೆ. ಇಲ್ಲಿಯ ಪದ್ಯಗಳೆಲ್ಲವೂ ಯಮಕ ಪ್ರಾಸಬದ್ಧವಾಗಿರುವುದು ಈ ಕಾವ್ಯದ ವೈಶಿಷ್ಟ್ಯವಾಗಿದೆ. ಅದರಲ್ಲಿ,

"ಆಲಂಬ್ಯನಾಂಬು ತೃಷಿತಃ ಕರ
ಕೋಶಪೇಯಂ
ಭಾವಾನುರಕ್ತದಯಿತಾ ಸುರತೈಃ
ಶಪೇಯಂ ॥
ಜೀಯೇಯ ಯೇನ ಕವಿನಾ
ಯಮಕೈಃ ಪರೇಣ
ತಸ್ಮೈ ವಹೇಯಮುದಕಂ
ಘಟಖರ್ಪರೇಣ ॥

ಯಾರು ನನ್ನಷ್ಟು ಯಮಕ ಪ್ರಾಸ ಬದ್ಧವಾದ ಪದ್ಯ ರಚನೆಯಲ್ಲಿ ಸೋಲಿಸುವರೋ ಅವರ ಮನೆಗೆ ಮಣ್ಣಿನ ಮಡಿಕೆಯ ತುಣುಕಿನಿಂದ ನೀರು ಹೊಯ್ದುತ್ತೇನೆ ಎಂದು ತನ್ನ ಪ್ರೇಯಸಿಯ ಆಣೆ ಮಾಡಿ ಹೇಳಿದ್ದಾನೆ. ಇದರಿಂದ ಅವನನ್ನು ಆ ಅಹಂಕಾರದ ಶಬ್ದದಿಂದಲೇ ಜನ ಕರೆಯಹತ್ತಿದರು. ಅದರಿಂದ ಅವನು 'ಘಟಖರ್ಪರ' ಒಡಕ ಮಡಕೆಯ ಕವಿ ಎಂದೇ ಸುಪ್ರಸಿದ್ಧನಾದನು.

ಇದರಂತೆ ಕರ್ಣಕಾರಕುಂಭ, ಕಪೋಲಕವಿ, ಅಪರಾಧ ಸುಂದರ, ಉತ್ಪ್ರೇಕ್ಷಾವಲ್ಲಭ, ನಿದ್ರಾದರಿದ್ರ, ಧಮಧಮಿಂಕಾರತ್ನ, ಭೇರಿಝಾಂಕಾರ, ರುದತೀ ಬ್ರಾಹ್ಮಣ ಮುಂತಾದ ಅನೇಕ ಉಪನಾಮಗಳಿಂದ ಎಷ್ಟೋ ಕವಿಗಳು ಪ್ರಸಿದ್ಧರಾಗಿದ್ದು ಅವರ ಕಾವ್ಯ ಪದ್ಯಗಳು ಉಪಲಬ್ಧವಿರುತ್ತವೆ.

### ಗಣಪತಿಯ ಹೊಟ್ಟೆ




ಹಾಳು ಈ ಕಲಿಗಾಲ ಬಹಳ ಕೆಟ್ಟ
ಬಾಜಾರಿನಲಿ ಕಾಳುಕಡಿಯೂ ತುಟ್ಟಿ
ಬೊಜ್ಜು ಬೆಳೆಸಿಹನು ಕಾಳಸಂತೆಯ ಶೆಟ್ಟಿ
ಇಳಿದುಹೋಗಿಹುದು ಗಣಪತಿಯ ಹೊಟ್ಟೆ

—ಶ್ರೀನಿವಾಸ ಕುಲಕರ್ಣಿ



# ಚಲಚ್ಚಿತ್ರ ರಂಗದಲ್ಲಿ

# ಕನ್ನಡ ಚಲಚ್ಚಿತ್ರೋದ್ಯಮ

# ಅಂದು-ಇಂದು-ಮುಂದು

ಕೆ. ನಾಗರಾಜರಾವ್

ಮೂಕ ಚಲನಚಿತ್ರದಿಂದ ಮಾತನಾಡುವ ಚಲನಚಿತ್ರಕ್ಕೆ ಅಡಿಯಿಟ್ಟದಿನವೇ ಭಾಷೆಗೆ ಈ ಉದ್ಯಮದಲ್ಲಿ ಪ್ರಾಧಾನ್ಯ ಸಿಕ್ಕಿತು. ಇಲ್ಲವಾಗಿದ್ದರೆ ಕನ್ನಡ ಚಲನಚಿತ್ರೋದ್ಯಮ ಕುರಿತು ವಿಚಾರ ಮಾಡಬೇಕಾದ ಕಾರಣವೇ ಇರಲಿಲ್ಲ. ಭಾಷಾ ಪ್ರಶ್ನೆಯಿಲ್ಲದಿದ್ದರೆ ಕನ್ನಡ ನಾಡಿನಲ್ಲಿ ಚಲನ ಚಿತ್ರೋದ್ಯಮ ಎಂದಷ್ಟೇ ವಿಚಾರ ಮಾಡಬೇಕಾಗುತ್ತಿತ್ತು. ಭಾರತದ ಉಳಿದ ಭಾಗದಲ್ಲಿ ಮೂಕ ಚಿತ್ರಗಳ ಸೃಷ್ಟಿಯಾಗುತ್ತಿದ್ದಾಗ ಕನ್ನಡ ನಾಡು ಸಹ ಮಂಕಾಗಿ ಕುಳಿತಿರಲಿಲ್ಲ.

ಬೆಂಗಳೂರಿನಲ್ಲಿ ತಮ್ಮದೇ ಸ್ಟುಡಿಯೋ ಹೊಂದಿದ ಸೂರ್ಯಫಿಲಂ ಕಂಪನಿ ಕನ್ನಡ ನಾಡಿನಲ್ಲಿ ಚಿತ್ರ ಪ್ರವೃತ್ತಿಯನ್ನು ಹುಟ್ಟಿಹಾಕಿದುದಷ್ಟೇ ಅಲ್ಲ, ಅದು ಶ್ರೀಮತಿ ಲಕ್ಷ್ಮೀಬಾಯಿಯಂತಹ ಶ್ರೇಷ್ಠಮಟ್ಟದ ಅಚ್ಚ ಕನ್ನಡ ಅಭಿನೇತ್ರಿಯನ್ನೂ ನಮಗೆ ದೊರಕಿಸಿ ಕೊಟ್ಟಿತು. ಮೂಕಕಾಲದಿಂದ ರಜತ ಪರದೆಯ ಮೇಲೆ ಈ ಕಲೆಯಲ್ಲಿ ಪದಾರ್ಪಣ ಮಾಡಿದ ಈ ಅಭಿನೇತ್ರಿ ಇನ್ನೂವರೆಗೆ ಕಲಾಸೇವೆ ಮಾಡುತ್ತಿರುವುದು ಹೆಮ್ಮೆಪಡುವಂತಹ ವಿಚಾರ. ಸಾಮಾನ್ಯವಾಗಿ ಚಲನಚಿತ್ರೋದ್ಯಮದಲ್ಲಿ ಅಭಿನೇತ್ರಿಯರಿಗೆ ಬಹಳ ಕಾಲ ಸೇವೆಸಲ್ಲಿಸುವ ಅವಕಾಶ ದೊರೆಯುವುದಿಲ್ಲ. ಆದರೆ ಈ ಶತಮಾನದ ಮೂರನೆಯ ದಶಕದ ಕಡೆ ವರ್ಷಗಳಲ್ಲಿ ಮೂಕಚಿತ್ರಗಳಲ್ಲಿ ನಾಯಕಿಯ ಪಾತ್ರ ವಹಿಸಲು ಆರಂಭಿಸಿದ ಈ ಅಭಿನೇತ್ರಿ ಸುಮಾರು ನಾಲ್ಕು ದಶಕಗಳ ಕಾಲ ಸತತವಾಗಿ ಕಲಾಸೇವೆ ಮಾಡಿದ್ದಾರೆಂದರೆ ಅದು ಹೆಮ್ಮೆಪಡುವಂತಹ ವಿಷಯವಷ್ಟೇ ಅಲ್ಲ ಆಶ್ಚರ್ಯಪಡುವಂತಹ ವಿಷಯವೂ ಹೌದು. ಈ ಉದ್ಯಮವೇ ಅಂತಹುದು. ವಿಶೇಷವಾದ ಕೌಶಲವಿಲ್ಲದಿದ್ದರೆ, ಬಹುಮುಖ ಪ್ರತಿಭೆ ಇಲ್ಲದಿದ್ದರೆ ಇಷ್ಟು ಕಾಲ ಭಾರತೀಯ ರಜತರಂಗದಲ್ಲಿ ಜೀವಂತ ಇರುವುದು ಸಾಧ್ಯವೇ ಇಲ್ಲ. ಯೌವ್ವನ, ರೂಪ ಇಷ್ಟೇ ಮುಖ್ಯಪಾತ್ರಗಳ ಗುರಿಹೊಂದಿರುವ ನಿರ್ಮಾಪಕಗಣವೇ ಪ್ರಧಾನವಾಗಿರುವವರೆಗೆ ಪರಿಸ್ಥಿತಿ ಹೀಗೆಯೇ ಇರುತ್ತದೆ. ಅದು ಹಾಗಿರಲಿ. ಸೂರ್ಯಫಿಲಂ ಕಂಪನಿ ಬಹಳ ಕಾಲ ಜೀವಂತವಾಗಿ ನಿಲ್ಲದಿದ್ದರೂ ಇದ್ದ ಅಲ್ಪ ಕಾಲದಲ್ಲೇ ಅದು ಮುವ್ವತ್ತಕ್ಕೂ ಹೆಚ್ಚಿಗೆ ಚಿತ್ರಗಳನ್ನು ತೆರೆಗೆ ತಂದಿತು. ಆ ಚಿತ್ರಗಳಿಗೆ ಅಖಿಲ ಭಾರತದ ಪ್ರದರ್ಶನ ಕಟ್ಟೆ ಇತ್ತು.

ಸಮಾಜದ ಕಣ್ಣಲ್ಲಿ ಗಣ್ಯರೆನಿಸಿಕೊಂಡವರ ಗುಂಪೊಂದು ಶ್ರೀ ಎಂ. ಭವಾನಿ ಅವರ ಜೊತೆಗೂಡಿ ೧೯೨೯-೩೦ ರಲ್ಲಿ ಮೃಚ್ಛಕಟಿಕವನ್ನು ಮೂಕ ಚಿತ್ರರಂಗದ ಮೇಲೆ ತಂದಿತು. ಸಾಹಿತ್ಯರಂಗದಲ್ಲಿ ಶ್ರೇಷ್ಠಸ್ಥಾನ ಪಡೆದ ಆಧುನಿಕ ಕನ್ನಡ ನಾಟಕ ಪಿತಾಮಹ ದಿವಂಗತ ಶ್ರೀ ಟಿ. ಪಿ. ಕೈಲಾಸಂ, ದಿವಂಗತ ಶ್ರೀ ದ. ಕೃ. ಭಾರದ್ವಾಜ, ದಿವಂಗತ ಡಾ. ಎನ್. ಎಸ್. ನಾರಾಯಣಶಾಸ್ತ್ರಿ ಜಿ. ಹರೀಂದ್ರ, ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯ, ಶ್ರೀಮತಿ ಮೀನಾಕ್ಷಿ ರಾಮರಾವ್, ಮೊದಲಾದವರನ್ನೊಳಗೊಂಡು ಆರಂಭವಾದ ಈ ಹೊಸ ಚಿತ್ರೋದ್ಯಮ ನಾಡಿನಲ್ಲಿ ಹೊಸ ಹುರುಪನ್ನು ಹುಟ್ಟಿಸಿತು. ಶ್ರೀ ಗುಬ್ಬಿ ವೀರಣ್ಣನವರು ಮತ್ತು ದಿವಂಗತ ಶ್ರೀ ದೇವುಡು ನರಸಿಂಹ ಶಾಸ್ತ್ರಿಗಳೂ ಸಹ ಈ ಉದ್ಯಮಕ್ಕೆ ಕೈಹಾಕಿ ಸ್ಟುಡಿಯೋ ಸ್ಥಾಪಿಸಿ ಚಿತ್ರ ತಯಾರಿಸಿದರು. ಅವರ ಪ್ರಯೋಗಗಳು ಯಶಸ್ಸನ್ನು ಗಳಿಸಲಾರದೆ ಚಟುವಟಿಕೆ ನಿಂತಿತು. ಆಗಿನ ಸ್ಥಿತಿಗೂ ಈಗಿನ ಸ್ಥಿತಿಗೂ ಸ್ವಲ್ಪ ಬದಲಾವಣೆ ಆಗಿದೆ. ಬಹುಮಟ್ಟಿಗೆ ಸ್ಟುಡಿಯೋದವರೇ ಚಿತ್ರ ತಯಾರಿಸುತ್ತಿದ್ದ ಕಾಲ ಅದು.

ಸ್ಟುಡಿಯೋವನ್ನು ಹೊಂದಿರಲಾಗದವನು ಚಿತ್ರ ನಿರ್ಮಾಪಕನಾಗುವುದು ಕಷ್ಟವಾಗಿದ್ದ ಕಾಲ ಅದು. ಆದರೆ ಈಗ ಪರಿಸ್ಥಿತಿಯೇ ಬೇರೆ. ಉದ್ಯಮದ ಸಾಧಕ ಬಾಧಕಗಳನ್ನರಿತ, ಹಣ ಜೊತೆ ಮಾಡಬಲ್ಲ ಯಾರು ಬೇಕಾದರೂ ಈಗ ನಿರ್ಮಾಪಕನಾಗಬಹುದು. ಆ ವಿಷಯವನ್ನೇ ಹೆಚ್ಚು ವ್ಯಾಪಕವಾಗಿ ವಿವೇಚಿಸಬಹುದು ಇರಲಿ. ಒಟ್ಟಿನಲ್ಲಿ ಆಗ ಬೆಂಗಳೂರು ನಿರ್ಮಾಪಕ ಕೇಂದ್ರವಾಗಿತ್ತು.

ಮಾತನಾಡುವ ಚಿತ್ರ ತಯಾರಿಕೆ ಭಾರತದಲ್ಲಿ ಕಾಲಿಟ್ಟುದೇ ಕಾರಣವಾಗಿ ಪ್ರದರ್ಶನ ಕಟ್ಟೆ ಆಯಾ ಭಾಷಾವ್ಯಾಪ್ತಿಗೆ ಅನುಸಾರವಾಗಿ ಸೀಮಿತವಾಯಿತು. ಕನ್ನಡ ಭಾಷೆಯ ಚಿತ್ರಕ್ಕೆ ಪ್ರದರ್ಶನ ಕಟ್ಟೆಯೇ ಸಾಲದು. ಅದರಿಂದ ಕನ್ನಡ ಭಾಷಾ ಚಿತ್ರೋದ್ಯಮ ಕೈಸುಟ್ಟುಕೊಳ್ಳುವ ಉದ್ಯಮ ಎಂಬ ಭಯ ಮೂಡಿತು. ಈಗ ಸ್ಥಿತಿ ಸುಧಾರಿಸಿದೆಯಾದರೂ ಪ್ರದರ್ಶನ ಕೇಂದ್ರಗಳು ಇನ್ನೂ ಹೆಚ್ಚಬೇಕು. ಮತ್ತು ವ್ಯಾಪಕವಾಗಬೇಕು.

ಸೂರ್ಯಫಿಲಂ ಕಂಪನಿ ನಿಂತಿತ್ತು. ಹೊಸಬರಿಗೆ ಧೈರ್ಯ ಸಾಲದೆ ಹೋಯಿತು. ಕನ್ನಡ ಭಾಷೆಯ ಚಿತ್ರದ ಜಮಾಖರ್ಚುಗಳ ಬಗೆಗೆ ಸಾಕಷ್ಟು ಮಾಹಿತಿ ಇರಲಿಲ್ಲ. ಜೊತೆಗೆ ಧೈರ್ಯವಾಗಿ ಮುನ್ನುಗ್ಗುವ ಪ್ರವೃತ್ತಿ ಇಲ್ಲವಾಗಿ ಕನ್ನಡನಾಡಿನಲ್ಲಿ ಚಲನ ಚಿತ್ರೋದ್ಯಮ ಮಾತನಾಡುವ ಚಿತ್ರಗಳು ಕಾಲಿಟ್ಟಾಗ ಕನ್ನಡ ನಾಡಿನಿಂದ ಜಾರಿ ದೂರಹೋಯಿತು.

ಪ್ರದರ್ಶನ ಕಟ್ಟೆಯ ವ್ಯಾಪ್ತಿ ಸಣ್ಣದಾದರೂ ಸೀಮಿತವಾದರೂ ಜನರ ಉತ್ಸಾಹ ಮತ್ತೆ ಕೆರಳಿತು. ಕೆಲವರು ಧೈರ್ಯ ಮಾಡಿದರು. ಅದರಿಂದಾಗಿ ೧೯೩೪ ನೆಯ ಇಸವಿಯಲ್ಲಿ ಕನ್ನಡ ಚಲನಚಿತ್ರೋದ್ಯಮದ ಹೊಸ ಉದಯವಾಯಿತು ಎಂದು ಹೇಳಬಹುದು. ಅಂದರೆ ಈಗ ಈ ಉದ್ಯಮಕ್ಕೆ ಮೂವತ್ತು ವರ್ಷಗಳ ವ್ಯಾಪ್ತಿ ಇದೆ. ಅನುಭವ ಇದೆ. ಭಕ್ತಧ್ರುವ ಮತ್ತು ಸತಿಸುಲೋಚನ ಎಂಬ ಎರಡು ಕನ್ನಡ ಪೌರಾಣಿಕ ಚಿತ್ರಗಳು ಆ ವರ್ಷ ತೆರೆ ಕಂಡವು. ಚಿತ್ರೀಕರಣದ ಆರಂಭದ ದೃಷ್ಟಿಯಿಂದ ಭಕ್ತಧ್ರುವ ಮೊದಲನೆಯ ಕನ್ನಡ ಮಾತನಾಡುವ ಚಿತ್ರವಾದರೂ ಸತೀಸುಲೋಚನ ಮೊದಲು ತೆರೆಕಂಡ ಕನ್ನಡ ಮಾತನಾಡುವ ಚಿತ್ರ. ಹಾಗೆಯೇ ಕುಂಟುತ್ತ ನಮ್ಮ ಉದ್ಯಮ ಮುಂದುವರೆಯಿತು. ವಸ್ತುವಿನ ಆಯ್ಕೆಯ ವಿಷಯದಲ್ಲಿ ನಾವು ಸದಾ ಹಿಂದೆ ಇರುವವರಾಗಿರುವುದರಿಂದ ೧೯೩೬ ನೆಯ ಇಸವಿಯನ್ನು ಗಣನೀಯ ವರ್ಷವೆಂದು ಪರಿಗಣಿಸಬಹುದು. ಕನ್ನಡದ ಮೊಟ್ಟ ಮೊದಲನೆಯ ಸಾಮಾಜಿಕ ಚಿತ್ರ "ಸಂಸಾರ ನೌಕ" ಆ ವರ್ಷ ತೆರೆಕಂಡಿತಷ್ಟೇ ಅಲ್ಲ ಸಾಮಾಜಿಕ ಚಿತ್ರ ಮಾಡಿದರು ನಷ್ಟವಾಗುವುದಿಲ್ಲ ಎಂಬ ಧೈರ್ಯವನ್ನು ಈ ಚಿತ್ರ ಮೂಡಿಸಿತು. ಈ ಚಲನಚಿತ್ರ ನಿರ್ಮಾಣದಿಂದ ಕನ್ನಡ ಚಿತ್ರೋದ್ಯಮಕ್ಕೆ ಮುಖ್ಯವಾಗಿ ಎರಡು ಕೊಡಿಗೆಗಳು ದೊರೆತವು. ಅವು ಆ ಚಿತ್ರದ ನಾಯಿಕೆಯ ಪಾತ್ರವಹಿಸಿದ ಶ್ರೀಮತಿ ಎಂ. ವಿ. ರಾಜಮ್ಮ ಮತ್ತು ನಾಯಕನ ಪಾತ್ರವಹಿಸಿದ ಶ್ರೀ ಬಿ. ಆರ್. ಪಂತುಲು.

ಈ ಶತಮಾನದ ನಾಲ್ಕನೆಯ ಶತಕದ ಆದಿಯಲ್ಲಿ ಬೆಂಗಳೂರಿನ ಸ್ಟುಡಿಯೋಗಳು ನಿಂತುವು. ಮಾತನಾಡುವ ಚಿತ್ರಗಳ ಉಗಮ ಇದಕ್ಕೆ ಬಹುಮಟ್ಟಿಗೆ ಕಾರಣವೆನ್ನಬಹುದು. ಮತ್ತೆ ಈ ದಿಶೆಯಲ್ಲಿ ೧೯೩೬ ರಲ್ಲಿ ಚಟುವಟಿಕೆ ಆರಂಭವಾಯಿತು. ಶ್ರೀ ವಿ. ತಿಮ್ಮಯ್ಯನವರು ತಮ್ಮ ಮಾಲೀಕತ್ವದ ಮೈಸೂರು ಸೌಂಡ್ ಸ್ಟುಡಿಯೋವನ್ನು ಬೆಂಗಳೂರಿನಲ್ಲಿ ಸ್ಥಾಪಿಸಿ, ರಾಜಸೂಯಯಾಗ, ಮಯೂರಧ್ವಜ ಮೊದಲಾದ ಚಿತ್ರಗಳನ್ನು ತೆರೆಕಾಣಿಸಿದರು. ತಾಂತ್ರಿಕ ಸಾಫಲ್ಯ ದೊರಕದ ಇವರ ಹುಮ್ಮಿನ ಪ್ರಯತ್ನ ನಿಷ್ಫಲವಾಯಿತು. ಕನ್ನಡಿಗರು ಪ್ರಯತ್ನಶೀಲರಲ್ಲ ಎಂಬ ಅಪವಾದಕ್ಕೆ ನಾವು ಹೊಣೆಯಾಗಬೇಕಾಗಿಲ್ಲ ಎಂಬುದಕ್ಕೆ ಶ್ರೀಯುತರ ಪ್ರಯತ್ನ ಐತಿಹಾಸಿಕ ಸಾಕ್ಷಿಯಾಗಿದೆ ಅಷ್ಟೇ. ಆದರೆ ಉದ್ಯಮ ನಾವು ಸಾಗಬೇಕಾದ ಪಥದಲ್ಲಿ ಸಾಗಲಿಲ್ಲ. ಈ ಬಗೆಯ ವಿಫಲ ಪ್ರಯತ್ನಗಳಿಂದಾಗಿ ಒಂದು

“ಸಹಕಾರ ಜೀವನವೇ ಸುಖಶಾಂತಿಗಳ ಮೂಲ”

**ನಮ್ಮ ಸಂಘದ ಖರೀದಿದಾರ, ವಿಕ್ರಿದಾರ, ಸದಸ್ಯ ಹಿತೈಷಿಗಳೆಲ್ಲರಿಗೂ**



**ದೀ ಪಾ ವ ಳಿ ಯ ಶು ಭಾ ಶ ಯ ಗ ಳು ! !**



---

# ದಿ ಹಿರೇಕೆರೂರ ತಾಲೂಕ ಅಗ್ರಿಕಲ್ಚರಲ್ ಪ್ರೊಡ್ಯೂಸ ಕೋ-ಆಪರೇಟಿವ್ ಮಾರ್ಕೆಟಿಂಗ ಸೊಸಾಯಟಿ ಲಿ., ಹಿರೇಕೆರೂರ

ಫೋನ ನಂ. ೨೮ ಹೆಡ್ ಆಫೀಸ . ಹಿರೇಕೆರೂರ ತಾರು: **TALCOMARKS**

ಬ್ರಾಂಚ ಆಫೀಸುಗಳು

**೧. ರಟ್ಟೀಹಳ್ಳಿ ೨. ಮಾಸೂರು ೩. ಚಿಕ್ಕೇರೂರ ೪. ಹಂಸಭಾವಿ ೫ ಕೋಡ**

ನಮ್ಮ ಸಂಘವು, ಲಕ್ಷ್ಮಿ ಹತ್ತಿ, ಮೆಣಸಿನಕಾಯಿ ಭತ್ತ, ಶೇಂಗಾ, ಬೆಲ್ಲ, ರಾಗಿ. ಜೋಳ ಇತ್ಯಾದಿ ಒಕ್ಕಲುತನ ಫಸಲುಗಳನ್ನು ಬೇಡರ ವ ಕಮೀಶನ್ ಏಜಂಟ ನಾತೆಯಿಂದ, ರಸಾಯನಿಕ ವ ಮಿಶ್ರಗೊಬ್ಬರ, ಉಕ್ಕು ವ ಕಬ್ಬಿಣ ಸಾಮಾನು, ಲಕ್ಷ್ಮಿ ಹತ್ತಿಯ ಬೀಜದ ಹತ್ತಿಕಾಳು ಒಕ್ಕಲುತನ ಉಪಕರಣ, ಗೃಹೋಪಯೋಗಿ ವ ಗ್ರಾಹಕರ ವಸ್ತುಗಳನ್ನು ಸಟ್ಟಾ ವ ಟೇಲ ಮಾರಾಟ ವ ಖರೀದಿ ಮಾಡುತ್ತದೆ. ರೈತ ಬಾಂಧವರೂ, ವರ್ತಕರೂ. ಸಹಕಾರೀ ಸಂಘಗಳೂ. ಗ್ರಾಹಕರೂ ಸಹಕಾರ ನೀಡಬೇಕಾಗಿ ಕೋರಿಕೆ.

ಬೋರ್ಡ ಆಫ್ ಡಾಯರೆಕ್ಟರರು

**೧. ಶ್ರೀ. ಬಿ. ಜಿ. ಬಣಗಾರ, B. A. LL. B. ಚಿಕ್ಕೋಣತಿ, ಚೇಅರಮನ್**

**೨. ಶ್ರೀ. ಡಿ. ಆರ್. ತಂಬಾಕದ, ಹಿರೇಕೆರೂರ**
**೩. ,, ಬಿ. ಎಂ. ಪಾಟೀಲ, ಯೋಗಿಕೊಪ್ಪ**
**೪. ,, ಎಸ್. ಎಸ್. ಪಾಟೀಲ, ಚಿಕ್ಕಯಡಚಿ**
**೫. ,, ಕೆ. ಡಿ. ತಂಬಾಕದ, ಯಿಂಗಳಗೊಂದಿ**
**೬. ಶ್ರೀ. ಎಸ್ ಬಿ. ಪಾಟೀಲ, ಹಿರೇಮೊರಬ**
**೭. ,, ಬಿ ಎಸ್ ಪಾಟೀಲ. ಹೊಲಬಿಕೊಂಡ**
**೮. ,, ಜಿ. ಬಿ ಮಾಳಗಿ, ಸೋಮನಹಳ್ಳಿ**
**೯. ,, ಟಿ. ಎಸ್ ತಂಬಾಕದ, ಹಿರೇಕೆರೂರ**

ಬ್ರಾಂಚ ಸಲಹಾ ಸಮಿತಿ ಸದಸ್ಯರು

**೧. ಶ್ರೀ. ಎಸ್. ಕೆ ಸಾವುಕಾರ, ಕಡೂರ**

**೨. ಶ್ರೀ. ಬಿ ಬಿ. ನಿಂಬಿಗೊಂದಿ. ಮಕರಿ**
**೩. ,, ಕೆ. ಬಿ. ನೆಗಳೂರ, ಮಾಸೂರ**
**೪. ,, ಎಸ್. ಆರ್. ಬಣಕಾರ, ಚಿಕ್ಕೇರೂರ**
**೫. ,, ಬಿ. ಆರ್. ಹಿರೇಮಠ, ಚಿಕ್ಕೋಣತಿ**
**೬. ,, ಜಿ. ವ್ಹಿ ಕೆರೂಡಿ, ಹಂಸಭಾವಿ**
**೭. ,, ಯು. ಎಂ. ನಾಗಪ್ಪನವರ, ದಿವಿಗಿಹಳ್ಳಿ**
**೮. ಶ್ರೀ. ಎಸ್ ವ್ಹಿ. ಪಾಟೀಲ. ಹಂಸಭಾವಿ**
**೯ ,, ಆರ್. ಎಚ್ ಕಬ್ಬಕ್ಕಿ, ಕೋಡ**
**೧೦ ,, ಬಿ. ಟಿ. ನಂದಿಹಳ್ಳಿ. ಹುಲ್ಲತ್ತಿ**
**೧೧ ,, ಬಿ. ಎನ್ ಮುಗಳಗೇರಿ, ಚಿಕ್ಕೇರೂರ**
**೧೨ ,, ಎಸ್ ಎಚ್. ಪಾಟೀಲ, ಮೇದೂರ**
**೧೩. ,, ಎಚ್ ಸಿ ಮಾಗನೂರ. ನೇಶ್ವಿ**

ಮ್ಯಾನೇಜರರು

೧. ಶ್ರೀ. ಎಸ್. ಎಸ್. ಪಾಟೀಲ, ಹೆಡ್ ಆಫೀಸ
೨. ,, ಟಿ. ಎಸ್ ಕೊಣ್ತಿ, ರಟ್ಟೀಹಳ್ಳಿ B. O.
೩. ,, ಎನ್. ಯು. ಹಡಪದ. ಮಾಸೂರ. B.O
೪. ಶ್ರೀ. ಪಿ. ಬಿ. ದೇಸಾಯಿ, ಚಿಕ್ಕೇರೂರು, B. O.
೫ ,, ಎಸ್ ಎನ್ ಮಾವಿನತೋಪ, ಹಂಸಭಾವಿ B. O.
೬ ,, ಎನ್ ಎಸ್ ಕೆರವಾಡ. ಕೋಡ B. O.

ಬ್ಯಾಂಕರ್ಸ್

**ದಿ ಕರ್ನಾಟಕ ಸೆಂಟ್ರಲ್ ಕೋ-ಆಪರೇಟಿವ್ ಬ್ಯಾಂಕ್ ಲಿ, ಧಾರವಾಡ**

**ಎಸ್. ಎಸ್. ಪಾಟೀಲ,**
ಮ್ಯಾನೇಜರ

**ಬಿ ಜಿ. ಬಣಕಾರ,** B. A. LL. B.
ಚೇರಮನ್

ಕಡೆ ಭಯ ಇನ್ನೊಂದು ಕಡೆ ನಿರುತ್ಸಾಹ ಮೂಡಿತು. ನಂತರದ ಮೂರು ನಾಲ್ಕು ವರ್ಷಗಳಲ್ಲಿ ಕನ್ನಡ ಚಿತ್ರೋದ್ಯಮದ ಸುದ್ದಿಯೇ ಇರಲಿಲ್ಲವೆನ್ನಬಹುದು. ಆದರೂ ಸೋಲುಗಳೇ ಗೆಲುವಿನ ಸೋಪಾನ ಮಾರ್ಗ ಎಂಬ ನಾಣ್ಣುಡಿಗನುಸಾರವಾಗಿ ಈ ಉದ್ಯಮ ಪೆಟ್ಟಿನ ಮೇಲೆ ಪೆಟ್ಟು ತಿಂದರೂ ಮುಂದಡಿ ಇಡುವ ಪ್ರಯತ್ನ ಸಾಗಿಸಿತು. ಶ್ರೀ ಆರ್. ನಾಗೇಂದ್ರರಾಯರು ಮತ್ತು ದಿವಂಗತ ಶ್ರೀ ಎಂ. ವಿ. ಸುಬ್ಬಯ್ಯನಾಯ್ಡು ಅವರ ಜೋಡಿಯ ಪರಿಶ್ರಮದ ಫಲವಾಗಿ ಕನ್ನಡ ಉದ್ಯಮ ಮತ್ತೆ ಚೇತರಿಸಿಕೊಂಡಿತು. ಹೊಸ ಹೊಸ ಚಿಗುರು ಹುಟ್ಟಿತು. ಈ ಜೋಡಿ ಕನ್ನಡಿಗರಿಗಿತ್ತ "ವಸಂತ ಸೇನೆ" ಇಂದಿಗೂ ಈ ಉದ್ಯಮದ ಪ್ರಗತಿಯಲ್ಲಿ ಒಂದು ಮೈಲಿಗಲ್ಲಾಗಿದೆ.

೧೯೪೩ ರಲ್ಲಿ ಶ್ರೀಮತಿ ಎಂ. ವಿ. ರಾಜಮ್ಮ ಕನ್ನಡದ ಪ್ರಪ್ರಥಮ ನಿರ್ಮಾಪಕಿಯಾದರು. ಆಕೆ ತಯಾರಿಸಿದ ಚಿತ್ರದಲ್ಲಿ ಕೇವಲ ನಟನಾಗಿ ನಮಗೆ ಕಾಣಿಸಿಕೊಂಡ ಶ್ರೀ ಬಿ. ಆರ್. ಪಂತುಲು ಇವತ್ತು ಅಖಿಲ ಭಾರತದ ಮಟ್ಟದಲ್ಲಿ ಸಹ ಗಣ್ಯನಿರ್ಮಾಪಕರಾಗಿದ್ದಾರೆ. ಈ ಇಬ್ಬರು ನಟ–ನಟಿಯರು ನಿರ್ಮಾಪಕ ನಿರ್ಮಾಪಕಿಯರು ಆಗಿನಿಂದ ಈಗಿನವರೆಗೆ ಜೊತೆಗೂಡಿ ಕನ್ನಡ ಚಿತ್ರಗಳನ್ನು ಜನತೆಗೆ ನೀಡಿರುವುದು ನೀಡುತ್ತಿರುವುದು ಮೆಚ್ಚುವ ಸಂಗತಿ. ಇವರಿಬ್ಬರ ಪರಸ್ಪರ ಮೇಳಗೊಂಡ ಕಾರ್ಯದಕ್ಷತೆ, ಸಹಕಾರಗಳಿಂದ ಕನ್ನಡ ಚಿತ್ರೋದ್ಯಮಕ್ಕೆ ಒಂದು ಸ್ಥಾನ ಬಂದಿದೆ.

ಮೂರು ನಾಲ್ಕು ವರ್ಷಗಳ ಹೆಚ್ಚಿನ ಚಟುವಟಿಕೆಯಾದ ನಂತರ ಮತ್ತೆ ಎರಡು ಮೂರು ವರ್ಷಗಳ ಕಾಲ ಒಂದು ಬಗೆಯ ತಾಟಸ್ಥ್ಯ ಉದ್ಯಮದಲ್ಲಿ ಮೂಡಿತು. ಹಾಗೂ ಹೀಗೂ ನಾವು ಇದ್ದೇವೆ ಎಂದು ಹೇಳಿಕೊಳ್ಳುವ ಸಲುವಾಗಿ ಚಿತ್ರಗಳು ತೆರೆಕಾಣುತ್ತ ಸ್ವಾತಂತ್ರ್ಯ ಯುಗಕ್ಕೆ ನಾವು ಕಾಲಿಡುವ ಸ್ವಲ್ಪ ಪೂರ್ವದಲ್ಲಿ ಮೈಸೂರಿನಲ್ಲಿ ನವಜ್ಯೋತಿ ಸ್ಟೂಡಿಯೋ ಪ್ರಾರಂಭವಾಗಿ ಅದು ಆರಂಭಕಾಲದಲ್ಲಿ ನಡೆಸಿದ ಬಿರುಸಿನ ಚಟುವಟಿಕೆಗಳನ್ನು ಈಗ ನೆನೆಸಿಕೊಂಡರೆ ಅದು ಶಾಶ್ವತವಾಗಿ ನಡೆಯಲು ಹುಟ್ಟಿಬಂದ ಸಂಸ್ಥೆ ಎಂಬ ನಂಬಿಕೆ ಮೂಡಿಸಿತ್ತು. ಅಷ್ಟೇ ಅಲ್ಲ ಅದರ ಸ್ಥಾಪನೆಯಿಂದ ಅನೇಕ ಹೊಸ ನಿರ್ಮಾಪಕರು ಹುಟ್ಟಿಕೊಂಡರು. ಚಿತ್ರ ತಯಾರಿಕೆಯ ಸಂಖ್ಯೆ ಹೆಚ್ಚಿತು. ಮೈಸೂರು ನಗರ ಒಂದು ಆಕರ್ಷಣೀಯ ಕ್ಷೇತ್ರವಾಯಿತು. ಸ್ಟುಡಿಯೋ ನಿಲ್ಲಲು ಅನೇಕ ಕಾರಣಗಳಿರಬಹುದು. ನಿವಾರಿಸಲು ಅಸಾಧ್ಯವಾದ ತೊಡಕುಗಳಲ್ಲಿ ಅದು ಸಿಕ್ಕಿಕೊಂಡು ಆ ಸ್ಥಿತಿಗೆ ಬಂದಿರಬಹುದು! ಆದರೆ ಆಗ ಪ್ರಾರಂಭವಾದ ಚಟುವಟಿಕೆ ಒಂದೇ ಸಮನಾಗಿ ಸಾಗಿದೆ ಎಂಬುದನ್ನು ಮಾತ್ರ ನಾವು ಗಮನಿಸಬೇಕು. ಆರನೆಯ ದಶಕದ ನಡುವಿನವರೆಗೆ ವ್ಯಾಪಕವಾದ ರೀತಿಯಲ್ಲಿ ನಡೆದ ಚಿತ್ರ ತಯಾರಿಕೆ ಕೆಲಸ ಸ್ಟುಡಿಯೋ ನಿಂತುದರಿಂದ ಮತ್ತೆ ಮದರಾಸಿಗೆ ಜಾರಬೇಕಾಯಿತು. ಈ ಸ್ಥಳಾಂತರ ಸಹ ಹೊಸ ತೊಡಕುಗಳನ್ನು ತಂದಿತು. ಆದರೂ ಕನ್ನಡಿಗರು ಹೊಸ ಪರಿಸ್ಥಿತಿಗೂ ಹೊಂದಿಕೊಂಡು ನಿರ್ಮಾಣದ ಕೆಲಸವನ್ನು ಮುಂದುವರಿಸಿದರು. ಮೈಸೂರಿನಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಇದೇ ಸಮಯದಲ್ಲಿ ಪ್ರೀಮಿಯರ್ ಸ್ಟುಡಿಯೋ ಆರಂಭವಾದರೂ ನಿರ್ಮಾಪಕ ಗಣವನ್ನು ಅದು ಮೈಸೂರಿನಲ್ಲಿಯೇ ಉಳಿಸಿಕೊಳ್ಳಲು ಸಮರ್ಥವಾಗಲಿಲ್ಲ. ಕಾರಣಗಳೇನೆಂಬುದು ಅರಿವಿಗೆ ಬರುವಂತವುಗಳಲ್ಲವಾದರೂ ವಸ್ತುಸ್ಥಿತಿ ಮಾತ್ರ ಅದೇ.

ಕನ್ನಡಿಗರಾದ ಶ್ರೀ ಬಿ. ಎಸ್. ರಂಗಾ ಅವರು ಮದರಾಸಿನಲ್ಲಿ ತಮ್ಮದೇ ಆದ ವಿಕ್ರಂ ಸ್ಟುಡಿಯೋ ಸ್ಥಾಪಿಸಿ ಸತತವಾಗಿ ಕನ್ನಡ ಚಿತ್ರಗಳನ್ನು ಕೊಡುತ್ತಿದ್ದಾರೆ. ಕನ್ನಡ ಜನಕ್ಕೆ ಸಂಪೂರ್ಣ ವರ್ಣರಂಜಿತ ಚಿತ್ರವನ್ನು ಕೊಟ್ಟ ಧೀರ ನಿರ್ಮಾಪಕರು ಶ್ರೀ ರಂಗಾ. ಇವರು ಮನಸ್ಸು ಮಾಡಿದರೆ ಕನ್ನಡ ಚಿತ್ರಗಳು ಶ್ರೇಷ್ಠ ತಾಂತ್ರಿಕ ಮಟ್ಟವನ್ನು ಸಾಧಿಸಲು ಸಾಧ್ಯವಾಗಬಹುದು. ಆದರೆ ಏಕೋ ಅವರು ಇನ್ನೂ ಆ ದಿಶೆಗೆ ಮನಸ್ಸು ಹರಿಸಿಲ್ಲ.

ಚಲನಚಿತ್ರಕ್ಕೆ ರಾಷ್ಟ್ರೀಯ ಪಾರಿತೋಷಕಗಳನ್ನು ಭಾರತ ಸರ್ಕಾರ ಕೊಡುವುದಕ್ಕೆ ಆರಂಭಮಾಡಿದ ಮೇಲೆ ಇಡೀ ರಾಷ್ಟ್ರದಲ್ಲಿನ ಚಟುವಟಿಕೆಗೆ ಒಂದು ಘನತೆ ಬಂತು. ಕನ್ನಡದಲ್ಲಿಯೂ ಉತ್ಸಾಹ ಹೆಚ್ಚಿತು. ಭಾಷಾವಾರು ಪ್ರಾಂತ ನಿರ್ಮಾಣವಾದ ಮೇಲೆ ನಿಜವಾಗಿಯೂ ಕನ್ನಡ ಚಿತ್ರೋದ್ಯಮಕ್ಕೆ ಒಂದು ಸ್ಥೈರ್ಯ ಬಂತೆನ್ನಬಹುದು. ಸರಾಸರಿ ವರ್ಷಕ್ಕೆ ಒಂದರಿಂದ ಮೂರು ಚಿತ್ರ ತಯಾರಿಸುತ್ತಿದ್ದ ಕನ್ನಡಿಗರು ಪ್ರಾಂತ ರಚನೆಯ ನಂತರ ಸರಾಸರಿ ವರ್ಷಕ್ಕೆ ೧೦–೧೨ ಚಿತ್ರಗಳನ್ನು ತಯಾರಿಸತೊಡಗಿದರು. ನೋಡುವ ಜನರು ಹೆಚ್ಚಿದರು. ಪ್ರದರ್ಶನ ಕೇಂದ್ರಗಳೂ ಹೆಚ್ಚಿದವು. ಉದ್ಯಮವನ್ನು ಸರಿಯಾದ ರೀತಿಯಲ್ಲಿ ನಡೆಸಿದರೆ ಲಾಭವನ್ನೂ ಕಾಣಬಹುದೆಂಬ ಧೈರ್ಯವೂ ಸಹ ಈ ಉದ್ಯಮ ತಾನು ಪಡೆದುಕೊಂಡ ಫಲದಿಂದ ಹುಟ್ಟಿಕೊಂಡಿತು. ಇದರ ಫಲವಾಗಿ ೧೯೬೩– ಈ ಒಂದೇ ವರ್ಷದಲ್ಲಿ ೨೨ ಕನ್ನಡ ಚಿತ್ರಗಳು ತೆರೆಯನ್ನು ಕಂಡವು. ತಿಂಗಳಿಗೆ ಎರಡಾದರೂ ಕನ್ನಡ ಚಿತ್ರಗಳನ್ನು ತೆರೆಗೆ ತರುವ ಸಾಮರ್ಥ್ಯವನ್ನು ನಾವು ಪಡೆದಿದ್ದೇವೆ ಮತ್ತು ಅದರಲ್ಲಿ ತೊಡಗಿಸಿದ ೪೫-೫೦ ಲಕ್ಷ ರೂಪಾಯಿಗಳನ್ನು ನಮ್ಮ ಜನತೆ ನೋಡಿ ಮೆಚ್ಚಿ ಪ್ರದರ್ಶನ ಮುಖಾಂತರ ನಿರ್ಮಾಪಕನಿಗೆ ಮುಟ್ಟಿಸುತ್ತಾರೆ ಎಂಬ ವಿಷಯ ಮನವರಿಕೆಯಾಗುತ್ತದೆ. ಅಷ್ಟು ಹಣ ನಿರ್ಮಾಪಕನ ಕೈಗೆ ಮುಟ್ಟುತ್ತದೆ ಎಂದರೆ ಸುಮಾರು ಎರಡು ಕೋಟಿ ರೂಪಾಯಿನ ಹಣ ಚಲಾವಣೆ ಆಗುತ್ತದೆ. ಹಣದ ಚಲಾವಣೆ ಹೆಚ್ಚಿದಷ್ಟೂ ಆರ್ಥಿಕ ಅಭಿವೃದ್ಧಿ ಹೆಚ್ಚುತ್ತದೆ.

೧೯೩೪ ರಿಂದ ೧೯೬೪ ರ ವರೆಗೆ ಮೂವತ್ತು ವರ್ಷಗಳ ಕಾಲದಲ್ಲಿ ೧೯೦ ಕನ್ನಡ ಚಿತ್ರಗಳನ್ನು ತೆರೆಗೆ ತರಲಾಗಿದೆ. ಈ ಮೂವತ್ತು ವರ್ಷದ ಕಾಲದಲ್ಲಿ ಇಡೀ ರಾಷ್ಟ್ರದಲ್ಲಿ ತಯಾರಾದ ಒಟ್ಟು ಚಿತ್ರಗಳ ಸಂಖ್ಯೆ ಸುಮಾರು ೭೦೦೦. ೧೯೩೪ ರಲ್ಲಿ ಭಾರತದಲ್ಲಿ ಒಟ್ಟು ೧೫೦ ಚಿತ್ರಗಳು ತಯಾರಾದಾಗ ಅವುಗಳಲ್ಲಿ ಕನ್ನಡದವು ೨ ಚಿತ್ರಗಳು. ೧೯೬೩ ರಲ್ಲಿ ಒಟ್ಟು ೩೦೦ ಚಿತ್ರಗಳು ಭಾರತದಲ್ಲಿ ತಯಾರಾದಾಗ ಅವುಗಳಲ್ಲಿ ಕನ್ನಡದವು ೨೨. ಈ ೩೦ ವರ್ಷಗಳ ಕಾಲ ಪ್ರಮಾಣದಲ್ಲಿ ಭಾಷಾವಾರು ಚಿತ್ರಗಳನ್ನು ನೋಡಿದಾಗ ಸುಮಾರು ೩೬೦೦ ಹಿಂದೀ ಚಿತ್ರಗಳೂ ೧೧೫೦ ತಮಿಳು ಚಿತ್ರಗಳೂ ೧೦೦೦ ಬಂಗಾಲಿ ಚಿತ್ರಗಳೂ, ೬೨೫ ತೆಲುಗು ಚಿತ್ರಗಳೂ, ೪೦೦ ಮರಾಠಿ ಚಿತ್ರಗಳೂ, ೧೯೦ ಕನ್ನಡ ಚಿತ್ರಗಳೂ, ೧೩೫ ಮಲೆಯಾಳಿ ಚಿತ್ರಗಳೂ, ೧೨೦ ಗುಜರಾತಿ ಚಿತ್ರಗಳೂ ತಯಾರಾಗಿರುವುದು ಕಂಡಬರುತ್ತದೆ.

ಕನ್ನಡಿಗರಿಗೆ ನಾಲ್ಕರಷ್ಟು ತೆಲುಗರಾಗಲಿ, ಎರಡರಷ್ಟು ಮರಾಠಿ ಜನರಾಗಲಿ, ೫ ರಷ್ಟು ಬಂಗಾಲಿಗಳಾಗಲಿ. ೬ ರಷ್ಟು ಜನ ತಮಿಳರಾಗಲಿ ಇದ್ದಾರೆಂದು ನಾವು ಭಾವಿಸಬಾರದು. ಆಯಾಯ ಭಾಷೆ ಮಾತನಾಡುವ ಜನಸಂಖ್ಯೆಯಲ್ಲಿ ಭಾಷೆಯ ಅಭಿಮಾನದ ಕಾರಣವಾಗಿ ಪ್ರತಿಶತ ಹೆಚ್ಚು ಜನ ಆಯಾ ಭಾಷೆಯ ಚಿತ್ರಗಳನ್ನು ನೋಡುತ್ತಾರೆ. ಅಂದರೆ ಕನ್ನಡ ಜನ ಕನ್ನಡ ಚಿತ್ರಗಳನ್ನು ನೋಡುವ ಪ್ರತಿಶತ ಸಂಖ್ಯೆ ಬಹಳ ಕಡಿಮೆ ಎಂಬುದು ಇದರಿಂದ ತಿಳಿಯುತ್ತದೆ. ಕನ್ನಡ ಜನ ಕನ್ನಡ ಚಿತ್ರ ನೋಡುವ ಸಂಖ್ಯೆ ಹೆಚ್ಚದಲ್ಲದೆ ನಿರ್ಮಾಪಕ ಹೆಚ್ಚು ಹಣವನ್ನು ಚಿತ್ರ ತಯಾರಿಕೆಯಲ್ಲಿ ತೊಡಗಿಸಲಾರ. ಹೆಚ್ಚಿನ ಹಣವನ್ನು ತಯಾರಿಕೆ ಘಟ್ಟದಲ್ಲಿ ಹಾಕಲಾರದೆ ಉತ್ತಮ ತಾಂತ್ರಿಕತೆಯಿಂದ ಕೂಡಿದ ಚಿತ್ರವನ್ನು ಪ್ರೇಕ್ಷಕ ಬಯಸಿದರೆ ಹೇಗೆ ತಾನೆ ನಿರ್ಮಾಪಕ ಕೊಡಲು ಸಾಧ್ಯ? ಒಂದು ಚಿತ್ರಕ್ಕೆ ೨೫ ಲಕ್ಷದಿಂದ ೪೦ ಲಕ್ಷದ ವರೆಗೆ ಖರ್ಚು ಮಾಡುವ ಹಿಂದಿ–ತಮಿಳು ನಿರ್ಮಾಪಕರ ಜೊತೆಗೆ ಒಂದು ಚಿತ್ರಕ್ಕೆ ೨. ೧/೨ ಲಕ್ಷಕ್ಕಿಂತ ಹೆಚ್ಚು ಖರ್ಚುಮಾಡಲಾಗದ ಕನ್ನಡ ನಿರ್ಮಾಪಕ ಸ್ಪರ್ಧಿಸಲು ಹೇಗೆ ಸಾಧ್ಯ? ಹಾಗೂ ಯಾವ ತಾಂತ್ರಿಕ ದಕ್ಷತೆಯನ್ನು ತೋರಿಸಲು ಸಾಧ್ಯವಾದೀತು ?

ಇದರ ಜೊತೆಗೆ ತೆರಿಗೆ ಹಾಕುವ ಸರಕಾರದ ನೀತಿಯಿಂದ ಕನ್ನಡ ಚಿತ್ರೋದ್ಯಮ ಕುಸಿಯುತ್ತಿದೆ. ಆ

## ನಮ್ಮ ಗ್ರಾಹಕವೃಂದಕ್ಕೆಲ್ಲ ದೀಪಾವಳಿಯು ಸುಖಪ್ರದವಾಗಲಿ!

ಇನ್ನೊಂದು
ಅಮೋಘ
ಉತ್ಪಾದನೆ...

...ಅಪೂರ್ವ ಸೌಂದರ್ಯ ಸಾಧಕ **ವಿಕೋ ಟರ್ಮೆರಿಕ್ ವ್ಯಾನಿಶಿಂಗ್ ಕ್ರೀಮ್** --- ಇದಕ್ಕೆ ಸಮಾನವಾದದ್ದು ಜಗತ್ತಿನಲ್ಲಿ ಬೇರೊಂದಿಲ್ಲ. ಅಸಾಧಾರಣ ಸೌಂದರ್ಯ ಸಾಧಕ ಗುಣಗಳಿಂದ ಕೂಡಿದ್ದರೂ ಇದರ ಬೆಲೆ ಎಲ್ಲರಿಗೂ ಅನುಕೂಲವಾಗಿದೆ.

ಪುರುಷರಿಗೂ ಇದು ಮುಖಕ್ಷೌರವಾದ ನಂತರ ಹಚ್ಚಿಕೊಳ್ಳಲು ಅತ್ಯಂತ ಉಪಯುಕ್ತವಾಗಿದೆ. ಇದರಲ್ಲಿ 'ಆಂಟಿಸೆಪ್ಟಿಕ್' ಗುಣಗಳಿವೆ ಮತ್ತು ಇದು ಚರ್ಮಕ್ಕೆ ಶೀತಲವಾಗಿರುತ್ತದೆ.

ಇದೊಂದು ಸೌಂದರ್ಯ ಸಾಧನ ಇಷ್ಟೇ ಅಲ್ಲ. ಆದರೆ ಪ್ರಾಚೀನ ಕಾಲದಿಂದಲೂ ಗೊತ್ತಿದ್ದ ಕೇಶಾಭಿವೃದ್ಧಿಯನ್ನು ನಿರೋಧಿಸುತ್ತದೆ.



**ವಿಕೋ ಟರ್ಮೆರಿಕ್**
**ವ್ಯಾನಿಶಿಂಗ್ ಕ್ರೀಮ್**
**ಎಂದರೆ ಅರಿಸಿನದ ಸ್ನೋ**
ಶ್ರೀಗಂಧದ ಪರಿಮಳದಲ್ಲಿ




**ವಿಕೋ ಲ್ಯಾಬೊರೇಟರೀಸ್,**
**ಬೊಂಬಾಯಿ-14**

KANNADA

ಹೊರೆಯೆನ್ನು ಭರಿಸುವ ಶಕ್ತಿ ಉದ್ಯಮಕ್ಕೆ ಇಂದಿಲ್ಲ. ಎಂತಲೇ ಸರ್ಕಾರ ಉದ್ಯಮದ ಉದ್ಧಾರಕ್ಕೆ ಬರಬೇಕೆಂದು ಉದ್ಯಮ ಮೊರೆಯಿಡುತ್ತಿದೆ. ಸಾರ್ವಜನಿಕರು ಈ ವಿಷಯವನ್ನು ಕೂಲಂಕಷವಾಗಿ ವಿಚಾರಮಾಡಬೇಕು, ಸರ್ಕಾರವೂ ವಿಚಾರ ಮಾಡಬೇಕು.

ಈಗ ಮೈಸೂರು ರಾಜ್ಯಕ್ಕೆ ಮನರಂಜನೆ ತೆರಿಗೆಯ ರೂಪದಲ್ಲಿ ಪ್ರತಿವರ್ಷ ೧-೧ ೧/೪ ಕೋಟಿ ರೂಪಾಯಿ ವರಮಾನ ಬರುತ್ತಿದೆ. ಇದರಲ್ಲಿ ಕನ್ನಡ ಚಿತ್ರಗಳ ಪ್ರದರ್ಶನದಿಂದಲೇ ಸುಮಾರು ೨೫-೩೦ ಲಕ್ಷ ರೂಪಾಯಿ ಮನರಂಜನೆ ತೆರಿಗೆಯ ರೂಪದಲ್ಲಿ ಬರುತ್ತಿದೆ.

ಒಂದು ಕನ್ನಡ ಚಿತ್ರ ಸುಮಾರು ೨- ೨ ೧/೨ ಲಕ್ಷದ ವೆಚ್ಚದಲ್ಲಿ ತಯಾರಿಸಿದರೆ ಅದು ತಯಾರಿಕೆ ಪ್ರಾರಂಭವಾಗಿ ಚಿತ್ರ ತೆರೆಗೆ ಸಿದ್ಧವಾಗುವಷ್ಟರಲ್ಲಿ ಆಮದುಕರ, ಮಾರಾಟ ತೆರಿಗೆ, ಆಮದು ಸುಂಕ, ಎಕ್ಸೈಜ್ ತೆರಿಗೆ ಮತ್ತು ಇತರ ಸುಂಕಗಳು ಈ ರೂಪದಲ್ಲಿ ಸರ್ಕಾರಕ್ಕೆ ಸುಮಾರು ರೂ. ೩೦,೦೦೦|- ಮುಟ್ಟಿರುತ್ತದೆ. ಅಲ್ಲದೆ ನಿರ್ಮಾಪಕ ಹಾಕಿದ ಬಂಡವಾಳ ೨- ೨ ೧/೨ ಲಕ್ಷ ಹಣ ಅವನಿಗೆ ಭರ್ತಿಯಾಗುವಷ್ಟರಲ್ಲಿ ೧- ೧/೨- ೧ ೩/೪ ಲಕ್ಷ ರೂ ಮನರಂಜನೆ ತೆರಿಗೆ ಸರ್ಕಾರಕ್ಕೆ ಕೊಟ್ಟಿರುತ್ತಾನೆ. ಅಂದರೆ ತನ್ನ ಜೀವನಕ್ಕಾಗಿ ಆರಿಸಿಕೊಂಡ ಈ ಉದ್ಯಮದಲ್ಲಿ ತಾನು ಹಾಕಿದ ಬಂಡವಾಳವಷ್ಟೇ ತನ್ನ ಕೈಗೆ ಹಿಂತಿರುಗುವಷ್ಟರಲ್ಲಿ (ಒಂದು ಪೈಸಾ ಲಾಭ ಸಹ ಅವನು ಕಂಡಿರುವುದಿಲ್ಲ) ಸರ್ಕಾರಕ್ಕೆ ೧ ೩/೪-೨ ಲಕ್ಷ ರೂಪಾಯಿಗಳಿಗೂ ಹೆಚ್ಚಿಗೆ ಹಣ ಸರ್ಕಾರಕ್ಕೆ ಸಲ್ಲಿಸಿರುತ್ತಾನೆ. ಹಾಕಿದ ಬಂಡವಾಳದ ೩/೪ ಭಾಗ ಕನ್ನಡ ಚಿತ್ರ ನಿರ್ಮಾಪಕ ಈ ರೀತಿ ಸರ್ಕಾರಕ್ಕೆ ಕೊಡಬೇಕಾಗಿರುವಾಗ ಈ ಹೊರೆಯನ್ನು ಅವನು ನಿಭಾಯಿಸಬಲ್ಲನೇ ಎಂಬುದನ್ನು ಯೋಚಿಸಬೇಕು. ಸರ್ಕಾರ ನೆರವು ಕೊಡುತ್ತೇನೆ ಎಂದು ಹೇಳಿತು. ಅದರಿಂದ ಉದ್ಯಮ ಕೇಳುತ್ತಿದೆ ಎಂದು ಭಾವಿಸಿದರೆ ತಪ್ಪಾಗುತ್ತದೆ. ಅಂಕಿ ಅಂಶಗಳನ್ನು ಗಮನಿಸಿ ನಂತರ ವಿವೇಚಿಸಿದರೆ ಉದ್ಯಮಕ್ಕೆ ನೆರವು ಬೇಕೆಂಬುದು ತಾನೇ ಅರಿವಾಗುತ್ತದೆ.

೨ ೧/೨ ಲಕ್ಷದ ಯೋಜನೆಗೂ, ೫೦ ಲಕ್ಷದ ಯೋಜನೆಗೂ ಒಂದೇ ಪ್ರಮಾಣದ ಹೊರೆ ಹೇರಿದರೆ ಪುಟ್ಟ ಯೋಜನೆ ಕುಸಿದುಹೋಗುವುದೆಂಬುದು ಅನುಭವದ ಮಾತಲ್ಲವೆ? ತೆರಿಗೆ ಕರಗಳನ್ನು ಭೇದ ಕಾಣದಂತೆ ಹಾಕಬೇಕೆಂಬ ತತ್ತ್ವ ಸರಿಯಾದರೂ ಅದನ್ನು ನಿರ್ವಹಿಸಲಾರದೆಂಬುದು ಕಣ್ಣಿಗೆ ಕಾಣುತ್ತಿರುವಾಗ ಬೇರೆ ರೀತಿಯ ಹೊರೆ ನಿರ್ವಹಿಸಲಾರದ ಭಾಷಾ ಚಿತ್ರ ನಿರ್ಮಾಪಕರ ನೆರವಿಗೆ ಸರ್ಕಾರ ಬರಲೇಬೇಕು. ಅವರ ನೆರವಿಗೆ ಸರ್ಕಾರ ಬರದಿದ್ದರೆ ಉದ್ಯಮ ಸಮಾಜದ ಹಿತಕ್ಕಾಗಿ ದುಡಿಯುವ ತನ್ನ ಕರ್ತವ್ಯ ಬಿಟ್ಟು ಬರೀ ಹಣ ಸೆಳೆಯುವ ತೀರ ಕೆಳಮಟ್ಟಕ್ಕೆ ಇಳಿದು ಸಮಾಜ ಘಾತುಕವಾಗಬೇಕಾಗುತ್ತದೆ. ಹಾಗಿಲ್ಲದೆ ಬದುಕಲು ಬೇರೆ ದಾರಿಯೇ ಇರುವುದಿಲ್ಲ. ಜನತೆಗೆ ಅಭಿರುಚಿ ರೂಪಿಸುವುದರಲ್ಲಿ ಚಲನ ಚಿತ್ರದ ಪಾತ್ರ ಈ ಯುಗದಲ್ಲಿ ಬಹಳ ಪ್ರಧಾನವಾದುದು. ಸುರುಚಿ ಹುಟ್ಟಿಸಬಲ್ಲ ಶಕ್ತಿಯನ್ನು ನೆರವು ನೀಡದೆ ನಷ್ಟಪಡಿಸಿ ರುಚಿ ಕೆಡಿಸುವ ಶಕ್ತಿಯನ್ನು ಅದಕ್ಕೆ ಉಳಿಸಿಕೊಟ್ಟರೆ ಅದರಿಂದ ನಾಡಿಗೆ ಹಾನಿಯೆಂಬುದನ್ನು ಜನ-ಸರ್ಕಾರ ತಿಳಿಯಬೇಕು.

ಒಂದು ಚಿತ್ರ ನಿರ್ಮಾಣವಾಗಿ ತೆರೆಗೆ ಸಿದ್ಧವಾಗುವಷ್ಟರಲ್ಲಿ ಕನ್ನಡ ಚಿತ್ರ ನಿರ್ಮಾಪಕ ತನ್ನ ಬಂಡವಾಳದ ಪ್ರತಿಶತ ೧೫ ರಷ್ಟನ್ನು ಸರ್ಕಾರಕ್ಕೆ ಈ ಮೊದಲು ತಿಳಿಸಿದಂತೆ ಬೇರೆ ಬೇರೆ ತೆರಿಗೆಯ ರೂಪದಲ್ಲಿ ಒಟ್ಟಿನಲ್ಲಿ ಕೊಟ್ಟಿರುತ್ತಾನೆ. (ಇದರಲ್ಲಿ ಮನರಂಜನೆ ತೆರಿಗೆ ಸೇರಿಲ್ಲ) ಆದರೆ ಒಬ್ಬ ಹಿಂದೀ ನಿರ್ಮಾಪಕನಾಗಲಿ ಅಥವಾ ತಮಿಳು ನಿರ್ಮಾಪಕನಾಗಲಿ ಒಂದು ಚಿತ್ರ ತೆರೆಗೆ ಸಿದ್ಧಮಾಡುವಷ್ಟರಲ್ಲಿ ತನ್ನ ಬಂಡವಾಳದ ಪ್ರತಿಶತ ಮೂರರಷ್ಟನ್ನು ಮಾತ್ರ ಕೊಟ್ಟಿರುತ್ತಾನೆ. ಈ ವ್ಯತ್ಯಾಸಕ್ಕೆ ಮುಖ್ಯ ಕಾರಣ ತೆರಿಗೆ ಕೊಟ್ಟು ಉಪಯೋಗಿಸಬೇಕಾದ ಪದಾರ್ಥಗಳು, ಮತ್ತು ಸಾಮಗ್ರಿಗಳ ಪ್ರಮಾಣದಲ್ಲಿ ಭಾಷೆಯ ಕಾರಣವಾಗಿ ಅಥವಾ ತೊಡಗಿಸುವ ಬಂಡವಾಳದ ಕಾರಣವಾಗಿ ಹೆಚ್ಚು ವ್ಯತ್ಯಾಸ ಇಲ್ಲದಿರುವುದು.

ಮನರಂಜನೆ ತೆರಿಗೆ ಪ್ರದರ್ಶನದ ವರಮಾನದ ಮೇಲೆ ಇರುವುದರಿಂದ ಆ ಹೊರೆಯಲ್ಲಿ ಪ್ರತಿಶತ ಹೆಚ್ಚು ವ್ಯತ್ಯಾಸವಾಗುವುದಿಲ್ಲವಾದರೂ ಪ್ರದರ್ಶನ ಕೇಂದ್ರಗಳ ಸಂಖ್ಯೆ ಕಡಿಮೆ ಇರುವ ಭಾಷಾ ಚಿತ್ರಗಳು ಅದೇ ಪ್ರಮಾಣದ ಮನರಂಜನೆ ತೆರಿಗೆಯನ್ನು ಹೊರಲಾರವು. ರಾಷ್ಟ್ರದಲ್ಲಿ ಸುಮಾರು ೪ ಸಾವಿರ ಚಿತ್ರ ಮಂದಿರಗಳು ೧೫೦೦ ಟೂರಿಂಗ್ ಟಾಕಿಗಳೂ ಇವೆ. ಅವುಗಳಲ್ಲಿ ಕನ್ನಡ ನಾಡಿನಲ್ಲಿ ೨೭೫ ಚಿತ್ರ

ಮಂದಿರಗಳೂ; ೨೮೦ ಟೂರಿಂಗ್ ಟಾಕಿಗಳೂ ಇವೆ. ೨೬೫ ಚಿತ್ರ ಮಾವಿಗಳು ಇದ್ದರೂ ಬೆಂಗಳೂರು, ಮೈಸೂರು ಮೊದಲಾದ ೧೨ ಪ್ರಮುಖ ನಗರಗಳಲ್ಲಿಯೇ ಒಟ್ಟು ೧೨೫ ಚಿತ್ರ ಮಂದಿರಗಳು ಇವೆ. ಟೂರಿಂಗ್ ಟಾಕಿಗಳಿಂದ ವರಮಾನ ವ್ಯವಸ್ಥಿತವಾದ ರೀತಿಯಲ್ಲಿ ನಿರ್ಮಾಪಕರ ಕೈ ಸೇರುವುದಿಲ್ಲ. ಅದರಿಂದ ಶಾಶ್ವತವಾದ ಚಿತ್ರಮಂದಿರಗಳಿಂದ ಮಾತ್ರ ನಿರ್ಮಾಪಕ ಹೆಚ್ಚು ಅವಲಂಬನೆ ಪಡೆಯಬೇಕು. ಅಂದರೆ ಕನ್ನಡ ಚಿತ್ರಕ್ಕೆ ೧೦೦ ರಿಂದ ೧೨೫ ಬೇರೆ ಬೇರೆ ಊರುಗಳಲ್ಲಿ ಮಾತ್ರ ಚಿತ್ರಪ್ರದರ್ಶನಕ್ಕೆ ಅವಕಾಶವಿದೆ. ಯಾಕೆಂದರೆ ಎರಡು–ಮೂರು ಚಿತ್ರಮಂದಿರಗಳಿರುವ ಊರುಗಳು ಕರ್ನಾಟಕದಲ್ಲಿ ಬಹಳ ಇರುವುದರಿಂದ ಪ್ರದರ್ಶನದ ಊರಿನ ಸಂಖ್ಯೆ ಕಡಿಮೆಯಾಗುತ್ತದೆ.

ಪ್ರೇಕ್ಷಕ ಕೊಡುವ ೧ ರೂ ನಲ್ಲಿ ಚಿತ್ರಮಂದಿರದವರ ಭಾಗ ಹಂಚಿಕೆದಾರನ ಕಮೀಷನ್. ಮನರಂಜನೆ ತೆರಿಗೆ ಇವೆಲ್ಲ ಹೋಗಿ ನಿರ್ಮಾಪಕನ ಕೈಗೆ ಸುಮಾರು ೨೬ ರಿಂದ ೪೦ ಪೈಸೆವರೆಗೆ ಬರುತ್ತದೆ. ಸಾಲುದುದಕ್ಕೆ ಹಣವನ್ನು ಮೊದಲಿಗೆ ತೊಡಗಿಸಿದ ನಿರ್ಮಾಪಕ ಒಟ್ಟಾಗಿ ಹಾಕಿದ ಬಂಡವಾಳವನ್ನು ಹನಿಹನಿಯಾಗಿ ಎಲ್ಲರಿಗೂ ಕಡೆಯಲ್ಲಿ ತೆಗೆದುಕೊಳ್ಳಬೇಕಾಗುತ್ತದೆ. ಸಂಪೂರ್ಣ ಬಂಡವಾಳ ಹಾಕಿ ಚಿತ್ರ ತೆಗೆಯುವ ಧೀರ ನಿರ್ಮಾಪಕರು ಬೆರಳೆಣಿಸುವಷ್ಟು ಜನರು ಇಡೀ ರಾಷ್ಟ್ರದಲ್ಲಿ ಸಿಗಬಹುದು. ಆದರೆ ೧೦೦ ರಲ್ಲಿ ತೊಂಭತ್ತೊಂಭತ್ತು ಮಂದಿ ನಿರ್ಮಾಪಕರು, ಬಂಡವಾಳ ಕೊಡುವ ಹಂಚಿಕೆ ಕರಾರಿನ ಮೇಲೆ ಮುಂಗಡ ಹಣ ಕೊಡುವ ಹಂಚಿಕೆದಾರರ ಕೈಗೊಂಬೆಯಾಗಿ ವ್ಯಕ್ತಿತ್ವ ಕಳೆದಕೊಂಡವರೇ ಇರುತ್ತಾರೆ. ಹಣಕಾಸಿನ ವ್ಯವಹಾರದಲ್ಲಿನ ಅವ್ಯವಹಾರದ ಬಗೆಗಳು ನಂಬಲಾಗದ ಪ್ರಮಾಣದಲ್ಲಿ ತೆರಬೇಕಾಗುವ ಬಡ್ಡಿ (ಅದಕ್ಕೆ ಡಾಯಲ್ಟಿ ಎಂಬ ಬಹು ಗಂಭೀರವಾದ ಪದ ಉಪಯೋಗಿಸುತ್ತಾರೆ.) ಇವನ್ನೆಲ್ಲ ಹೊತ್ತು ನಿರ್ಮಾಪಕ ಬದುಕುವುದು ಬಹಳ ಕಷ್ಟ. ಈ ವರೆಗೆ ತಯಾರಾದ ೧೯೦ ಚಿತ್ರಗಳ ನಿರ್ಮಾಪಕರ ಸಂಖ್ಯೆಯನ್ನು ಗಮನಿಸಿ, ಅವರಲ್ಲಿ ಎಷ್ಟು ಜನ ನಿರ್ಮಾಪಕರು ಒಂದೋ–ಎರಡೋ ಚಿತ್ರಗಳಿಗಿಂತ ಹೆಚ್ಚು ಚಿತ್ರಗಳನ್ನು ನಿರ್ಮಿಸಿದ್ದಾರೆಂಬುದನ್ನು ಗಮನಿಸಿದರೆ ನಿರ್ಮಾಪಕನ ಸಂಕಟ ಗೊತ್ತಾಗುತ್ತಿದೆ.

ನಿರ್ಮಾಪಕನ ಪರಿಸ್ಥಿತಿ ಸುಧಾರಿಸದೆ, ಇದ್ದರೆ ನಮ್ಮ ಚಿತ್ರಗಳು ತಾಂತ್ರಿಕವಾಗಿಯಾಗಲಿ, ವಸ್ತು ವಿಶೇಷದ ದೃಷ್ಟಿಯಿಂದಾಗಲಿ, ಜನತೆಯ ಮೇಲೆ ಸತ್ಪರಿಣಾಮ ಮಾಡುವ ದೃಷ್ಟಿಯಿಂದಾಗಲೀ,




ನಂ. ೩: ದೀಪಾವಳಿಗೆ ಲೇಖ ಬೇಡಿದರೆ ಹೊತ್ತಿಗೇನೇ ಕಳಿಸಿದ್ದಾನೆ!

ಊರ್ಜಿತವಾಗಲಾರವು. ಪ್ರತಿ ವರ್ಷ ಆರೆಂಟು ಜನ ಹೊಸ ನಿರ್ಮಾಪಕರು ಹುಟ್ಟಿ ಬಲಿಯಾಗಿ ಹೀಗೆಯೇ ಚಿತ್ರೋದ್ಯಮ ತೊಳಲುತ್ತ ಬದುಕಿರುತ್ತದೆ. ಹೀಗೆಯೇ ಬದುಕಿರಬೇಕೇ, ಬದಲಾಗಬೇಕೇ ಎಂಬುದನ್ನು ಯೋಚಿಸಬೇಕು.

ಕಳೆದ ಎರಡು ವರ್ಷಗಳಲ್ಲಿ ತೆರೆ ಕಂಡಿರುವ ಚಿತ್ರಗಳ ಅಂಕಿ ಸಂಖ್ಯೆಗಳನ್ನು ನೋಡೋಣ. ೬೩–೬೪ ಮತ್ತು ಈ ವರ್ಷ ಇಲ್ಲಿಯ ವರೆಗೆ ತೆರೆ ಕಂಡಿರುವ ಚಿತ್ರಗಳ ಒಟ್ಟು ಸಂಖ್ಯೆ ೫೩. ಅವುಗಳಲ್ಲಿ ೨೦ ಚಿತ್ರಗಳು ಹಣ ತಂದುಕೊಟ್ಟಿವೆ. ಉಳಿದವುಗಳಲ್ಲಿ ಹಾಕಿದ ಬಂಡವಾಳ ಬಂದವು ಕೆಲವು, ನಷ್ಟವಾದವು ಕೆಲವು.

೫೩ ಚಿತ್ರಗಳಲ್ಲಿ, ೩೩ ಸಾಮಾಜಿಕ, ೮ ಪೌರಾಣಿಕ ೮ ಜಾನಪದ ಮತ್ತು ೪ ಐತಿಹಾಸಿಕ. ಇವುಗಳಲ್ಲಿ ಹಣ ತಂದ ಚಿತ್ರಗಳು ೧೦ ಸಾಮಾಜಿಕ, ೬ ಪೌರಾಣಿಕ, ೨ ಜಾನಪದ ಮತ್ತು ೨ ಐತಿಹಾಸಿಕ ಚಿತ್ರಗಳು. ಪೌರಾಣಿಕ ಚಿತ್ರಗಳು ವರಮಾನದ ದೃಷ್ಟಿಯಿಂದ ಹೆಚ್ಚು ನಂಬಲರ್ಹವಾದವು. ಐತಿಹಾಸಿಕ ಸಹ ಚೆನ್ನಾಗಿ ನಿರ್ಮಿಸಿದರೆ ಹಣ ಕೊಡುತ್ತವೆ. ಹೋದ ದಶಕದ ಕಡಿಯ ಭಾಗದಲ್ಲಿ ಜಾನಪದ ಚಿತ್ರಕ್ಕೆ ಜನ ಮಾರು ಹೋಗುತ್ತಿದ್ದಂತೆ ಈಗ ಮಾರು ಹೋಗುತ್ತಿಲ್ಲ. ಸಾಮಾಜಿಕ ಚಿತ್ರದ ಪರಿಸ್ಥಿತಿ ನಿರಾಶಾದಾಯಕವಾಗಿಲ್ಲ. ಹೆಚ್ಚಿನ ಸಾಮಾಜಿಕ ಚಿತ್ರಗಳು ಜನ ಮೆಚ್ಚಿಗೆ ಪಡೆಯದಿರಲು ಮುಖ್ಯ ಕಾರಣ ಅವು ಎರವಲು ಸಾಮಗ್ರಿ, ಬೇರೆ ಭಾಷೆಯಲ್ಲಿ ಜನ ನೋಡಿದ ಚಿತ್ರಗಳ ಮರುಚಿತ್ರೀಕರಣ. ನಮ್ಮದೇ ಕಥೆ, ನಮ್ಮದೇ ಸಂಸ್ಕೃತಿಯ ಹಿನ್ನೆಲೆಯಲ್ಲಿ ನಮ್ಮ ಸಮಸ್ಯೆಗಳನ್ನು ಇದಿರಿಸ ಹೊರಡುವ ಸಾಮಾಜಿಕ ಚಿತ್ರಗಳಿಗೂ ಮನ್ನಣೆ ಇದೆ. ಜಾನಪದ ಪೂರ್ತಿ ಕೈ ಬಿಟ್ಟು ಐತಿಹಾಸಿಕ, ಪೌರಾಣಿಕ, ಸಾಮಾಜಿಕ ಚಿತ್ರಗಳ ಕಡೆ ಕ್ರಮವಾದ ನಿಷ್ಠೆಯ ಜೊತೆಗೆ ನಿರ್ಮಾಪಕರಲ್ಲಿ ಹಾಗೂ ತಾಂತ್ರಿಕ ವರ್ಗದಲ್ಲಿ ಸಹಕಾರ ಮೇಳೈಸಿದರೆ ಒಳ್ಳೆಯ ಭವಿಷ್ಯವಿದೆ ಕನ್ನಡ ಚಿತ್ರೋದ್ಯಮಕ್ಕೆ, ಎಂಬುದು ಗೃಹಿಕೆಗೆ ಬರುತ್ತದೆ.

ಆದರೆ ಅದು ಪೂರ್ಣ ಫಲಪ್ರದವಾಗಬೇಕಾದರೆ ಕನ್ನಡ ಚಿತ್ರೋದ್ಯಮ ಜನ ಮನ್ನಣೆ ಪಡೆಯುವುದಷ್ಟೇ ಅಲ್ಲದೆ ಇತರೆ ಭಾಷಾ ಚಿತ್ರಗಳ ಜೊತೆಗೆ ಸರಿಸಮವಾಗಿ ಸ್ಪರ್ಧೆಗೆ ನಿಲ್ಲಬೇಕಾದರೆ ಅದಕ್ಕೆ ಸೂಕ್ತವಾದ ನೆರವುಬೇಕು. ಭಾರತ ಸರ್ಕಾರ ಪುರಸ್ಕಾರ ಕೊಡಲು ಆರಂಭಿಸಿದಾಗಿನಿಂದ ಈ ೧೨ ವರ್ಷಗಳಲ್ಲಿ ಒಂದೇ ಒಂದು ಕನ್ನಡ ಚಿತ್ರಕ್ಕಾದರೂ ರಾಷ್ಟ್ರಾಧ್ಯಕ್ಷರ ಬಂಗಾರದ ಪದಕ ಬಂದಿಲ್ಲ. ಅಂದರೆ ಆ ಪದಕ ದೊರಕಿಸಿಕೊಳ್ಳಲು ನಮಗೆ ಯೋಗ್ಯತೆ ಇಲ್ಲವೆಂದೆ? ಉಳಿದವರಿಗೆ ಇರುವ ಎಲ್ಲ ಯೋಗ್ಯತೆಯೂ ನಮಗೆ ಇದೆ. ಆದರೆ ಇದಕ್ಕೆ ಮೂಲವಾದ ಬಂಡವಾಳ,– ಅದು ನ್ಯಾಯವಾದ ಬಡ್ಡಿದರದಲ್ಲಿ ಒದಗುವ ಬಂಡವಾಳ– ಇಲ್ಲದಿರುವುದೇ ನಾವು ಹಿಂದೆ ಉಳಿದಿರುವುದಕ್ಕೆ ಬಹು ಮುಖ್ಯವಾದ ಕಾರಣ. ಅಖಿಲ ಭಾರತೀಯ ಮಟ್ಟದಲ್ಲಿ ಮೊದಲನೆಯ ದರ್ಜೆಯ ಮನ್ನಣೆ ಹಾಗು ಪಾರಿತೋಷಕಗಳನ್ನು ೭ ಬಂಗಾಲಿ ಚಿತ್ರಗಳೂ, ೪ ಹಿಂದೀ ಚಿತ್ರಗಳೂ ಮತ್ತು ಒಂದು ಮರಾಠಿ ಚಿತ್ರವೂ ಪಡೆದಿವೆ. ದ್ವಿತೀಯ ದರ್ಜೆಯ ಮನ್ನಣೆ ಹಾಗು ಪಾರಿತೋಷಕಗಳನ್ನು ೫ ಬಂಗಾಲಿ ಚಿತ್ರಗಳೂ, ೩ ಹಿಂದೀ ಚಿತ್ರಗಳೂ, ೨ ತೆಲುಗು ಚಿತ್ರಗಳೂ, ೨ ತಮಿಳು ಚಿತ್ರಗಳೂ ಮತ್ತು ಒಂದು ಮಲೆಯಾಳಿ ಚಿತ್ರವೂ ಪಡೆದಿವೆ' ತೃತೀಯ ದರ್ಜೆಯ ಮನ್ನಣೆ ಹಾಗು ಪಾರಿತೋಷಕಗಳನ್ನು ೨ ಬಂಗಾಲಿ ಚಿತ್ರಗಳೂ, ೫ ಹಿಂದಿ ಚಿತ್ರಗಳೂ, ೨ ಮರಾಠಿ ಚಿತ್ರಗಳೂ ಒಂದು ತಮಿಳು ಮತ್ತು ಒಂದು ಕನ್ನಡ ಚಿತ್ರ ಪಡೆದಿವೆ. ಹನ್ನೆರಡು ವರ್ಷಗಳಲ್ಲಿ ಒಂದೇ ಒಂದು ಕನ್ನಡ ಚಿತ್ರ ಅದೂ ತೃತೀಯ ದರ್ಜೆಯ ಮನ್ನಣೆ ಪಡೆಯಿತು. ಇನ್ನು ಪ್ರಾದೇಶಿಕ ಮಟ್ಟದಲ್ಲಿ ಪ್ರಧಾನಿಗಳ ರಜತ ಪದಕದ ವಿವರ ನೋಡಿದರೆ ೧೧ ಬಂಗಾಲಿ ಚಿತ್ರಗಳೂ, ೧೮ ಹಿಂದೀ ಚಿತ್ರಗಳೂ, ೯ ತೆಲುಗು ಚಿತ್ರಗಳೂ, ೭ ಮರಾಠಿ ಚಿತ್ರಗಳೂ, ೭ ತಮಿಳು ಚಿತ್ರಗಳೂ, ೫ ಮಲೆಯಾಳಿ ಚಿತ್ರಗಳೂ, ೪ ಕನ್ನಡ ಚಿತ್ರಗಳೂ ಮನ್ನಣೆ ಪಡೆದಿವೆ. ಈ ನಾಲ್ಕರಲ್ಲಿ ಅಖಿಲ ಭಾರತದ ತೃತೀಯ ದರ್ಜೆಯ ಬಹುಮಾನ ಪಡೆದ ಚಿತ್ರವೂ ಸೇರಿದೆ'

ಉಳಿದ ಭಾಗದ ಜನಕ್ಕಿರುವ ತಿಳುವಳಿಕೆ, ಜಾಣ್ಮೆ, ಚಾತುರ್ಯ, ತಾಂತ್ರಿಕ ತಿಳುವಳಿಕೆಯುಳ್ಳ ಜನ ಎಲ್ಲ ನಮ್ಮಲ್ಲಿ ಇದ್ದರೂ ಕನ್ನಡ ಚಿತ್ರಗಳು ಹಿಂದುಳಿದಿವೆ ಎಂಬುದನ್ನು ಮೇಲಿನ ಅಂಕೆಗಳು ತೋರಿಸುತ್ತವೆ.

ಭಾರತೀಯ ಜನ ಜೀವನವನ್ನು, ಸಂಸ್ಕೃತಿಯ ಹಿರಿಮೆಯನ್ನು ಕೃತಕವಲ್ಲದ ರೀತಿಯಲ್ಲಿ ಕಲಾಮಯವಾಗಿ ಚಿತ್ರಿಸುವುದರಲ್ಲಿ ನಾವು ಪ್ರಯತ್ನಶೀಲರಾಗಿಲ್ಲ ಎಂಬುದನ್ನು ಇದು ಎತ್ತಿ ತೋರಿಸುತ್ತದೆ. ಏಕೆ

# ಮೀನಾಕ್ಷಿ

ಅತ್ಯಾಧುನಿಕ
ಫಲಹಾರ, ಊಟ
ಮತ್ತು ವಸತಿಗೃಹ

- ರೂಫ ಗಾರ್ಡನ್
- ಮೀಟಿಂಗ್ ಹಾಲ್
- ಲಾಂಜ್
- ಸುಸಜ್ಜಿತ ಕೋಣೆಗಳು



# ಲಾಡ್ಜ

**ಪ್ರವಾಸಿಕರ ಅಚ್ಚುಮೆಚ್ಚಿನ**
**ಬೋರ್ಡಿಂಗ್ & ಲಾಡ್ಜಿಂಗ್,**
**ಹೊಟೆಲ್**

- ಆಧುನಿಕ ಸೌಕರ್ಯಗಳು
- ಉತ್ತಮ ಸೇವೆ
- ಅಟ್ಯಾಚ್ಡ್ ಬಾತ್ ರೂಮ್ ಸೌಕರ್ಯಗಳು

## ಬಳ್ಳಾರಿ



ನಮ್ಮ ಗ್ರಾಹಕವೃಂದಕ್ಕೆ ಮತ್ತು ನಮ್ಮ ಹಿತೈಷಿಗಳಿಗೆ

## ದೀಪಾವಳಿಯ ಶುಭಾಶಯಗಳು

ನಾವು ಈ ದಿಸೆಯಲ್ಲಿ ಪ್ರಯತ್ನಶೀಲರಾಗಿಲ್ಲ? ಪ್ರಯತ್ನಶೀಲರಾಗಬೇಕಾದರೆ ನಮಗೆ ಏನು ಬೇಕು ಎಂಬುದನ್ನು ಯೋಚಿಸುವುದು ಒಳಿತು.

ಭಾರತ ಸಂವಿಧಾನದಲ್ಲಿ ಸೂಚಿತವಾದ ಭಾಷೆಗಳಲ್ಲಿ ಒಂದಾಗಿರುವ ನಮ್ಮ ಕನ್ನಡ ಭಾಷೆ ಸಮಾನ ಮನ್ನಣೆ ಪಡೆದುಕೊಳ್ಳಲು ಪ್ರಯತ್ನಿಸದಿರುವುದಕ್ಕೆ ಕೆಲವು ಕಾರಣಗಳಿವೆ. ಮೊದಲನೆಯದಾಗಿ ಈ ಮೊದಲೇ ಸೂಚಿಸಿದಂತೆ ಕ್ರಮಬದ್ಧವಾದ ಕಡಿಮೆ ಬಡ್ಡಿದರದ ಬಂಡವಾಳದ ಅಭಾವ, ಎರಡನೆಯದಾಗಿ ಕನ್ನಡತನವನ್ನು ಬಿಟ್ಟು ಬೇರೆಯದನ್ನು ಅನುಸರಿಸತೊಡಗಿರುವ ಬೇಗ ಹಣ ಗಳಿಸಬೇಕೆಂಬ ಕಾತುರತೆಯ ಹಿಂದೆ ಅಡಗಿರುವ ಅಡ್ಡದಾರಿಯ ಉತ್ಸಾಹ, ಮೂರನೆಯದಾಗಿ ಹೆರವರು ಮಾಡಿದುದನ್ನೇ ನಾವು ಮತ್ತೆ ಮಾಡಹೋಗುವ ದಡ್ಡತನ; ನಾಲ್ಕನೆಯದಾಗಿ ಕನ್ನಡದ ಮೇಲೆ ಆಸೆಯಾಗಲೀ, ಅಭಿಮಾನವಾಗಲಿ ಇಲ್ಲದೆ ಅನೇಕ ವೇಳೆ ಆ ಭಾಷೆಯೇ ತಿಳಿಯದ ಜನರ ಬಂಡವಾಳದ ಮೇಲೆಯೇ ಅವಲಂಬಿತವಾಗಿರುವ ಅಭಾವ ಪರಿಸ್ಥಿತಿ. ಐದನೆಯದಾಗಿ ಚಿತ್ರ ಸಿದ್ಧವಾದೊಡನೆಯೇ ಪ್ರದರ್ಶನಕ್ಕೆ ಅನುವುಂಟುಮಾಡಿಕೊಡಲು ಇಷ್ಟಪಡದ ಅನ್ಯಭಾಷಾ ಜನರ ಕೈಯಲ್ಲಿ ಬೆಳೆಗುತ್ತಿರುವ ಪ್ರದರ್ಶನ ಮಂದಿರಗಳು. ಆರನೆಯದಾಗಿ ತಾನು ಮುಂಗಡ ಕೊಟ್ಟ ಹಣ ಬಂದರೆ ಸಾಕು ನಿರ್ಮಾಪಕ ಬದುಕಿದರೆಷ್ಟು ಬಿಟ್ಟರೆಷ್ಟು ಎಂಬ ಭಾವನೆಯಿಂದ ಕೂಡಿರುವ ಬಹುಸಂಖ್ಯಾತ ಹಂಚಿಕೆದಾರರು. ಏಳನೆಯದಾಗಿ, "ಇದು ಕನ್ನಡ ಪಟ ತಾನೆ, ಸಾಕು ಸಾಕು ಇದಕ್ಕೆ ಇನ್ನೆಂತಹ ಮಹಾಸಜ್ಜಿಕೆ. ಅದರ ಯೋಗ್ಯತೆಗೆ ಇಷ್ಟೇ ಸಾಕು" ಎಂದು ನಿರ್ಣಯ ಹೇಳುವ ಅನ್ಯಭಾಷಾ ಜನರ ಕೈಯೊಳಗಿನ ಸ್ಟುಡಿಯೋದಲ್ಲಿಯೇ ಹೊರಳಾಡಬೇಕಾದ ಪರಿಸ್ಥಿತಿ. ಹೀಗೆ ಇನ್ನೂ ಅನೇಕ ಕಾರಣಗಳಿಂದ ಎಷ್ಟೇ ಇಷ್ಟ ನಿರ್ಮಾಪಕನಿಗಿದ್ದರೂ ಉತ್ತಮ ಚಿತ್ರವನ್ನು ತೆರೆಗೆ ತರುವುದು ಅಸಾಧ್ಯವಾಗಿದೆ.

ಹಾಗೆಂದು ಕೈಕಟ್ಟಿ ಕುಳಿತುಕೊಂಡರೆ ಹೇಗೆ? ಅವನ್ನು ನಿವಾರಿಸಿಕೊಂಡು ಮೇಲಕ್ಕೇರಲು ಉದ್ಯಮಿಗಳು ಪ್ರಯತ್ನಿಸಬೇಕು. ಏಕೆಂದರೆ ಉದ್ಯಮಕ್ಕೆ ನಿಜವಾಗಿ ಒಳ್ಳೆಯ ಭವಿಷ್ಯವಿದೆ.

ಭಾರತದ ಚಿತ್ರೋದ್ಯಮ ಸರಿಯಾದ ಮಾರ್ಗವನ್ನು ಹಿಡಿಯಬೇಕೆಂಬ ಹಿರಿಯಾಸೆಯಿಂದ ಕೇಂದ್ರ ಸರಕಾರ ೧೯೬೦ ರಲ್ಲಿ ಈ ಉದ್ಯಮದ ಬಹು ಪ್ರಧಾನ ಕೊರತೆಯಾದ ಬಂಡವಾಳವನ್ನು ಒದಗಿಸುವ ಸಲುವಾಗಿ ಫಿಲಂ ಫೈನಾನ್ಸ್ ಕಾರ್ಪೊರೇಷನ್ ಒಂದನ್ನು ಸ್ಥಾಪಿಸಿದೆ. ಉನ್ನತಮಟ್ಟದ ಕಥೆ, ವಸ್ತುವೈವಿಧ್ಯ, ತಾಂತ್ರಿಕ ಚತುರತೆ ಹಾಗು ಉನ್ನತಮಟ್ಟದ ಜನರಂಜನೆಗೆ ಅನುವುಂಟುಮಾಡಿ ಕೊಡುವಂತಹ ಚಿತ್ರ ನಿರ್ಮಾಪನಕ್ಕೆ ಕಡಿಮೆ ಬಡ್ಡಿದರದಲ್ಲಿ ಸಾಲಕೊಡುವುದು ಈ ಸಂಸ್ಥೆಯ ಪ್ರಮುಖ ಕೆಲಸಗಳಲ್ಲಿ ಒಂದು. ಕನ್ನಡ ಚಿತ್ರ ತಯಾರಿಕೆಯ ನೆರವಿಗೂ ಈ ಸಂಸ್ಥೆ ಬಂದಿದೆ, ಹೆಚ್ಚಿನ ನೆರವು ಕೊಡಲು ಸಿದ್ಧವಿದೆ. ಆದರೆ ಆ ನೆರವು ಪಡೆಯಲು ನಮ್ಮ ಪ್ರಾಂತ ಸರಕಾರ ಔದಾರ್ಯವನ್ನು ತೋರಿಸಬೇಕಾಗಿದೆ. ಕಾರ್ಪೊರೇಷನ್ ಕೊಡುವ ಸಾಲಕ್ಕೆ ಪ್ರಾಂತ ಸರಕಾರ ಗ್ಯಾರಂಟಿ ನಿಂತರೆ ಸಾಲ ಸುಲಭವಾಗಿ ಮಂಜೂರಾಗುತ್ತದೆ. ನಿರ್ಮಾಪಕ ತಾನು ಹಾಕುವ ಆರಂಭದ ಬಂಡವಾಳ (ಒಟ್ಟು ತಗಲುವ ಖರ್ಚಿನ ಶೇಕಡ ೨೫ ಭಾಗ) ಮತ್ತು ಕಾರ್ಪೊರೇಷನ್ ಕೊಡುವ ಸಾಲ (ಒಟ್ಟು ತಗಲುವ ಖರ್ಚಿನ ಶೇಕಡ ೭೫ ಭಾಗ)ದ ಮೊಬಲಗಿನಿಂದ ಚಿತ್ರದನ್ನು ಪೂರ್ತಿ ಮುಗಿಸಿ ಕಡಿಮೆ ಕಮಿಷನ್‌ನಲ್ಲಿ ಚಿತ್ರ ಹಂಚಿಕೆಯ ವ್ಯವಸ್ಥೆ ಮಾಡಬಹುದು. ಶೇಕಡ ೨೦ ರಿಂದ ೩೫ರ ವರೆಗೆ ಹಂಚಿಕೆದಾರ ಕಮಿಷನ್ ಈಗ ಪಡೆಯುತ್ತಾನೆ. ಅವನು ಬಂಡವಾಳ ಒದಗಿಸುವುದರಿಂದ ಈ ಹೆಚ್ಚಿನ ಕಮಿಷನ್ ನಿರೀಕ್ಷಿಸುವುದು ಸಹಜ. ಆದರೆ ಬಂಡವಾಳವೇ ಅವನು ಹಾಕದಿರುವುದರಿಂದ ಕಡಿಮೆ ಕಮಿಷನ್‌ನಲ್ಲಿ ಅವನು ಹಂಚಿಕೆ ಮಾಡಲು ಒಪ್ಪುತ್ತಾನೆ. ಉತ್ತರೋತ್ತರ ನಿರ್ಮಾಪಕನ ಚೇತರಿಕೆಗೆ ಇದು ಬಹಳ ಸಹಾಯಕಾರಿಯಾಗುತ್ತದೆ. ಮತ್ತು ಚಿತ್ರ ನಿರ್ಮಾಣಕ್ಕೆ ತೊಡಗಿಸಿದ ಹಣ ಮುಂಚಿತವಾಗಿ ಜೊತೆಯಾಗುತ್ತದೆ. ಬರೀ ಮನರಂಜನೆ ತೆರಿಗೆಯಿಂದಲೇ ಒಂದು ಕೋಟಿಗೂ ಹೆಚ್ಚು ಆದಾಯ ಬರುವಾಗ ಈ ಹಣಕ್ಕೆ ಸರಕಾರ ಗ್ಯಾರಂಟಿ ನಿಲ್ಲುವುದಕ್ಕೆ ಹೆದರುವ ಕಾರಣವೇ ಇಲ್ಲ. ವಿಪರೀತ ಬಡ್ಡಿ ಕೊಟ್ಟು ಚಿತ್ರ ತಯಾರಿಸಿರುವಾಗಲೂ ಲಾಭ ಗಳಿಸಿ ಕೊಟ್ಟ ಚಿತ್ರಗಳ ಸಂಖ್ಯೆ ಶೇಕಡ ೪೫, ಹಾಕಿದ ಪೂರ್ಣ ಬಂಡವಾಳ ಪಡೆದುಕೊಂಡವು ಶೇಕಡ ೪೦, ಸ್ವಲ್ಪ ನಷ್ಟ ಹೊಂದಿದವು ಶೇಕಡ ೧೫ ಹೀಗಿರುವಾಗ ಸರಕಾರ ಇದರ ನೆರವಿಗೆ ಬರಬೇಕಾದುದು ಅದರ ಕರ್ತವ್ಯ.

ಕಾರ್ಪೊರೇಷನ ಸಾಲ ಕೊಡುವಾಗಲೇ ಚಿತ್ರಕಥೆ ಸತ್ವವಿದೆಯೋ ಇಲ್ಲವೇ ಇದು ಹಣ ಗಳಿಸಬಹುದೆ, ಇಲ್ಲವೇ ಎಂಬುದನ್ನೆಲ್ಲ ವಿವೇಚಿಸಿ ತಜ್ಞರ ಸಲಹೆಯ ಮೇಲೆ ಸಾಲ ಕೊಡುತ್ತಾರೆನ್ನುವಾಗ ಸರಕಾರ ನೀಡುವ ಗ್ಯಾರಂಟಿಗೆ ಯಾವ ಹೆಚ್ಚಿನ ಪ್ರಮಾಣದ ಹೊಣೆಗಾರಿಕೆಯೂ ಇರುವುದಿಲ್ಲ. ಕನ್ನಡ ಚಿತ್ರೋದ್ಯಮಕ್ಕೆ ಪ್ರೋತ್ಸಾಹವನ್ನು ಸಾಧ್ಯವಾದ ರೀತಿಯಲ್ಲೆಲ್ಲ ಕೊಡುತ್ತೇವೆಂದು ಸರಕಾರ ಹೇಳಿಕೆಗಳನ್ನು ಕೊಡುವುದಷ್ಟರಲ್ಲಿಯೇ ಮುಗಿಸದೆ ಈ ದಿಶೆಯಲ್ಲಿ ಉಚಿತ ನಿರ್ಣಯ ತೆಗೆದುಕೊಂಡು ನಿಷ್ಠಾವಂತ ನಿರ್ಮಾಪಕರ ನೆರವಿಗೆ ಗ್ಯಾರಂಟಿ ನಿಲ್ಲುವ ರೂಪದಲ್ಲಿ ಬರಬೇಕು ಮತ್ತು ಜನತೆಯ ಮೇಲೆ ಸತ್ಪ್ರಭಾವ ಬೀರುವ ಚಿತ್ರಗಳಿಗೆ ಮನರಂಜನೆ ತೆರಿಗೆ ವಿನಾಯಿತಿ ಕೊಡುವುದರಿಂದ, ಉತ್ತಮ ದರ್ಜೆಯ ನಾಲ್ಕೈದು ಚಿತ್ರಗಳಿಗೆ ನಿರ್ಮಾಪಕ, ನಿರ್ದೇಶಕ ಹಾಗು ಲೇಖಕರಿಗೆ ಹಣದ ರೂಪದ ಬಹುಮಾನವನ್ನು ಪ್ರತಿವರ್ಷ ನೀಡುವ ಯೋಜನೆಯನ್ನು ರೂಪಿಸುವುದರಿಂದ, ಕಡಿಮೆ ವೆಚ್ಚದಲ್ಲಿ ಚಿತ್ರ ತಯಾರಿಸಲು ನಮ್ಮದೇ ಆದ ಸ್ಟುಡಿಯೋ ಸ್ಥಾಪನೆಗೆ ಉತ್ತೇಜನ ಕೊಡುವುದರಿಂದ ಮತ್ತು ಕನ್ನಡ ಚಿತ್ರ ಪ್ರದರ್ಶನವನ್ನು ಕಡ್ಡಾಯವಾಗಿ ಚಿತ್ರಮಂದಿರಗಳ ಮೇಲೆ ಹೇರುವುದರಿಂದ ಬಹಳ ಸಹಾಯವಾಗುತ್ತದೆ. ಚಿತ್ರಮಂದಿರದವರು, ನಿರ್ಮಾಪಕ ಹಾಗೂ ಹಂಚಿಕೆದಾರರೊಂದಿಗೆ ಲಾಭ ನಷ್ಟಗಳಲ್ಲಿ ಸಮಭಾಗಿಗಳಾಗುವವರೆಗೆ ನಿರ್ಮಾಪಕನ ಏಳಿಗೆಯಿಲ್ಲ. ಕಡ್ಡಾಯವಾಗಿ ಬಾಡಿಗೆ ಕೊಟ್ಟು ಕೇವಲ ಚಿತ್ರವನ್ನು ಪ್ರದರ್ಶನಕ್ಕೆ ತಂದೆವೆಂಬ ತೃಪ್ತಿ ತಂದುಕೊಳ್ಳುವ ಪರಿಸ್ಥಿತಿ ನಿರ್ಮಾಪಕನಿಗೆ ಈಗ ಬಂದಿದೆ. ಅದು ಮೊದಲು ಹೋಗಬೇಕು. ನಿರ್ಮಾಪಕ, ಹಂಚಿಕೆದಾರ, ಪ್ರದರ್ಶಕ ಈ ಮೂರು ಅಂಗಗಳೂ ಒಟ್ಟಾಗಿ ಇಡೀ ಉದ್ಯಮದ ಬಾಳಿವೆಗೆ ಜೀವನಾಡಿ. ಅದರಲ್ಲಿ ಯಾವುದೊಂದು ಊನವಾದರೂ ಉದ್ಯಮದ ಬಾಳಿವೆಗೆ ಧಕ್ಕೆ ಎಂಬುದರ ಅರಿವನ್ನು ತಂದುಕೊಂಡು ಮೂರು ಅಂಗಗಳೂ ಪರಸ್ಪರ ಸಹಕಾರದಿಂದ ಉದ್ಯಮದ ಪ್ರಗತಿಯನ್ನು ಸಾಧಿಸಲು ಸರಕಾರ ಕಾನೂನಿನ ಪುಷ್ಟಿ ಕೊಡಬೇಕು. ಹಾಗಿಲ್ಲವಾದರೆ ಬಲಿಷ್ಠರಾದವರು ಹೆಚ್ಚು ಬಲಿಷ್ಠರಾಗಿ ದುರ್ಬಲರು ಇನ್ನೂ ದುರ್ಬಲರಾಗುವ ಪರಿಸ್ಥಿತಿ ಒದಗಿ ಬರುತ್ತದೆ.

ಸರಕಾರ ನೆರವು ನೀಡುವುದರ ಜೊತೆಗೆ ದುಡ್ಡಿರುವ ಜನ ಧೈರ್ಯದಿಂದ ದುಡ್ಡು ಹಾಕಿ ಕನ್ನಡ ಕಲಾಭಿಮಾನಿಗಳು ಪ್ರತಿಯೊಬ್ಬರೂ ಕನ್ನಡ ಚಿತ್ರೋದ್ಯಮವನ್ನು ಪ್ರೋತ್ಸಾಹಿಸಿದರೆ ಬಹು ಬೇಗ ಕನ್ನಡ ಚಿತ್ರೋದ್ಯಮ ಮೇಲಿನ ಹಂತಕ್ಕೆ ಹೋಗುತ್ತದೆ ಎಂಬುದರಲ್ಲಿ ಸಂಶಯವಿಲ್ಲ. ಅಭಿನಯದಲ್ಲಿ, ತಾಂತ್ರಿಕ ದಕ್ಷತೆಯಲ್ಲಿ, ಉತ್ತಮ ಬರವಣಿಗೆಯಲ್ಲಿ ಕನ್ನಡಿಗರು ಯಾರಿಗೂ ತಲೆತಗ್ಗಿಸುವ ಸ್ಥಿತಿಯಲ್ಲಿ ಇಲ್ಲ, ತಲೆ ಎತ್ತಿ ನಿಂತು ತನ್ನ ಸಾಮರ್ಥ್ಯ ತೋರಿಸುವ ಬೆನ್ನೆಲುಬು ಏನೆಂಬುದನ್ನು ಹೇಳಿಯಾಗಿದೆ. ಅದು ಈಗ ಬೇಕು. ಅದು ಸಮರ್ಪಕವಾದ ರೀತಿಯಲ್ಲಿ ದೊರಕಿದರೆ ಕನ್ನಡ ಚಿತ್ರಗಳು ಅಖಿಲ ಭಾರತ ಮಟ್ಟದ ರಾಷ್ಟ್ರಾಧ್ಯಕ್ಷರ ಬಂಗಾರದ ಪದಕ ಪಡೆಯುವುದಷ್ಟೇ ಅಲ್ಲ ಅಂತಾರಾಷ್ಟ್ರೀಯ ರಂಗದಲ್ಲೂ ಕಾಲಿಡಲು ಯೋಗ್ಯವಾಗಬಲ್ಲವು.

ಆದರಿಂದ ಹೇಗಾದರೂ, ಸರಕಾರ ಈ ಉದ್ಯಮದ ನೆರವಿಗೆ ಬರಬೇಕು.



ಪೆಂ[illegible] ಸಂಗ್ರಹಾಂಕದಲ್ಲಿರುವ [illegible] ಮಹೇಶ್ವರಿಯ ವರ "ಕಾಜಲ್" ಚಿತ್ರದ ಚಿತ್ರೀಕರಣದಲ್ಲಿ ನಾನು ಪಾಲ್ಗೊಂಡಿದ್ದೆ. ದೃಶ್ಯ ಬದಲಾವಣೆಯ ಮಧ್ಯಂತರ ಕಾಲದಲ್ಲಿ 'ಕರ್ಮವೀರ'ದ ಪ್ರತಿನಿಧಿ ಬಂದು ಇಣಿಕಿ ಹಾಕಿ ಸಂದರ್ಶನ ಪಡೆಯಬಯಸಿದ. "ಓಹ್... ಸಂದರ್ಶನ... ಈ ಸಂದರ್ಶನಗಳಿಂದ ನನಗೆ ಬೇಸರವಾಗಿಬಿಟ್ಟಿದೆ. ನನ್ನ ಇಪ್ಪತ್ತು ವರ್ಷಗಳ ನಾಟಕ ಮತ್ತು ಚಿತ್ರರಂಗವೃತ್ತಿಯಲ್ಲಿ ಸಾಕಷ್ಟು ಸಂದರ್ಶನ ನೀಡಿದ್ದೇನೆ" ಎಂದು ಅಂದೆ.

"ಓಹೋ... ಇಪ್ಪತ್ತು ವರ್ಷ!" ಎಂದು ಉದ್ಗಾರ ತೆಗೆದನಾತ.

"ಹೌದು... ಇಪ್ಪತ್ತು ವರ್ಷಗಳ ಹಿಂದೆ ನಾನು ಬಾಲನರ್ತಕಿಯಾಗಿ ತಮಿಳು ನಾಟಕ ಮತ್ತು ಸಿನೇಮಾರಂಗ ಪ್ರವೇಶಿಸಿದೆ." ಎಂದು ನಾನು ಉತ್ತರಿಸಿದಾಗ ವಿಸ್ಮಿತನಾದ ಪ್ರತಿನಿಧಿ ತನ್ನ ಆಶೆ ಈಡೇರಿಸಿಕೊಳ್ಳಲು ಇನ್ನೂ ಉತ್ಸುಕನಾದಂತೆ ಕಂಡ. ಆತ ಒಳ್ಳೆ ಹುರುಪಿನ ವ್ಯಕ್ತಿ ಕೂಡ. 'ಕರ್ಮವೀರ'ದ ಚಿತ್ರರಂಗ ಪುಟಗಳಿಗಾಗಿ ಏನಾದರೂ ಕೌತುಕದ ವಿಷಯ ಬರೆಯಲು ನಾನು ಒಪ್ಪಿಕೊಂಡೆ. ನಾನು ಕನ್ನಡವನ್ನು ಹೆಚ್ಚಾಗಿ ಓದಲಾರೆನಾದರೂ ಆತನಿತ್ತ 'ಕರ್ಮವೀರ'ದ ಪ್ರತಿಯೊಂದನ್ನು ಸ್ವೀಕರಿಸಿದೆ.

ಈ ತರುಣ ವರದಿಗಾರ ನನ್ನನ್ನು ನೋಡುತ್ತ ನನ್ನ ದೇಹದ ತೂಕ ಸಾಕಷ್ಟು ಇಳಿದಿದೆ ಎಂದು ನನಗೆ ಸಂತೋಷವೆನಿಸಲೆಂದೇನೋ ಪ್ರಶಂಸಿಸಿದ. ಇತ್ತೀಚೆಗೆ ಚಲಚ್ಚಿತ್ರ ನಟಿಯರು ತೆಳ್ಳಗಾಗಲು ಪರಿತಪಿಸುವುದು ಸಾಮಾನ್ಯವೆನಿಸಿದೆ. ಅದರಂತೆ, 'ಸಂಗಮ' ಚಿತ್ರದಲ್ಲಿ ವೈಜಯಂತಿಮಾಲ ಬಳುಕುವ ದೇಹದಿಂದ ಸುಂದರಳಾಗಿ ಕಂಡುಬಂದಳು. / ಆಗಿನಿಂದ ಚಲಚ್ಚಿತ್ರ ನಟಿಯರಿಗೆ ಈ ವಿಷಯ ದಿನನಿತ್ಯದ ಮಾತಾಗಿ, ನೀನೆಷ್ಟು ಪೌಂಡು ಇಳಿದಿದ್ದೀಯೋ.... ನೀನೆಷ್ಟು ತೂಕ ಕಡಿಮೆಯಾಗಿದ್ದೀ... ಎಂದು ಒಬ್ಬರು ಮತ್ತೊಬ್ಬರನ್ನು ಪ್ರಶ್ನಿಸುತ್ತಾರೆ. ಕೆಲವು ವರ್ಷಗಳ ಹಿಂದೆ ದಕ್ಷಿಣಭಾರತದ ರಜತಪಟದೆಯ ಮೇಲೆ ಎಷ್ಟು ದಪ್ಪ ಹಾಗೂ ದೃಢಕಾಯರಾಗಿ ಕಂಡರೆ ಅಷ್ಟು ಆಕರ್ಷಕ ಮತ್ತು ಯಶಸ್ವೀ ನಟಿ ಎಂದೆನ್ನುತ್ತಿದ್ದರು.

ಚಿತ್ರರಂಗದಲ್ಲಿ ಕಾಲಿರಿಸಿದಾಗ ನಾನು ಬಹು ತೆಳ್ಳಗೆ ಹಾಗೂ ಆಕರ್ಷಕಳಾಗಿದ್ದೆ. ನಾನು ಕೂಡ ದುಂಡುದುಂಡಾಗಿ ಉಬ್ಬಿದ ಆರೋಗ್ಯಕಾಯಳಾಗಬೇಕೆಂದು ಹಾತೊರೆಯುತ್ತಿದ್ದೆ. ನನ್ನ ತೂಕ ೧೪೦ ಪೌಂಡುಗಳಷ್ಟಾಗುವವರೆಗೂ ನಾನು ನಾಲ್ಕಾರು ಪೌಂಡು ತೂಕ ಹೆಚ್ಚಿಸಿಕೊಳ್ಳಲು, ದಿನಂಪ್ರತಿ ತಿಂದದ್ದೇ ತಿಂದದ್ದು, ನೃತ್ಯ ಮಾಡಿದ್ದೇ ಮಾಡಿದ್ದು ಎಂಬುದು ನನಗಿನ್ನೂ ನೆನಪಿದೆ. ಸ್ತ್ರೀಯು ಮೈತುಂಬಿಕೊಂಡು ಆರೋಗ್ಯಕಾಯಳಾದಷ್ಟೂ ಸುಂದರ ಹಾಗೂ ಆಕರ್ಷಣೀಯ ಎಂದು ಜನ ತಿಳಿಯುತ್ತಾರೆ. ಮುಂಬಯಿ ಚಿತ್ರರಂಗದ ನಟಿಯರು ಬಳುಕುವ ಆಕೃತಿಯವರಾದ್ದರಿಂದ ಸದೃಢ ಹಾಗೂ ಸುಂದರ ಕಾಯದ ನಟಿಯರನ್ನು ಹಿಂದೀ ಚಿತ್ರದ ತೆರೆಯ ಮೇಲೆ ತರಲು ಅನೇಕ ಮುಂಬಯಿ ಚಿತ್ರನಿರ್ಮಾಪಕರು ದಕ್ಷಿಣದ ಕಡೆಗೆ ನೋಡಹತ್ತಿದರು. ಈ ಬಗ್ಗೆ ನನಗೆ ಅಷ್ಟು ಆತ್ಮವಿಶ್ವಾಸವಿಲ್ಲದಿದ್ದರೂ ಇಂತಹ ಆಕರ್ಷಣೀಯ ನಟಿಯರಲ್ಲಿ ನಾನೂ ಒಬ್ಬಳಾಗಿದ್ದೆ. ರಾಜಕಪೂರರು ಮುಂಬಯಿಯಿಂದ ಅಷ್ಟು ದೂರ ಮದ್ರಾಸಿಗೆ ಬಂದು ನನ್ನನ್ನು ಅವರ "ಜಿಸ್ ದೇಶಮೇ ಗಂಗಾ ಬಹತೀ ಹೈ" ಚಿತ್ರದ ನಾಯಕಿಯಾಗಿ ಅಭಿನಯಿಸುವಂತೆ ಕೇಳಿದರು. ಆ ಚಿತ್ರ ನೋಡಿದ ವಾಚಕರಿಗೆ ನಾನು ಅದರಲ್ಲಿ ಬಳುಕುವ ದೇಹಿಯಾಗಿರಲಿಲ್ಲವೆಂಬುದು ನೆನಪಿರಬಹುದು.

ಈಗ ಕಾಲ ಬದಲಾಗಿದೆ. ಅದರಂತೆ ನಾನೂ ಹಿಂದೀ ತೆರೆಗೆ ಅಗತ್ಯವೆನಿಸಿದ ಬದಲಾವಣೆಗಳಿಗೆ ತಕ್ಕಂತೆ ಹೊಂದಿಕೊಳ್ಳಲು ಪ್ರಯತ್ನಪಟ್ಟಿದ್ದೇನೆ. ಮಾಲಾ ಸಿಂಹ-ವೈಜಯಂತಿಮಾಲ ಮತ್ತಿತರ ಆರೋಗ್ಯ ಕಾಯದ ತಾರೆಯರನ್ನು ಕೆಲ ಕಾಲದ ಹಿಂದೆ ನೋಡಿದಾಗ ಅವರಂತೆ ನಾನೂ ಬಳುಕುವ ದೇಹಿಯಾಗಬೇಕೆಂದು ಆಲೋಚಿಸಿದೆ. ಆದ್ದರಿಂದ ನಿಮ್ಮ ವರದಿಗಾರರು, ನಾನು ಬದಲಾವಣೆಯಾದಂತೆ ಕಾಣುತ್ತೇನೆಂದು ಅಂದಾಗ ನನಗೆ ಸಮಾಧಾನವೇ ಆಯಿತು.

ದಪ್ಪವಾಗುವ ಮತ್ತು ತೂಕ ಹೆಚ್ಚಿಸುವ ಕುರಿತು ಮಾತನಾಡುವಾಗ ನನ್ನ ಬಾಲ್ಯದ ದಿನಗಳತ್ತ ನನ್ನ ಗಮನ ಹೋಗುವದು. ಆಗ ನಾನು ಹೆಚ್ಚು ಮಾಂಸ ಖಂಡಗಳಿಂದ ತುಂಬಿರದೆ ಎಲಬುಗೂಡಿನ ಪುಟ್ಟ ಹುಡುಗಿಯಾಗಿದ್ದೆ. ನನಗಾಗ ೭ ಅಥವಾ ೮ ವರ್ಷ ವಯಸ್ಸಿರಬಹುದು. ಬಹಳ ಕ್ಷೀಣ ಮತ್ತು ತೆಳ್ಳಗಿದ್ದೆ. ಇತರ ಹುಡಿಗೆಯರಂತೆ ನಾನೂ ಆರೋಗ್ಯ

ರಾಜಧಾನಿಗಳಲ್ಲಿ ನಾವು ನೃತ್ಯಗಳನ್ನು ಪ್ರದರ್ಶಿಸಿದೆವು. ನಾವು ಸಹೋದರಿಯರು ಒಂದು ತಂಡವನ್ನು ಸೇರಿಸಿ "ಭಾರತದ ನೃತ್ಯಗಳು" ಎಂಬ ಸಂಸ್ಥೆಯನ್ನು ಸ್ಥಾಪಿಸಿದೆವು. ಲಲಿತ ವಿವಾಹ ಮಾಡಿಕೊಂಡಾಗ ಇದರ ಭಾರ ನನ್ನ ಮೇಲೆ ಬಿತ್ತು. ಆ ಮೇಲೆ ನಾನೂ ಚಿತ್ರರಂಗ ಮತ್ತು ನೃತ್ಯಪ್ರದರ್ಶನಗಳಿಂದ ವಿರಾಮ ಪಡೆದಾಗ ನನ್ನ ತಂಗಿ ರಾಗಿಣಿ ಈ ಸಂಸ್ಥೆಯ ಕಾರ್ಯಭಾರ ನಡೆಸಬೇಕಾಯಿತು. ಕಳೆದ ವರ್ಷ ಅವಳೂ ಮದುವೆಯಾದಳು. ನಾಟ್ಯಕಲೆಗಿದ್ದ ನಮ್ಮ ಸೌಹಾರ್ದಪ್ರದ ಹಳೆಯ ಸಂಪರ್ಕ ಇನ್ನು ಮುಗಿದಂತೆ ಆಯಿತು.

ನನ್ನ ಅಕ್ಕ ಲಲಿತ ಮತ್ತು ತಂಗಿ ರಾಗಿಣಿಯರು ಮದುವೆಯಾಗಿ ಚಿತ್ರಪ್ರಪಂಚದಿಂದ ವಿಶ್ರಾಂತಿ ಹೊಂದಿದರು. ನಾನು ಕೂಡ ವಿವಾಹವಾದ ನಂತರ ಪುನಃ ಚಿತ್ರರಂಗಕ್ಕೆ ಹಿಂತಿರುಗಲು ಆಶೆಪಟ್ಟಿದ್ದಿಲ್ಲ. ಆದರೆ ನಾವೆಲ್ಲ ಸನ್ನಿವೇಶಗಳಿಗೆ ಬಲಿಯಾಗುತ್ತೇ—ವಲ್ಲವೆ? ನಮಗೆ ಫ್ಯಾಮಿಲಿಫ್ರೆಂಡ್ ಒಬ್ಬ ಇದ್ದ. ಆತ ತೊಂದರೆಗಳಲ್ಲಿ ಸಿಕ್ಕುಕೊಂಡಿದ್ದ. ನನ್ನ ಪತಿ, ಭಾವಪ್ರವೃತ್ತಿಯ ಅಂತಃಕರುಣಿ. ನನ್ನ ತಾಯಿಯಂತೂ ದಯಾಮಯಿ ಎಂದು ಹೆಸರಾಗಿದ್ದಾಳೆ. ಕುಟುಂಬದ ಸ್ನೇಹಿತನ ಸಹಾಯಕ್ಕಾಗಿ ಒಂದೇ ಒಂದು ಚಿತ್ರದಲ್ಲಿ

## ದಕ್ಷಿಣದ ಸುಂದರಿ ನೃತ್ಯತಾರೆ ಪದ್ಮಿನಿ ಹೇಳುತ್ತಾಳೆ

# 'ನಾನು ಬಳುಕುವ ಮೈಯುವಳಾಗಿದ್ದೇನೆ'

ಕಾಯಳಾಗಬೇಕೆಂದು ಕಾತರಳಾಗಿದ್ದೆ. ನನ್ನ ವೈದ್ಯರು ಕೂಡ ನನ್ನ ಆರೋಗ್ಯದ ಬಗ್ಗೆ ಚಿಂತಾಕುಲರಾಗಿ ನನಗೆ ನೃತ್ಯ ಕಲಿಸಲು ನನ್ನ ತಾಯಿಗೆ ಸಲಹೆ ಮಾಡಿದರು. ನೃತ್ಯದಿಂದ ದೇಹಕ್ಕೆ ವ್ಯಾಯಾಮವಾದಂತಾಗಿ ನಾನು ಚನ್ನಾಗಿ ತಿಂದುಂಡು ಆರೋಗ್ಯವಂತಳಾಗುವೆನೆಂದು ಅವರು ಆಲೋಚಿಸಿದ್ದರು. ಅವರ ಯೋಚನೆ ಸರಿಯಾದುದಾಗಿತ್ತು, ಮಾತ್ರವಲ್ಲ ನಾನೆಂದೂ ಆಲೋಚಿಸದ ಹೊಸ ಜೀವನಕ್ಕೆ ಅದು ಕಾರಣವಾಯಿತು. ನೃತ್ಯಕಲೆಯಲ್ಲಿ ನಾನು ಪ್ರವೀಣಳಾದೆ. ನನ್ನ ನೃತ್ಯಕಲೆಗೆ ಇಡೀ ದಕ್ಷಿಣ ಭಾರತವೇ ಬೆರಗಾಗಿ ಹೊಗಳಿತು. ನನ್ನ ನೃತ್ಯ ಮತ್ತು 'ತಿರುವಾಂಕೂರು ಸಹೋದರಿಯರ' ಹೆಸರು ದಕ್ಷಿಣ ಭಾರತ ಮತ್ತು ಇತರೆಡೆಗಳೆಲ್ಲೆಲ್ಲ ಪ್ರಸಿದ್ಧವಾದವು. ನನ್ನ ಹಿರಿಯ ಸಹೋದರಿ ಲಲಿತ ನನ್ನೊಂದಿಗೆ ಸೇರಿದಳು. ನಂತರ ರಾಗಿಣಿಯೂ ಸೇರಿಕೊಂಡು ನಾವು ಮೂವರು "ತಿರುವಾಂಕೂರು ಸಹೋದರಿಯರು" ಎಂದು ಹೆಸರಾದೆವು. ನಾವು ಭಾರತದಲ್ಲಷ್ಟೇ ಅಲ್ಲ, ಸೋವಿಯತ್ ರಾಷ್ಟ್ರದಲ್ಲಿ ಕೂಡ ನರ್ತಿಸಿದೆವು. ಮಾಸ್ಕೋ ಅಂತಾರಾಷ್ಟ್ರೀಯ ಚಲಚ್ಚಿತ್ರ ಮಹೋತ್ಸವದಲ್ಲಿ ಅತ್ಯುತ್ತಮ ನೃತ್ಯವೆಂದು ನಮ್ಮ ನರ್ತನಕ್ಕೆ ಬಿರುದು ದೊರೆಯಿತು. ಆಗಿನಿಂದ ಬಹುಶಃ ಜಗತ್ತಿನ ಎಲ್ಲಾ

ಅಭಿನಯಿಸುವಂತೆ ನನ್ನನ್ನು ವಿನಂತಿಸಿಕೊಂಡರು. ಒಂದೇ ಒಂದು ಬಾರಿ ಅಭಿನಯಿಸಬೇಕೆಂದೇ ನಾನು 'ಮೇಕಪ್' ಮಾಡಿಕೊಂಡೆ. ಆದರೆ ಒಬ್ಬರಾದ ನಂತರ ಒಬ್ಬರು ತಮ್ಮ ಬೇಡಿಕೆಗಳನ್ನು ಮಂಡಿಸುತ್ತಾ ಬಂದಾಗ ನಾನು ಮುಖ ತಿರುಗಿಸುವುದೆಂದರೆ ಅತಿ ಪ್ರಯಾಸದ ಕೆಲಸವಾಯಿತು. ಅಂತೂ 'ಒಂದು ಸಲ ಸಿನೇಮಾರಂಗಕ್ಕೆ ಕಾಲಿಟ್ಟರೆ ಎಂದಿಗೂ ಅದೇ ಗತಿ' ಎಂಬ ವಾಡಿಕೆಯ ಮಾತು ನಿಜವಾಯಿತು. ನಾನೀಗ ಪುನಃ ಇಲ್ಲಿಗೆ ಬಂದಿದ್ದೇನೆ. ನನ್ನ ಅಭಿಮಾನಿಗಳಿಂದ ಹಾಗೂ ಚಿತ್ರಪ್ರಪಂಚದಿಂದ ದೂರ ಸರಿಯುವ ಪ್ರಮೇಯವಿದ್ದಂತೆ ಕಾಣುವುದಿಲ್ಲ.

ನಾನು ೧೯೩೨ರಲ್ಲಿ ತ್ರಿವೇಂದ್ರಮ್‌ದಲ್ಲಿ ಜನ್ಮ ತಳೆದೆ. ಇದು ವರೆಗೆ ನಾನು ಸುಮಾರು ೩೦೦ ತಮಿಳು ಮತ್ತು ಮಲೆಯಾಳಿ ಚಿತ್ರಗಳಲ್ಲಿ ಪಾತ್ರವಹಿಸಿದೇನೆ. ಈಗಲೂ ನನಗೆ ತಮಿಳು ಹಾಗೂ ಮಲೆಯಾಳಿ ಚಿತ್ರಗಳಲ್ಲಿ ಅಭಿನಯಿಸಲು ಅವಕಾಶವಿದೆಯಾದರೂ ಹಿಂದೀ ಚಿತ್ರಗಳ ಕಾರ್ಯಭಾರದಿಂದ ಈಗ ಬೇರೆ ಕಡೆ ಕೆಲಸ ನಿರ್ವಹಿಸಲು ನನಗೆ ಸಮಯವಿಲ್ಲದಾಗಿದೆ. ಹಣವೇ ಇದಕ್ಕೆ ಕಾರಣವಲ್ಲ. ನನ್ನ ಹಾಗೂ ಕುಟುಂಬದ ಸಮೀಪವರ್ತಿಗಳು ನನಗೆ ಹಣವೇ ಮುಖ್ಯವಲ್ಲವೆಂಬುದನ್ನು ಬಲ್ಲವರಾಗಿದ್ದಾರೆ. ನನ್ನ

ಸಂತೃಪ್ತಿ ಮತ್ತು ಕಲೆಗಾಗಿ ನಾನು ಕೆಲಸ ಮಾಡು ತ್ತೇನೆ. ಹಿಂದಿಯಲ್ಲಿ ತಯಾರಾದ ಚಿತ್ರಗಳು ಭಾರತದ ಮೂಲೆ ಮೂಲೆಗಳಲ್ಲಿ ಪ್ರದರ್ಶಿಸಲ್ಪಡುತ್ತವೆ ಮತ್ತು ಎಲ್ಲಾ ರಾಜ್ಯದ ಹಾಗೂ ಭಾಷೆಗಳ ಜನರು ಹಿಂದೀ ಚಿತ್ರಗಳಿಂದ ಸಂತುಷ್ಟರಾಗಿ ಆನಂದಿಸುತ್ತಾರೆಂದು ನನ್ನ ಭಾವನೆಯಾಗಿದೆ. ಹೀಗೆಂದ ಮಾತ್ರಕ್ಕೆ ನನ್ನ ಭಾಷೆಯ ಚಿತ್ರಗಳಲ್ಲಿ ನಟಿಸಲು ನನಗೆ ಇಷ್ಟವಿಲ್ಲವೆಂದಲ್ಲ. ಉತ್ತಮ ತರಗತಿಯ ತಮಿಳು ಮತ್ತು ಮಲೆಯಾಳಿ ಚಿತ್ರಗಳಲ್ಲಿ ಅಭಿನಯಿಸಲು ನಾನು ಪ್ರೀತಿಸುತ್ತೇನೆ. ಏಕೆಂದರೆ ಇಂಥ ಚಿತ್ರಗಳಿಂದ ನನಗೆ ನನ್ನ ಹಾಗೂ ಸಂಸ್ಕೃತಿಯ ಏಳಿಗೆಗೆ ಸ್ಫೂರ್ತಿ ಸಿಗುವದು.

ಇಲ್ಲಿವರೆಗೆ ಬಿಡುಗಡೆಯಾದ ನನ್ನ ಹಿಂದೀ ಚಿತ್ರಗಳಲ್ಲಿ ಉತ್ತಮವಾದವೆಂದರೆ "ಮಿಸ್ಟರ್-ಸಂಪತ್" "ಅಮರದೀಪ" ಅಶೋಕಕುಮಾರರ "ಕಲ್ಪನ" ಮತ್ತು "ಜಿಸ ದೇಶಮೇ ಗಂಗಾ ಬಹತೀ ಹೈ". ಅಶೋಕಕುಮಾರರೊಂದಿಗೆ ಅಭಿನಯಿಸುವ ದೆಂದರೆ ನನಗೆ ಇಷ್ಟ. ಅವರೊಂದಿಗೆ ಅವರ "ಕಲ್ಪನ" ಚಿತ್ರದಲ್ಲಿ ಅಭಿನಯಿಸುವಾಗ ನನಗೆ ಸಂತೋಷವೆನಿಸಿತು. ಅಶೋಕಕುಮಾರರು ಬಹು ಒಳ್ಳೆಯವರೂ ಹಿತೈಷಿಗಳೂ ಆಗಿದ್ದಾರೆ. ಅವರೊಂದಿಗೆ ಕೆಲಸ ಮಾಡುವ ಕಲಾಕಾರರಿಗೆ ತಾವು ಕೆಳಮಟ್ಟದ ಅಭಿನೇತ್ರರೆಂಬ ಭಾವನೆ ಎಳ್ಳಷ್ಟೂ ಆಗದಂತೆ ಅಶೋಕಕುಮಾರ ವರ್ತಿಸುತ್ತಾರೆ. ನಿಜವಾಗಲೂ ಅವರು ಒಬ್ಬ ಆಶ್ಚರ್ಯಕರ ನಟರಾಗಿದ್ದಾರೆ. ೫೪ ರ ಹೊಸ್ತಿಲಲ್ಲಿರುವ ಅವರಂತೆ ಕೀರ್ತಿ ಮತ್ತು ಪ್ರತಿಭೆ ಗಳಿಸುವ ನಟರು ಬಹಳ ಜನ ಇಲ್ಲ. ನಾನು ಹಿಂದೀ ಚಿತ್ರರಂಗಕ್ಕೆ ಹಿಂತಿರುಗಿದಾಗಿನಿಂದ ಅನೇಕ ಪಾತ್ರ ನಿರ್ವಹಣೆಗೆ ಹೊಸ ಹೊಸದಾಗಿ ಕಾರ್ಯಭಾರ ಅಕಸ್ಮಾತ್ತಾಗಿ ಹೆಚ್ಚುತ್ತಿದೆ. ನಾನು ಅಭಿನಯಿಸಿದ "ಮಹಾಭಾರತ" ಈಗಾಗಲೇ ಬಿಡುಗಡೆಗೆ ಸಿದ್ಧವಾಗಿದೆ. ನಾನು ಪುನಃ ಚಿತ್ರರಂಗಕ್ಕೆ ಹಿಂತಿರುಗಿದ ನಂತರ ಅಭಿನಯಿಸಿದ ಮೊದಲ ಚಿತ್ರವಿದು. ಎಷ್ಟರ ಮಟ್ಟಿಗೆ ನಾನು ಪ್ರೇಕ್ಷಕರ ಬಯಕೆಗೆ ತಕ್ಕಂತೆ ನಟಿಸಿದ್ದೇನೆಂದು ನನ್ನ ಅಭಿಮಾನಿಗಳು ಹೇಳಬೇಕಷ್ಟೆ.

ಇನ್ನೊಬ್ಬರ ಬಗ್ಗೆಯಂತೂ ನನಗೆ ಗೊತ್ತಿಲ್ಲ. ಆದರೆ ನನಗೆ ಮಾತ್ರ ಹಳೆಯ ಅಭ್ಯಾಸವೊಂದು ಇದೆ. ಅದೆಂದರೆ ಸತ್ಕಾರ ಸಮಾರಂಭ ಮುಂತಾದೆಡೆಗಳಲ್ಲಿ ನನ್ನ ಚಿತ್ರಪ್ರೇಮಿಗಳು ನನ್ನನ್ನು ಸುತ್ತುಗಟ್ಟಿದಾಗ ನಾನು ನಾಚಿಕೊಳ್ಳುವದಿಲ್ಲ ಅಥವಾ ಅಧೀರಳಾಗುವುದಿಲ್ಲ. ಅವರ ಮಧ್ಯದಲ್ಲಿ ನಾನು ಆತ್ಮೀಯ ಹಾಗೂ ಗೌರವದಿಂದಿರುತ್ತೇನೆ. ಕಲಾಕರರು ಅಭಿಮಾನಗಳ ಮಧ್ಯೆ ನಾಚಿಕೆ ಅಥವಾ ಧೈರ್ಯಗೆಡುವುದೇಕೋ ನನಗೆ ಅರ್ಥವಾಗುತ್ತಿಲ್ಲ. ಅವರು ನಮ್ಮ ಅಭಿಮಾನಿಗಳು. ತೆರೆಯ ಮೇಲೆ ನಮ್ಮನ್ನು ಕಾಣಲು ಪ್ರೀತಿಸುವವರು. ಅವರೊಂದಿಗೆ ನಾವು ಸಹೃದಯಿಯಾಗಿರಬೇಕೆಂದು ನಾನು ತಿಳಿಯುತ್ತೇವೆ.

ನನ್ನ ಚಿತ್ರಪ್ರೇಮಿಗಳ ಪತ್ರವ್ಯವಹಾರದಲ್ಲಿಯೂ ನಾನು ಆಸ್ಥೆವಹಿಸುತ್ತೇನೆ. ಚಿತ್ರದ ಚಿತ್ರಣದಲ್ಲಿ ಭಾಗವಹಿಸುವಾಗ ಮತ್ತು ನನಗೆ ಅವಸರ ಕೆಲಸವಿರುವಾಗಲೂ ನನ್ನ ಅಭಿಮಾನಿಗಳ ಪತ್ರಕ್ಕೆ ಉತ್ತರ ಬರೆಯಲು ಅವಕಾಶ ಕಲ್ಪಿಸಿಕೊಳ್ಳುತ್ತೇನೆ.

ನನ್ನ ಸ್ವಂತ ಮನೆ ಮದ್ರಾಸಿನಲ್ಲಿದೆ. ನನ್ನ ಚಿತ್ರರಂಗದ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಮುಂಬಯಿ, ಮದ್ರಾಸಗಳ ನಡುವೆ ವಿಮಾನ ಪ್ರಯಾಣ ಮಾಡುತ್ತೇನೆ. ಒಂದು ದಿನ ನನ್ನ ತಾಯಿ ನನಗೆ ಬೇಕ್ಕೆಗಾಗಿ ಮುಂಬಯಿ ನನ್ನ ಎರಡನೆ ಮನೆಯಾಗಿದೆ ಎಂದಳು. ವಸ್ತುತಃ ಇದು ನಿಜವೆನಿಸಿದರೂ ಮನೆ ಮನೆಯೇ ಎನಿಸುತ್ತದೆ. ಅದು ಬೇರೆ ಎಲ್ಲಿಯೂ ಇರಲಾರದು. ಎಲ್ಲಿ ಹುಟ್ಟಿ ಎಲ್ಲಿ ಬೆಳೆದಿರುತ್ತೇವೋ ಅದೇ ಮನೆ ಎನಿಸುವದು. ನಾನು ಇಲ್ಲಿ ಎಷ್ಟೇ ಸುಖ ಸಂತೋಷದಿಂದ ಇದ್ದರೂ ಮದ್ರಾಸಿಗೆ ಹೋಗಿ ನನ್ನ ಸ್ವಂತ 'ಮಧುರಮನೆ'ಯನ್ನು ತಲುಪಿದಾಗ ನನಗೆ ನಿಜವಾದ ವಿಶ್ರಾಂತಿ ಸಿಗುತ್ತದೆ. ಅದರ ಸುಖ ಸಂತೋಷಗಳನ್ನು ನಾನೆಂದಿಗೂ ಬಿಟ್ಟಿರಲಾರೆ. ನಿಜವಾದ ಶಾಂತಿ ಸಮಾಧಾನಗಳ ತವರುಮನೆಯದು.

ನನಗೆ ಇಂಥ ವಿಚಿತ್ರ ಹವ್ಯಾಸಗಳು ಅನೇಕವಿವೆ. ಚಿತ್ರತಾರೆಯ ದೃಷ್ಟಿಕೋನದಿಂದ ನೋಡಿದರೆ ಇವು ವಿಸ್ಮಯವೆನಿಸಬಹುದು. ಆ ದೃಷ್ಟಿಯಿಂದ ನಾನು ಸಿನೆಮಾ ತಾರೆಯೇ ಅಲ್ಲ. ಕಲೆಗಾಗಿ ಮತ್ತು ಆತ್ಮ ಸಮಾಧಾನಕ್ಕಾಗಿ ನಾನು ಕೆಲಸ ಮಾಡುತ್ತೇನೆ. ನನಗೆ ಹಣದ ವ್ಯಾಮೋಹ ಬಹಳವಿದೆಯೆಂದು ನಾನು ತಿಳಿದುಕೊಂಡಿಲ್ಲ. ನಾನು ಭಾವಿಸುವ ಹಾಗೂ ವಿಚಾರಿಸುವ ರೀತಿಯೇ ಬೇರೆಯಾಗಿದೆ. ಆದುದರಿಂದಲೇ ನನ್ನ ಪರಿಚಯವಿರುವ ಚಿತ್ರನಿರ್ಮಾತೃಗಳು ಮತ್ತು ಚಿತ್ರರಂಗದ ವ್ಯಕ್ತಿಗಳು 'ಪದ್ಮಿನಿ ಸರಳ ಗೃಹಿಣಿ' ಎಂದೆನ್ನುತ್ತಾರೆ. ನನ್ನನ್ನು ಗುರುತಿಸದವರಿಗೆ "ನಾನೊಬ್ಬ ಸಿನೇಮಾ ನಟಿ" ಎಂದು ತಿಳಿಯುವುದೂ ಕಷ್ಟ.

———

## ಕ್ಲಿಷ್ಟವಾದ ಪ್ರಶ್ನೆಗೆ ಕಲಾವಿದ ಉತ್ತರಿಸಿದ್ದಾನೆ

# ನಿಜಜೀವನ—ಕಲಾಜೀವನ

ಕಲ್ಯಾಣಕುಮಾರ್

"ನಿಜಜೀವನ — ಕಲಾಜೀವನ" ಇದರ ಬಗ್ಗೆ ನೀವು ಲೇಖನವನ್ನು ಬರೆಯಬೇಕು ಎಂದು ಕರ್ಮವೀರದ ಪ್ರತಿನಿಧಿಗಳು ಅನಿರೀಕ್ಷಿತವಾಗಿ ಕೇಳಿದಾಗ ನಾನು ಒಮ್ಮೆ ಅವರ ಮುಖವನ್ನು ನೋಡಿ ಮೌನವಾಗಿ ನಿಂತೆ. ಅವರು ನಗುತ್ತಲೇ ಕೇಳಿದರು. "ಏಕೆ ಇದ್ದಕ್ಕಿದ್ದಂತೆ ಗಂಭೀರರಾದಿರಿ?" ನಾನು ಚೇತರಿಸಿಕೊಂಡು "ಈ ಲೇಖನದ ವಿಚಾರ ನಿಜವಾಗಿಯೂ ಕ್ಲಿಷ್ಟವಾದದ್ದು" ಎಂದಾಗ ಅವರು ನಗುತ್ತಾ "ನೀವು ಬರೆಯಬಲ್ಲಿರಿ" ಎಂದು ಹೇಳಿ ಹೊರಟುಹೋದರು.........ನನ್ನಲ್ಲಿ ವಿಚಾರತರಂಗಗಳನ್ನು ಎಬ್ಬಿಸಿ......



ಕಲ್ಯಾಣಕುಮಾರ್ ತಮ್ಮ ಪ್ರಿಯ ಪತ್ನಿಯೊಡನೆ

ನಿಜಜೀವನದಲ್ಲಿ ಕಲೆ ಇದೆ. ಆದರೆ ಕಲೆಯ ಜೀವನದಲ್ಲಿ ನಿಜ ಇರುವದಿಲ್ಲ.

ಜೀವನ ಒಂದು ಗುಲಾಬಿ ಹೂ. ಕಲೆ ಕಾಗದದ ಹೂ.

ಕಾಗದದ ಹೂವನ್ನು ಕೈಯಲ್ಲಿ ಹಿಡಿದು "ಇದು ನಿಜವಾದ ಗುಲಾಬಿ" ಎಂದು ಕಲಾವಿದ ತನ್ನ ಅಭಿನಯ ಚಾತುರ್ಯದಿಂದ ಜನರನ್ನು ಮರುಳುಗೊಳಿಸುತ್ತಾನೆ..........ಇಂಪು ಸೊಂಪಿಲ್ಲದ ಕಾಗದ ಗುಲಾಬಿ ಎಂದು ತಿಳಿದಿದ್ದರೂ, ಜನ ಕಲಾವಿದನ ಜಾಣ್ಮೆಯಿಂದ ಸತ್ಯಸಂಗತಿಯನ್ನು ಮರೆತು ಅವನ ಅಭಿನಯದಲ್ಲಿ ಐಕ್ಯವಾಗಿರುತ್ತಾರೆ.

ನನ್ನ ದೃಷ್ಟಿಯಲ್ಲಿ, ಕಲಾ ಜೀವನದಲ್ಲಿ ನಿಜಕ್ಕೆ ಎಳ್ಳಷ್ಟೂ ಸ್ಥಳವಿಲ್ಲ. ಉದಾಹರಣೆಗೆ ಒಂದು ಚಿಕ್ಕ ವಿಷಯ ಹೇಳುತ್ತೇನೆ.

ನಾಯಕ ನಾಯಕಿಯರ ಪ್ರಣಯ ದೃಶ್ಯದಲ್ಲಿ, ನಾಯಕ ಪ್ರಮಾಣ ಮಾಡುತ್ತಾನೆ. "ಪ್ರೇಯಸೀ! ನನ್ನ ತಾಯಾಣೆ, ನಿನ್ನನ್ನಲ್ಲದೆ ಬೇರೆ ಯಾರನ್ನೂ ನಾನು ಕಣ್ಣೆತ್ತಿಯೂ ನೋಡುವದಿಲ್ಲ!" ಎಂದು. ಆದರೆ ಆ ದೃಶ್ಯ ಮುಗಿದ ತಕ್ಷಣ ನಾಯಕ ಓಡುತ್ತಾನೆ. ಎಲ್ಲಿಗೆ ? ಹೆಂಡತಿಯ ಬಳಿಗೆ.

∴ ಕಲಾ ಜೀವನದಲ್ಲಿ ಖಳನಾಯಕನನ್ನು ನೋಡಿ ಹೆದರುವ ನಾಯಕಿ ನಿಜಜೀವನದಲ್ಲಿ ಅವನನ್ನು ಹೆದರಿಸುತ್ತಾಳೆ. ಅವನು ಹೆದರುತ್ತಾನೆ. ಕಾರಣ ಅವಳು, ಚಿತ್ರದಿಂದ ತನ್ನನ್ನು ತೊಲಗಿಸಿಬಿಟ್ಟರೆ ಏನು ಗತಿ ? ಎಂದು ಕಲಾಜೀವನದಲ್ಲಿ ಹಾಸ್ಯವನ್ನು ಚಿಮ್ಮುವ ನಟ, ಮನೆಯಲ್ಲಿ ಮೂಕನಾಗಿರುತ್ತಾನೆ. ಕಾರಣ ನಾನಾ ತಾಪತ್ರಯಗಳು.

ಕಲಾಜೀವನದಲ್ಲಿ ನಿಜವನ್ನು ನೋಡಲು ಸಾಧ್ಯವೇ ಇಲ್ಲ.

ನಿಜಜೀವನದಲ್ಲಿ ಕಲೆ ಸ್ವಲ್ಪ ಮಟ್ಟಿಗೆ ಇರಬಹುದು ಆದರೆ Hero, Heroine duet ಹಾಡುವ ಮಟ್ಟಕ್ಕಿಲ್ಲ... ನಿಜಜೀವನದಲ್ಲಿ ಅಳುವ ಸಂದರ್ಭ ಬಂದರೆ Violin, ಪಿಯಾನೋ ತಬಲಾ ' ಸಹಿತ ಯಾರೂ ಹಾಡುವದಿಲ್ಲ. ಅದು ಕಲಾಜೀವನಕ್ಕೆ ಮೀಸಲು.

ನಿಜಜೀವನದಲ್ಲಿ ಕಲೆ ಹೇಗಿರಬಹುದು. ಎಷ್ಟರ ಮಟ್ಟಿಗೆ ಇರಬಹುದೆಂದರೆ ಮನೆಗೆ ಯಾರೇ ಬರಲಿ, ಅವರನ್ನು ನೋಡಿ ಹುಸಿನಗೆ ಬರದಿದ್ದರೂ, ನಗುತ್ತಾ ಆಹ್ವಾನಿಸಬೇಕು. ಅದೊಂದು ಕಲೆ...... (ಆದರೆ ನಾವು ದಂಪತಿಗಳು ಹಾಗೆ ಮಾಡುವುದಿಲ್ಲ) ಮನೆಯನ್ನು ಅಚ್ಚುಕಟ್ಟಾಗಿಡುವ ಕಲೆ ಕಲಿತಿರಬೇಕು....... ನಿಜಜೀವನದಲ್ಲಿ ಕಲೆಗೆ ಇಷ್ಟಾದರೂ ಪ್ರಾಮುಖ್ಯ ಇದೆ. ಆದರೆ, ಕಲಾಜೀವನದಲ್ಲಿ ನಿಜಕ್ಕೆ ಬೆಲೆಯಿಲ್ಲ, ಕಾಗದದ ಗುಲಾಬಿಯೆ ನಿಜ ಗುಲಾಬಿ ನಾಚುತ್ತೆ ಚಿತ್ರರಂಗದಲ್ಲಿ...

# ತಾರೆ ತನ್ನನ್ನು ತಾನೇ ಕಂಡಂತೆ!

# ನಾನು ಹಾಸ್ಯನಟಿಯಾದದ್ದು....

ಹಾಸ್ಯನಟಿ
ಆರ್. ಟಿ. ರಮಾ

ದೀಪಾವಳೀ ಶುಭದಿವಸ ಪ್ರತಿ ಮನೆಯ, ಪ್ರತಿ ಮನದ ಒಳಗೂ ಹೊರಗೂ ಬೆಳಕನ್ನು ಬೀರುವ ದಿನ ದೀಪಾವಳಿ.... ಈ ಹಬ್ಬವೆಂದರೆ ನನ್ನ ಮರೆಯಲಾರದ ಘಟನೆ ನೆನಪಿಗೆ ಬರುತ್ತೆ. ಅದೇ....

ಅಂದು ಪರ್ವದಿನ... ನನ್ನ ಬಾಳಿನ ಆಶಾಜ್ಯೋತಿ ಚಿಗುರೊಡೆದ ದಿನ. ನಾನು ನನ್ನ ಅಕ್ಕನ ಊರಿಗೆ ಬೇಸರ ಕಳೆಯಲು ಹೋಗಿದ್ದೆ. ಅಲ್ಲಿನ ಶಾಲೆಯೊಂದರಲ್ಲಿ ವಾರ್ಷಿಕೋತ್ಸವ ಇತ್ತು. ಅಂದು ನಾಟಕ ಆಡಲು ಶಾಲೆಯ ವಿದ್ಯಾರ್ಥಿಗಳೆಲ್ಲರೂ ತೀರ್ಮಾನಿಸಿದ್ದರು. ಆ ನಾಟಕಕ್ಕೆ ನಮ್ಮ ಭಾವನವರೇ ನಿರ್ದೇಶಕರಾಗಿದ್ದರು. ಅದರಲ್ಲಿನ ಒಂದು ಹಾಸ್ಯಪಾತ್ರವೊಂದನ್ನು ನನ್ನ ಅಕ್ಕ, ಭಾವನವರ ಬಲವಂತಕ್ಕೆ ಬಿದ್ದು ಒಪ್ಪಿಕೊಳ್ಳಬೇಕಾಯ್ತು. ನನಗಂತೂ ನಾಟಕ ನೋಡಿ ಅಭ್ಯಾಸವಿತ್ತೇ ವಿನಾ ಪಾತ್ರವಹಿಸಿ ಅಭ್ಯಾಸವಿಲ್ಲ. ನನಗೆ ರಿಹರ್ಸಲ್ ಮಾಡುವಾಗಲೂ ಒಂದೇ ಭಯ, ಹೆದರಿಕೆ. ಮಾತುಗಳೇ ಮರೆತುಹೋಗುತ್ತಿತ್ತು. ಆಗಾಗ್ಗೆ ನಮ್ಮ ಭಾವನವರು ಧೈರ್ಯ ಕೊಡುತ್ತಿದ್ದರು.

ಅಂದು ನಾಟಕಭವನದಲ್ಲಿ ಜನ ಕಿಕ್ಕಿರಿದು ತುಂಬಿತ್ತು. ನಾನು ತೆರೆಯ ಪಕ್ಕದಲ್ಲಿ (Side wing) ಇಣಿಕಿ ನೋಡುತ್ತಾ ನಡುಗುತ್ತಿದ್ದೆ. ಅಷ್ಟರಲ್ಲಿ ನಮ್ಮ ಭಾವನವರು ಬಂದು ಹಾಗೆಲ್ಲಾ ನೋಡಬಾರದು ಎಂದು ಎಚ್ಚರಿಸಿ ಒಳಕ್ಕೆ ಕಳುಹಿಸಿಬಿಟ್ಟರು. ತೆರೆ ಸರಿಯಿತು. ನಾಟಕ ಆರಂಭವಾಯಿತು.



ಕನ್ನಡ ಚಿತ್ರರಂಗದ ಶ್ರೇಷ್ಠ ಹಾಸ್ಯನಟಿ ರಮಾ

ನನ್ನ ಪಾತ್ರ ಹಾಸ್ಯದ್ದಾದರೂ ಭಯ ಬರುತ್ತಿತ್ತು. ನಮ್ಮ ಭಾವನವರು—

"ಹೋಗು ನಿನ್ನ ಸೀನು" ಎಂದು ತಳ್ಳಿಬಿಟ್ಟರು.

ಆಶ್ಚರ್ಯ. ರಂಗದ ಮೇಲೆ ಬಂದರೆ ಇಷ್ಟೆಲ್ಲಾ ಹೆದರಿದ್ದ ಹೆದರಿಕೆಯೇ ಬರಬೇಡವೇ— ಇಲ್ಲ.

ಆದರೆ, ನನ್ನ ಪಾಲಿನ ಮಾತು ನನಗೇ ನಗು ತರುತ್ತಿತ್ತು. ರಂಗದ ಮೇಲೆ ಮಾತಾಡುವುದು ಬಿಟ್ಟು ನಗುತ್ತಾ ನಿಂತುಬಿಟ್ಟೆ. ನನ್ನ ನಗುವನ್ನು-ನೋಡಿ ಜನಗಳು ಬಿದ್ದು ಬಿದ್ದು ನಗುತ್ತಿದ್ದರು. ನಾನು ನಗುತ್ತಿದ್ದುದಕ್ಕೋ ಅಥವಾ ನನ್ನ ಹಾಸ್ಯ ನಟನೆಗೂ ಆ ದೇವರಿಗೇ ಗೊತ್ತು.

ಹಾಗೂ ಹೀಗೂ ಆ ದೃಶ್ಯ ಮುಗಿಯಿತು. ತೆರೆ ಸರಿಯಿತು. ನಾನಿತ್ತ ಬಂದೆ. ಪ್ರೇಕ್ಷಕರ ಮಧ್ಯದಿಂದ ಒಂದು ವ್ಯಕ್ತಿ ಆಗಮಿಸಿತು. "ಏನ್ರೀ, ನೀವು ಸಿನಿಮಾದಲ್ಲಿ ಯಾಕೆ ಪಾತ್ರವಹಿಸಬಾರದು?" "ಅಯ್ಯೊ, ಎಟುಕಲಾರದ ಹಣ್ಣಿಗೆ ಕೈ ಚಾಚಬೇಕೇಕೆ— ನಾವೆಲ್ಲಿ, ಸಿನಿಮಾ ಎಲ್ಲಿ, ನಮ್ಮಂಥೋರಿಗೆ ಎಲ್ಲಿ ಸಾರ್ Chance ಕೊಡ್ತಾರೆ?" ಎಂದೆ ನಿರುತ್ಸಾಹದಿಂದ. "ಹಾಗಲ್ಲ, ನೀವು ಹೂಂ ಅಂದ್ರೆ ನಾನು ನಿಮ್ಮ ಪರವಾಗಿ ಪ್ರಯತ್ನ ಮಾಡ್ತೀನಿ" ಎಂದರು.

ಇಷ್ಟರ ಮಟ್ಟಿಗೆ ಧೈರ್ಯ ಕೊಡೋರು ಯಾರಿದ್ದಾರೆ, ಅದೂ ಅಲ್ಲದೆ ನನ್ನ ಅನೇಕ ದಿನಗಳ ಬಯಕೆ ಆಸೆ ಈಡೇರುವ ಕಾಲ ಬಂದಿದೆಯೆಂದು ಇದೇ ಒಳ್ಳೆ ಸಮಯವೆಂದು ಒಪ್ಪಿಕೊಂಡುಬಿಟ್ಟೆ.

ಕೆಲವು ದಿನಗಳು ಕಳೆದ ನಂತರ ನನಗೆ ಆಧಾರ ಸ್ತಂಭಗಳಂತೆ ಶ್ರೀ ಜೀವನ್ ಮತ್ತು ರಂಭೂ ಅವರೂ ನಿಂತು, ಈಗ ಪ್ರಖ್ಯಾತ ನಿರ್ದೇಶಕರಾಗಿರುವ ಶ್ರೀ ಅನಂತಾಚಾರಿಯವರ ಪರಿಚಯ ಮಾಡಿಕೊಟ್ಟರು. ಆಗ ಅವರು ತಯಾರಿಸುತ್ತಿದ್ದ 'ನಾರಿ' ಚಿತ್ರದಲ್ಲಿ ನನ್ನ ಜೀವನದಲ್ಲಿ ಪ್ರಥಮವಾಗಿ ಕ್ಯಾಮರಾವನ್ನು ಎದುರಿಸಿದೆ. ನಂತರ ಚಿತ್ರರಂಗದ ಅನೇಕ ಪ್ರಮುಖರುಗಳ ಪರಿಚಯವಾಗಿ 'ಮನೆಮೆಚ್ಚಿದ ಮಡದಿ' ಚಿತ್ರದಲ್ಲಿ ಪಾತ್ರವಹಿಸಿ ನನ್ನ ಪ್ರತಿಭೆ ಚಿತ್ರರಂಗದ ಅನೇಕರಿಗೆ ತೋರಿಸಿದೆ. ಆದರೆ ಹಾಸ್ಯನಟಿಯಾಗಬೇಕೆಂಬಾಸೆ ಎಂದು ಬರುವುದೋ ಎಂದು ಬರುವುದೋ ಎಂದು ಚಾತಕಪಕ್ಷಿಯಂತೆ ಕಾಯುತ್ತಿದ್ದೆ.

ಆ ದಿನ ಬಂದೇ ಬಂದಿತು. ತೆಲುಗು ಚಿತ್ರರಂಗದ

—ಮುಂದಿನ ಪುಟಕ್ಕೆ

# ಈ ಕಲಾವಿದೆಯ ದೀಪಾವಳಿಯ ವೈಶಿಷ್ಟ್ಯವೇ ವೈಶಿಷ್ಟ್ಯ!



ಲಾವಣ್ಯಮಯಿ ವಾಣಿಶ್ರೀ ವಿಶಿಷ್ಟಭಂಗಿಯಲ್ಲಿ

**ವಾಣಿಶ್ರೀ**

# ನನ್ನ ಪ್ರೀತಿಯ ದೀಪಾವಳಿ



ನಾನು ಹುಟ್ಟಿ ಬೆಳೆದದ್ದು ಆಂಧ್ರದ ಸಣ್ಣ ಗ್ರಾಮ ನೆಲ್ಲೂರಲ್ಲಿ. ನೆಲ್ಲೂರ ಅಂದರೆ ಭತ್ತದ ಊರು "ನೆಲ್ಲೂ" ಕನ್ನಡದ ನೆಲ್ಲು + "ಊರು" ಕನ್ನಡದಲ್ಲೂ ಅದೇ "ಊರು"

ವಿದ್ಯಾಭ್ಯಾಸವು ನೆಲ್ಲೂರಿನಲ್ಲೇ –ಮೆಟ್ರಿಕ್ ತನಕ. ಕನ್ನಡ ಹೇಗೆ ಗೊತ್ತು ಎನ್ನುವಿರಾ?

ಮೆಟ್ರಿಕ್‌ವರೆಗೂ ಓದಿ ಮುಂದೆ ಪದವೀಧರೆ ಯಾಗುವ ಕನಸು ನನಗೆ ಇರಲಿಲ್ಲ. ಸಿನೇಮಾಗಳನ್ನು ನೋಡುವ ಪ್ರೇಮ, ನಾಟಕಗಳಲ್ಲಿ ಪಾತ್ರವಹಿಸುವ ಹವ್ಯಾಸ. ನಾಟಕಗಳಲ್ಲಿ ಎಲ್ಲರ ಪ್ರಶಂಸೆಗೂ ಪಾತ್ರಳಾದೆ. ಕೊನೆಗೆ ಸಿನಿಮಾದಲ್ಲಿ ಅಭಿನಯಿಸಬೇಕೆಂಬ ನಿರ್ಧಾರದಮೇಲೆ ಮದರಾಸಿಗೆ ಕಾಲಿಟ್ಟೆ.

ಭರತನಾಟ್ಯ, ಕಥಕ್ ಮುಂತಾದ ನಾಟ್ಯಪದ್ಧತಿಗಳಲ್ಲಿ ಸಾಕಷ್ಟು ಶ್ರಮಿಸಿದೆ. ಕೊನೆಗೆ ಸಿನಿಮಾದಲ್ಲಿ ಎಂದು ಅಭಿನಯಿಸುವೆನೊ ಎಂದು ಕಾದು ಕುಳಿತೆ.

ಒಂದು ದಿನ ನಮ್ಮ ಮನೆಯ ಮುಂದೊಂದು ಕಾರೊಂದು ಬಂದು ನಿಂತಿತು. ನೀದಾ ಸ್ಟುಡಿಯೊ. ಮುಖಕ್ಕೆ ಬಣ್ಣ. ಡೈರೆಕ್ಟರ್ ಅವರ "ಸ್ಟಾರ್ಟ್" "ಕಟ್" "ಓಕೆ" "ಶಾಭಾಸ್."

ನಾನು ಪಾತ್ರವಹಿಸಿದ ಮೊದಲ ಚಿತ್ರ ಶ್ರೀ ಹುಣಸೂರ್ ಕೃಷ್ಣಮೂರ್ತಿ ಅವರ ಕನ್ನಡ ಚಿತ್ರ "ವೀರ ಸಂಕಲ್ಪ". ಚಿತ್ರವೂ ಯಶಸ್ವಿ ನನ್ನ ಪಾತ್ರಾಭಿನಯಕ್ಕೆ ಮೆಚ್ಚಿಕೆ.

ಈ ಚಿತ್ರದ ನಂತರ ನಾನು ವಿಟ್ಠಲಾಚಾರ್ಯರ ತೆಲಗು ಚಿತ್ರಗಳಲ್ಲೂ, ಭಾವನಾರಾಯಣರ ತೆಲಗು ಚಿತ್ರಗಳಲ್ಲೂ ಅಭಿನಯಿಸತೊಡಗಿದೆ. ಕನ್ನಡ ಚಿತ್ರಗಳಾದ ಚಂದ್ರಹಾಸ, ಹರಿಶ್ಚಂದ್ರ, ಮನೆಅಳಿಯ ಮಿಸ್ ಲೀಲಾವತಿ, ಪಾತಾಳಮೋಹಿನಿ, ಮೊದಲಾದ ಅನೇಕ ಚಿತ್ರಗಳಲ್ಲಿ ಅಭಿನಯಿಸಿದೆ.

ತಮಿಳು "ಶ್ರೀ ಆಂಡಾಳ್" ಚಿತ್ರದ ಕಥಾನಾಯಕಿಯಾಗಿಯೂ, ದಕ್ಷಿಣ ಭಾರತದ ಪ್ರಖ್ಯಾತ ನಿರ್ದೇಶಕ ನಿರ್ಮಾಪಕ ಶ್ರೀಧರ್ ಅವರ ತಮಿಳು ಚಿತ್ರದ ಕಥಾನಾಯಕಿಯಾಗಿಯೂ ಅಭಿನಯಿಸುತ್ತಿದ್ದೇನೆ.

ಇದಕ್ಕೆಲ್ಲ ಕಾರಣ ನನ್ನನ್ನು ಚಿತ್ರರಂಗದಲ್ಲಿ ಮುಂದೆ ತರಲು ಶ್ರಮಿಸಿದ ಹಿರಿಯ ವ್ಯಕ್ತಿಗಳು. ಅವರ ಹೆಸರು ಹೇಳಿ ನಮ್ಮ ಮನೆಯಲ್ಲಿ ದಿನವೂ ದೀಪಾವಳಿ ಆಚರಿಸುತ್ತೇನೆ.

ಎಲ್ಲರೂ ಆಚರಿಸುವ ದೀಪಾವಳಿಯ ಹಬ್ಬದ ದಿನ ನನಗೆ ಯಶಸ್ಸನ್ನೂ, ಧನವನ್ನೂ ತಂದು ಕೊಟ್ಟ ನಿರ್ಮಾಪಕ, ನಿರ್ದೇಶಕ, ವರ್ಣಾಲಂಕಾರಿಗಳನ್ನು ನೆನೆದು ಅವರವರ ಹೆಸರಿನಲ್ಲಿ ಒಂದೊಂದು ಹಣತೆ ಹಚ್ಚಿಟ್ಟು ಅವರಿಗೆಲ್ಲ ಶುಭವಾಗಲೆಂದು ಭಗವಂತನನ್ನು ಪ್ರಾರ್ಥಿಸುತ್ತೇನೆ ಇದೇ 'ನನ್ನ ಪ್ರೀತಿಯ ದೀಪಾವಳಿ'

ಈ ದೀಪಾವಳಿ ದಿನದ ಬೆಳಕು ಪ್ರಪಂಚಕ್ಕೆ ಸುಖ-ಶಾಂತಿ ಕೊಡಲಿ.

---

## ನಾನು ಹಾಸ್ಯನಟಿಯಾದದ್ದು....

( ಹಿಂದಿನ ಪುಟದಿಂದ )

ಪ್ರಖ್ಯಾತಿವೆತ್ತ ಶ್ರೀ ವೇದಾಂತಂ ರಾಘವಯ್ಯನವರಲ್ಲಿ ಹಾಸ್ಯನಟಿಯಾಗಿ ಬೆಳಗುವ ಅವಕಾಶ 'ನನ್ನ ಕರ್ತವ್ಯ'ದಲ್ಲಿ ಬೆಂಗಳೂರ್ ನಾಗೇಶ್ ಅವರ ಜೊತೆಗೆ ದೊರಕಿತು. ಅಲ್ಲಿಂದ ಬೆಳಗಿತು ನನ್ನ ಆಶಾಜ್ಯೋತಿ. 'ನ ವ ಕೋ ಟಿ ನಾ ರಾ ಯ ಣ' 'ಚಂದ್ರಹಾಸ' 'ಪ್ರತಿಜ್ಞೆ' 'ಮಂಗಳಮುಹೂರ್ತ' 'ಅನ್ನಪೂರ್ಣ' 'ವಾತ್ಸಲ್ಯ' ಮತ್ತು 'ನಾಂದಿ' ಮುಂತಾದ ಚಿತ್ರಗಳಲ್ಲಿ ಹತ್ತಾರು ವಿಧವಾದ ಪಾತ್ರವಹಿಸಿ, ಜನರ ಪ್ರೀತಿ ಗಳಿಸಿದೆ. ನಂತರ 'ಮಿಸ್ ಲೀಲಾವತಿ'ಯಲ್ಲಿ ನನ್ನ ಹಾಸ್ಯನಟನೆಯನ್ನು ಕಂಡು 'ಮನೆ ಅಳಿಯ' ದಲ್ಲೂ Chance ಸಿಕ್ಕಿತು.

ಖಂಡಿತವಾಗಿಯೂ ನನಗೆ ಹಾಸ್ಯಪಾತ್ರಗಳನ್ನಿತ್ತರೆ ಅವನ್ನು ಭಯ, ಭಕ್ತಿ, ಶ್ರದ್ಧೆಗಳಿಂದ ನಿರ್ವಹಿಸಿ, ಜನರ ಮತ್ತು ನಿರ್ಮಾಪಕ, ನಿರ್ದೇಶಕರ ಮೆಚ್ಚಿಗೆ ಗಳಿಸುತ್ತೇನೆಂದು ಭರವಸೆ ಇದೆ.

ದೀಪಾವಳೀ ಶುಭದಿನದಂದು ಆ ದಯಾಮಯನಾದ ಭಗವಂತನು, ಕನ್ನಡವಾತೆಯ ಮಕ್ಕಳಾದ, ನನ್ನ ಸಹೋದರ, ಸಹೋದರಿಯರಾದ ಎಲ್ಲರಿಗೂ ಆಯುರಾರೋಗ್ಯ ಐಶ್ವರ್ಯಗಳನ್ನು ಕೊಟ್ಟು ಕಾಪಾಡಲೆಂದು ಪ್ರಾರ್ಥಿಸುತ್ತೇನೆ.





## ಚಲಚ್ಚಿತ್ರಗಳೂ ಜನಜೀವನವೂ

ಕಥಾನಾಯಕಿ ಕಲ್ಪನಾ

"ಏನು ಪುಟಾಣಿ ಎಲ್ಲಿಗೆ ಹೊರಟಿ? ಏಕೆ ಈ ಶೃಂಗಾರ?"

"ಅಪ್ಪ, ಅಕ್ಕನ ಶಾಲೆಯಲ್ಲಿ ಎಲ್ರೂ ಸಿನ್ಮಾ ನೋಡೋಕೆ ಓಗ್ತಾರಂತೆ. ನಾನೂ ಓಗ್ತೀನಿ ಅಪ್ಪ!" ಪುಟಾಣಿಯ ಉತ್ತರ.

"ಏನು ಸಿನ್ಮಾನೋ? ಈ ಪುಟಾಣಿಗೂ ಸಿನೇಮದ ಹುಚ್ಚು ಹಿಡಿಸಿದಿರೇ?" ಎಂದು ಗೊಣಗಿದನು ತಂದೆ.

"ಏಕೋ ರಂಗ ಈ ತರಹ ಕೂದಲು ಕತ್ತರಿಸಿ ಕೊಂಡೆ?"

"ಅಮ್ಮ ಮೊನ್ನೆ ನಾ ಕಂಡ ಸಿನೇಮದಲ್ಲಿ ದಿಲೀಪ್ ಕೂದಲು ಬಾಚಿದಂತೆ ಇನ್ನು ಮುಂದೆ ನನಗೂ ಬಾಚಿ ಕೊಳ್ಳಬೇಕೆಂಬ ಆಸೆ"

"ಮಣ್ಣು ಹಾಕಿತು ಆ ಕೂದಲಿನ ತರಹಕ್ಕೆ" ಎಂದರು ಬಿಚ್ಚೋಲೆ ಗೌರಮ್ಮನಾದ ಅವರಮ್ಮ!

"ಅಯ್ಯೋ ರವಕೆಗಳ ಕೈಗಳನ್ನೆಲ್ಲ ಕತ್ತರಿಸಿ ಕೊಂಡೆಯಲ್ಲ ಗೌರಿ? ಹೀಗಾದರೆ ಹೇಗೆ?"

"ಅಯ್ಯೋ ಅತ್ತೇ ಅದಕ್ಕೇಕೆ ವ್ಯಥೆ? ಸಂಗಂ ಸಿನೇಮದಲ್ಲಿ ವೈಜಯಂತಿ ಈ ತರಹ ರವಕೆಗಳನ್ನು ಧರಿಸಿದ ಮೇಲೆ ಇದೇ ಫ್ಯಾಶನ್" ಎಂದಳು ಫೇಶನ್ನಿನ ರಸಾರ್ಥಿ ಸೊಸೆ.

"ಊರು ಹಾಳಾಗಿಹೋಯಿತು ಈ ಸಿನೇಮದಿಂದ" ಎಂದರು ತುಳಸೀಕಟ್ಟೆಗೆ ಪ್ರದಕ್ಷಿಣೆ ಬರುತ್ತಿದ್ದ ಮುದಿಯ ಅತ್ತೆಮ್ಮ.

"ಚಿಕ್ಕಮ್ಮ 'ಕಂದನ ಕಾಣಿಕೆ' ಚಿತ್ರ ಚೆನ್ನಾಗಿದೆ. ನಮ್ಮ ಕಾಲೇಜಿನ ಮಕ್ಕಳೆಲ್ಲರೂ ಇಂದು ಬೆಳಿಗ್ಗೆ ಹೋಗಿದ್ದೆವು."

"ಏನು ಕಲಿಸುತ್ತಿದೆ ಬಾಪು ಆ ಚಿತ್ರ?"

"ಇನ್ನೇನು ತ್ಯಾಗವೇ ತನಯನಿಗೆ ಭೂಷಣ! ತಂದೆತಾಯಿಗಳಿಗೆ ಮಕ್ಕಳು ಮಾಡಬಹುದಾದ ತ್ಯಾಗ, ಪ್ರಾಮಾಣಿಕತೆ, ದಯೆ, ಪರೋಪಕಾರಗಳ ಫಲಿತಾಂಶವನ್ನು ಸಾರುತ್ತಿದೆ."

"ಅಬ್ಬ ಇಂಥ ಚಿತ್ರಗಳೇ ಹೆಚ್ಚಲಿ! ರಾಷ್ಟ್ರವು ಉತ್ತಮ ಕುವರ ಕುವರಿಯರಿಂದ ಬೆಳಗಲಿ" ಎಂದರು ಆಧುನಿಕ ಚಿಕ್ಕಮ್ಮ.

"ಲೋ ರಾಮು ಪ್ರತಿ ಶಾನುವಾರ ಸಂಜೆ ಮನೇಲಿ ನೀನು ಇರುವುದಿಲ್ಲ. ಎಲ್ಲಿ ಎಲ್ಲಿಗೆ ದಂಪತಿಗಳ ಪ್ರಯಾಣ?" ಪ್ರಶ್ನಿಸಿದರೊಬ್ಬರು ತನ್ನ ಬಾಲ್ಯಸ್ನೇಹಿತ ರಾಮುರಾಯರನ್ನ!

"ಕಿಟ್ಟು, ಶಾನುವಾರ ರಜಾದಿನ, ಸರಿಯಷ್ಟೇ! ನಾನೂ ನನ್ನ Wife ಸಿನೇಮ ನೋಡಲು ಹೋಗುವ ವಾಡಿಕೆ. ಅದೇ ನಮ್ಮ ವಾರದ ಸಕಲ ಪರಿಶ್ರಮಗಳನ್ನು ನಿವಾರಿಸುವ ಸಾಧನೆ. ನೀನೇಕೆ ಈ ನಿಯಮ ಇಟ್ಟುಕೊಂಡಿಲ್ಲ?" ಎಂದರು ದಾಂಪತ್ಯಜೀವನದಲ್ಲಿ ಸಂತೃಪ್ತಿಯಾದ ರಾಮುರಾಯರು.

"ಅಯ್ಯೋ ನಿಮಗದು ಸಾಧ್ಯ. ನೀವಿಬ್ಬರೂ ಜಾಣರು. ನನ್ನಾಕೇಗೆ ಮನೆಯೇ ಜಗತ್ತು. ಮನೆ ಬಿಟ್ಟು ಹೊರಡಬೇಕಾದರೆ ಸೇರು, ಪಾವು, ಅರಪಾವು ಕೊಳಗಗಳನ್ನೂ ಜತೆಯಲ್ಲೇ ಕಟ್ಟಿಕೊಂಡ ಹೊರಡುತ್ತಾಳೆ" ಎಂದರು ಕೃಷ್ಣರಾಯರು ನಿರುತ್ಸಾಹದಿಂದ.

"ಏಕೋ ತಮ್ಮನನ್ನು ಕೋಟೆಯ ಮಂಚದ ಅಡಿಯಲ್ಲಿ ಕೂಡ್ರಿಸಿ ರಿವಾಲ್ವರ್ ಹಿಡಿದುಕೊಂಡಿದ್ದೆ?"

"ಅಪ್ಪಾ ಮೊನ್ನೆ ನಾವು ನೋಡಿದ ಆ ಇಂಗ್ಲಿಷ್ ಸಿನೇಮದಲ್ಲಿ ಹುಲಿಬೇಟೆ ಮಾಡಿದ್ದನಲ್ಲ Hero. ಹಾಗೆ ನಾನೂ ಹುಲಿಬೇಟೆ ಆಟ ಆಡುತ್ತಿದ್ದೆ." ಎಂದನು ಎಂಟರ ಹರೆಯದ ಮುಗ್ಧ ಬಾಲಕ.

"ಅಯ್ಯೋ ರಿವಾಲ್ವರದಲ್ಲಿ ಗುಂಡುಗಳಿದ್ದರೆ ತಮ್ಮನನ್ನು ಕೊಂದೇಬಿಡುತ್ತಿದ್ದೆಯಲ್ಲ? ದೇವರೇ ಕಾಪಾಡಿದನು." ರಿವಾಲ್ವರನ್ನು ಮಗನ ಕೈಯಿಂದ



' ಗೊಂಬೆಯ ಗೆಳತಿ ' ಕಲ್ಪನಾ

# ಚಲಚ್ಚಿತ್ರ ನಿರ್ಮಾಪಕರಿಗೆ ಒಂದು ಕಿವಿಮಾತು

ಕಿತ್ತು ಕೊಳ್ಳುತ್ತ ನುಡಿದನು ತಂದೆ.

ಮೇಲಿನ ಪೀಠಿಕೆಯಿಂದಲೇ ಚಲಚ್ಚಿತ್ರಗಳು ಜನ ಜೀವನದ ಮೇಲೆ ಬೀರುತ್ತಿರುವ ಪ್ರಬಲವಾದ ಪ್ರಭಾವ ವನ್ನು ಪಾಠಕರು ಮನಗಂಡಿರಬಹುದು. ಇನ್ನೂ ಪ್ರತ್ಯೇಕ ವಿವರಣೆಯ ಆಗತ್ಯವಿಲ್ಲ. ಹಿಂದೆ ಸಮಾಜದ ಆಚಾರ ವಿಚಾರ, ಧರ್ಮಾಧರ್ಮ, ನಡೆನುಡಿ, ರೀತಿ ನೀತಿಗಳನ್ನು ತಿದ್ದಬಲ್ಲ ರೂಪಿಸಬಲ್ಲ ಸಾಧನಗಳೆಂದರೆ ಧರ್ಮಗ್ರಂಥ, ಪುರಾಣ, ಕಾದಂಬರಿಗಳಾದರೆ ಇಂದು ಸಮಾಜವನ್ನೂ ರೂಪಿಸಬಲ್ಲ ಸಾಧನವೆಂದರೆ ಪ್ರತ್ಯಕ್ಷವಾದ ಚಲನಚಿತ್ರಗಳೆಂದರೆ ಅತಿಶಯವಾಗದು. ಯಾವ ಕಷ್ಟಕಾರ್ಪಣ್ಯಗಳಲ್ಲೂ ಜನತೆ ಚಲನಚಿತ್ರಗಳನ್ನು ನೋಡಲು ಇಚ್ಛಿಸುವದು. ಅದೊಂದೇ ಸಕಲ ಕಷ್ಟಕಾರ್ಪಣ್ಯಗಳನ್ನೂ ಮರೆಯಿಸಬಲ್ಲ ಸಾಧನ. ಕೇವಲ ಮೂರು ಗಂಟೆಗಳ ತನಕ ಚಿತ್ರವೀಕ್ಷಣೆಯಲ್ಲಿ ಮೈ ಮರೆತ ಮಾನವನು ಸಕಲವನ್ನೂ ಮರೆತು ಚಿತ್ರದಲ್ಲಿ ಅಭಿನಯಿಸುವವರ ಜತೆ ತಾನೂ ಒಬ್ಬನಾಗಿ ಆ ಕಥೆಯ ರಸಭಾವಗಳನ್ನು ಅನುಭವಿಸುವನು. ಆಬಾಲವೃದ್ಧರೆಲ್ಲರೂ ಚಿತ್ರಗಳನ್ನು ನೋಡಬಯಸುವರೆಂದ ಮೇಲೆ ಚಲನಚಿತ್ರಗಳ ಶಕ್ತಿ ಎಂಥಹುದೆಂದು ನಾವು ನಿರ್ಧರಿಸಬಹುದಲ್ಲವೇ? ಆದುದರಿಂದ ಜನತೆಯನ್ನು ಆಚಾರವಿಚಾರ, ನಡೆನುಡಿ, ಶೀಲ ಸಂಪತ್ತು, ಉಡುಗೆತೊಡುಗೆ, ಧರ್ಮನೀತಿ, ಸತ್ಯ, ಅಂಹಿಸೆ, ಧೈರ್ಯ ಇವುಗಳಲ್ಲಿ ತರಬೇತುಗೊಳಿಸುವ ಆಯಾ ನಾಡಿನ ಸಂಸ್ಕೃತಿಯನ್ನು ಹಾಳುಮಾಡದ ಚಿತ್ರಗಳನ್ನು ತಯಾರಿಸಿ ಜನತೆಯ ಮುಂದೆ ಇಡಬೇಕಾದುದು ಇಂದಿನ ಚಲಚಿತ್ರ ಪ್ರಪಂಚದ ಆದ್ಯಕರ್ತವ್ಯವೆಂದು ಹೇಳುವುದು ಪುನರುಕ್ತವೆನಿಸಬಹುದು. ಇಂದಿನ ಜಗತ್ತಿನಲ್ಲಿ ಯುವಕ ಯುವತಿಯರಲ್ಲಿ ಚಿತ್ರಪ್ರೇಮಿಗಳಲ್ಲದವರು ಬಹಳ ವಿರಳವೆನ್ನಬಹುದು. ಕಾಲೇಜು ಹೈಸ್ಕೂಲುಗಳಲ್ಲಿ, ಮಾಧ್ಯಮಿಕ ಶಾಲೆಗಳಲ್ಲೂ "ಸಿನೇಮ ನೋಡುವದರಿಂದ ಹಾನಿ ಇದೆ"ಯೆಂಬ ವಿಷಯವನ್ನು ಚರ್ಚೆಗೆ ಇಟ್ಟರೆ ಅದರ ಕುರಿತು ಒತ್ತಾಯಪೂರ್ವಕವಾಗಿ ಮಾತಾಡುವವರಿರಬಹುದಲ್ಲದೇ ಮನಃಪೂರ್ವಕವಾಗಿ ಚರ್ಚಿಸಲಿಚ್ಛಿಸುವವರಿರಲಾರರು. ಬದಲಾಗಿ "ನೋಡುವುದರಿಂದ ಲಾಭವಿದೆ" ಎಂದು ಮಾತಾಡಲು ಅನೇಕರು ಮುಂದೆ ಬರಬಹುದು. ಇದನ್ನೆಲ್ಲ ಗಮನಿಸಿ ಚಿತ್ರ ತಯಾರಕರು ದೇಶಸೇವೆಯನ್ನು ಮಾಡಲು ಬಹಳ ಸುಲಭದ ದಾರಿ ಎಂದರೆ ಜನತೆಯ ಉದ್ಧಾರ ಮಾಡಬಲ್ಲ ಪ್ರಗತಿಪರ ಚಿತ್ರಳಗನ್ನು ತಯಾರಿಸುವುದಲ್ಲದೇ ಕೇವಲ ತಮ್ಮ ಲಾಭಕ್ಕಾಗಿ ಅನಾಗರಿಕ, ಅವಿದ್ಯಾವಂತರ ಅಭಿರುಚಿಗೆ ಅನುಕೂಲವಾದ ಚಿತ್ರಗಳನ್ನು ತಯಾರಿಸುವಲ್ಲ. ಚಲಚ್ಚಿತ್ರಗಳು ಆಯಾ ರಾಷ್ಟ್ರದ ಪ್ರಗತಿಯ, ಸಂಸ್ಕೃತಿಯ ಪ್ರತೀಕಗಳೆನ್ನುವುದರದಲ್ಲಿ ಸಂದೇಹವಿಲ್ಲ. "ಅಯ್ಯೋ ಬಾಲ್ಕನಿಯ ಜನರಿಗೆ ಚಿತ್ರ ತಯಾರಿಸಿದರೆ ಹಣ ಬರೋಲ್ಲ" ಎಂದು ಚಿತ್ರತಯಾರಕರು ಹೇಳಬಹುದು. ಚಿತ್ರವು ಚೆನ್ನಾಗಿದ್ದರೆ ಮುಂದಿನ ಬೆಂಚಿನ ಜನವೇ ಬಾಲ್ಕನಿಯಲ್ಲಿ ಕೂತಾದರೂ ನೋಡಿ ಹೇಳುವ ಸಂದರ್ಭ ಬರುವದಿಲ್ಲವೇ? ಎಲ್ಲರೂ ಇದನ್ನು ಗಮನದಲ್ಲಿರಿಸಿಕೊಂಡು ಒಂದೇ ಧ್ಯೇಯದಿಂದ ಉತ್ತಮ ಕಥಾ ಸಂಭಾಷಣೆ, ಸನ್ನಿವೇಶಗಳಿಂದ ಕೂಡಿದ ಬೋಧಪ್ರದ ಚಿತ್ರಗಳನ್ನು ತಯಾರಿಸಿದರೆ ಜನತೆ ನೊಡದೆ ಏನು ಮಾಡೀತು? ಕೀಳು ದರ್ಜೆಯ ಪ್ರೇಮಾಭಿನಯನದ ಚಿತ್ರಗಳನ್ನು ದೂರ ಮಾಡಿದರೆ ಚಿತ್ರಗಳನ್ನು ಜನರು ನೋಡಲಾರರೆಂಬುದು ಕೇವಲ ಒಂದು ಮೂಢ ನಂಬಿಕೆ. "ಅಂದಿಗೆ ಅದು ಸುಖ, ಇಂದಿಗೆ ಇದು ಸುಖ" ಎಂದು ಉತ್ತಮ ಚಿತ್ರಗಳೇ ಬರಲು ತೊಡಗಿದರೆ ಅದೇ ಜನರಿಗೆ ಅಭ್ಯಾಸವಾಗಿ ಅದನ್ನೇ ಮೆಚ್ಚುವುದರಲ್ಲಿ ಸಂಶಯವಿಲ್ಲ. ಪ್ರಪಂಚದಲ್ಲಿ ಯಾವುಸೊಂದು ದೀರ್ಘಕಾಲ ನೆಲೆಯೂರದು. ಫೇಶನ್, ಅಭಿರುಚಿ, ರುಚಿಶುಚಿ, ನೀತಿ ನಿಯಮಗಳೆಲ್ಲ ಬದಲಾಗುತ್ತಿರುವಾಗ ಜನತೆಯು ಚಲನಚಿತ್ರಾಭಿರುಚಿಯು ಬದಲಾಗದೇ? ಭಾರತದ ಸಂಸ್ಕೃತಿಯು ಅಜರಾಮರವಾಗಿರುವಂತಹ ಅತ್ಯುತ್ತಮ ಚಿತ್ರಗಳನ್ನು ತಯಾರಿಸಿ ಭಾರತದ ಕೀರ್ತಿಯಲ್ಲಿ ಧವಳಕಾಂತಿಯಿಂದ ಬೆಳಗುವಂತೆ ಮಾಡುವುದು ಇಂದಿನ ಚಲನಚಿತ್ರ ತಯಾರಕರ ಕೈಯಲ್ಲಿದೆ. ಅಂತಹ ಚಿತ್ರಗಳಲ್ಲಿ ಅಭಿನಯಿಸುವ ಚಲನಚಿತ್ರ ಕಲಾಕಾರರು ನಿಜಕ್ಕೂ ಭಾಗ್ಯಶಾಲಿಗಳು. ಅಂತಹ ಭಾಗ್ಯ ನಮ್ಮೆಲ್ಲರ ಪಾಲಿಗೆ ಬರಲಿ. ನಮ್ಮ ಚಲನಚಿತ್ರಗಳು ತನ್ನ ರಾಷ್ಟ್ರದ ಸಂಸ್ಕೃತಿಯ ರತ್ನಗನ್ನಡಿಯಾಗಲೆಂದೇ ದೀಪಾವಳಿಯಂದು ನನ್ನ ಹಾರ್ದಿಕ ಬಯಕೆ.








ಸುಂದರ ಯೋಚಿಸಿಯೇ ಯೋಚಿಸಿದ, ತಲೆಸಿಡಿಪವರೆಗೂ ಯೋಚಿಸಿದ. ಊಂಹೂಂ... ಸಾಧ್ಯವಿಲ್ಲ... ಇರಲಾರ...ಅವಳನ್ನು ಬಿಟ್ಟು ಒಂದು ಕ್ಷಣವೂ ಇರಲಾರ...ಅವಳ ಸಿಹಿ ನಗುವನ್ನು ಕೇಳದೇ, ಮಧುರ ನೋಟವನ್ನು ನೋಡದೇ...ಅಬ್ಬಬ್ಬಾ !!! ಇಲ್ಲ ಸಾಧ್ಯವೇ ಇಲ್ಲ...ಅವಳನ್ನು ಅಗಲಿ ಇರಲು ಸಾಧ್ಯವೇ ? ಕನಸಿನಲ್ಲೂ ಸಾಧ್ಯವಿಲ್ಲ. ಮದುವೆ ಆದ ನಿಮಿಷದಿಂದ ಅವಳನ್ನು ಒಂದರೆಕ್ಷಣ ಬಿಟ್ಟಿಲ್ಲ. "ಪೆಟೀಕೋಟ್ ಸ್ಲೇವ್"ಂತ ಸ್ನೇಹಿತರು ಜುಡಾಯಿಸಿದಾಗ ಅವನು ನಕ್ಕು ಅಲ್ಲಿಂದ ಮೆಲ್ಲನೆ ಜಾರುತ್ತಿದ್ದ. ಆಫೀಸಿನಲ್ಲಿ ಗಡಿಯಾರ ಸಾಯಂಕಾಲ ೫ ಘಂಟೆ ಹೊಡೆಯುವಾಗ ಪ್ರತಿದಿನ ಹೊಸ ಮಧುರ ಸಂಗೀತವನ್ನು ಕೇಳುವ ರಸಿಕನಂತೆ ಆಲಿಸುತ್ತಿದ್ದ...ಆಹಾ ಆ ಅಯಿದು ಅಂಕೆ ಎಷ್ಟು ಮುದ್ದಾಗಿದೆ ಎಂದುಕೊಳ್ಳುತ್ತಿದ್ದ...

ಕಾಲಿಗೆ ಕಲ್ಲು ತಗುಲಿದಾಗ ಸುಂದರ ಯೋಚನೆಗಳಿಂದ ಎಚ್ಚೆತ್ತ. ಹಾಗಾದ್ರೇ ಮಗಳನ್ನು ಕರೆದುಕೊಂಡು ಹೋಗಲು ಬಂದ, ಮಾವನ ಬಳಿ ಏನು ಹೇಳುವುದು! "ಅವಳನ್ನು ಬಿಟ್ಟಿರಲು ಸಾಧ್ಯವಿಲ್ಲಾಂತ ಹೇಳಿಬಿಟ್ರೆ... ಛೆ...ಛೆ ನನ್ನ ನೋಡಿ ನಗ್ತಾರೆ ಹುಚ್ಚನ್ನ ನೋಡಿ ನಗುವ ಹಾಗೆ. ಹೇಳೋದಿಕ್ಕೆ ನಾಚ್ಕೆನೂ ಆಗುತ್ತೆ...ನಾಚ್ಕೆಯಾಕೇ? ಹೇಳಿಬಿಡೋಮ."

"ಕಳಿಸೋದಿಕ್ಕೆ ಸಾಧ್ಯವಿಲ್ಲಾಂತ ಅಳಿಯನ ಬಿಗುಮಾನದಲ್ಲೇ ಹೇಳೋದು. 'ಮೊದಲನೇ ಪ್ರಸವಾಂತ' ಮಾತಿಗೊಮ್ಮೆ ಹೇಳ್ತಾರೆ...ಆದ್ರೇ ಏನಂತೆ.. ಈ ದೊಡ್ಡ ಪಟ್ಟಣದಲ್ಲಿ ಹೆಂಗಸರು ಮೊದಲನೇ ಮಗುವಿಗೆ ಜನ್ಮವೇ ಕೊಡಲಿಲ್ಲವೇ? ಇಲ್ಲಿ ಎಂಥೆಂಥಾ ಡಾಕ್ಟರಿದ್ದಾರೆ. ಮಕ್ಕಳು ‹‹ಬೇಕೂ" ಅಂದ್ರೆ ಒಂದು ಡಾಕ್ಟರ್, ಸಾಕು ಅಂದ್ರೆ ಒಂದು ಡಾಕ್ಟರ್. ಮನೆಗೊಬ್ಬ ಡಾಕ್ಟರ್ ಬೀದಿಗೊಂದು 'ನರ್ಸಿಂಗ್‌ಹೋಮು'ಇದೆ. ಆ ಗ್ರಾಮದಲ್ಲೇನಿದೇ? ಎಲ್ಲಾ ಒರಟು ಜನ. ಹಸುಗಳಿಗೆ ಪ್ರಸವ ಮಾಡಿಸಿದವರ ಕೈಲಿ ಸುನಂದನ್ನ ಒಪ್ಪಿಸುವುದೇ... ಛೆ... ಛೆ... ಇಲ್ಲ... ಸಾಧ್ಯವಿಲ್ಲ. ಅವಳನ್ನ ತವರು ಮನೇಗೆ ಕಳಿಸೋದಿಲ್ಲ."

ನಿರ್ಧಾರ ಮಾಡಿದ ತಕ್ಷಣ ಅವನ ನಡೆಯ ವೇಗ ಹೆಚ್ಚಾಯಿತು. ಮನೆ ಹತ್ತಿರವಾಯ್ತು.

ಮನೆಯ ಬಾಗಿಲಿಗೆ ಒರಗಿ ಸುನಂದ ನಿಂತಿದ್ದಳು. ಆಗ ತಾನೇ ಸ್ನಾನಮಾಡಿರಬೇಕು ಅವಳು. ಮೈಸೂರು ಚಂದನ ಸೋಪು ವಾಸನೆ ಮೆಲ್ಲನೆ ಗಾಳಿಯಲ್ಲಿ ಅಡರಿತ್ತು, ಮೃದುವಾಗಿ ಅವನ ಮೂಗನ್ನು ಸೋಕಿತು. ಹಸಿರು ಬಣ್ಣದ ಕ್ರೇಪು ಸೀರೆ ಅವಳ ಮೈ ಬಣ್ಣಕ್ಕೆ ಮತ್ತಷ್ಟು ರಂಗೇರಿಸಿತು. ಕೆಂಪಗಿರುವ ಧರ್ಮಾವರಂ ರೇಷ್ಮೆ ರವಿಕೆ, ಅವಳ ದೇಹವನ್ನು ಅಪ್ಪಿ, "ಸೌಂದರ್ಯ ಇಲ್ಲಿದೆ ನೋಡು" ಎಂದು ಆಹ್ವಾನಿಸುವಂತಿತ್ತು.

"ಓ ನನ್ನ ಸುನಂದ ಎಷ್ಟು ರೂಪಸಿ" ಸುಂದರನ ಹೃದಯ ಹೆಮ್ಮೆಯಿಂದ ನುಡಿಯಿತು.

"ಏನ್ರೀ...ಹಾಗೇ ನೋಡ್ತಾ ಇದ್ದೀರಲ್ಲ! ಹೊಸದಾಗಿ ಮದುವೆ ಹೆಣ್ಣನ್ನು ನೋಡಿದ ಹಾಗೆ" ಸುನಂದ ಅವನನ್ನು ಸೌಂದರ್ಯಾರಾಧನೆಯಿಂದ ಈ ಲೋಕಕ್ಕೆ ಎಳೆತಂದಳು.

ಸುಂದರ ತುಂಟನಗೆ ನಕ್ಕ "ಹೂಂ; ನೀನು ನನ್ನ ಕಣ್ಣಿಗೆ ಯಾವಾಗಲೂ ಮದುವಣಗಿತ್ತಿಯ ಹಾಗೆ ಕಾಣಿಸ್ತೀಯ! ಅದರಲ್ಲೂ ಈ ಹಸಿರು ಸೀರೆಯಲ್ಲಿ ನಿನ್ನ ರೂಪ. ಓಹ್! ನಾನೇನಾದ್ರು ಜಕ್ಕಣಾಚಾರಿಯಾಗಿದ್ರೇ ಶಿಲೆಯಲ್ಲಿ ನಿನ್ನ ರೂಪವನ್ನು ಕೆತ್ತಿ ತೋರಿಸುತ್ತಿದ್ದೆ...ನೀನು ಸೌಂದರ್ಯದ ನಿಧಿ" ಅವಳ ಎರಡು ಭುಜಗಳನ್ನು ಹಿಡಿದು ತನ್ನ ಬಳಿಗೆ ಸೆಳೆದುಕೊಂಡ.

"ಥೀ! ಥೀ! ಸಾಕು ಸುಮ್ಮನಿರಿ ಬೀದಿಯಲ್ಲಿ ನಿಮ್ಮ ರಸಿಕತ್ವ ತೋರಿಸಬೇಡಿ" ಕೃತ್ರಿಮ ಕೋಪದಿಂದ ಆತನ ಕೈಗಳನ್ನು ಮೆಲ್ಲನೆ ದೂರ ತಳ್ಳಿದಳು.

"ಬನ್ನೀ! ನಿಮಗಿಷ್ಟವಾದ ತಿಂಡಿ ಮಾಡಿದ್ದೀನಿ" ಎಂದು ಹೇಳುತ್ತಾ ಸುನಂದ ಅಡಿಗೇ ಮನೇ ಕಡೆ ಭಾರವಾಗಿ ಹೆಜ್ಜೆಯ ಮೇಲೆ ಹೆಜ್ಜೆಯಿಡುತ್ತ ನಡೆದಳು.

"ಬರ್ತೀರಾ?" ಮಧುರವಾಗಿ ಮೃದುವಾಗಿ ಕರೆದಳು ಸುನಂದ ಅಡಿಗೇ ಮನೆಯಿಂದ.

"ಇದೋ! ಬಂದೆ" ಸುಂದರ ಅಡಿಗೇ ಮನೆಗೆ ಓಡಿದ.

"ಸ್ಕೂಲ್ ಹುಡುಗರು ಓಡಿ ಬಂದ ಹಾಗೆ ಬರ್ತೀರಲ್ಲಾ ನಿಧಾನವಾಗಿ ಬರಬಾರದೇ!" ಮಲ್ಲಿಗೇ ಹೂವು

ಪ್ರಸಿದ್ಧ ಕನ್ನಡ ಕಥಾನಾಯಕ ಕಲ್ಯಾಣಕುಮಾರರ ಧರ್ಮಪತ್ನಿ ಶ್ರೀಮತಿ ರೇವತಿ-ಕಲ್ಯಾಣಕುಮಾರ್ ಎಳೆತನದಿಂದಲೇ ಬರೆಯುವ ಹವ್ಯಾಸವನ್ನು ಬೆಳೆಸಿಕೊಂಡು ಬಂದಿದ್ದಾರೆ. ಇವರು ಬಾಲ್ಯದಲ್ಲೇ ಬರೆದ ತೆಲುಗು ಕತೆ "ಸುಸೀಲ" ತೆಲುಗು ವಾಚಕರಿಗೆ ಸಂತೋಷ ಉಂಟುಮಾಡಿತು. ಸಿನೇಮಾ ನಟಿಯಾಗಿ ಪ್ರತಿಷ್ಠಿತರಾದ ಮೇಲೆ ರಂಗಭೂಮಿಯ ಪ್ರಯೋಜನಕ್ಕಾಗಿ ನಾಟಕಗಳನ್ನು ಬರೆದರು. ಅವುಗಳಲ್ಲಿ "ಚಿನ್ನ ನನ್ನ ಅಣ್ಣ" ಹಲವಾರು ಬಾರಿ ಪ್ರದರ್ಶಿತವಾದ ಪ್ರಸಿದ್ಧ ನಾಟಕ. ರೇಡಿಯೋ ನಾಟಕಗಳನ್ನೂ ಅನೇಕವಾಗಿ ಬರೆದು ಬಾನುಲಿಯಿಂದ ಪ್ರಸಾರಗೊಳಿಸಿದ್ದಾರೆ. "ಬಂಗಾರಿ" ಕನ್ನಡ ಚಿತ್ರಕ್ಕೆ ಶ್ರೀಮತಿಯವರೇ (ಹಾಸ್ಯದ ಭಾಗ ವಿನಾ) ಸಂಭಾಷಣೆಗಳನ್ನು ಬರೆದಿದ್ದಾರೆ. ಈಗ "ಲವ್ ಇನ್ ಬೆಂಗಳೂರ್" ಮತ್ತು "ಎಂದೂ ನಿನ್ನವನೆ" ಚಿತ್ರಗಳ ಸಂಭಾಷಣೆ ಬರೆದಿದ್ದಾರೆ.



ಮೇಲೆರಚಿದಷ್ಟು ಮೆಲ್ಲನೆ ಅವನನ್ನು ಸಿಹಿಯಾಗಿ ಗದರಿಸಿದಳು.

ಗೋಡಂಬಿ ಪಕೋಡವನ್ನು ತಿನ್ನುತ್ತಾ ಸುಂದರ ನಕ್ಕ.

ಗಂಡ ಹಾಗೇ ನಗುತ್ತಿದ್ದರೇ ಸುನಂದ ಪ್ರಪಂಚವನ್ನೇ ಮರೆತುಬಿಡುವಳು. ಎಷ್ಟು ಅಂದವಾಗಿ ನಗುತ್ತಾರೆ ಅವರು. ಸಂಧ್ಯಾಸಮಯದ ಬಿಸಿಲಿನಂತೆ ಹೊಳೆಯುತ್ತದೆ. ವರ್ಷಾಕಾಲದ ಮೇಘದಂತೆ ಹಾಯಾಗಿರುತ್ತದೆ...ಆ ಕಣ್ಣುಗಳು ಎಷ್ಟು ದೊಡ್ಡವು. ವಿಶಾಲ ನೇತ್ರಗಳು ಮಾತ್ರವಲ್ಲ–ಆ ಕಣ್ಣುಗಳಲ್ಲಿ ಎರಡು ಜ್ಯೋತಿಗಳು ಬೆಳಕಿರುವಾಗ ನನ್ನ ಬಾಳಿನಲ್ಲಿ ಕತ್ತಲೆಯ ಛಾಯೆ ಬರಲು ಸಾಧ್ಯವೇ ಇಲ್ಲ. ಗಂಡಿಗೆ ಭೂಷಣ ಮೀಸೇಂತ, ತಮ್ಮ ಗ್ರಾಮದಲ್ಲಿ ಯಾರೋ ಹೇಳುತ್ತಿದ್ದರು. ಅವರು ಸುಂದರನ ಚಿಗುರು ಮೀಸೆಯನ್ನು ನೋಡಿಯೇ ಹೇಳರಬೇಕು. ಮೀಸೆ ಕಪ್ಪಾಗಿ ಕಾಣಿಸಲು ತುಟಿಯ ಕೆಂಪೂ ಕಾರಣವಾಗಿರಬೇಕು.

"ಏನ್ರಿ! ಹಾಗೆ ನೋಡ್ತಾ ಇದೀರಲ್ಲಾ! ಹೊಸದಾಗಿ ಮದುವೆ ಗಂಡನ್ನ ನೋಡಿದಹಾಗೆ" ಸುಂದರ ನಗುತ್ತಾ ಕೇಳದಾಗ ಸುನಂದ ಬೆಚ್ಚಿದಳು. ನಾಚಿಕೆಯ ಮುದ್ದೆಯಾದಳು.

"ಆಹಾ! ನಾನು ನಿಮ್ಮನ್ನು ನೋಡ್ಲೇ ಇಲ್ಲ... ನೀವೇ" ನಾಚಿಗೆಯಲ್ಲಿ ತಬ್ಬಿಬ್ಬಾಗಿ ತೊದಲಿದಳು ಸುನಂದ.

"ಕಳ್ಳ ಸಿಕ್ಕಿಬಿದ್ದ ಮೇಲೆ ಶಿಕ್ಷೆ ಏನು ಗೊತ್ತಾ?" ಸುಂದರ ಹೆಂಡತಿಯ ಕೆಂಪನೆಯ ಮುದ್ದು ತುಟಿಗಳನ್ನು ಆಶೆಬುರುಕನಂತೆ ನೋಡುತ್ತಾ ಕೇಳದ. ಅವನ ಹಸಿವಿನ ನೋಟವನ್ನು ತಾಳಲಾರದೆ ತಲೆ ಬಗ್ಗಿಸಿದಳು ಸುನಂದ.

"ನಾನು ಹೇಳಲೇ?" ತನ್ನ ಬಲವಾದ ತೋಳ್ಗಳಲ್ಲಿ ಅಪ್ಪಿದ ಸುಂದರ...ಅಷ್ಟರಲ್ಲಿ...

"ಅಳಿಯ ದೇವರು ಬಂದ್ರೇನಮ್ಮಾ?" ಮಾವನ ಕಂಚುಕಂಠದ ಸದ್ದು ಸುಂದರನ ತೋಳ ಸೆರೆಯಲ್ಲಿ ಬಂಧಿತಳಾದ ಸುನಂದಳಿಗೆ ಬಿಡುಗಡೆಯನ್ನು ಕೊಟ್ಟಿತು.

"ಶಿಕ್ಷೆ ಯಾರಿಗೇ ಅರ್ಥವಾಯ್ತೋ"–ಸುನಂದ ನಗುತ್ತಾ ನುಡಿದಳು. ನಿರಾಸೆಯಿಂದ ನಿಟ್ಟುಸಿರು ಬಿಟ್ಟು, ಸುಂದರ,

"ತಾವು ದಯಮಾಡಿಸಿ ತಂದೆ ಮಗಳ ಮಧ್ಯೆ ನಾನು ಯಾಕೆ!" ಎಂದ.

"ನೀವೂ ಬನ್ನೀ ನಿಮ್ಮ ಹತ್ರ ಮಾತಾಡಬೇಕಂತೂ ಅಪ್ಪ ಮೂರು ದಿನದಿಂದ ಕಾಯ್ಕೊಂಡಿದಾರೆ. ಅವರಿಗೆ ಊರ್ನಲ್ಲಿ ತಲೆ ಮೇಲೆ ಕೆಲಸ ಇದೆ. ಹೋಗಬೇಕೂಂತ ಇದ್ದಾರೆ."

"ಕ್ಷೇಮವಾಗಿ ಹೋಗಿಬರಲಿ! ಬೇಡಾಂದ ಮೂರ್ಖ ಯಾರು! ಸ್ಟೇಷನ್‌ಗೆ ದಾರಿ ಗೊತ್ತು ತಾನೇ ನಿಮ್ಮ ತಂದೆಗೆ" ಬರೋ ಸಂಘಟನೆಯನ್ನು ಎದುರಿಸಲು ತಯಾರಾಗಿ ನಿಂತ ಸುಂದರ.

"ಅದ್ಯಾಕ್ರೀ ಹೀಗೆ ಮಾತಾಡ್ತೀರೀ? ಅವರು ಕೇಳದ್ರೆ ಎಷ್ಟು ನೊಂದುಕೊಳ್ತಾರೆ!" ಮುಖ ಚಿಕ್ಕದು ಮಾಡಿಕೊಂಡಳು ಸುನಂದ.

"ನನ್ನ ನೋವು ಯಾರೂ ಅರ್ಥ ಮಾಡಿಕೊಳ್ಳೋದಿಲ್ಲ" ಮಾತಿಗೆ ಸ್ವಲ್ಪ ಕಾರ ಹಚ್ಚಿ ಹೇಳದ.

"ಅಮ್ಮಾ ಸುನಂದಾ!" ತಂದೆಯ ಕೂಗು ಮತ್ತೊಮ್ಮೆ ಕೇಳಸಿತು.

"ಬಂದೇ ಅಪ್ಪಾ" ಸುನಂದ ಗಂಡನ ಕಡೇ ನೋಡಿದಳು. ನೋಟಕ್ಕೆ ಮನಸೋತ ಸುಂದರ ಅವಳ ಹಿಂದೆ ನಡೆದ.

ಯಾವುದೋ ಯೋಚನೆಯಲ್ಲಿ ಮುಳುಗಿದ್ದ ತಂದೆ ಸುಬ್ಬಾರಾಯರು ಮಗಳ ಕರೆಯಿಂದ ಎಚ್ಚೆತ್ತು ತಿರುಗಿ ನೋಡಿದರು.

"ಏನಪ್ಪಾ ಯೋಚ್ನೆ ಮಾಡ್ತಾಇದ್ದೀಯಲ್ಲಾ" ನಗುತ್ತಾ ಕೇಳುತ್ತಿರುವ ಮಗಳನ್ನು ಪೂರ್ಣ ಪ್ರೇಮದಿಂದ ಒಮ್ಮೆ ನೋಡಿದರು.

ಸುನಂದ ತಂದೆಯ ಪ್ರೀತಿಯ ಮಗಳು...ಬೇಸಾಯದ ಕೆಲಸ ಮುಗಿಸಿಕೊಂಡು, ಮನೆಗೆ ಬಂದ ತಕ್ಷಣ, ಸೇವಂತಿಗೇ ಹೂವಿನಂತೆ ಮುದ್ದಾಗಿ ತನ್ನೆದುರಿಗೆ ಬಂದು "ಮಧ್ಯಾನ್ಹ ಊಟ ಮಾಡಿದೆಯಾಪ್ಪ?" ಎಂದು ಕೇಳುತ್ತಿದ್ದಳು. ತನ್ನ ಬಗ್ಗೆ ಅವಳಿಗಿರುವ ದ್ದರೆ ನೋಡಿ ಸಂತೋಷಪಡುತ್ತಿದ್ದಳು. ತಂದೆ ಕೇಳದರೆ,

"ತಿನ್ನಲಿ ಬಿಡಪ್ಪಾ! ಇನ್ನೊಬ್ಬರ ಸಂತೋಷದಲ್ಲಿ ನಮ್ಮ ಸಂತೋಷವಿದೆ." ಎಂದು ಮಾತನ್ನು ಅಲ್ಲಿಗೇ ಜಾರಿಸಿ ಬಿಡುತ್ತಿದ್ದಳು.

"ದೇವ್ರೇ! ಅವಳು ಸೇರುವಮನೆ ಒಳ್ಳೆಯದಾ–ಗಿರ್ಲಿ" ಎಂದು ತಾಯಿ, ತಂದೆಯರು ಪ್ರತಿದಿನ ದೇವರನ್ನು ಪ್ರಾರ್ಥಿಸುತ್ತಿದ್ದರು. ಅವರ ಪ್ರಾರ್ಥನೆಯ ಫಲವೋ, ಸುನಂದೆಯ ಸೌಭಾಗ್ಯವೋ ಸುಂದರ ಅವರ ಅಳಿಯನಾದ. ತಾಯಿ, ತಂದೆಗಳಲ್ಲದೇ, ಪ್ರೇಮದ ಪರಿಚಯವಿಲ್ಲದ, ಮಮತೆಯ ನುಡಿಗಳಿಲ್ಲದ



"ನನ್ನ ಕಣ್ಣಿಗೆ ಯಾವಾಗಲೂ ಮದುವಣಗಿತ್ತಿ ಹಾಗೇ ಕಾಣ್ತೀಯಾ ?"

ಪ್ರೀತಿಯನ್ನು ನೋಡಿ ಅವಳನ್ನು ಅಪ್ಪಿ ಮುದ್ದಿಡುತ್ತಿದ್ದರು ಅವರು. ಜಗಳ ಅಂದರೆ ಅವಳಿಗೆ ಎಲ್ಲಿಲ್ಲದ ಭಯ. ಮಗಳ ಭಯಕ್ಕಾಗಿ ತಂದೆ ಹೆಂಡ್ತಿಯನ್ನು ಕೋಪಿಸಿಕೊಳ್ಳದೇ ಬಿಟ್ಟುಬಿಟ್ಟಿದ್ದರು.

"ಹೋಗಲಿ ಬಿಡಿ, ಮಗಳ ಮೇಲಿನ ಪ್ರೀತಿಗಾಗಿ ನನ್ನನ್ನು ಬೈಯ್ಯುವುದು ಬಿಟ್ಟುಬಿಟ್ಟಿರಲ್ಲಾ"

ಎಂದು ಆಕೆ ಸಂತೋಷ ಹೆಮ್ಮೆಗಳಿಂದ ಹೇಳುತ್ತಿದ್ದಳು. ಮೃದು ಸ್ವಭಾವದ ಸುನಂದಳಿಗೆ ಅಣ್ಣ ತಂಗಿಯರಮೇಲೆ ಅಪಾರ ಪ್ರೀತಿ. ತನಗೆ ಕೊಟ್ಟ ತಿಂಡಿಯನ್ನು ಅವರಿಬ್ಬರಿಗೂ ಹಂಚಿ ಅವರು ತಿನ್ನುತ್ತಿ ಪ್ರೀತಿಯ ನೋಟಗಳಿಲ್ಲದೆ ಒಂಟಿಯಾಗಿ ಬಾಳುತ್ತಿದ್ದ ಸುಂದರನಿಗೆ, ಸುನಂದಳ ಆಗಮನದಿಂದ ಸ್ವರ್ಗವೇ ಮನೆಗೆ ಇಳದು ಬಂದತಾಯ್ತು. ಅವರಿಬ್ಬರ ಜೀವನ ಹಾಲು ಸಕ್ಕರೆಯಂತೆ ಬೆರೆತು ಹೋಗಿತ್ತು. ಬತ್ತದ ಭಾರದಿಂದ ಬಾಗಿರುವ ಪೈರಿನಂತೆ ನಿಂತಿದ್ದ ಮಗಳ ಸೌಂದರ್ಯವನ್ನು ನೋಡಿ ತಂದೆಯ ಹೃದಯ ಸಂತೋಷದಿಂದ ತುಂಬಿತು.

"ಏನಪ್ಪಾ!ಮಾತಾಡ್ದೇ ನಿಂತಿದ್ದಿಯಲ್ಲಾ ...ಕಾಫೀ ಕೊಡಲೇ?......ನೋಡೀಂದ್ರೆ! ಅಪ್ಪ ನಿಮ್ಮ ಹತ್ರ ಮಾತಾಡಬೇಕಂತೆ, ನನಗೆ ಅಡಿಗೆ ಕೆಲ್ಸ ಇದೆ"ಎಂದು

ಸುನಂದ ಮಾವ ಅಳಿಯನನ್ನು ಬಿಟ್ಟು ಹೊರಟು ಹೋದಳು. ಮಗಳ ಲೌಕಿಕವನ್ನು ನೋಡಿ ಒಳಗೊಳಗೇ ನಕ್ಕರು ಸುಬ್ಬರಾಯರು. ಆದರೆ ಸುಂದರಗೆ ರೇಗಿತು. ಯುದ್ಧಭೂಮಿಯಲ್ಲಿ ಒಬ್ಬನನ್ನೇ ಬಿಟ್ಟು ಓಡಿಹೋದಳಲ್ಲಾ...ಹೇಡಿ.

ಸುಬ್ಬರಾಯರು ಕೆಮ್ಮಿದರು...ಅಂದ್ರೇ...ಇನ್ನು ...ಅವರು ಷುರುಮಾಡ್ತಾರೆ. "ಸುನಂದೂನ ಕಳುಹಿಸಿಕೊಡಿ...ಮೊದಲನೇದು ಹಾಗಿರಬೇಕು- ಹೀಗಿರಬೇಕೂಂತ" ಉಪನ್ಯಾಸ ಷುರುಮಾಡ್ತಾರೆ. ಅಷ್ಟರೊಳಗೆ ಅದನ್ನು ಕತ್ತರಿಸಬೇಕು ತಾನು. ಸುಂದರ ನಗುತ್ತಾ ಹೇಳಿದ. "ಪರ್ವಾ ಇಲ್ಲ, ನಿಮ್ಮ ಮಗಳು ತುಂಬಾ ಜಾಣೆ. ನನ್ನ ಕೆಟ್ಟೋನು ಮಾಡೋದಿಕ್ಕೆ ಅವಳು ಮೆಲ್ಲನೆ ಜಾರಿಕೊಂಡಳು ನೋಡಿ".

ಅಳಿಯನ ಮಾತುಗಳನ್ನು ಅರ್ಥಮಾಡಿಕೊಳ್ಳದೇ ಸುಬ್ಬರಾಯರು ಕ್ಷಣಕಾಲ ಸುಮ್ಮನಾಗಿ ನಂತರ ಕೇಳಿದರು "ಅಂದ್ರೇ?"

"ಅಂದ್ರೆ ಇಷ್ಟೇ ನೋಡಿ ಮೊದಲನೇ ಬಾಣಂತನ ತವರುಮನೆಯಲ್ಲೇ ನಡಿಯಬೇಕಾಗಿದ್ದು ಸಾಂಪ್ರದಾಯ. ಅದಕ್ಕೆ ನನ್ನನ್ನು ಕರ್ಕೊಂಡುಹೋಗಲು ಅಪ್ಪಾ ಬಂದಿದ್ದಾರೆ... ನನಗೆ ಹೋಗೋದಕ್ಕೆ ಇಷ್ಟವಿಲ್ಲ. ಈ ವಿಚಾರ ನೀವೇ ತಿಳಿಸೀಂತ ಅವಳು ನಿನ್ನೆ ರಾತ್ರಿಯಿಂದ ಒಂದೇ ಸಮನೆ ಹೇಳ್ತಾ ಇದ್ದಾಳೆ. ಹುಚ್ಚು ಹುಡುಗಿ ಬರೋಕಾಗೋಲ್ಲಾಪ್ಪಾಂತ ನಿಮ್ಮ ಹತ್ರ ಹೇಳಿದ್ರೇ ಏನು?"

ಸುಂದರ ನಿರರ್ಗಳವಾಗಿ ಅಬದ್ಧಗಳ ಮಾಲೆಯನ್ನು ಕಟ್ಟಿ ಮಾವನ ಕೊರಳಿಗೆ ಹಾಕಿ ಸಂತೋಷಪಟ್ಟ. ಕಾಫೀ ಡಿಕಾಕ್ಷನ್‌ಗೆ ಹಾಲು ಬೆರೆಸುತ್ತಿದ್ದ ಸುನಂದ ತನ್ನೊಳಗೇ ನಕ್ಕುಕೊಂಡಳು.

ನಿನ್ನೆ ರಾತ್ರಿ ಗಂಡನನ್ನು ಎಷ್ಟು ದೈನ್ಯದಿಂದ ಕೇಳಿಕೊಂಡಳು. "ನನ್ನನ್ನು ತವರು ಮನೆಗೆ ಕಳುಹಿಸಿ ಕೊಡೀ" ಅಂತ. ಆದರೆ ಮೊಂಡು ಹುಡುಗನಂತೆ ಸುಂದರ ... ಊಂಹೂಂ... "ಕಳಿಸೊಲ್ಲಾ"ಅಂತ ತಲೆ ಆಡಿಸಿದ. ತಾನು ಕಣ್ಣಲ್ಲಿ ನೀರು ತಂದುಕೊಂಡಳು. ತಕ್ಷಣ ಅವನ ಕಣ್ಣಲ್ಲೂ ನೀರುತುಂಬಿತು ಚಂಡಿ ಹಿಡಿಯುವ ಹುಡುಗನಂತೆ.

"ಇಲ್ಲ ಸುನೀ! ನಿನ್ನ ಬಿಟ್ಟಿರಲಾರೆ. ನಾನು ಸತ್ಹೋಗ್ತೀನಿ." ಎಂದ. ಅವಳು ಬೆಚ್ಚಿ ಅವನ ಬಾಯನ್ನು ಮುಚ್ಚಿ,

"ಛೀ! ಹೀಗೆಲ್ಲಾ ಅಪಮಂಗಳವಾಗಿ ಮಾತಾಡ್ಬೇಡಿ" ಎಂದು ಅವನನ್ನು ಹೃದಯಕ್ಕೆ ತಬ್ಬಿಕೊಂಡಳು. ಅವನು ಅವಳ ಹೃದಯದಲ್ಲಿ ಮಗುವಿನಂತೆ ತಲೆ ಅಡಗಿಸಿಕೊಂಡು ತೃಪ್ತಿಯಿಂದ ನೆಮ್ಮದಿಯಿಂದ ನಿದ್ದೆ ಮಾಡಿದ.

ಸುಬ್ಬರಾಯರು ನಕ್ಕರು ಅವರಿಗೆ ಗೊತ್ತು ಅಳಿಯನ ಗುಟ್ಟು. ಮಗಳನ್ನು ಬಿಟ್ಟಿರಲಾರನೆಂಬ ವಿಷಯ ಅವರಿಗೆ ಮಾತ್ರವಲ್ಲ, ಊರಿನವರಿಗೆಲ್ಲಾ ಗೊತ್ತು. ಪಕ್ಕದ ಮನೆ ಪಂಚಾಕ್ಷರಯ್ಯ ಎಷ್ಟೋಸಲ ಹೇಳುತ್ತಿದ್ದರು.

"ಸುಬ್ಬರಾಯರೇ! ನೀವು ಅದೃಷ್ಟಶಾಲಿಗಳಪ್ಪ. ನಿಮ್ಮ ಅಳಿಯ ದಸರಾಕ್ಕೆ ಬಂದರೆ ದೀಪಾವಳೀ, ಸಂಕ್ರಾಂತಿ ಯುಗಾದಿ ಎಲ್ಲ ಮುಗಿಸಿಕೊಂಡು ಹೋಗಿ ಮತ್ತೆ ಗೌರೀ ಹಬ್ಬಕ್ಕೆ ಮಗಳ ಜೊತೆಯಲ್ಲಿ ಬಂದು ಬಿಡುತ್ತಾನೆ. ನಿಮ್ಮ ಅಳಿಯದೇವ್ರು, ಅವ್ರು ಬರೋದಿರಲಿ ಮಗಳನ್ನೂ ಕಳಿಸೋದಿಲ್ಲ. ಅದರ ಗುಟ್ಟು ಏನೂಂತ ಕೇಳಿ ನನ್ನ ಮಗಳಿಗೂ ಹೇಳಿಪ್ಪ."

ಈ ಮಾತು ಕೇಳಿ ಮನೆಯವರೆಲ್ಲಾ ಸಂತೋಷದಿಂದ ನಗುತ್ತಿದ್ದರು.

"ನೋಡಿ ಅಳಿಯಂದೇವ್ರು! ಚಿಕ್ಕ ಹುಡುಗಿ ಅವಳಿಗೇನು ಗೊತ್ತು. ನೀವು ಬುದ್ಧಿ ಹೇಳಿ ಕಳುಹಿಸಬೇಕು." ಮಾತನ್ನು ನಿಲ್ಲಿಸಿ ಅಳಿಯನ ಮುಖ ನೋಡಿದರು. ಅವನ ಮುಖ ಸ್ವಲ್ಪ ಕೆಂಪಾಯ್ತು. ಈ ಮಾವಂದಿರೂ ಒಂದು ಕಾಲದಲ್ಲಿ ಅಳಿಯರಾಗಿರಲಿಲ್ಲವೇ? ಅಗಲಿಕೆಯ ಬಾಧೆ ಇವರಿಗೆ ಗೊತ್ತಿಲ್ಲವೇ? ಸುಂದರ ಮನಸ್ಸಿನಲ್ಲೇ ಹೆಂಡ್ತಿಯೊಡನೆ ಜಗಳವಾಡಿದ.

"ನಿನ್ನ ಅಭಿಪ್ರಾಯ ಏನಪ್ಪಾ?" ನೇರವಾಗಿ ಪ್ರಶ್ನೆ ಕೇಳಿ ಉತ್ತರಕ್ಕಾಗಿ ಅಳಿಯನಕಡೆ ನೋಡುತ್ತಾ ಕುಳಿತರು.

"ಅಭಿಪ್ರಾಯ ಏನು ಬಂತು ಮಣ್ಣು 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗೂ'ಂತ ಗಾದೆ ಇದೆ. ಆದ್ರೇ ಈ ಮನುಷ್ಯ ಕುಲಕ್ಕೆ ಒಳಗೇಂತ ಮಗಳಿಗಾಗಿ ಹಂಬಲಿಸುತ್ತಾರಲ್ಲಾ... ನನಗೇನಾದ್ರೂ ಮಗಳು ಹುಟ್ಟಿದ್ರೇ ಅವಳನ್ನು ಮದುವೆಮಾಡಿ ಗಂಡನ ಸಂಗಡ ಕಳುಹಿಸಿದ ಮೇಲೆ ತಾನು ಆ ಕಡೇ ತಿರುಗಿ ನೋಡೋಲ್ಲ.

"ಪರವಾ ಇಲ್ಲ ಹೇಳಪ್ಪಾ!" ಅಳಿಯನ ಯೋಚನೆಯ ದಾರವನ್ನು ಕತ್ತರಿಸಿ ಹೇಳಿದರು ಸುಬ್ಬರಾಯರು.

"ಸುನೀಗೆ ಇಷ್ಟವಿಲ್ಲದ ಮೇಲೆ ಇನ್ನೊಬ್ಬರ ಮಾತೇಕೆ? ಮೇಲಾಗಿ ನಿಮ್ಮೂರಲ್ಲಿ ಸರಿಯಾದ ಡಾಕ್ಟರುಗಳಿಲ್ಲ. ಇಲ್ಲಾದ್ರೇ ಯಾವುದಕ್ಕೂ ಭಯವಿಲ್ಲ" ಇದಕ್ಕೆ ನಿಮ್ಮ ಜವಾಬೇನೂ ಎಂಬಂತೆ ತಲೆ ಎತ್ತಿ ಮಾವನವರನ್ನು ನೋಡಿದ ಸುಂದರ. ಹುಬ್ಬುಗಳು ಒಂದಾಯ್ತು. ಸುಬ್ಬರಾಯರಿಗೆ ದೊಡ್ಡಮೀಸೆಯ ತುದಿ ಮೆಲ್ಲನೆ ಆಡಿತು.

"ಅಂದ್ರೇ! ನಮ್ಮೂರಲ್ಲಿ ಹೆಂಗಸರು ಮಕ್ಕಳ ತಾಯಿಯರು ಆಗ್ತಾ ಇಲ್ಲಾಂತ ನಿನ್ನ ಉದ್ದೇಶವೆ? ಅಥವಾ ಮಕ್ಕಳನ್ನು ಹೆರುವ ಪ್ರತಿ ಒಬ್ಬ ತಾಯಿಯೂ ಪರಲೋಕಕ್ಕೆ ಹೋಗ್ತಾ ಇದ್ದಾಳೇ ಅನ್ನೋದು ನಿನ್ನ ಅಭಿಪ್ರಾಯವೋ?"

ಬಾಣದಂತೆ ಇದ್ದ ಪ್ರಶ್ನೆಗಳಿಗೆ ಸುಂದರ ಜವಾಬು ಕೊಡಲಿಲ್ಲ. ಆದರೆ ಕೋಪದಿಂದ ಅವನ ಗಿಣಿ ಮೂಗಿನ ತುದಿ ಕೆಂಪಾಯ್ತು.

ತಂದೆಯ ಕಂಠದಲ್ಲಿದ್ದ ತೀವ್ರತೆಗೆ ಮಗಳು ಬೆದರಿ ಹೊರಗೆ ಬಂದು ಬಾಗಿಲಲ್ಲಿ ನಿಂತಳು. ತನ್ನಿಂದ ಅವರಿಬ್ಬರ ನಡುವೆ ದ್ವೇಷದ ಕಿಡಿ ಹಾರುವುದೇನೋ ಎಂಬ ನೆನಪಿನಿಂದಲೇ ಅವಳ ಹೃದಯ ಚಿಗುರೆಲೆಯಂತೆ ನಡುಗಿತು.

"ಅವರಿಗೂ ಸುನೀಗೂ ಎಷ್ಟೋ ವ್ಯತ್ಯಾಸವಿದೆ. ಒರಟು ಜನ ಅವರು. ಕಷ್ಟಗಳನ್ನು ಎದುರಿಸಲು ಧೈರ್ಯಬಲ ಎರಡೂ ಇವೆ. ಆದರೆ, ಸುನಂದಳ ದೇಹ ಸೂಕ್ಷ್ಮ. ಧೈರ್ಯವೂ ಇಲ್ಲ. ಧೈರ್ಯವಿಲ್ಲದವಳನ್ನು ಕಳುಹಿಸಿಕೊಡಲು ನನಗೆ ಇಷ್ಟವೂ ಇಲ್ಲ."

ತುಂಡುಮಾಡಿದಂತೆ ಹೇಳಿ ಎದ್ದುನಿಂತ ಸುಂದರ ಇನ್ನು ಆ ವಿಚಾರವಾಗಿ ಮಾತನಾಡಬೇಡೀ ಎಂಬಂತೆ. ತಂದೆಗೆ ಅರ್ಥವಾಯಿತು. ಅವರು ವೇದನೆಯಿಂದ ನಿಟ್ಟುಸಿರೊಂದನ್ನು ಬಿಟ್ಟು ಮೆಲ್ಲನೆ ಎದ್ದರು. ತಂದೆಯ ಕಣ್ಣಲ್ಲಿ ನೀರನ್ನು ಕಂಡು ಸುನಂದ ಕರಗಿ ಹೋದಳು...ಇಲ್ಲ ಅವರ ಜೊತೆಯಲ್ಲಿ ತಾನು ಹೊರಡಲೇಬೇಕು. ಇದನ್ನು ಧೈರ್ಯವಾಗಿ ಹೇಳಬಿಡುವುದು ಒಳ್ಳೆಯದು. ಎರಡಡಿ ಇಟ್ಟು ಮುಂದಕ್ಕೆ ಬಂದಳು ಸುನಂದ. ಅವಳ ಕಾಲುಂಗುರದ ಸದ್ದು ಕೇಳಿ ತಿರುಗಿ ನೋಡಿದ ಸುಂದರ.

ಆ ದೊಡ್ಡ ಕಣ್ಣುಗಳಲ್ಲಿ ದೀನತೆ ವೇದನೆ ತುಂಬಿತ್ತು. ಇಲ್ಲ...ಅವರನ್ನು ಬಿಟ್ಟಿರಲು ಸಾಧ್ಯವೇ ಇಲ್ಲ. ಆ ಕಣ್ಣುಗಳ ಕಾಂತಿಯನ್ನು ನೋಡದೆ ಒಂದು ನಿಮಿಷ ಇರಲು ಸಾಧ್ಯವಿಲ್ಲ.

"ಹೋಗ್ಲಿ ಬಿಡಿಪ್ಪ! ನೀವೇನು ನೊಂದ್ಕೊಬೇಡಿ ನಾನು ಬಂದ್ರೆ ಅವರಿಗೆ ತುಂಬಾ ತೊಂದ್ರೆಆಗುತ್ತೆ. ನೀವೇ ಅಮ್ಮನ್ನ ಇಲ್ಲಿ ಕಳುಹಿಸಿಕೊಡಿ."

ಸುನಂದ ನಗುತ್ತಾ ಕಹಿಯಾಗಿದ್ದ ಪ್ರಸಂಗವನ್ನು ಸಿಹಿ ಮಾಡಲು ಪ್ರಯತ್ನಿಸಿದಳು. ಸುಂದರ ಅವಳನ್ನು ಕೃತಜ್ಞತೆಯಿಂದ ನೋಡಿದ.

ಅವರು ತನ್ನ ಬಟ್ಟೆಗಳನ್ನೆಲ್ಲಾ ಕೈಚೀಲದಲ್ಲಿಡುತ್ತಾ ಹೇಳಿದರು.

"ಇಲ್ಲಮ್ಮಾ! ಬಾಂಬೆಯಿಂದ ನಿಮ್ಮಣ್ಣ ಹೆಂಡ್ತೀನ ಎರಡನೇ ಬಾಣಂತನಕ್ಕೆ ಇಲ್ಲಿಗೆ ಕಳುಹಿಸಿದ್ದಾನೆ. ಎರಡನೇ ಮಗೂಗೆ ತವರು ಮನೆಗೆ ಹೋಗಬಾರದು. ಅದಕ್ಕೆ ಇಲ್ಲಿಗೆ ಬಂದಿದ್ದಾಳೆ ಆ ಹುಡುಗಿ."

"ಏನು ! ಮೂರ್ತಿ ಹೆಂಡ್ತೀನ ಬಾಂಬೆಯಿಂದ ಹಳ್ಳೀಗೆ ಬಾಣಂತನಕ್ಕೆ ಕಳುಹಿಸಿ—ದ್ದಾನೆಯೇ ? ಹುಚ್ಚುಮನುಷ್ಯ" ಸುಂದರ ಆಶ್ಚರ್ಯದಿಂದ ಕೇಳಿದ "ಹೆಂಡ್ತಿ ಬೆಲೆ ತಿಳಿಯದ ಮೂರ್ಖ." ಎಂದು ಮನಸ್ಸಿನಲ್ಲೇ ಮೈದುನನನ್ನು ಬೈದುಕೊಳ್ಳುತ್ತಾ.

"ಅವರ ಹುಚ್ಚು ಅವರಿಗಾನಂದ" ಮಾವನ ಮಾತಿನ ತುದಿ, ಸುಂದರನ ಹೃದಯಕ್ಕೆ ತಾಕಿತು. ಕೋಪದಿಂದ ಬದಲು ಹೇಳಲು ಪ್ರಯತ್ನಿಸಿದಾಗ ಸುನಂದ ನಕ್ಕಳು. ಅವಳ ನಗುವಿನಲ್ಲಿ ಅವನ ಕೋಪ ಕರಗಿತು.

"ಅಪ್ಪಾ! ಪಾರೂನ ಕಳುಹಿಸಿಕೊಡೀಪ್ಪಾ! ತಂಗಿಯನ್ನು ನೋಡಿ ನಾಲ್ಕು ವರ್ಷ ಆಗ್ಹೋಯ್ತು. ನನಗೂ ಸಹಾಯವಾಗಿರುತ್ತಾಳೆ." ಕೇಳಿದಳು ಸುನಂದ.

"ವಯಸ್ಸಿಗೆ ಬಂದ ಹುಡಿಗೀನ ಪರಾಯಿಸ್ಥಳಕ್ಕೆ ಕಳುಹಿಸೋದು ನಮಗೆ ಇಷ್ಟವಿಲ್ಲವಮ್ಮಾ" ತಂದೆ ಶರ್ಟ್ ಹಾಕಿಕೊಳ್ಳುತ್ತಾ ಹೇಳಿದರು.

"ಪರಾಯಿಸ್ಥಳ ಅಲ್ಲವಲ್ಲಾ! ನಮ್ಮ ಮನೇ—ತಾನೇ! " ಸುನಂದ ಆತುರಳಾಗಿ ಕೇಳಿದಳು.

"ನಮ್ಮ ರಕ್ಷಣೆಯಲ್ಲಿ ನಿಮ್ಮ ಮಗಳು ಸುರಕ್ಷಿತವಾಗಿರ್ತಾಳೆ ಹೆದರ್ಕೋಬೇಡಿ" ಕೊಂಕಾಗಿ ನುಡಿದರು ಅಳಿಯದೇವ್ರು. (ಮಗಳನ್ನು ಕಳಿಸೋದಿಕ್ಕೆ ಇಷ್ಟು ಯೋಚಿಸುವಾಗ ಹೆಂಡ್ತೀನ ಇವರು ಕೇಳಿದ ತಕ್ಷಣ ಕಳುಹಿಸಬೇಕೇ? )

ಸುಬ್ಬರಾಯರು ಅಳಿಯನ ಕೊಂಕುಮಾತಿಗೆ ಅಂಕುಶದಂತೆ ಜವಾಬು ಕೊಟ್ಟರು.

"ಕಾಲ ಕೆಟ್ಟಿದೆ. ಪಾರ್ವತೀನ ಆ ಕಾಲದ ಪ್ರವಾಹದಲ್ಲಿ ತಳ್ಳೋದಿಕ್ಕೆ ಇಷ್ಟವಿಲ್ಲ."

"ನಮ್ಮನೇಲಿ ಕಾಲ ಕೆಟ್ಟಿಲ್ಲ ಚೆನ್ನಾಗಿದೆ. ಅಲ್ಲಾ ಮಾವಯ್ಯ! ನಿಮ್ಮ ಮಗಳ ಮೇಲೆ ನಿಮಗೇ ನಂಬಿಕೆ ಇಲ್ಲದಿದ್ದರೇ ಗತಿಯೇನೂ" ಸುಂದರ ಅವರನ್ನು ನೋಯಿಸಲು ಕಂಕಣ ಕಟ್ಟಿಕೊಂಡವನಂತೆ ಹೇಳಿದ.

ಸುನಂದ ಬೆದರಿದಳು. ಈ ಮಾತಿನ ಪರಿಣಾಮ ಏನಾಗುತ್ತೋ ಅಂತ ನಡುಗಿದಳು.

"ಅಪ್ಪಾ! ನನಗೆ ಅವರನ್ನು ಬಿಟ್ಟು ಬರೋದಿಕ್ಕೆ ಇಷ್ಟವಿಲ್ಲ. ಅಮ್ಮ ಬರೋದಿಕ್ಕೆ ಆಗೋದಿಲ್ಲ. ಪಾರ್ವತೀನ ಕಳಿಸೋದಿಲ್ಲ. ಅಷ್ಟೇ ತಾನೇಪ್ಪಾ? "

ನೊಂದು ಕೇಳಿದಳು ಮಗಳು. ತಂದೆಯ ಮನಸ್ಸು ಮಗಳ ಮಾತಿನಿಂದ ಮೃದುವಾಯ್ತು.

"ಛೆ!..ಛೇ!! ನೊಂದ್ಕೊಬೇಡಾ ಮಗೂ! ಪಾರ್ವ_

ತೀನ ಖಂಡಿತ ಕಳುಹಿಸಿ ಕೊಡ್ತೀನಿ. ನಿನ್ನ ಹತ್ರಾನೇ ಇರಲಿ ಯಾರು ಬೇಡಾಂದ್ರು...ಅಳಿಯದೇವ್ರು! ಬರ್ತ್ತೀನಪ್ಪಾ, ಸುನಂದನ ಯೋಗಕ್ಷೇಮಕ್ಕೆ ಕಾಗದ ಬರೀ–ತಾಯಿರು. ”

ಅಂಗವಸ್ತ್ರ ತೆಗೆದುಕೊಂಡು ಭುಜದ ಮೇಲೆ ಹಾಕಿಕೊಂಡರು.

“ಅದ್ಯಾಕಪ್ಪಾ! ಹೊರಟೀ? ”

ಆಶ್ಚರ್ಯದಿಂದ ಸುನಂದ ಕೇಳಿದಳು.

“೭ ಘಂಟೆ Train ಇದೆಯಮ್ಮಾ. ಬಂದ ಕೆಲಸ ಆಯ್ತಲ್ಲಾ, ಹೋಗಿ ಬರ್ತೀನಿ. ”

ಒಂದು ಕೈಯಲ್ಲಿ ಕೊಡೆ, ಮತ್ತೊಂದು ಕೈಯಲ್ಲಿ ಬ್ಯಾಗು ಹಿಡಿದು, ಚಪ್ಪಲಿಯನ್ನು ಹಾಕಿಕೊಂಡು ನಿಧಾನವಾಗಿ ಮೆಟ್ಟಲು ಇಳಿದು ಹೋಗುತ್ತಿರುವ ತಂದೆಯನ್ನು ವೇದನೆಯಿಂದ ನೋಡುತ್ತಾ ನಿಂತಳು ಸುನಂದ. ಪಾಪ! ತಂದೆ ಎಷ್ಟು ಆಶೆಯಿಂದ ಬಂದರು. ತನ್ನ ಬಾಣಂತನ ಮಾಡಲು ತಾಯಿ ಎಷ್ಟು ಸಂತೋಷದಿಂದ ಕಾದಿದ್ದರೋ, ಎಲ್ಲಾ ಒಂದೇ ಮಾತಿನಲ್ಲಿ ಒಂದೇ ಕ್ಷಣದಲ್ಲಿ ಇವರು ನಿರಾಶೆ ಮಾಡಿಬಿಟ್ಟರು.

ತವರು ಮನೆಗೆ ಅತ್ತಿಗೆ ಬಂದಿದ್ದಾಳೆ. ಇಬ್ಬರೂ ಜೊತೆಯಾಗಿದ್ದು ಎಷ್ಟು ವರ್ಷವಾಯ್ತು. ಹೋದ ಸಲ ಅತ್ತಿಗೆಯಿಂದ ಬಂದ ಕಾಗದದಲ್ಲಿ “ನೀನು ಇಲ್ಲಿಗೇ ಬಾ” ಎಂದು ನೂರು ಸಲ ಬರೆದಿದ್ದರು. ಯಾಕೋ ಇವರು ಇಷ್ಟು ಮೊಂಡತನ ಮಾಡ್ತಾರೆ. ಎಲ್ಲಾ ಗಂಡಂದಿರೂ ಹೀಗೇ ಇರ್ತಾರ್ಯೇ?...ಇಲ್ಲ ಅಣ್ಣ ಅತ್ತಿಗೇನ ಕಳಿಸಲಿಲ್ವೇ! ಹಾಗಾದ್ರೇ ಅವರಿಗೆ ಪ್ರೀತಿ ಇಲ್ವೇ! ಅಯ್ಯೋ! ಇಲ್ಲದೇ ಏನು...ಅಣ್ಣನಿಂದ ಒಂದು ದಿನ ಕಾಗದ ತಡವಾಗಿ ಬಂದ್ರೂ ಅತ್ತಿಗೆ ಕಣ್ಣುಗಳಲ್ಲಿ ಗಂಗೆ ಕಾವೇರಿಗಳು ಪ್ರತ್ಯಕ್ಷವಾಗುತ್ತಾರೆ. ಆ ಪ್ರವಾಹವನ್ನು ಅಣ್ಣನ ಕಾಗದ ಮಾತ್ರ ತಡೆದು ನಿಲ್ಲಿಸಲು ಸಾಧ್ಯ.

ಮೆಲ್ಲನೆ ಭುಜದ ಮೇಲೆ ಕೈಯಿಟ್ಟಂತಾಯ್ತು. ತಿರುಗಿ ನೋಡಿದಳು. ಸುಂದರ ನಿಂತಿದ್ದ. ಅವಳ ಕಣ್ಣುಗಳಲ್ಲಿ ಕಣ್ಣಿಟ್ಟು ನೋಡುತ್ತಾ ಬಹು ಮೃದುವಾಗಿ ಕೇಳಿದ.

“ನನ್ನ ಮೇಲೆ ಕೋಪವೇ ಸುನೀ? ”

ಗಂಡನ ಕಣ್ಣುಗಳಲ್ಲಿ ಬೆಳಗುತ್ತಿರುವ ಪ್ರೇಮ–ಜ್ಯೋತಿಯನ್ನು ನೋಡುತ್ತಾ,

“ಇಲ್ಲ...ಇಲ್ಲ...ನಿಮ್ಮನ್ನು ಬಿಟ್ಟುಹೋಗೋದಿಲ್ಲ” ಎಂದು ಮಗುವಿನಂತೆ ಅವನ ಎದೆಯ ಮೇಲೆ ಒರಗಿದಳು ಸುನಂದ.

## ೨

೫ ಘಂಟೆಗೆ ಸರಿಯಾಗಿ ಅಲಾರಂ ಹೊಡೆಯಿತು. ಸುಂದರ ತಲೆದಿಂಬನ್ನು ಮತ್ತಷ್ಟು ಹತ್ತಿರಕ್ಕೆ ಸೆಳೆದುಕೊಂಡು ಮಲಗಿದ. ಅವನ ತುಟಿಯ ಮೇಲೆ ನಗು ಮಿನುಗುತ್ತಿತ್ತು. ಯಾವ ಸಿಹಿಸ್ವಪ್ನವನ್ನು ಕಾಣುತ್ತಿದ್ದನೋ!

ಸುನಂದ ಕಾಫೀ ಕಪ್ಪು ತೆಗೆದುಕೊಂಡು ಒಳಗೆ ಬಂದಳು. “ಸುನೀ...ನನ್ನ ಸುನೀ! ” ದಿಂಬನ್ನು ಮತ್ತಷ್ಟು ಹತ್ತಿರಕ್ಕೆ ಎಳೆದುಕೊಳ್ಳುತ್ತಾ ಕನವರಿಸಿದ. ಉಕ್ಕಿಬರುವ ನಗುವನ್ನು ತಡೆದುಕೊಂಡಳು ಸುನಂದ. “ಇಲ್ಲ ನಿನ್ನ ಬಿಟ್ಟಿರಲಾರೆ. ” ಸುಂದರ ಕನವರಿಸಿಕೊಳ್ಳುತ್ತಾ ಆ ಕಡೇ ತಿರುಗಿ ಮಲಗಿದ.

ಗಂಡನಿಗೆ ತನ್ನ ಮೇಲೆ ಎಷ್ಟು ಪ್ರೀತಿ. ಕನಸಿನಲ್ಲೂ ನನ್ನನ್ನು ಅವರು ಬಿಟ್ಟಿರಲಾರರು. ಎಷ್ಟು ಅದೃಷ್ಟವಂತಳು ನಾನು. ಮದುವೆಯಾದ ಹೊಸದರಲ್ಲಿದ್ದ ಪ್ರೇಮ, ದಿನದಿನಕ್ಕೆ ಮಾಯವಾಗಿ ಕಡೆಗೆ ಗಂಡ, ಹೆಂಡತಿ ಪ್ರೀತಿಸಿಕೊಳ್ಳಬೇಕಾದ್ದು ಕರ್ತವ್ಯ ಎಂಬಂತೆ, ಜೀವನ ಸಾಗಿಸುವ ಎಷ್ಟೋ ದಂಪತಿಗಳನ್ನು ಅವಳು ನೋಡಿದ್ದಾಳೆ. ಆದರೆ ಅವರು ತಮ್ಮ ದಾಂಪತ್ಯವನ್ನು ನೋಡಿ ಕಲಿಯಬೇಕು. ಮದುವೆ ಆಗಿ ಇದು ೫ ನೇ ವರ್ಷ. ಆದರೂ ತಮ್ಮ ಪ್ರೇಮ ದಿನದಿನಕ್ಕೆ ಹೆಚ್ಚಾಗುತ್ತಿದೆಯೇ ವಿನಾ ಒಂದು ಸಾಸುವೆಕಾಳಿನಷ್ಟು ಕಡಿಮೆಯಾಗಿಲ್ಲ. ನಿನ್ನೆ ಮದುವೆಯಾಗಿ ಈದಿನ ಸಂಸಾರಕ್ಕೆ ಬಂದಹಾಗಿದೆ. ತಮ್ಮ ಜೀವನದಲ್ಲಿ ಎಲ್ಲವೂ ಹೊಸದೇ ಒಂದೊಂದು ಕ್ಷಣವೂ ಹೊಸದು. ನಿತ್ಯ ವಸಂತ, ನಿತ್ಯ ನೂತನ, ತಮ್ಮ ಜೀವನ.

ಕಾಫೀ ಕಪ್ಪನ್ನು ಟೇಬಲ್ ಮೇಲೆ ಇಟ್ಟು ಹಾಸಿಗೆಯಲ್ಲಿ ಕುಳಿತು, ಗಂಡನ ಕ್ರಾಪಿನಲ್ಲಿ ಆಟವಾಡುತ್ತಾ ಮೆಲ್ಲನೆ, ಮುದ್ದಾಗಿ ಕರೆದಳು.

“ಏಳ್ತೀರಾ! ”

ನಿಧಾನವಾಗಿ ಕಣ್ಣುತೆರೆದು ನೋಡಿದ. ನಗುತ್ತಾ ಕುಳಿತಿರುವ ಸುನಂದಳನ್ನು ನೋಡಿ ಉತ್ಸಾಹದಿಂದ ಎದ್ದುಕುಳಿತ.

“ಏಳೀ ಟಾಯಮ್ ಆಯ್ತು. ಈ ದಿನ ಪಾರ್ವತಿ ಬರ್ತಾಳೆ Stationನಿಂದ ಕರ್ಕೊಂಡು ಬರ್ಬೇ–ಕೂಂತ ರಾತ್ರೀನೇ ಹೇಳ್ಳಿಲ್ವೇ? ”

“ಅರೆರೇ ನೋಡಿದ್ಯಾ!ಅಲಾರಂ ಹೊಡೀಲೇ ಇಲ್ಲ” ಅಲಾರಂಪೀಸ್ ಮೇಲೆ ತಪ್ಪು ಹಾಕಿದ ಸುಂದರ.

"ಪಾಪ! ಅದು ಕಿರುಚಿಕೊಂಡು ಸುಮ್ಮನಾಯ್ತು [illegible]."

ಅರ್ಧ ಗಂಟೆಯಲ್ಲಿ ಮುಖ ತೊಳೆದುಕೊಂಡು ಬಂದು ಸುಂದರ ರೂಮಿನಿಂದಲೇ ಕೇಳಿದ.

"ಯಾವ ಡ್ರೆಸ್ ಹಾಕ್ಕೊಳ್ಳಿ?"

"ಮಂಚದ ಮೇಲೇ ಇಟ್ಟಿದ್ದೀನಿ ಹಾಕ್ಕೊಳ್ಳಿ."

"ಹೋಗಿ ಬರ್ಲೇ?"

ಎಂದು ಹೇಳಲು ಬಂದ ಗಂಡನನ್ನು ನೋಡಿ ತೃಪ್ತಿಯಿಂದ ನಕ್ಕಳು ಸುನಂದ. ಬಿಳ್ಳನೆಯ ಮಲ್ಲು ಪಂಚೆ, ಜುಬ್ಬಾ, ಒಳಗೆ ಕಾಣಿಸುವ ಕಟ್ ಬನಿಯನ್, ಕೂಲಿಂಗ್ ಗ್ಲಾಸ್. ಮದುವೆ ಗಂಡಿನಂತಿದ್ದಾರೆ ಅವರು. ತನ್ನ ದೃಷ್ಟಿ ಅವರಿಗೆಲ್ಲಿ ಸೋಂಕುತ್ತೋ ಎಂಬ ಭಯದಿಂದ ಸುನಂದ ಬೇರೆ ಕಡೆ ನೋಡುತ್ತಾ.

"ಹೋಗಿ ಬನ್ನಿ" ಎಂದಳು.

ಎರಡು ಹೆಜ್ಜೆ ಮುಂದಿಟ್ಟ ಸುಂದರ ಸಂದೇಹದಿಂದ ನಿಂತು ಕೇಳಿದ.

"ಅಂದ ಹಾಗೆ ನಿನ್ನ ತಂಗಿ ಪಾವಡ, ಜಂಪರ್ ಹಾಕ್ಕೊಂಡು ಸಣ್ಣಗಿರ್ತಾಳಲ್ಲಾ?"

"ಇಲ್ಲ... ಗೌನು ಹಾಕ್ಕೊಂಡು ಬರ್ತಾಳೆ.

"ಸರಿ... ಹಾಗಾದ್ರೇ"

"ಚೆನ್ನಾಗಿದೀರಿ! ೧೮ ವರ್ಷದ ಹುಡುಗೀ ಪಾವಡಾ ಜಂಪರ್ ಹಾಕ್ಕೊಂಡು ಬ್ರರ್ತಾಳ್ಯೇ? ಲಕ್ಷಣವಾಗಿ ಸೀರೆ ಉಡ್ತಾಳೆ."

"ಏನು! ಪಾರ್ವತಿ ಸೀರೆ ಉಡ್ತಾಳ್ಯೇ? ನಮ್ಮ ಪಾರ್ವತಿ, ನಮ್ಮ ಮದುವೆಯಲ್ಲಿ ಯಾವಾಗ್ಲೂ ಸೊಟ್ಟ ಮುಖ ಮಾಡಿಕೊಂಡು. ಸಣ್ಣಗೆ, ಕಪ್ಪಗೆ ಓಡಾಡ್ತಾ ಇದ್ದಾಳಲ್ಲಾ... ಅವಳು ಪಾರ್ವತಿ."

ಗಂಡನ ಅಮಾಯಕತೆಗೆ ನಕ್ಕಳು ಸುನಂದ.

"ಹೆಣ್ಣು ಮಕ್ಕಳು ಗೊಬ್ಬರದ ಹಾಗೆ ದಿವ್ಸ ಬೆಳೀತಾಯಿರ್ತಾರೆ. ಸರಿ ಹೊರಡಿ ಹೊತ್ತಾಯ್ತು."

"ನಾನು ಗುರ್ತು ಹಿಡೀದೇ ಇದ್ರೇ?"

"ಅವಳೇ ಗುರ್ತು ಹಿಡಿದು ಕರೀತಾಳೆ ನಿಮ್ಮನ್ನ."

"ಯಾರಾಹ್ರೂ ೧೮ ವರ್ಷದ ಹುಡುಗಿ ಭಾವಾಂತ ಕರದ್ರೇ ಕರ್ಕೊಂಡು ಬಂದು ಬಿಡ್ಲೇ?"

ಕೀಟಲೆ ಮಾಡಿದ ಸುಂದರ.

"ಓ, ಧಾರಾಳವಾಗಿ"

ನಸುನಗುತ್ತಾ ಹೇಳಿದಳು ಸುನಂದ.

"ಸುಮ್ಮನಿರುತ್ತೀಯೇನು ?"

"ಆಗ್ಲೆ ೬, ಗಂಟೆಯಾಯ್ತು, ೬-೪೫ ಕ್ಕೆ Train ಬರುತ್ತೆ, ಬೇಗ ಹೋಗೀಂದ್ರೇ? ಆ ಮೇಲೆ 'ತೊಂದರೆಯಾಯ್ತಾಂತ' ಪಾರು ಬೈತಾಳೆ. ಘಾಟಿ ಅವಳು."

ಸ್ಟೇಷನ್‌ನಲ್ಲಿ ಬಂದು ಹೋಗೋ ಜನಾನ್ನ ನೋಡ್ತಾನಿಂತ್ತಿದ್ದ, ಸುಂದರ, ಕೂಲಿಗಳ ಅವಾಂತರದಿಂದ ತಪ್ಪಿಸಿಕೊಂಡು. ಜನಗಳ ಮಧ್ಯೆ ನುಗ್ಗಿಕೊಂಡು, ತನ್ನನ್ನು ತಾನು ಕಾಪಾಡಿಕೊಳ್ಳುತ್ತಾ, ಹೋಗುವ ಹೆಣ್ಣೊಬ್ಬಳನ್ನು ನೋಡಿ ಆಶ್ಚರ್ಯವಾಯ್ತು ಸುಂದರಗೆ, ಸ್ನೇಹಿತೆಯನ್ನು ಊರಿಗೆ ಕಳುಹಿಸಲು ಬಂದಿರುವ ಹುಡುಗಿಯರ ಗುಂಪನ್ನೇ ನೋಡುತ್ತಾ ನಿಂತಿದ್ದ ಒಬ್ಬ ಯುವಕ, ಯಾಕೋ ಅವನನ್ನು ನೋಡಿದ್ರೆ ನಗು ಬಂತು ಸುಂದರಗೆ. [illegible] ಅತಿ ಬಿಗಿಯಾದ ಪ್ಯಾಂಟ್ ಹಾಕಿದ್ದ. ಪೀಸ್ ಬಟ್ಟೆಗಳನ್ನೆಲ್ಲಾ ಸೇರಿಸಿ ಹೊಲಿದಿದ್ದ ಷರ್ಟನ್ನು ಸಡಿಲವಾಗಿ ಹಾಕಿದ್ದ. ಹೊಸ ಮನೆಯ ಮೇಲೆ [illegible] ದೃಷ್ಟಿ ಬೊಂಬೆಯಂತೆ ಕಂಡ ಆತ.

ಅದೊಂದು ಗುಜರಾತಿ ಸಂಸಾರ, ಪ್ಲಾಟ್ ಫಾರಂನಲ್ಲೇ ಅಚ್ಚುಕಟ್ಟಾಗಿ ಸಂಸಾರ ಹೂಡಿಬಿಟ್ಟಿದ್ದಾರೆ. ಹಾಸಿಗೆಯನ್ನು ಒರಗಿ ಮುದುಕಿಯೊಬ್ಬಳು ಆ ಗಲಾಟೆಯಲ್ಲೂ ನಿಶ್ಚಿಂತೆಯಿಂದ ನಿದ್ದೆ ಮಾಡುತ್ತಿದ್ದಾಳೆ. ಇನ್ನೊಂದು ಹೆಂಗಸು ಚಪಾತಿ ತಿನ್ನುತ್ತಿದ್ದಾಳೆ. ಒಂದು ಚಿಕ್ಕ ತಟ್ಟೆಯಲ್ಲಿ ಬೇಯಿಸಿದ ಆಲೂಗಡ್ಡೆ, ಬಠಾಣಿ ಇಟ್ಟುಕೊಂಡು ನಂಜುಕೊಳ್ಳುತ್ತಿದ್ದಳು. ಸುಂದರಗೆ ಬಾಯಲ್ಲಿ ನೀರೂರಿತು. ಅವನಿಗೆ ಆಲೂಗಡ್ಡೆ ಪಲ್ಯಾಂದರೆ ತುಂಬಾ ಇಷ್ಟ, ಅದೂ ಸುನಂದು ಮಾಡಿದ್ರೇ ತುಂಬಾ ರುಚಿ.

ಯಾರೋ ಪಂಚೆ ಎಳದಂತಾಯಿಯ್ತು. ತಿರುಗಿ ನೋಡಿದ ಯಾರೂ ಇಲ್ಲ. 'ಭೋಡ್...ಭೋಡ್' ಗುಜರಾತಿ ಹೆಂಗಸು ಮಗುವನ್ನು ಕುಳಿತ ಕಡೆಯಿಂದಲೇ ಗದರಿಸಿದಳು. ಚಿಕ್ಕ ಮಗು ಬಂದು ಸುಂದರನ ಪಂಚೆ ಎಳೆಯುತ್ತಿತ್ತು. ಸುಂದರಗೆ ಆ ಮಗುವಿನ ಮೇಲೆ ತುಂಬಾ ಆಶೆಯಾಯ್ತು ಎತ್ತಿಕೊಳ್ಳಲು ಹೋದ ತಕ್ಷಣ ಕಿಟಾರೆಂದು ಕಿರಿಚಿಕೊಂಡು ತಾಯಿಯ ಬಳಿ ಓಡಿತು. ತಾಯಿ ಅದನ್ನು ಸಮಾಧಾನ ಮಾಡುತ್ತಾ ಸುಂದರನನ್ನು ನೋಡಿ ನಕ್ಕಳು.

ತನಗೆ ಮಗು ಆದ್ರೂ ಇಷ್ಟೇಂತ ಕಾಣ್ಸತ್ತೇ, ತಾನು ಎತ್ತಿಕೊಳ್ಳೋದಕ್ಕೆ ಹೋದ್ರೆ– ಅಳುತ್ತೋ ಏನೋ? ಅದ್ಯಾಕೋ ಮಕ್ಕಳು ತನ್ನ ಮುಖ ನೋಡಿದ್ರೇ ಅಳ್ತಾರೆ. ಸುನಂದ ಅಂತಾಳೆ,

"ನಿಮಗೆ ಮುದ್ದಿಸೋಕೆ ಬರೋಲ್ಲಾ"ಂತ.

ನಾನೆಷ್ಟು ಮುದ್ದಿಸ್ತೀನಿಂತ ಅವಳಿಗೆ ಗೊತ್ತಿಲ್ವೆ! ನಮ್ಮ ಮಗೂ ಕೂಡ ಹೀಗೇ ಇರಬಹುದು. ಕೆಂಪಗೆ, ದುಂಡಗೆ, ಬೆಣ್ಣೆ ಮುದ್ದಿಯ ಹಾಗೆ ಮೆತ್ತಗಿರಬಹುದು. ತಾಯಿಯ ಹಾಗೆ ಹುಟ್ಟಿದ್ರೇನೇ ಚೆನ್ನ, ಸುನಂದ ರೂಪರಾಶಿ. ಆದ್ರೇ ಸುನಂದ "ತಂದೆಯ ಹಾಗೆ ಮಗಳು ಹುಟ್ಟಿದ್ರೇ ಅದೃಷ್ಟಾ"ಂತ ಹೇಳ್ತಾಳೆ ಅಯ್ಯೋ ನನ್ನ ಹಾಗೆ ಬೇಡ. ಹೆಣ್ಣುಮಕ್ಕಳು ಕಪ್ಪಾಗಿ ಹುಟ್ಟಬಿಟ್ಟರೆ ತುಂಬಾ ಕಷ್ಟ. ಮದುವೇನೇ ಆಗೋಲ್ಲ, ಈಗ್ಲಿಂದ ದುಡ್ಡು ಸೇರಿಸಬೇಕು. ಕನಿಷ್ಟ ಪಕ್ಷ 'ಹತ್ತು' ಸಾವಿರ ಆದ್ರೂ ಮದುವೆಗೆ ಖರ್ಚು ಮಾಡಬೇಕು. ಪ್ರತಿ ಹಬ್ಬಕ್ಕೂ, ಅಳಿಯನಿಗೂ, ಮಗಳಿಗೂ ಉಡುಗೊರೆ ಕಳುಹಿಸಬೇಕು. ಆಮೇಲೆ ಅವಳ ಬಾಣಂತನ ಅದೂ ಇದೂ ಅಂತ ಖರ್ಚು ಇದ್ದೇ ಇರುತ್ತೇ. ಅಳಿಯ ಒಳ್ಳೆಯವನೇ ಸಾಕು, ಏನೂ ಕೇಳೋದಿಲ್ಲ. ಆದ್ರೂ ಮರ್ಯಾದೆ ಮಾಡಬೇಕಾಗಿದ್ದು ನಮ್ಮ ಕರ್ತವ್ಯ.

"ಏನೂ! ಭಾವಾವ್ರೇ ಕನಸು ಕಾಣ್ತಾ ನಿಂತಿದೀರಲ್ಲಾ" ಅಪರಿಚಿತ ಹೆಣ್ಣಿನ ಕಂಠ ಕೇಳಿದೊಡನೆ ಎಚ್ಚೆತ್ತು ಈ ಲೋಕಕ್ಕೆ ಮರಳಿ ಬಂದ ಸುಂದರ.

ಎದುರಿನಲ್ಲಿ ನಿಂತಿದ್ದ ಹೆಣ್ಣು ನಗುತ್ತಿದ್ದಳು. ಕೈಯಲ್ಲಿ ಒಂದು ಚಿಕ್ಕ ಪೆಟ್ಟಿಗೆ, ಇನ್ನೊಂದು ಕೈಲಿ ತಿಂಡೀ ಬುಟ್ಟಿ.

"ನೀನೇನೇ ಪಾರ್ವತಿ?"

ಕೇಳಲೇ ಬೇಡವೇ ಎಂದು ತಡೆದು ತಡೆಯದೆ ಕೇಳಿದ.

"ಅಂ... ಹಾಂ... ನಾನೇ ಸಾಕ್ಷಾತ್ ಪಾರ್ವತಿ. ಯಾಕೆ ಗುರ್ತು ಹಿಡೀಲಿಲ್ವೇ?"

"ಇಲ್ಲ Train ಬಂದಿದ್ದು ನನಗೆ ಗೊತ್ತಾಗಲೇ ಇಲ್ಲ.

"Train ನಿನ್ನ ಮೇಲೆ ಬಂದ್ರೂ ನಿನಗೆ ಗೊತ್ತಾಗ್ತಾ ಇರಲಿಲ್ಲ. ಯಾವ ಕಬ್ಬಿನ ರಸದಂಥಾ ಕನಸು ಕಾಣ್ತಾ ಇದ್ದೆಯೋ ಮಂಕುಭಾವಾ? Train ಬಂದೂ ಹೋಗೀ ಆಯ್ತು, ಹೂಂ! ಹೊರಡೀ ಸ್ವಾಮಿ! ನಾನು ಅಕ್ಕನ ನೋಡ್ಬೇಕು. ಇಂಥಾಗಂಡನ ಜೊತೇಲಿ ಹ್ಯಾಗೆ ಸಂಸಾರ ಮಾಡ್ತಾ ಇದಾಳೋ ಕೇಳ್ಬೇಕು."

ಪಾರ್ವತಿಯನ್ನು ಮೌನವಾಗಿ ಹಿಂಬಾಲಿಸಿದ ಸುಂದರ. ಸುನಂದ ಹೇಳಿದ್ದು ನಿಜ. ಹುಡುಗಿ ತುಂಬಾ ಚೂಟಿ, ಅವಳು ಟ್ಯಾಕ್ಸಿಯಲ್ಲಿ ನೋಡುತ್ತಾ ಇದ್ದಳು. ಆದರೆ ಅವನು ಮೂಕನಾಗಿದ್ದ.

"ಏನು ಭಾವಾ! ಈಗ ನೀನು ಕನಸು ಕಾಣ್ತಾ ಇದ್ದೀಯಾ! ನೀನು ಕನಸಿನ ಲೋಕದ ರಾಜ."

ಕಿಲಕಿಲ ನಕ್ಕಳು...ಅವನು ಅರ್ಥವಾಗದೆ ಅವಳ ಮುಖವನ್ನು ನೋಡಿದ. ಅಬ್ಬಾ ಆ ಮುಖದಲ್ಲಿ ಎಷ್ಟು ಕಾಂತಿ.

ಸುನಂದ ನಕ್ಕರೆ ಹಾಯಾಗಿ ಬೆಳದಿಂಗಳಂತೆ ಶೀತಲವಾಗಿರುತ್ತೆ. ಆದ್ರೇ ಈ ಹುಡುಗಿ ನಗುತ್ತಿದ್ದರೆ ಮೆರ್‌ಕ್ಯುರೀ ದೀಪಗಳ ಸಾಲನ್ನು ಒಂದೇ ಸಲ ಬೆಳಗಿದಂತೆ ಪ್ರಜ್ವಲಿಸುತ್ತೆ. ಸುನಂದ ನಂದಾದೀಪ, ಪಾರ್ವತಿ ವಿದ್ಯುದ್ದೀಪ.

"ಆ, ಆ ಮನೇ ಹತ್ರ ಮಲ್ಲಿಗೆ ಚಪ್ಪರ ಕಾಣ್ಣುತ್ತಲ್ಲಾ ಆ ಮನೆ."

ಸುಂದರ ಹೇಳಿದ ಮನೆಯ ಮುಂದೆ Taxi ನಿಂತಿತು.

ಸುನಂದ ಸಂತೋಷದಿಂದ ಆತುರವಾಗಿ Taxi ಬಳಿ ಬಂದಳು. ಪಾರ್ವತಿ ಉತ್ಸಾಹದಿಂದ ಚೆಂಡಿನಂತೆ ಕಾರಿಂದ ಹೊರಗೆ ಚಿಮ್ಮಿ ಅಕ್ಕನನ್ನು ಆಶೆಯಿಂದ ತಬ್ಬಿಕೊಂಡಳು. ಸುನಂದ ಅವಳನ್ನು ಒಳಗೆ ಕರೆದುಕೊಂಡು ಹೋದಳು.

Taxiಗೆ ಬಾಡಿಗೆ ಕೊಟ್ಟು ಒಳಗೆ ಬಂದ ಸುಂದರ ಅಡಿಗೇ ಮನೆಯಿಂದ ನಗು, ಮಾತು ಪ್ರವಾಹದಂತೆ ಬರುತ್ತಿತ್ತು. ಸುನಂದಳ ಮೃದು ಧ್ವನಿ ಪಾರ್ವತಿಯ ನಗುವಿನಲ್ಲಿ ಕೇಳಿಸುತ್ತಿರಲಿಲ್ಲ. ಅಬ್ಬಾ! ಎಷ್ಟು ನಗುತ್ತಾಳೆ ಈ ಹುಡುಗಿ!

ಸುಂದರ ಆಫೀಸಿಗೆ ಹೊರಟ. "ಸುನಂದಾ?" ಮೆಲ್ಲನೆ ಕೂಗಿದ. ಹೂಂ...ಹೂಂ... ಅವಳಿಗೆ ಕೇಳಿಸಲೇ ಇಲ್ಲ.

ಪಾರ್ವತಿ ಇಲ್ಲದಿದ್ದರೆ ಅವನೇ ಅಡಿಗೇ ಮನೆಗೆ ಹೋಗಿ ತನ್ನ "ಮಾಮೂಲು" ತೆಗೆದುಕೊಂಡು ಹೊರಟು ಹೋಗುತ್ತಿದ್ದ. ಆದ್ರೆ–ಈಗದು ಸಾಧ್ಯವಿಲ್ಲ.

"ಸುನಂದಾ?"

ಸ್ವಲ್ಪ ಗಟ್ಟಿಯಾಗಿಯೇ ಕೂಗಿದ. ಈ ಸಲ ಸುನಂದ ಬಂದಳು. ಅವಳ ಹಿಂದೆಯೇ ಪಾರ್ವತಿಯೂ ಬಂದಳು. ಸುಂದರ ಅವಳ ಕಡೇ ದೀನನಾಗಿ ನೋಡಿದ. ಆ ನೋಟದ ಅರ್ಥ ಅವಳಿಗೆ ತಿಳಿಯಿತು. ಆದ್ರೆ-ಪಾರ್ವತಿ ಇರುವಾಗ ಛೆ! ಛೆ!? ಸಾಧ್ಯವೇ ಇಲ್ಲ. ಕಣ್ಣಿನಲ್ಲೇ ಗಂಡನಿಗೆ "ಸುದ್ದಿ" ತಿಳಿಸಿದಳು.

"ಏನು ಭಾವಾ! ಆಫೀಸಿಗೆ ಹೊರಟ್ರಾ? ಹೋಗಿ ಬನ್ನಿ ರಾಯರೇ ಆದ್ರೇ ಬಸ್‌ಸ್ಟಾಂಡಿನಲ್ಲಿ ಕನಸು ಕಾಣ್ತಾ ನಿಂತಿರಬೇಡಿ. ಆಲಸ್ಯವಾಗಿದ್ದಕ್ಕೆ ಆಫೀಸರ್ ನಿಮ್ಮನ್ನು ತಬ್ಬಿಮುದ್ದಿಡೋದಿಲ್ಲ. ಒದ್ದು ಆಚೆಗೆ ಕಳಿಸ್ತಾರೆ."

ಎಷ್ಟು ಸಿಹಿಯಾಗಿ ಬೈದು ಬುದ್ಧೀ ಹೇಳುತ್ತಾಳೆ. ಈ ಪುಟ್ಟ ಹುಡುಗೀ.

"ಸುನಂದಾ? ಅಂ...ಮತ್ತೆ...ಸಾಯಂಕಾಲ ಏನೋ ತಗೊಂಡು ಬರ್ಬೇಕೂಂದ್ಯಲ್ಲಾ? ಬಂದು ಹೇಳ್ತೀಯಾ?"



" ಏನು ? ಭಾವಾವರ್ರೆ ಕನಸು ಕಾಣ್ತಾ ನಿಂತಿದ್ದೀರಲ್ಲಾ "

ಸುಂದರ ಸುನಂದನ ಕಡೆ ನೋಡುತ್ತಾ ಕೇಳಿದ.

"ಅಲ್ಲಿ ಬಂದು ಹೇಳೋದೆಲ್ಲಾ ಇನ್ನು ಮುಂದೆ ನಿಲ್ಲಿಸಿ ಮಹಾಶಯಾ! ಇಲ್ಲೆ ಹೇಳ್ತಾಳೆ ಬರ್ಕ್ಕೊಂಡ್ಹೋಗಿ."

ಉಕ್ಕಿ ಬರುವ ನಗುವನ್ನು ತಡೆದುಕೊಳ್ಳುತ್ತಾ ಹೇಳಿದಳು ಹೆಂಡತಿಯ ಮುದ್ದಿನ ತಂಗಿ.

"ಇಲ್ಲ ಬರ್ತೀನೀ."

ತಬ್ಬಿಬ್ಬಾಗಿ ಹೊರಟು ಹೋದ ಸುಂದರ. ಗೊಳ್ಳೆಂದು ನಕ್ಕಳು ಪಾರ್ವತಿ. ಜುಳು ಜುಳು ಹರಿಯುವ ನದಿಯಂತೆ ಕೇಳಿಸಿತು. ಆ ನಗು ಮನೆಯ ಮೆಟ್ಟಲಿಳಿಯುತ್ತಿರುವ ಸುಂದರನ ಕಿವಿಗಳಿಗೆ.

"ಪಾಪ! ನಿಮ್ಮ ಭಾವ ಮಗುವಿನಂಥಾವರು."

ಅಭಿಮಾನವಾಗಿ ಅಂದಳು ಸುನಂದ.

"ಯಾವ ವಿಚಾರದಲ್ಲಕ್ಕಾ?"

ಅಮಾಯಕಳಂತೆ ಕೇಳಿದಳು, ಆ ತುಂಟ ಹುಡುಗಿ.

"ಹೋಗೆ...ಪೋಕರೀ!...ನಿನ್ನ ತುಂಟುತನ ಸ್ವಲ್ಪಾನೂ ಕಡಿಮೆ ಆಗಿಲ್ಲ."

"ಹುಟ್ಟುಗುಣ ಸುಟ್ಟರೂ ಹೋಗದು." ಎಂದು ಹೇಳುತ್ತಿದ್ದ ತಂಗಿಯ ಮಾತನ್ನು ತಡೆದು.

"ಸಾಕು ಸುಮ್ಮನಿರು! ಮಾತು ಕಲಿತಿದ್ದೀಯಾ.. ಅಡಿಗೆ ಮಾಡಬೇಕು.ಹನ್ನೊಂದುಘಂಟೆಗೆ ಕ್ಯಾರಿಯರ್ ತಗೊಂಡು ಹೋಗೋದಿಕ್ಕೆ ಲಕ್ಷ್ಮೀ ಬರ್ತಾಳೆ."

ಎಂದು ಹೇಳುತ್ತಾ ಅಡಿಗೇ ಮನೇಕಡೆ ಹೋಗುತ್ತಿದ್ದ ಅಕ್ಕನ ಕೈಯನ್ನು ಹಿಡಿದು.

"ನನ್ನ ಅನುಮತಿ ಇಲ್ಲದೇ ನಿನಗೆ ಅಡಿಗೇ ಮನೆ ಪ್ರವೇಶವಿಲ್ಲಾ. ಅಡಿಗೇ ಕೆಲಸ ನನ್ನ ಇನ್‌ಚಾರ್ಜ್ ಮಗುವನ್ನು ಹೆತ್ತು ಭಾವನ ಕೈಗೆ ಕೊಡಬೇಕಾದ್ದು ನಿನ್ನ ಇನ್‌ಚಾರ್ಜ್. ನೀನು Rest ತಗೋ!!" ಎಂದಳು ಪಾರು.

"ಇಂಗ್ಲೀಷ್ ನೀನು ಎಲ್ಲೀ ಕಲಿತುಕೊಂಡೇ?"

"ಬೊಂಬಾಯಿಂದ ಅತ್ತಿಗೆ ಬಂದಿದ್ದಾರಲ್ಲಾ ಅವರ ಸಹವಾಸ. ನಾನು ಅತ್ತಿಗೇ ಹತ್ರ ಇಂಗ್ಲೀಷ್ ಕಲಿಯೋದಿಕ್ಕೆ ಷುರೂ ಮಾಡಿದ ತಕ್ಷಣ ಅವರು ಮರೆತು ಹೋದ್ರು. ಈಗ ನಮ್ಮ ಹಳ್ಳಿಯ ಅಚ್ಚ ಕನ್ನಡದಲ್ಲೀ ಅವರು ಮಾತಾಡೋದು." ತರಕಾರಿ ಬುಟ್ಟಿಯನ್ನು ಮುಂದಿಟ್ಟುಕೊಂಡು ಕುಳಿತಳು ಸುನಂದ.

"ಏನು ಮಾಡ್ಬೇಕು ಹೇಳಕ್ಕಾ! ಮಾಯಾ ಬಜಾರ್‌ನಲ್ಲಿ ಮಾಡಿದ ಹಾಗೆ ಮಾಡ್ತೀನಿ. ನೀನು ಹಾಗೆ ನೋಡಿ, ಹೀಗೆ ನೋಡೋದರೊಳಗೆ "ಭೋಜನಮು ತಯಾರು."

"ಏನೇ! ತೆಲಗೂ ಬೇರೆ ಕಲ್ತಿದ್ದೀಯಾ."

"ನಮ್ಮೂರು ಆಂಧ್ರ ಕರ್ನಾಟಕ ಬಾರ್‌ಡರ್. ದಿನಕ್ಕೇ ಎರಡೂ ಸೇರಿಸಿ ಮಾತಾಡ್ತೀನಿ. ಆದ್ರೆ ಸದ್ಯ ನನಗಿನ್ನೂ ಆ ಜೌ, ಜೌ, ಭಾಷೆ ಪೂರ್ತಿ ಬರಲಿಲ್ಲ. ಜಲ್ದೀ ಹೇಳಮ್ಮಾ?..."

"ಇದೇನೇ ಅವಾಂತರಾ! ಹಿಂದೀನೂ ಬರುತ್ತೀನೇ ನಿನಗೇ?"

"ಬರ್ಲೇಬೇಕು. ಇನ್ನು ಮುಂದೆ ಇದೇ ನಮ್ಮ ದೇಶಭಾಷೆ. ಬರೋಲ್ಲಾಂದ್ರು ಅವರು ಬಿಡೋಲ್ಲಾಂತ ಕಾಣ್ಸತ್ತೇ, ಅದಕ್ಕೆ ಈಗ್ಲಿಂದ ಕಸರತ್ತು... ಸರಿ...ಹೇಳಕ್ಕಾ ಏನ್ಮಾಡ್ಲೀ?"

"ಅಲೂಗಡ್ಡೆ ಪಲ್ಯಾ ಮಾಡಿ ಟೊಮ್ಯಾಟೊ ಸಾರು ಮಾಡು. ಅವರೆಹುಳೀ ಮಾಡಿ ಹಪ್ಪಳ ಸಂಡಿಗೆ ಕರಿದು ಬಿಡು. ಕೈ ಬಿಡುವಾದ್ರೆ ಪುದೀನಾ ಚಟ್ನಿ ಅರೆದು ಬಿಡು."

"ಇಷ್ಟೇ ತಾನೇ ಒಂದು ಲಾಜಾದಲ್ಲಿ ಮಾಡಿ ಮುಗಿಸಿ ಬಿಡುತ್ತೇನೆ. ನೀನು ಹೋಗಿ ಬೆಚ್ಚಗೆ ಮಲಕ್ಕೋ. ತುಂಬಾ ನಿಶ್ಯಕ್ತಳಾಗಿ ಕಾಣಿಸ್ತೀದ್ದೀಯ...ಹೋಗಕ್ಕಾ ಎದ್ದೇಳು ಮತ್ತೇಳು ಮತ್ತೇ!" ಪ್ರೀತಿಯಿಂದ ಅಕ್ಕರೆಯ ಅಕ್ಕನನ್ನು ಗದರಿಸಿದಳು ಆ ಚಿಕ್ಕ ಯಜಮಾನಿ.

ನಿಜವೇ ತಾನು ದಿನದಿನಕ್ಕೆ ನಿಶ್ಯಕ್ತಳಾಗುತ್ತಿದ್ದಾಳೆ. ಅವರಿಗೆ ತಿಳಿದರೇ ಹೆದರಿಕೊಳ್ಳುತ್ತಾರೆಂಬ ಭಯದಿಂದ ಗಂಡನ ಮುಂದೆ ನಗು ನಗುತ್ತಾ ಓಡಾಡುತ್ತಿದ್ದಾಳೆ ತಾನು. ಆದ್ರೇ ಹೆರಿಗೆಯ ದಿನ ನೆನೆಸಿಕೊಂಡರೇ ಯಾಕೋ ಮೈ ಕಂಪಿಸುತ್ತದೆ.

"ಯಾಕಕ್ಕಾ!ನಿನ್ನ ಕೈ ನಡುಗುತ್ತಾ ಅದೆಯಲ್ಲಾ? ನಾನು ತರ್ಕಾರಿ ಹೆಚ್ಚಿಕೊಳ್ತೀನೀ ನೀನು ಹೋಗಕ್ಕಾ!"

ತಂಗಿಯ ಮಾತನ್ನು ಕೇಳಿ ನಕ್ಕು ತನ್ನ ಕೋಣೆಗೆ ಹೋಗಿ ನಿಶ್ಚಿಂತೆಯಿಂದ ಮಲಗಿದಳು ಸುನಂದ.

× × ×

೩

"೪—೫೦ ಆಯ್ತು."

ಎಂದು ತನ್ನೊಳಗೇ ಹೇಳಿಕೊಳ್ಳುತ್ತಾ, ಬೀದೀ ಬಾಗಿಲಿಗೆ ಹೋಗಿ ನಿಂತಳು ಸುನಂದ. ಪಾರ್ವತಿಗೆ ಅರ್ಥವಾಗಲಿಲ್ಲ. ಅಕ್ಕ ಯಾಕೆ ೪ ಘಂಟೆಯಿಂದ ಬೀದೀ ಬಾಗಿಲಿಗೆ ಘಳಿಗೆಗೊಮ್ಮೆ ಹೋಗಿ ನೋಡಿ ಬರುತ್ತಿದ್ದಾಳೆ! ಈಗ ಅಲ್ಲೇ ಹೋಗಿ ನಿಂತಿದ್ದಾಳೆ.

"ಏನಕ್ಕಾ ನೋಡ್ತಾ ಇದ್ದೀಯ! ಬೀದಿಯಲ್ಲಿ ಏನಾದ್ರೂ ತಮಾಷೆ ನಡೀತಾ ಇದೆಯೇನು?"

ಅಕ್ಕನ ಬಳಿ ಬರುತ್ತಾ ಕೇಳಿದಳು ಪಾರ್ವತಿ.

ಅವಳ ಅಮಾಯಕತೆಗೆ ನೋಡಿ ನಕ್ಕಳು ಸುನಂದ.

"ಹೂಂ! ತಮಾಷೇನೇ...ಆದ್ರೇ ಈಗ ಅದು ನಿನಗೆ ಅರ್ಥವಾಗೋದಿಲ್ಲ. ಮದುವೆ ಆದ ಮೇಲೆ ಈ ತಮಾಷೆಯ ಅರ್ಥ, ಆನಂದ ಎರಡೂ ಅನು—ಭವಕ್ಕೆ ಬರುತ್ತೇ."

ಪಾರ್ವತಿ ಮೂತಿ ತಿರುಗಿಸಿದಳು.

"ನಾನು ಮದುವೇ ಮಾಡ್ಕೊಳ್ಳೋದಿಲ್ಲ ಹೋಗಕ್ಕಾ! ಮಾಡ್ಕೊಂಡ್ರೆ ಅತ್ತೆ, ಮಾವ ಯಾರೂ ಇಲ್ಲದ ಪರದೇಶೀನ ಮದ್ವೇ ಆಗ್ತೀನಿ."

ಸುನಂದ ಜೋರಾಗಿ ನಕ್ಕು ಕೇಳಿದಳು.

"ಅಂದ್ರೇ ನಿಮ್ಮ ಭಾವನಹಾಗಿರಬೇಕೂಂತ ತಾನೆ?"

"ಛಿ! ಛೀ!! ಭಾವನಂತಾ ಗಂಡ ಬೇಡ ತಾಯೀ. ಕಪ್ಪು ಕೃಷ್ಣ."

ಮುಖ ಸಿಂಡರಿಸಿಕೊಂಡಳು. ಆ ಮುದ್ದು ನಾದಿನಿ.

"ಕಪ್ಪು ಕಸ್ತೂರಿ ಕಣೇ ಹುಡಿಗೀ? ನಿಮ್ಮ ಭಾವ ಕಪ್ಪಾದ್ರೆ ಏನು? ಆ ಕಣ್ಣುಗಳಲ್ಲಿ ಇದೆ ಜಗನ್ಮೋಹ ನಾಸ್ತ್ರ"

" ಅಹಾ ಇದೆ ಇದೆ ಹರಿದ ವಸ್ತ್ರ " ಎಂದಳು ಪಾರ್ವತಿ ಚೇಷ್ಟೆಯಾಗಿ. ಆದರೆ ಭಾವನ ನಗುವ ಕಣ್ಣುಗಳು ಅವಳ ಮುಂದೆ ತೇಲಿ ಬಂದವು. ನಿಜ ಎಷ್ಟು ಅಂದವಾದ ಕಣ್ಣುಗಳು ಅವು!

"ಅದೋ ಅವರು ಬಂದ್ರು."

ಪೌರ್ಣಮಿಚಂದ್ರನನ್ನು ಕಂಡ ಕಡಲಿನಂತೆ ಉತ್ಸಾಹದಿಂದ ಉಕ್ಕುತ್ತಾ ನುಡಿದಳು ಸುನಂದ. ಅವಳ ಕಣ್ಣುಗಳಲ್ಲಿ ಆನಂದ ತುಂಬಿತ್ತು. ತುಟಿಯಲ್ಲಿ ನಗು ಚಿಮ್ಮಿತು. ಪಾರ್ವತಿಗೆ ಅರ್ಥವಾಗಲಿಲ್ಲ.

"ಯಾಕಿಷ್ಟು ಸಂತೋಷ! ಭಾವನ್ನು ನೋಡಿದ್ರೆ ಇಷ್ಟು ಸುಸಂತೋಷ ಆಗುತ್ತೇ?ಪ್ರತಿದಿನಾ ನೋಡೋ ಭಾವನೇ ತಾನೇ ಹೊಸದಾಗಿ ನೋಡ್ತಾ ಇಲ್ವಲ್ಲಾ ! ಅಕ್ಕನನ್ನು ಅವಳ ಆನಂದದಲ್ಲಿ ಬಿಟ್ಟು ಒಳಗೆ ಹೋದಳು ಪಾರ್ವತಿ.

ಸುಂದರ ಬೇಗ ಬೇಗ ನಡೆದು ಬಂದಂತಿದೆ. ಅವನ ಮುಖ ಕೆಂಪಗೆ ಕಂದಿದಂತಿತ್ತು. ಹಣೆಯಲ್ಲಿ ಬೆವರಿನ ಸಾಲು ಮುತ್ತಿನಂತೆ ಹೊಳೆಯುತ್ತಿತ್ತು. ಸುನಂದನ್ನ ನೋಡಿದ ತಕ್ಷಣ ಆಯಾಸವೆಲ್ಲಾ ಪರಿಹಾರವಾದಂತೆ ಹಾಯಾಗಿ ನಕ್ಕು ಹೆಂಡತಿಯನ್ನು ನೋಡಿದ. ಸೂರ್ಯನ ತಾಪಕ್ಕೆ ಹಿಮ ಕರಗಿದಂತೆ ಅವಳ ನಗುವಿನಲ್ಲಿ ಅವನ ಆಯಾಸವೆಲ್ಲಾ ಮಾಯವಾಯ್ತು. ಸುನಂದ ನಗು ನಗುತ್ತಾ ಗಂಡನ ಕೈಲಿದ್ದ ಫೈಲ್‌ಗಳನ್ನು ತೆಗೆದುಕೊಂಡಳು. ತನ್ನ ಕೈಲಿದ್ದ ತಿಂಡೀ ಪೊಟ್ಟಣ ಅವಳ ಕೈಗೆ ಕೊಡುತ್ತಾ "ನೀನು ಜಿಲೇಬಿ ತಿನ್ನಬೇಕೂಂತ ಆಶೆಯಾಗಿದೆ ಅಂತ ಹೇಳಿದ್ದೆಲ್ಲಾ ಅದಕ್ಕೆ ತಗೊಂಡು ಬಂದೆ. ಇದು ಮಲ್ಲಿಗೇ ಹೂವು ಸುನೀ ! ಈ ದಿನ ಆಫೀಸನಲ್ಲಿ ಕೆಲಸ ಮಾಡೋಕೇ ಆಗಿಲ್ಲ." ಎಂದ.

"ಯಾಕೆ?"

ಒಳಗೆ ಹೋಗುತ್ತಿದ್ದವಳು ತಿರುಗಿ ಕೇಳಿದಳು.

"ಅಯ್ಯೋ ಪಾಪ ಗೊತ್ತಿಲ್ವೇ? ಎಷ್ಟು ಕೆಟ್ಟ ಹೆಣ್ಣು ನೀನು. ನನ್ನ ಮಾಮೂಲು ನನಗೆ ಕೊಡದೆ ಬರೀ ಬಾಯಲ್ಲಿ ಕಳಿಸಿದೆಯಲ್ಲಾ! ಬಾ ಒಂದಕ್ಕೆ ಎರಡಾಗಿ ವಸೂಲು ಮಾಡ್ತೀನಿ."

ಹೆಂಡತಿಯನ್ನು ಹತ್ತಿರಕ್ಕೆ ಎಳೆದುಕೊಂಡ. ಸುನಂದ ಸಂತೋಷದಿಂದ ಕಣ್ಣು ಮುಚ್ಚಿ ಅವನ ಬಳಿ ಸಾರಿದಳು.

ಅಡಿಗೇಮನೆಯ ಬಾಗಿಲಲ್ಲಿ ಟಿಫನ್ ತಟ್ಟೆಯನ್ನು ಕೈಯಲ್ಲಿ ಹಿಡಿದು ನಿಂತಿದ್ದ ಪಾರ್ವತಿ ಮೆಲ್ಲನೆ ಕೆಮ್ಮಿದಳು.

ಸುಂದರನ ಮುಖ ಮತ್ತಷ್ಟು ಬೆವರಿತು.

"ಏನಿಲ್ಲ ಸುನೀ! ಕಣ್ಣಲ್ಲಿ ಏನೂ ಇಲ್ಲ. ಧೂಳು ಬಿದ್ದಿರಬೇಕು ನೀರು ಹಾಕ್ಕೊಂಡು ತೊಳದ್ರೇಹೋಗುತ್ತೆ."

ಎಂದು ಅವಸರ ಅವಸರವಾಗಿ ಹೇಳಿ ವೇಗವಾಗಿ ತನ್ನ ರೂಂಗೆ ಹೊರಟು ಹೋದ. ಪಾರ್ವತಿಯನ್ನು ಮನಸ್ಸಿನಲ್ಲೇ ಶಪಿಸಿಕೊಳ್ಳುತ್ತಾ–

"ಸಮಯಾಸಮಯಗಳು ತಿಳೀದೆ ಬರ್ತಾಳೆ" ಮೊದ್ದು ಹುಡುಗಿ ಪಾರ್ವತಿ ಗಟ್ಟಿಯಾಗಿ ನಕ್ಕಳು.

"ಬೈದುಕೊಳ್ಳಬೇಡ ಭಾವಾ!"

ಸುಂದರನಿಗೆ ಚಾವಟಿಯಲ್ಲಿ ಹೊಡೆದಂತಾಯಿತು. ದುಡುಕುತನದ ತುಂಟು ಹುಡುಗಿಗೆ ಯಾರ ಮನಸ್ಸಿನಲ್ಲಿ ಏನಿದೇಂತ ಗೊತ್ತಿರೋ ಹಾಗಿದೆ.

ಡ್ರೆಸ್ ಬದಲಾಯಿಸುತ್ತಿದ್ದ ಸುಂದರನ ಕಿವಿಗಳಿಗೆ ಪಾರ್ವತಿಯ ನಗುವಿನ ಅಲೆಗಳು ಬಂದು ಅಪ್ಪಳಿಸಿತು. ಅಬ್ಬಬ್ಬಾ! ನಗು ಮುಂದೆ, ಇವಳು ಹಿಂದೆ ಹುಟ್ಟಿರಬೇಕು, ಪ್ರತಿಯೊಂದಕ್ಕೂ ನಗು. ಸಮುದ್ರದ ಅಲೆಗಳಂತೆ ಬಿಡುವಿಲ್ಲದ ನಗು.

"ಭಾವಾ! ರೂಂನಿಂದ ನೀನು ಹೊರಗೆ ಬರ್ತಿಯೋ? ಅಥವಾ ನಾನೇ ಬಂದು ತಿನ್ನಿಸಬೇಕೋ?

ಮತ್ತೆ ಜೋರಾದ ನಗು. ನಗುವಿಗೆ ಸ್ವಲ್ಪ ವಿಶ್ರಾಂತಿ ಕೊಡಬಾರ್ದೇ.

"ಬರ್ತೀರಾ!"

ಸುನಂದ ಕರೆದಳು ಜೇನು ತುಂಬಿತ್ತು ಕಂಠದಲ್ಲಿ ಮಾತಿನಲ್ಲಿ ಮೃದುವಿತ್ತು, ನಯವಿತ್ತು, ಸುನಂದಳ ಕಂಠದಲ್ಲಿ ಜೇನು ಇದ್ದರೆ ಪಾರ್ವತಿಯ ಕಂಠದಲ್ಲಿ ದುಂಬಿ ಇದೆ. ಯಾವಾಗ್ಲೂ ಝುಂ, ಎಂದು ಕೇಳಿಸುತ್ತಲೇ ಇರುತ್ತೆ.

"ಕನಸಿನ ರಾಜ್ಯದ ಅಧಿಪತೀ! ನಿಮ್ಮ ರಾಜ್ಯದ ಬಡ ಪ್ರಜೆಗಳು ತಿಂಡಿ ತಿಂದಿಲ್ಲ"

ಗಟ್ಟಿಯಾಗಿ ಕೂಗಿದಳು ಪಾರ್ವತಿ. ತಕ್ಷಣ ಕಿಲಕಿಲನೆ ನಗು. ಸುಂದರ ಅಡಿಗೆಮನೆಗೆ ಧಾವಿಸಿದ.

ತಲೆ ಬಗ್ಗಿಸಿಕೊಂಡು ಪೂರಿಯನ್ನು ತಿನ್ನುತ್ತಿದ್ದ ಸುಂದರ. ನೀರು ತಂದು ಅವನ ಪಕ್ಕದಲ್ಲಿಟ್ಟು,

"ಮೆಲ್ಲಗೆ ತಿನ್ನಬಾರದೆ?" ಎಂದು ಹೇಳುತ್ತ ಅವನ ಬಳಿ ಕುಳಿತಳು ಸುನಂದ. ಉಕ್ಕುತ್ತಿರುವ ಹಾಲನ್ನು ತೆಗೆದು ಕೆಳಗಿಡುತ್ತಾ,

"ನಾಳೆ ನಿನಗೆ ರಜಾ ಅಲ್ಲವೇ?" ಎಂದು ಕೇಳಿದಳು ಪಾರ್ವತಿ.

"ಊಂ" ಎಂಬಂತೆ ತಲೆ ಆಡಿಸಿದ ಸುಂದರ.

"ಮತ್ತಿನ್ನೇನು ಕೆಲ್ಸ ಇಲ್ವಲ್ಲಾ?"

ಪಾರ್ವತಿ ಮತ್ತೆ ಕೇಳಿದಳು.

"ಇಲ್ಲ" ಎಂಬಂತೆ ತಲೆ ಆಡಿಸಿದ ಸುಂದರ.

"ಅದ್ಯಾಕೆ ಭಾವಾ! ಎಲ್ಲಾದಕ್ಕೂ ಕೋಲೇ ಬಸವನ ಹಾಗೆ ತಲೆ ಆಡಸ್ತೀಯಲ್ಲಾ"

ಎಂದು ಪಕ ಪಕ ನಕ್ಕಳು ನಾದಿನಿ.

ಸುನಂದ ಗಂಡನ ಕಡೆ ಪ್ರೀತಿಯಿಂದ ನೋಡುತ್ತಾ, "ಯಾಕೆ ನಿಮಗಿಷ್ಟು ನಾಚಿಕೆ ? ಪಾರ್ವತಿ ನಮ್ಮ ಮನೇ ಹುಡುಗಿ. ಅವಳ ಮುಂದೆ ನಾಚಿಕೆ ಯಾಕೆ?" ಎಂದು ಕೇಳಿದಳು.

"ನಾಚಿಕೆ ಅಲ್ಲಕ್ಕಾ?"

"ಮತ್ತೆ?"

"ಭಯ"

ಸುಂದರನ ಗಂಡಸುತನಕ್ಕೆ ಅವಮಾನವಾಯ್ತು. ಅವನು ತಲೆ ಎತ್ತಿ ಕೇಳಿದ.

"ಯಾಕೆ! ನೀನೇನು ಹುಲಿಯೇ? ಹೆದರ್ಕೊಳ್ಳೋಕೆ"

"ಹುಲಿಯ ನೋಡಿ ಹೆದರಬೇಕಾಗಿಲ್ಲ. ಧೈರ್ಯವಿದ್ದರೇ ಎದುರಿಸಲೂ ಬಹುದು. ಆದ್ರೇ ವಯಸ್ಸಿನಲ್ಲಿರೋ ಹುಡುಗಿಯರನ್ನು ಎದುರಿಸಿ ಮಾತನಾಡೋದು ತುಂಬಾ ಕಷ್ಟ"

ಕಾಫೀ ಕುಡಿಯುತ್ತಾ ಸುಂದರ ಕೇಳಿದ.

"ವಿಷಯ ಏನು ಹೇಳಬಾರ್ದೇ?"

"ನಾಳೆ ಅಕ್ಕನ್ನ Lady doctor ಹತ್ತಿರಕ್ಕೆ ಕರ್ಕೊಂಡು ಹೋಗ್ಬೇಕು"

ಪಾರ್ವತಿ ಹೇಳಿ ಮುಗಿಸಲಿಲ್ಲ. ಸುಂದರ ಕಾಫೀ ಕಪ್ಪು ಕೆಳಗಿಟ್ಟು ಗಾಬರಿಯಿಂದ ಹೆಂಡ್ತಿಯ ಮೈ ಮುಟ್ಟಿ ನೋಡಿದ.

"ಏನು ಸುನೀ! ಏನಾಗುತ್ತೇ ರಾಜಾ!! ಜ್ವರ ಬರೋ ಹಾಗಿದೆಯೋ? ಮೈ-ಕೈ ನೋವೇ? ಅಯ್ಯೋ ಮೈ ಸುಡೋ ಹಾಗಿದೆ. ಯಾಕೆ ಬೆಳಗ್ಗೆನೇ ಹೇಳಲಿಲ್ಲ ಸುನಿ!... ಇರು ಈಗ Taxi ತರ್ತೀನಿ"

ಅವಸರವಾಗಿ ಎದ್ದು ಹಾಗೆಯೇ ಓಡಿದ ಸುಂದರ.

"ಭಾವಾ! ಭಾವಾ!!" ಎಂಬ ಪಾರ್ವತಿಯ ಕೂಗು ಅವನ ಕಿವಿಗೆ ಬೀಳಲಿಲ್ಲ. ಪಾರ್ವತಿಗೆ ನಗು ತಡೆಯಲಾಗಲಿಲ್ಲ.

"ಒಳ್ಳೇ ಭಾವ! ಇವರೆಲ್ಲೊ ಒನೇ ತಿಂಗಳಲ್ಲೇ ಹುಟ್ಟಿರಬೇಕು!! ಸುನಂದಳ ಕಣ್ಣಲ್ಲಿ ನೀರು ತುಂಬಿತು. ಪಾರ್ವತಿಗೆ ಅಕ್ಕನನ್ನು ನೋಡಿ ಆಶ್ಚರ್ಯವಾಯಿತು.

"ಯಾಕಕ್ಕಾ ಅಳ್ತಿದ್ದೀಯಾ?"

"ಇಲ್ಲಮ್ಮಾ ಅಳ್ತಾಯಿಲ್ಲ. ಇದು ಆನಂದಬಾಷ್ಪ. ನಾನೆಷ್ಟು ಭಾಗ್ಯವಂತಳು. ನನ್ನ ಗಂಡ ಪ್ರೇಮಮೂರ್ತಿ. ನನ್ನ ಭಾಗ್ಯದ ದೇವರು. ಜನ್ಮಜನ್ಮಕ್ಕೂ ಇವರೇ ನನ್ನ ಪತಿಯಾಗಲಿ ಭಗವಾನ್"

ಪಾರ್ವತಿ ಅಕ್ಕನ ಕಣ್ಣನ್ನು ಮೃದುವಾಗಿ ಒರಸಿದಳು. Horn ಸದ್ದು ಕೇಳಿಸಿತು. ಸುಂದರ ಒಳಗೆ ಓಡಿ ಬಂದ. "ಹೂಂ! ಹೊರಡು ಡಾಕ್ಟರಿಗೆ ಫೋನ್ ಮಾಡಿದ್ದೀನೀ ತಕ್ಷಣ ಬರ ಹೇಳಿದ್ರು... ಮೆಲ್ಲಗೆ ನಡಿ. ಅವಳನ್ನ ಸ್ವಲ್ಪ ಹಿಡ್ಕೋ ಪಾರ್ವತಿ" ಎಂದು ಹೆಂಡತಿಯನ್ನು ಮಲ್ಲಿಗೆ ಹೂವಿನಂತೆ ಹಿಡಿದುಕೊಂಡು ಬಂದು ಕಾರಲ್ಲಿ ಕೂಡಿಸಿದ. ಮನೆಗೆ ಬೀಗ ಹಾಕಿ ಪಾರ್ವತಿ ಅವರ ಸಂಗಡ ಹೊರಟಳು.

ಡಾಕ್ಟರ್ ಪರೀಕ್ಷೆ ಮಾಡಿ ಹೊರಗೆ ಬಂದಳು.

"Mr ಸುಂದರ ನೀವು Phone ಮಾಡಿದ್ದು ನೋಡಿ ನಾನು ಹೆದರ್ಕೊಂಡುಬಿಟ್ಟೆ"

ಮಧ್ಯದಲ್ಲೆ ಕೇಳಿದ ಸುಂದರ,

"ಏನು ಭಯವಿಲ್ಲಾ ತಾನೆ?"

"Nothing to worry. ಇದೋ ಈ ಟಾನಿಕ್ಸ್ ತೆಗೆದು ಕೊಡಿ. Baby ಕರೆಕ್ಟಾಗಿ ಡೆವಲಪ್ ಆಗಿದೆ. ತುಂಬಾ ಬೆಳೆದುಬಿಟ್ರೆ delivery ತೊಂದ್ರೆ ಆಗುತ್ತೇ. ಹೋಗಿ ಬನ್ನಿ. ಆಗಾಗ್ಗೆ ಬಂದು Exam ಮಾಡಿಕೊಂಡು ಹೋಗು ಸುನಂದಾ"

ಡಾಕ್ಟರ್ ಹತ್ರ ಹೇಳಿ ಹೊರಟರು ಮೂರು ಜನ.

ಕಾರಲ್ಲಿ ಕುಳಿತ ಪಾರ್ವತಿ ಭಾವನ ಕಡೆ ನೋಡಿ,

"ಈಗ ಹೇಗಿದೇ ? " ಅಂದಳು. ಅರ್ಥವಾಗಲಿಲ್ಲ ಭಾವನಿಗೆ. ಅಕ್ಕ ನಗುತ್ತಾ ಕೇಳಿದಳು.

"ಏನೇ ಅದೂ!"

"ಅದೇ ಅಕ್ಕಾ ಇಷ್ಟೊತ್ತೂ ಅವರು ಅನುಭವಿಸಿದ ಯಾತನೆ. ಅಕ್ಕಾ ನನಗೊಂದು ಸಂದೇಹ. ನಿನ್ನ ಹೆರಿಗೇ ದಿನ ಭಾವನಿಗೂ ಹೆರಿಗೆ ಆಗುತ್ತೇನೊಂತ... ಪಾಪ ಪ್ರಾಣೀ ರೂಂ ಆಚೆ ಅಷ್ಟು ಒದ್ದಾಡುತ್ತೆ"

"ಸಾಕು ಸುಮ್ಮನಿರೇ! ನಿನ್ನ ಮದುವೇ ಆಗ್ಲಿ ನಿನ್ನ ಗಂಡಾನೂ ಹೀಗೇ ಒದ್ದಾಡ್ತಾರೆ"

"ಅಯ್ಯೋಯ್ಯೋ! ಹೆಂಡ್ತಿ ಸೆರಗನ್ನು ಹಿಡಿದು ಓಡಾಡೋ ಗಂಡ ಬೇಡಪ್ಪಾ ನನಗೆ." ಎಂದಳು ಪಾರ್ವತಿ. ಆದ್ರೆ ಮನಸ್ಸಿನಲ್ಲಿ ಭಾವನಂತಾ ಗಂಡ ತನಗೆ ಸಿಗುತ್ತಾನ್ಯೇ ? ಎಂದು ಒಂದು ನಿಮಿಷ ಯೋಚಿಸಿದಳು.

"ಹಾಗಾದ್ರೇ ಒಂದು ರೌಡಿಯನ್ನು ತಂದು ಮದುವೇ ಮಾಡಿದರಾಯ್ತು."

ಸ್ವಲ್ಪ ಸಲಿಗೆಯಿಂದ ಹೇಳಿದ ಸುಂದರ.

"ನೀನೇನೂ ನನಗೆ ವರ ಹುಡುಕಬೇಕಾಗಿಲ್ಲ." ಬಿಂಕವಾಗಿ ನುಡಿದಳು ಆ ಬಿಂಕದ ಹೆಣ್ಣು.

"ಹೋಗಲಿ ನಿನಗೆ ಎಂಥಾ ವರ ಬೇಕು ಹೇಳು." ಸುನಂದ ಪ್ರಶ್ನಿಸಿದಳು.

"ಸದ್ಯ ಪ್ರವರನಾಗದಿದ್ದರೇ ಸಾಕು." ಸುಂದರಗೆ ತುಂಬಾ ನಗು ಬಂತು.

## [ ೪ ]

ಸುನಂದಳಿಗೆ ೯ ತಿಂಗಳು ತುಂಬಿತು. ಪೂರ್ಣ ಚಂದ್ರನಂತೆ ಶೋಭಿಸುತ್ತಿದ್ದಳು. ಸುಂದರ ತನ್ನ ಹೆಂಡತಿಯ ರೂಪವನ್ನು ನೋಡಿ ಸಂತೋಷದಲ್ಲಿ ಮುಳುಗಿ ಈಜುತ್ತಿದ್ದ. ಅವನ ಆನಂದಕ್ಕೆ ಪಾರವೇ ಇಲ್ಲ...ರಾತ್ರಿಯಲ್ಲಿ ಅವನು ನಿದ್ದೆಯೇ ಮಾಡುತ್ತಿರಲಿಲ್ಲ. ಸುನಂದಳ ಗರ್ಭವನ್ನೇ ನೋಡುತ್ತಾ ಕುಳಿತುಕೊಳ್ಳುತ್ತಿದ್ದ...ಒಳಗೆ ಶಿಶು ಆ ಕಡೆ ಈ ಕಡೆ ಓಡಾಡುವಾಗ, ಹೊಸದಾಗಿ ಸರ್ಕಸ್ ನೋಡೋ ಹುಡುಗನಂತೆ ಸಂತೋಷದಿಂದ ನಗುತ್ತಿದ್ದ. ಒಂದೊಂದು ಸಲ ಅದರೊಡನೆ ಮಾತನಾಡಲು ಶುರು ಮಾಡುತ್ತಿದ್ದ.

"ಯಾಕೋ ಮಗು ಒದ್ದಾಡ್ತಿಯಾ? ಶಖೆ ಅಂತ ಕಾಣಿಸುತ್ತೆ ಅಲ್ವೆ? ಗಾಳಿ ಹಾಕಲೇ...ನೋಡಿದ್ಯಾ... ಸುಮ್ಮನೆ ಒದ್ಯಾಡ್ತಿಯಾ...ಕೈಕಾಲು ನೋವಾಗೋದಿಲ್ವೆ ಹೇಳು...ತುಸು ಹೊತ್ತು ಮಲಗಬಾರದೇ."

ಸುನಂದ ಒಂದು ರಾತ್ರಿ ಎಚ್ಚೆತ್ತು ನೋಡಿದಳು. ಗಂಡ ಯಾರೊಡನೆ ಮಾತನಾಡುತ್ತಿದ್ದಾನೆ ಎಂದು ಅವಳಿಗೆ ಅರ್ಥವಾಗಲಿಲ್ಲ. ಗಂಡ ಹೇಳಿದ ಮೇಲೆ ತಿಳಿಯಿತು. ನಾಚಿಕೆಯಿಂದ ನಕ್ಕು,

"ಛಿ. ಹಾಗೆಲ್ಲಾ ನೋಡ್ತಾ ಕೂತುಕೋಬಾರದು ನಿದ್ದೆ ಮಾಡಿ" ಎಂದು ಅವನನ್ನು ಬಲವಂತವಾಗಿ ಮಲಗಿಸಿದಳು. ಅವನು ಹೆಂಡತಿಯನ್ನು ನೋಡಿ, "ನಾಳೆ ಕಾಲೇಜಿಗೆ ಸೀಟಿಗೆ ಅಪ್ಲಾಯ್ ಮಾಡಬೇಕು ಅಂದ" ಸುನಂದಳಿಗೆ ಆಶ್ಚರ್ಯವಾಯ್ತು.

"ಯಾರಿಗೆ ಸೀಟು. "

"ಕೃಷ್ಣಪ್ರಿಯಳಿಗೆ."

"ಕೃಷ್ಣಪ್ರಿಯ ಯಾರು? "

"ಅಯ್ಯೋ! ಹುಚ್ಚಿ!! ನಮ್ಮ ಹುಡಿಗಿ ಕಣೇ!''

"ಸಾಕು ನನಗಲ್ಲ ಹುಚ್ಚು...ಅಲ್ಲಾಂದ್ರೆ! ಮಗನೋ ಮಗಳೋ ಗೊತ್ತಿಲ್ಲದೇನೇ ನಾಮಕರಣ ಮಾಡಿ, ಬೆಳೆಸಿ ಕಾಲೇಜಿನಲ್ಲೂ ಸೇರಿಸಿಬಿಟ್ಟಿರಲ್ಲಾ...ಪಾರ್ವತಿ ಹೇಳಿದ್ದಾಗೆ ನೀವು ಕನಸಿನ ಲೋಕದ ರಾಜ."

"ಹೌದು, ನಿನ್ನ ತಂಗಿ ಕಂಜೀಷ್ಟೆ ಲೋಕದ ಸಾಮ್ರಾಜ್ಞಿ. ನನ್ನ ರಾಣಿ! ನಿನಗೆ ಮಗನೋ ಅಥವಾ ಮಗಳೋ ಹುಟ್ಟೋದಂತೂ ಗ್ಯಾರಂಟಿ. ಅವರಿಗೆ ವಿದ್ಯಾಭ್ಯಾಸ ಮಾಡಿಸಬೇಕಾದ್ದು ನಮ್ಮ ಪ್ರಥಮ ಕರ್ತವ್ಯ. ಈಗ್ಲಿಂದ ಕಾಲೇಜ್ ಸೀಟಿಗೆ ಅಪ್ಲೈಮಾಡಿದರೇನೆ ಸೀಟ್ ಸಿಗುತ್ತೆ. ಅದೂ ಇಂಫ್ಲೂಯನ್ಸ್ ಇದ್ದರೆ." ಸುನಂದ ನಕ್ಕಳು ಮಧುರವಾಗಿ.

"ಸುನಿ! ನನಗೆ ಹೆಣ್ಣು ಇಷ್ಟ...ನಿನಗೆ"

"ನನಗೂ ಹೆಣ್ಣೇ ಇಷ್ಟ!"

"ಅದ್ರೆ ಗಂಡು ಹುಡುಗ ಇದ್ದರೇ ಚೆನ್ನ...ಅವನನ್ನು ಕ್ರಿಕೆಟ್ ಪ್ಲೇಯರ್ ಮಾಡಬೇಕೂಂತ ಇಷ್ಟ. ..ಸುನೀ ನನಗೆ ಗಂಡು ಇಷ್ಟ...ನಿನಗೇ? "

"ನನಗೂ ಗಂಡು ಮಗುವೇ ಇಷ್ಟ...ಇನ್ನು ಮಲಗಿ." ಸುನಂದ ಕಣ್ಣು ಮುಚ್ಚಿ ಮಲಗಿದಳು. ಆದರೆ ಸುಂದರಗೆ ನಿದ್ದೆ ಬರಬೇಕಲ್ಲಾ.

"ಸುನೀ"

"ಊಂ"

"ನನಗೆ ಗಂಡು, ಹೆಣ್ಣು ಎರಡೂ ಇಷ್ಟ...ಇಬ್ಬರನ್ನು ಒಂದೇ ಸಲ. "

ಸುನಂದ ನಸುಕೋಪದಿಂದ ನುಡಿದಳು. "ನೀವು ಒಳ್ಳೇ ಹುಡುಗನಂತೆ ಮಲಗಿ ನಿದ್ದೆಮಾಡ್ತೀರಾ? ಇಲ್ಲಾ ಪಾರ್ವತೀನ ಕರೆದು ಹೇಳಲೇ?"

ಜವಾಬು ಬರಲಿಲ್ಲ. ಸುನಂದ ತಿರುಗಿ ನೋಡಿದಳು. ಸುಂದರ ರಗ್ಗು ಪೂರ್ತಿ ಹೊದ್ದುಕೊಂಡು ಮಲಗಿದ್ದ.

* * *

ಪಾರ್ವತಿ ಸುನಂದಳನ್ನು ಅಕ್ಕನಂತೆ ಕಾಣುತ್ತಿರಲಿಲ್ಲ. ಮಗಳಂತೆ ಕಂಡು ಸೇವೆಮಾಡುತ್ತಿದ್ದಳು. ಅಕ್ಕನನ್ನು ಒಂದು ಕೆಲಸಕ್ಕೂ ಬಿಡುತ್ತಿರಲಿಲ್ಲ. ತಾನೂ ನಕ್ಕು ಮಿಕ್ಕವರನ್ನು ನಗಿಸಿ, ಆ ಮನೆಯಲ್ಲಿ ಸಂತೋಷರಾಜ್ಯವನ್ನು ಸ್ಥಾಪಿಸಿದ್ದಳು.

ಈಗೀಗ ಸುಂದರ ಪಾರ್ವತಿಯನ್ನು ಧೈರ್ಯವಾಗಿ ಕೀಟಲೇ ಮಾಡಿ, ಅವಳನ್ನು ಜಗಳಕ್ಕೆ ಎಳೆಯುತ್ತಿದ್ದ. ಅವನು ಸೋತು ಹೋದರೇ ಅವಳ

ದುಂಡಾದ, ಮಾಟವಾದ ತಲೆಯ ಮೇಲೆ ಹೊಡೆದು ಓಡಿಹೋಗಿ ಹೆಂಡತಿಯ ಸೆರಗಿನಲ್ಲಿ ಮರೆಯಾಗು ತ್ತಿದ್ದ. ಭಾವ ನಾದಿನಿಯರ ಆಟವನ್ನು ನೋಡಿ ಸಂತೋಷದಿಂದ ನಗುತ್ತಿದ್ದಳು ಸುನಂದ.

ಸುನಂದಳ ತಾಯಿ ತಂದೆ ಹಳ್ಳಿಯಿಂದ ಬಂದು ಸೀಮಂತದ ಶಾಸ್ತ್ರ ಮುಗಿಸಿಕೊಂಡು ಹೊರಟು ಹೋದರು. ಮಗಳ ಸಂಸಾರದಲ್ಲಿ ತುಂಬಿದ್ದ ಸಂತೋ ಷವನ್ನು ನೋಡಿ ಹೆತ್ತ ಹೃದಯ ಹಿರಿಹಿರಿ ಹಿಗ್ಗಿತು. ಈ ಬಾರಿ ಸುಂದರ ಮಾವನವರನ್ನು ಅತ್ಯಂತ ಪ್ರೀತಿ ಯಿಂದ ಕಂಡ. ಸುಬ್ಬರಾಯರು ಸಂತುಷ್ಟರಾದರು. ಮಗಳ ಸೌಭಾಗ್ಯಕ್ಕೆ ಕಾರಣನಾದ ಅಳಿಯನ ಮೇಲೆ ಅವರಿಗೆ ಅತ್ಯಂತ ಪ್ರೀತಿ ಆಯ್ತು.

ಈಗ ಸುನಂದ ಪೂರ್ಣ ಸುಖಿ. ಆಗ ತಾನೇ ಗಂಗೆ ಯಲ್ಲಿ ಮಿಂದುಬಂದ ಭಕ್ತಳಂತೆ ಮುಖ ಕಳೆಕಳೆ ಯಾಗಿತ್ತು. ತನ್ನ ಜನ್ಮದಲ್ಲಿ ಎಲ್ಲಾ ಸುಖಗಳು, ಲಭಿಸಿದಂತೆ ಅವಳು ತೃಪ್ತಿಯಿಂದ ಇದ್ದಳು.

ದೇವರಂಥಾ ಗಂಡ, ಸ್ವರ್ಗದಂಥಾ ಸಂಸಾರ, ಪ್ರೀತಿಯಿಂದ ಕಾಣುವ ತಂಗಿ, ವಾತ್ಸಲ್ಯದ ಮೂರ್ತಿ ಗಳಾದ ತಂದೆ ತಾಯಿ, ಇನ್ನು ಕೆಲವೇ ದಿನಗಳಲ್ಲಿ ತನ್ನನ್ನು "ಅಮ್ಮಾ" ಎಂದು ಕರೆಯಲು ಮಗು... ಓ! ತಾನು ಎಷ್ಟು ಅದೃಷ್ಟವಂತಳು.

ಸುನಂದಳ ಸಂಸಾರನೌಕೆ ಆನಂದಸಾಗರದಲ್ಲಿ ಹಾಯಾಗಿ ಹೋಗುತ್ತಿತ್ತು.

*        *        *

ಒಂದು ದಿನ ಭಾನುವಾರ...ಸುಂದರ ಸುನಂದಳಿಗೆ ಹಣ್ಣು ತರಲು ಮಾರ್ಕೆಟ್ಟಿಗೆ ಹೋಗಿದ್ದ...ಪಾರ್ವತಿ ಅಕ್ಕನಿಗೆ ಹಾರ್ಲಿಕ್ಸ್ ಕಲಿಸಿ ಕೊಡುತ್ತಿದ್ದಳು.

"ಕಣಿ ಹೇಳ್ತೀನಿ ಅವ್ವಾ ಕಣಿ...ನಡದಿದ್ದ ಕಣಿ, ನಡಿಯೋ ಕಣಿ...ಎಲ್ಲಾ ಬಿಡದೇ ಹೇಳ್ತೀನ್ರವ್ವಾ ಒಸಿ ಬನ್ನೀ ತಾಯಿ" ಹೊರಬಾಗಿಲಲ್ಲಿ ಕಣಿ ಹೇಳುವವಳು ಕೂಗಿದಳು.

ಪಾರ್ವತಿಗೆ ಏನೋ ಹೊಳೆಯಿತು "ಬಾ ಅಕ್ಕಾ! ನಿನ್ನ ಕೈ ತೋರ್ಸು. ಯಾವ ಮಗೂಂತ ಕೇಳೋಣ" ಅಕ್ಕನ ಕೈ ಹಿಡಿದು ಕರ್ಕೊಂಡು ಹೋದಳು ಪಾರು, ಬೇಡ ಬೇಡಾಂದ್ರೂ ಕೇಳದೆ.

"ಒಳಗೆ ಬಾಮ್ಮಾ" ಪಾರ್ವತಿ ಅವಳನ್ನು ಒಳಗೆ ಆಹ್ವಾನಿಸಿದಳು. ಕಣಿ ಹೇಳುವವಳು ಅಚ್ಚುಕಟ್ಟಾಗಿ ಕುಳಿತುಕೊಂಡು ಬೆಳ್ಳಿಕಡ್ಡಿಯನ್ನು ಬುಟ್ಟಿಯಿಂದ ತೆಗೆದಳು.

"ನೋಡು...ನಮ್ಮ ಅಕ್ಕನಿಗೆ ಯಾವ ಮಗು ಆಗುತ್ತೆ ಹೇಳು."

"ತಾಯಿ! ಛಾಮುಂಡೀ" ಎಂದು ಭಕ್ತಿಯಿಂದ ಒಮ್ಮೆ ಕಣ್ಣು ಮುಚ್ಚಿ ತೆಗೆದು, ಸುನಂದಳ ಕೈ ನೋಡಿ..."ನನ್ನಂಥಾ ಹೆಣ್ಣು ಆಗುತ್ತವ್ವಾ ಈ ಅಮ್ಮ ನಿಗೆ" ಎಂದಳು.

"ಕಪ್ಪಾ...ಕೆಂಪಾ...ಕಪ್ಪೂಂದ್ರೇ ಈಗ್ಗೇ ಹೇಳಿ ಬಿಡು. ನಾನು ಊರಿಗೆ ಹೊರಟು ಹೋಗ್ತೀನಿ. ಕೆಂಪಾದ್ರೆ ಮಗುವಿನ ಕೈಲಿ ನಿನಗೆ ಒಂದು ರೂಪಾಯಿ ಕೊಡಿಸ್ತೀನಿ."

ಕಣಿಯವಳು ನಕ್ಕಳು..."ನೀನೂ ಅಕ್ಕನ ಅಂಗೆ ಆದಮ್ಯಾಕೆ ಬರ್ತೀನವ್ವಾ.ಆಗ ಹೇಳ್ತೀನಿ ನಿನಗೆ ಎಂಥಾ ಮಗು ಹುಟ್ಟುತ್ತೆ. ಕಪ್ಪಾ, ಕೆಂಪಾ, ದಪ್ಪವಾ ಸಣ್ಣಗೇಂತ."

ಪಾರ್ವತಿ ಅಸಹ್ಯದಿಂದ "ಥೂ" ಈ ಅವಸ್ಥೆ ನನಗೆ ಬೇಡಾ ತಾಯಿ! ನೀನೇನು ಬರಬೇಕಾಗಿಲ್ಲ" ಎಂದು ಮುಖ ತಿರುಗಿಸಿಕೊಂಡಳು.

ಸುನಂದ ಪಾರ್ವತಿಯ ಕೈ ಹಿಡಿದು, ಕಣಿ ಹೇಳು ವವಳಿಗೆ ತೋರಿಸುತ್ತಾ ಅಂದಳು.

"ನೋಡಮ್ಮಾ! ನನ್ನ ತಂಗಿಗೆ ಯಾವಾಗ ಮದು ವೇಂತ ಹೇಳು."

ಅವಳು ಪಾರ್ವತಿಯ ಕೈಯನ್ನೊಮ್ಮೆ ತೀಕ್ಷ್ಣ ವಾಗಿ ನೋಡಿ,

"ಈ ವರ್ಷವೇ ಕಂಕಣಬಲಯಿದೆ ತಾಯಿ. ಗಂಡನ್ನ ಕಿರುಬೆಟ್ಟಿನಲ್ಲಿ ಆಡಿಸ್ತಾಳೆ ಈ ಪುಣ್ಯಾತಿ ಗಿತ್ತಿ."

ಪಾರೂಗೆ ಸಿಟ್ಟು ಬಂತು. "ಸಾಕು ನಿನ್ನ ಸುಳ್ಳಿನ ಕಂತೆ. ನಮ್ಮ ತಂದೆ ನನಗೆ ಬರೋ ವರ್ಷ ಮಾಡ ಬೇಕೂಂತ ಇರೋವಾಗ, ಇವಳು ಈ ವರ್ಷ ಅಂತಾಳೆ."

"ಹೌದ್ರವ್ವಾ...ನಾನು ಸುಳ್ಳು ಹೇಳಾಕಿಲ್ಲ... ಚಾಮುಂಡೇ ಆಣೆ. ಈ ವರ್ಷ ನಿಮಗೆ ಕಂಕಣಬಲ ಐತೆ."

ಸುನಂದ ಒಂದು ರೂಪಾಯಿ ತಂದುಕೊಟ್ಟಳು. ಕಣಿಯವಳು, ಸುನಂದಳನ್ನು ಬಾಯಿ ತುಂಬಾ ಹೊಗಳಿ ಹರಿಸಿ ಹೋದಳು.

"ದಂಡ ಮಾಡಿದೆ ಒಂದು ರೂಪಾಯಿ" ಪಾರ್ವತಿ ಗೊಣಗಿದಳು.

"ನೀನು ತಾನೇ ಕರೆದೆ..."

"ಕರೆದರೆ ಮಾತ್ರ ಒಂದು ರೂಪಾಯೇ ಕೊಡೊ- ದಾ... ಅದೂ ಬರೀ ಸುಳ್ಳಿನ ಕಂತೆ ಹೇಳಿದವಳಿಗೆ.. ಈ ವರ್ಷವಂತೆ... ನನಗೆ ಮದುವೇಂತೆ... ಎಲ್ಲಾಗುತ್ತೆ !!"

"ಆಗಲಿಲ್ಲವಲ್ಲಾಂತ ಕೋಪವೇ ಪಾರೀ?" ಚೇಷ್ಟೆ ಯಾಗಿ ಕೇಳಿದಳು ಸುನಂದ. "ನಿನಗೆ ಅಷ್ಟು ಆಶೆ ಯಾಗಿದ್ದರೆ ನಿಮ್ಮ ಭಾವನ್ನೇ ಮಾಡ್ಕೊ, ಕೈ ತುಂಬಾ ಸಂಪಾದನೆಯಿದೆ. ಚೆನ್ನಾಗೂ ಇದ್ದಾರೆ."

ಪಾರು ಕೋಪದಿಂದ ಅಕ್ಕನ ಬೆನ್ನ ಮೇಲೆ ಮೃದುವಾಗಿ ಹೊಡೆದು,

"ನೋಡಕ್ಕಾ, ಆ ರಾಗಿಮುದ್ದೆ ಭಾವ ನಿನ್ನ ಕಣ್ಣಿಗೆ ಮನ್ಮಥ... ಆದ್ರೆ, ನನ್ನ ಕಣ್ಣುಗಳಿಗೆ ಕೋತಿ" ಎಂದು ಒಳಗೆ ಓಡಿದಳು.

"ಆದ್ರೆ, ಆ ಕೋತಿಯ ಮಾತು, ನಗು ನೆನಸಿ ಕೊಂಡರೆ ಯಾಕೋ ಹೃದಯವೆಲ್ಲಾ ಸಿಹಿ ಆಗುತ್ತೆ."

x        x        x        x

"ಅಯ್ಯೋ ! ಅಮ್ಮಾ !" ಎಂದು ಮೆಲ್ಲನೆ ಮುಲುಗುವ ಧ್ವನಿ ಕೇಳಿ ಪಾರು ಅಕ್ಕನ ಬಳಿಗೆ ಓಡಿ ದಳು. ಸುನಂದ ಹಾಸಿಗೆಯಲ್ಲಿ ಹೊರಳಾಡುತ್ತಿದ್ದಳು. ತುಟಿಗಳು ಅದುರುತ್ತಿತ್ತು. ಭರಿಸಲಾರದ ಬಾಧೆ ಯಿಂದ ಅದನ್ನು ಕಚ್ಚುತ್ತಿದ್ದಳು. ದೇಹ ನಡುಗು ತ್ತಿತ್ತು. ಭರಿಸಲಾರದ ವೇದನೆಯಿಂದ ಮುಖ ಕಿವುಚಿಕೊಳ್ಳುತ್ತಿದ್ದಳು. "ಏನಕ್ಕಾ, ಏನಾಗುತ್ತಕ್ಕ?" ಅಕ್ಕನನ್ನು ತಬ್ಬಿಕೊಂಡು ಆತುರಳಾಗಿ ಕೇಳಿದಳು.

"ಅಯ್ಯೋ, ಭರಿಸಲಾರೆ ಪಾರೀ... ಈ ವೇದನೆ ಭರಿಸಲಾರೆ" ಅಳುವ ಧ್ವನಿಯಲ್ಲಿ ನುಡಿದಳು ಸುನಂದ.

"ಆಗೋದಿಲ್ಲ ಪಾರೂ... ನನ್ನಿಂದ ಆಗೋಲ್ಲ" ಪಾರ್ವತಿ ಅಕ್ಕನ ತಲೆಯ ಕೆಳಗೆ ದಿಂಬನ್ನು ಸರಿಮಾಡಿ ಹೊರಗೆ ಓಡಿದಳು. "ಯಾಕೆ ಇನ್ನೂ ಬರ್ಲೇಯಿಲ್ಲ ಈ ಭಾವ... ಸಮಯಕ್ಕೆ ಸರಿಯಾಗಿ ಭಾವ, ಅಭಾವ" ಎಂದು ಮನಸ್ಸಿನಲ್ಲೇ ಭಾವನನ್ನು ಬೈದು ಕೊಳ್ಳುತ್ತಾ ಹೊರ ಬಾಗಿಲಲ್ಲಿ ನಿಂತು ನೋಡಿದಳು.

ಸದ್ಯ, ಸುಂದರ ಬರುತ್ತಿದ್ದ...

"ಭಾವ ! ಬೇಗ ಬಾ" ಕೂಗಿದಳು ಪಾರ್ವತಿ. ಸುಂದರಗೆ ನಗು ಬಂತು...



" ನನ್ನ ತಂಗಿಗೆ ಯಾವಾಗ ಮದುವೆ ಅಂತ ಹೇಳು "

ಈ ಘಾಟಿ ಹುಡುಗಿ ನನ್ನ ಚೇಷ್ಟೆ ಮಾಡೋದಕ್ಕೆ ಬೀದಿಗೂ ಬಂದುಬಿಟ್ಟಳಲ್ಲಾ... ಅವನು, ನಡಿಗೆಯ ವೇಗವನ್ನು ತಗ್ಗಿಸಿದ...

ಪಾರೂಗೆ ಸಿಟ್ಟು ಬಂತು.

"ಭಾವ ! ಸ್ವಲ್ಪ ಬೇಗ... " ಮತ್ತೆ ಕಿರುಚಿದಳು.

"ಪರ್‍ವಾಯಿಲ್ಲ, ತಂದೆ ಹಾಗೆ ಮಗಳಿಗೂ ಕಂಚಿನ ಕಂಠ." ಸುಂದರ ನಡಿಗೆ ಮತ್ತಷ್ಟು ನಿಧಾನವಾಯ್ತು...

ಪಾರ್ವತಿಗೆ ಅಳು ಬರೋ ಹಾಗಾಯ್ತು... ತನ್ನ ಬಲವನ್ನೆಲ್ಲಾ ಉಪಯೋಗಿಸಿ ಕಿರುಚಿದಳು.

"ಅಕ್ಕನ್ನ, ಡಾಕ್ಟರ್ ಹತ್ರ ಕರ್‍ಕೊಂಡು ಹೋಗಬೇಕು " ಅಷ್ಟೆ ! ಸುಂದರ ಅಲ್ಲಿಂದಲೇ ತಿರುಗಿ ಅಂಬಿನಂತೆ ಓಡಿದ ಟ್ಯಾಕ್ಸಿ 'ಸ್ಟ್ಯಾಂಡ್‌ಗೆ.

"ಹೆಂಡ್ತಿ ಅಂದ್ರೆ ಎಷ್ಟು ಪ್ರೀತಿ." ಪಾರ್ವತಿಯ ಹೆಣ್ಣಿನ ಹೃದಯದಲ್ಲಿ ಒಂದರೆಕ್ಷಣ ಅಸೂಯೆ ಇಣಿಕಿ ನೋಡಿತು... ಅದನ್ನು ಓಡಿಸಿತು ಅವಳ ಅಂತರಾತ್ಮ. ಪಾರ್ವತಿ ಅಕ್ಕನ ಬಳಿ ಓಡಿದಳು..

x x x x

ನರ್ಸಿಂಗ್ ಹೋಂ ಸೇರುವುದರೊಳಗೆ ಸುನಂದ ಯಮಯಾತನೆ ಅನುಭವಿಸಿದಳು. ಪಾರ್ವತಿ ಅವಳನ್ನು ಪ್ರೀತಿಯಿಂದ ಸಮಾಧಾನ ಮಾಡುತ್ತಿದ್ದಳು... ನಗಿಸಲು ಪ್ರಯತ್ನಿಸಿ ವಿಫಲಳಾಗುತ್ತಿದ್ದಳು. ಸುಂದರ ಹೆಂಡತಿಯನ್ನು ಮೃದುವಾಗಿ ಅಪ್ಪಿ ಕುಳಿತಿದ್ದ. ಅವನಿಗೆ ಅಳು ಬಂತು.

ಇಷ್ಟು ವೇದನೆ ಸುನಂದ ಅನುಭವಿಸಬೇಕೂಂತ ತಿಳಿದಿದ್ದರೇ, ಅವನು ಮಕ್ಕಳೇ ಬೇಡ ಎಂದು ಹೇಳುತ್ತಿದ್ದ. ಇಷ್ಟು ಯಾತನೆ ಅನುಭವಿಸಿ ಮಗುವಿಗೆ ಜನ್ಮ ಕೊಡದಿದ್ದರೆ ಯಾವ ದೇವರು ಅಳುತ್ತಿದ್ದ ? ಮಕ್ಕಳಿಲ್ಲದಿದ್ದರೆ ಏನು ? ಅಕ್ಕಿಗೆ ಕ್ಷಾಮ ಬಂದಿರೋ ಕಾಲದಲ್ಲಿ ಹೀಗೆ ಮಕ್ಕಳನ್ನು ಭೂಮಿಗೆ ಇಳಿಸೋದು ನ್ಯಾಯವಾಗಿ ಅಪರಾಧವೇ ! ನಮ್ಮ ಅರಸಾಂಗದವರು ಒಳ್ಳೆಯವರು. ಅದಕ್ಕೆ ಮಕ್ಕಳನ್ನು ಹೆರಬಾರದೂಂತ ಬಿಲ್ ಪಾಸ್ ಮಾಡಿಲ್ಲ ಸದ್ಯ. ಈ ಮಕ್ಕಳು, ಹುಟ್ಟಿ ಉದ್ಧಾರ ಮಾಡ್ತಾರೇ ಅನ್ನೋದು ಯಾವ ನಂಬಿಕೆ... ಹೆಣ್ಣಾದ್ರೆ ಮದುವೆ ಆಗಿ ಗಂಡನ ಮನೆ ಸೇರ್‍ತಾಳೆ. ತಾಯಿತಂದೆಯರನ್ನು ಸುಲಭವಾಗಿ ಮರೆತು ಹೋಗ್ತಾಳೆ. ಗಂಡಾದ್ರೆ, ಮದುವೆ ಆದ ತಕ್ಷಣ ಹೆಂಡತಿಯ ಹೆಜ್ಜೆಯಲ್ಲಿ ಹೆಜ್ಜೆಯಿಟ್ಟು ಅವಳ ಸೆರಗಿನ ನೆರಳಿನಲ್ಲಿ ಬಾಳ್ತಾನೆ. ಒಂದ್ವೇಳೆ ಆಸ್ತಿಯಿದ್ದರೆ, ಹಾಳುಮಾಡಿ ಅಪ್ಪನ ಕೈಗೆ ಚಿಪ್ಪು ಕೊಡ್ತಾನೆ. ಛಿ ! ಯಾಕೋ ಮಕ್ಕಳು. ಮಕ್ಕಳಿಲ್ಲದಿದ್ದರೆ ಒಂದೇ ಚಿಂತೆ "ಮಕ್ಕಳಿಲ್ಲಾಂತ". ಆದ್ರೆ ಮಕ್ಕಳಾದ್ರೆ ನೂರಾರು ಚಿಂತೆ.

"ಈಗೊಲ್ಲ ಕನಸೇನಾ ! ನರ್ಸಿಂಗ್ ಹೋಂ ಬಂತು ಇಳಿ ಭಾವ" ಎಂದು ಪಾರ್ವತಿ ಎಚ್ಚರಿಸಿದಾಗಲೇ ಅವನಿಗೆ ನೆನಪು ತಿರುಗಿತು.

ಡಾಕ್ಟರ್ ಸುನಂದಳನ್ನು ಪರೀಕ್ಷೆಮಾಡಿ "ಲೇಬರ್ ಪೇನ್ ಸುರುವಾಗಿದೆ. ಅಡ್ಮಿಟ್ ಮಾಡಿಬಿಡಿ" ಎಂದು ಹೇಳಿ, ಅಲ್ಲೇ ಇದ್ದ ನರ್ಸ್‌ನ ನೋಡಿ "ಮೇರಿ, ರೂಂ ನಂಬರ್, ೩೯ ನಲ್ಲಿ ಅಡ್ಮಿಟ್ ಮಾಡು" ಎಂದು ಹೇಳಿ ಹೊರಟುಹೋದಳು. ಪಾರ್ವತಿ ಹೊರಗೆ ಬಂದಳು. ಕೆಂಪೇರಿದ ಕಣ್ಣುಗಳೊಡನೆ ಸುಂದರ ನಿಂತಿದ್ದ. ಅವನು ಅತ್ತಿರಬೇಕು ಎಂದುಕೊಂಡಳು ಪಾರ್ವತಿ.

"ಏನೂ ಭಯವಿಲ್ಲಾಂದ್ರು. ರಾತ್ರಿಗೋ ಅಥವಾ ಬೆಳಗ್ಗಿನ ಜಾವಕ್ಕೋ ಆಗಬಹುದೂಂದ್ರು". ಒಣಗಿದ ತುಟಿಗಳನ್ನು ಎಂಜಲು ಮಾಡಿಕೊಂಡ ಸುಂದರ.

"ಈಗ ಎಲ್ಲಿದ್ದಾಳೆ? "

"ರೂಮ್ ನಂಬರ್ ೩೯ ನಲ್ಲಿ. ನೀನು ಹೋಗಿ ಡಾಕ್ಟರನ್ನು ನೋಡು ಭಾವ."

ಸುಂದರ ಡಾಕ್ಟರ ಕಂಡು ಮಾತನಾಡಿ ಸುನಂದಳನ್ನು ನೋಡಲು ಬಂದ. ಅವನ ಕಣ್ಣಲ್ಲಿ ನೀರು ತುಂಬಿತು. ಹೂಬಳ್ಳಿಯನ್ನು ಕಿತ್ತು ಬಿಸಿಲಿನಲ್ಲಿ ಬಿಸಾಕಿದಂತಿತ್ತು ಅವಳ ಬಾಡಿದ ಮುಖ... ನೋವನ್ನು ತಡೆದುಕೊಳ್ಳಲು, ತುಟಿಯನ್ನು ಕಚ್ಚಿ ಕಚ್ಚಿ ಅವಳ ತುಟಿಗಳು, ರಕ್ತದಂತೆ ಕೆಂಪೇರಿತ್ತು. ಮುಖ ಕಪ್ಪಾಗಿತ್ತು. ಸುಂದರ ಹೆಂಡತಿಯ ಬಳಿ ಕುಳಿತು, ಪ್ರೀತಿಯಿಂದ ಅವಳ ತಲೆ ಸವರುತ್ತಾ "ಸುನೀ ! ತುಂಬಾ ಕಷ್ಟವಾಗಿದೇ ರಾಜಾ? " ಎಂದು ಕೇಳಿದ. ಸುನಂದ ಬಲಹೀನವಾಗಿ ನಕ್ಕಳು.

"ಇಲ್ಲ ! ನೀವ್ಯಾಕೆ ಹೀಗಿದ್ದೀರಿ..." ಎಂದಳು ಅವನ ಕೆದರಿದ ಗುಂಗುರು ಕ್ರಾಫನ್ನು ಕೈಗಳಿಂದ ಸರಿ ಮಾಡುತ್ತಾ.

"ನಾನು ತುಂಬಾ ಕೆಟ್ಟವನು ಅಲ್ಲವೇ ಸುನೀ? "

"ನೀವು ನನ್ನ ಭಾಗ್ಯದ ದೇವರು"

"ಒಳ್ಳೇ ದೇವರು, ಈ ಮುದ್ದು ದೇವರು ಕೊಟ್ಟ ವರ ಪಡಿಯೋದಕ್ಕೆ ಸಾಯಂಕಾಲದಿಂದ ಕಷ್ಟಪಡ್ತಾ ಇದ್ದೀಯಾ" ಎಂದಳು ತುಂಟಿ ಪಾರ್ವತಿ. ಸುಂದರಗೂ ನಗೂ ಬಂತು... ಹೆಂಡ್ತಿಯೊಡನೆ ಅವನೂ ನಕ್ಕ.

"ಇನ್ನು ನೀವು, ಪಾರ್ವತಿ ಮನೆಗೆ ಹೋಗಿ ಊಟ ಮಾಡಿ. ನೋಡು ಪಾರಿ, ರಾತ್ರಿ ಅವರಿಗೆ ಹಾಲು ಕಾಯಿಸಿ ಸ್ವಲ್ಪ ಕೇಸರಿ ಹಾಕಿ ಕೊಡು" ಪಾರ್ವತಿಗೆ ಯಾಕೋ ಹೋಗಲು ಇಷ್ಟವಾಗಲಿಲ್ಲ.

"ಇಲ್ಲಕ್ಕಾ ! ನಾನು ಇಲ್ಲೇ ಇರ್‍ತೀನಿ"

"ಛೆ, ಛೆ, ಬೇಡ... ಅವರಿಗೆ ಊಟಕ್ಕೆ ತೊಂದ್ರೆ ಆಗುತ್ತೆ..." ಬಲವಂತ ಪಡಿಸಿ ಅವರಿಬ್ಬರನ್ನೂ ಕಳುಹಿಸಿದಳು ಸುನಂದ.

ಸುಂದರನ ಹಿಂದೆ ನಡೆಯುತ್ತಿದ್ದ ಪಾರ್ವತಿ ಮೌನವಾಗಿದ್ದಳು, ಮಾತು ಮರೆತವಳಂತೆ ಸುಂದರ ಕೂಡಾ ಅವಳೊಡನೆ ಹರಟೆ ಶುರು ಮಾಡಲು ಏಕೋ ಸಂಕೋಚಿಸಿದ.

ಈ ಊರಲ್ಲಿ ಎಷ್ಟು ದೊಡ್ಡ ಬಸ್ಸುಗಳಿವೆ. ಅದೂ, ಆ ಕೆಂಪನೆಯ ದೊಡ್ಡ ಬಸ್ಸು ನೋಡುತ್ತಿದ್ದರೆ, ರಾಕ್ಷಸನಂತೆ ಕಾಣುತಿತ್ತು. ಆ ಬಸ್ಸಿನ ಹಿಂದೆ ಒಂದು ಪುಟ್ಟ ಕಾರು ಹೋಗುತ್ತಿತ್ತು. ಆ ಕಾರನ್ನು ನೋಡಿ ಪಾರ್ವತಿಗೆ ಕನಿಕರವಾಯ್ತು. ರಾಕ್ಷಸ ಬಲವಂತದಿಂದ ಎತ್ತಿಕೊಂಡು ಹೋಗುವ ರಾಜಕುಮಾರಿಯಂತೆ. ಅದು ಬಲವಂತದಿಂದ ಬಸ್ಸನ್ನು ಹಿಂಬಾಲಿಸುತ್ತಿದೆ ಎಂದುಕೊಂಡಳು. ಆ ಕಡೆಯಿಂದ ಲಾರಿ, ಈ ಕಡೆಯಿಂದ ಬಸ್ ಬರುತ್ತಿತ್ತು. ಎದುರು ಕಡೆಯಿಂದ ಕಾರುಗಳೆಲ್ಲಾ ತನ್ನ ಕಡೆಯೇ ಬರುತ್ತಿರುವಂತೆ ಕಂಡಿತು. ಬೆದರಿ ಹೋದಳು ಆ ಹಳ್ಳಿ ಹುಡುಗಿ... "ಭಾವಾ".... ಭಯದಿಂದ, ಸುಂದರನನ್ನು ತಬ್ಬಿಕೊಂಡಳು...

ಸುಂದರನ ಮೇಲೆ ಯಾರೋ ಪನ್ನೀರು ಚಿಮುಕಿಸಿದಂತಾಯ್ತು. ಮಲ್ಲಿಗೆಯಮಾಲೆ ಕೊರಳಿಗೆ ಹಾಕಿದಂತಾಯ್ತು. ಹೃದಯ ತುಂಟತನವಾಗಿ ನಕ್ಕಿತು.

ಅಪ್ಪಿದ ಅಪ್ಸರೆಯನ್ನು ಮತ್ತಷ್ಟು ಹತ್ತಿರಕ್ಕೆ ಸೆಳೆದುಕೊಳ್ಳುತ್ತಾ "ಏನೂ ಭಯವಿಲ್ಲ– ಪಾರೂ" ಎಂದ. ಆದ್ರೆ ಅವನ ಕೊರಳು ಮಾತ್ರ ಭಯದಿಂದಲೋ ಅಥವಾ ಉದ್ವೇಗದಿಂದಲೋ ನಡುಗುತ್ತಿತ್ತು. ಆದ್ರೆ ಪಾರು, ಅಂದುಕೊಂಡಳು "ಓ! ಭಾವನ ಕೊರಳಲ್ಲಿ ಅಮೃತವಿದೆ." ದಾರಿಗರು ಯಾರೋ ಹೇಳಿದರು. "ಸ್ವಲ್ಪ ದಾರಿ ಬಿಡ್ತೀರಾ!" ಪಾರ್ವತಿ ಬೆದರಿ ದೂರ ಸರಿದಳು... ಆ ದಾರಿಗನನ್ನು ಮನಸಾರೆ ಶಪಿಸಿಕೊಂಡ ಸುಂದರ...

ಆಮೇಲೆ ಇಬ್ಬರ ನಡೆ ನಿದಾನವಾಯ್ತು. ಮಾತು ಬೇಕಿಲ್ಲ... ನಗು ಬರಲಿಲ್ಲ...

"ಬೇಗ ಮನೆಗೆ ಹೋಗಿ, ಊಟ ಮಾಡಿ... ಆಮೇಲೆ... ಆಮೇಲೆ" ಸುಂದರನ ಯೋಜನೆ ಅಲ್ಲಿಗೆ ನಿಂತಿತು. ಕೋತಿ ಮನಸ್ಸು ಕುಣಿಯಿತು. ಅಂತರಾತ್ಮ ಅದನ್ನು ಬೈದು ಕೂರಿಸಿತು.

ಪಾರ್ವತಿ ಹೃದಯ ಹೇಳಿತು... "ನೋಡು, ನಿನಗಿನ್ನೂ ಮದುವೆ ಆಗಿಲ್ಲ... ದೇಹವನ್ನು ಮಾತ್ರವಲ್ಲ, ಹೃದಯವನ್ನೂ ಪವಿತ್ರವಾಗಿ ಅರ್ಪಿಸಬೇಕು ನಿನ್ನ ಪತಿಗೆ." ಪಾರ್ವತಿ ಭಾರವಾಗಿ ನಿಟ್ಟುಸಿರು ಬಿಟ್ಟಳು ಅಷ್ಟೇ. ಬೀಗ ತೆಗೆದು ಒಳಗೆ ಬಂದು ಸ್ವಿಚ್ ಹಾಕಿದಳು ಪಾರ್ವತಿ.

ಸುಂದರ ಆ ಬೆಳಕಿನಲ್ಲಿ ಪಾರ್ವತಿಯನ್ನು ನೋಡಿದ. ಅವನ ಕಣ್ಣಿಗೆ ಪಾರ್ವತಿ ಹೊಸದಾಗಿ ಕಂಡಳು.

ಅವಳ ನೀಳರೆಪ್ಪೆಗಳು ಭಾರದಿಂದ ನೆಲವನ್ನು ನೋಡುತ್ತಿದ್ದವು. ಮುಖದಲ್ಲಿ ಏನೋ ಕಾಂತಿ, ಕೆನ್ನೆಗಳಲ್ಲಿ ಕೆಂಪು ಹರಡಿತ್ತು. ಕಪ್ಪನೆಯ ಗುಂಗುರು ಕೂದಲು ಹಣೆಯಲ್ಲಿ ಬಿದ್ದು ಅಂದವಾಗಿ ಕಾಣುತ್ತಿತ್ತು.

ಸುಂದರ ಬಲವಂತಾಗಿ ಕಣ್ಣುಗಳನ್ನು ಮುಚ್ಚಿ "ಛಿ! ಗಂಡು ಹೃದಯವೇ ನಿನ್ನನ್ನು ಸುಡಬೇಕು." ಎಂದುಕೊಂಡ.

ಪಾರ್ವತಿ ನಿಧಾನವಾಗಿ ತಲೆ ಎತ್ತಿ ಅವನನ್ನು ನೋಡಿ ಅಡಿಗೆ ಮನೆಗೆ ಬೇಗ ಬೇಗ ಹೊರಟು ಹೋದಳು.

ಅವಳ ಬಳೆಗಳ ಸದ್ದು ದೂರವಾದ ನಂತರ ಅವನು ಕಣ್ಣು ತೆರೆದು ನೋಡಿದ. ಅಲ್ಲಿ ಅವಳಿಲ್ಲ... ಶೂನ್ಯತೆ ತುಂಬಿತ್ತು ಅಲ್ಲಿ. ಒಂದು ಕ್ಷಣ ಅಲ್ಲಿಯೇ ನಿಂತು, ನಂತರ ತನ್ನ ಕೋಣೆಗೆ ಹೋಗಿ ಬಾಗಿಲು ಹಾಕಿಕೊಂಡ.

ಬಾಗಿಲು ಅಗುಳಿ ಹಾಕಿದ್ದ ಸದ್ದು ಕೇಳಿ ತಲೆ ಬಗ್ಗಿಸಿಕೊಂಡು ಕುಳಿತಿದ್ದ ಪಾರ್ವತಿ ದಿಗ್ಗನೆ ತಲೆ ಎತ್ತಿ ನೋಡಿದಳು. "ಪಾಪ" ಎಂದುಕೊಂಡಿತು ಅವಳ ಮನಸ್ಸು. ಪರೀಕ್ಷೆಗೆ ಹೆದರಿ ಬಚ್ಚಿಟ್ಟುಕೊಳ್ಳುವ ಚಿಕ್ಕ ಹುಡುಗನಂತೆ ಸುಂದರ ರೂಂನಲ್ಲಿ ಬಚ್ಚಿಟ್ಟುಕೊಂಡಿದ್ದು ನೋಡಿ ಅವಳಿಗೆ ಅವನ ಮೇಲೆ ಕನಿಕರವಾಯ್ತು.

"ಊಟ ಮಾಡಲ್ವೇ ಭಾವಾ" ಮಮತೆಯ ಕರೆಯಿತ್ತಳು ನಾದಿನಿ.

"ಅಬ್ಬಾ" ಅವಳ ಧ್ವನಿ ಕಿವಿಗಳಿಗೆ ಮಾತ್ರ ಸೋಂಕುವುದಿಲ್ಲ, ನೇರಾಗಿ ಹೃದಯಕ್ಕೇ ಸೋಂಕಿ ಅಲ್ಲಿವಸಂತಗಾನ ಹಾಡುತ್ತೆ." ಎಂದುಕೊಂಡ ಸುಂದರ.

ಛಿ! ಹೇಡಿಯಂತೆ ತಾನೇಕೆ ಬಚ್ಚಿಟ್ಟುಕೊಳ್ಳಬೇಕು. ' ಬಾಗಿಲು ತೆಗೆದು ಹೋಗಿ ಅವಳ ಮುಂದೆ ಕುಳಿತು ಮಾತನಾಡಬೇಕು. "ಓ! ಪಾರಿ ಎಷ್ಟು ಮುದ್ದಾಗಿ, ಅಂದವಾಗಿ ಮಾತಾಡುತ್ತಾಳೆ. ಮಧುರವಾದ ಸಂಗೀತ ಕೇಳಿದಂತಾಗುತ್ತೆ. ಆ ಮಾತುಗಳನ್ನು ಜನ್ಮ ಜನ್ಮಕ್ಕೂ ಕೇಳುತ್ತಾ ಕುಳಿತುಕೊಳ್ಳಬಹುದು. ಅವಳ ನಗುವಿನಲ್ಲಿ ಪ ಪಂಚವನ್ನೇ ಮರೆಯ

ಬರುತ್ತದೆ. ಆ ನಗುವಿನಲ್ಲಿ ಏನಾಯಿತೆ... ಪಾತಳ್ಳಿ ಅನ್ನುತಿದೆ." ಸುಂದರ ಎದ್ದು ಬಾಗಿಲು ತೆಗೆಯಲು ಅಗುಳಿಯ ಮೇಲೆ ಕೈ ಹಾಕಿದ. ವಿವೇಕ ಅವನನ್ನು ತಡೆಯಿತು. ಆಸೆ ಮುನ್ನುಗ್ಗಿತು. ಒಂದು ನಿಮಿಷ ಹಾಗೆಯೇ ನಿಂತ. ವಿವೇಕಕ್ಕೂ, ಆಸೆಗೂ ಒಂದು ಪುಟ್ಟ ಯುದ್ಧ ನಡೆಯಿತು. ಕಡೆಗೆ ಆಸೆ ಸೋತಿತು. ವಿವೇಕ ವಿಜಯದಿಂದ ನಕ್ಕಿತು. ಸುಂದರ ತಿರುಗಿ ಬಂದು ಹಾಸಿಗೆಯಲ್ಲಿ ಬಿದ್ದುಕೊಳ್ಳುತ್ತಾ ಹೇಳಿದ. "ಬೇಡ ಪಾರ್ವತಿ ನನಗೆ ಹಸಿವಿಲ್ಲ ನೀನು ಊಟ ಮಾಡು."

ಅಡಿಗೆ ಮನೆಯಲ್ಲಿ ಕುಳಿತಿದ್ದ ಪಾರ್ವತಿ ತಟ್ಟೆ ತೆಗೆದಿಟ್ಟು, ದೀಪ ಆರಿಸಿ ಮಲಗಿದಳು. ಆದರೆ ನಿದ್ದೆ ಅವಳ ಮೇಲೆ ಸಿಟ್ಟಾಗಿತ್ತು.

"ಸುನಂದಾ... ಸುನಂದಾ! ನನ್ನನ್ನು ಕಾಪಾಡು... ನನ್ನನ್ನು ದ್ರೋಹಿಯನ್ನಾಗಿ ಮಾಡ ಬೇಡ...ಬೇಡ ಸುನಂದಾ ಬೇಡ. ಈ ಅಗ್ನಿ ಪರೀಕ್ಷೆಗೆ ನನ್ನನ್ನು ಇನ್ನು ಮುಂದೆ ಗುರಿ ಮಾಡಬೇಡ" —ಸುಂದರ ಆರ್ತನಾಗಿ ಹೇಳುತ್ತಾ ಸುನಂದಳ ಫೋಟೋವನ್ನು ಎದೆಗಪ್ಪಿಕೊಂಡ.

× × ×

## ( ೫ )

ಬೆಳಗ್ಗೆ ಕಾಫಿ ತಗೊಂಡು ರೂಂ ಬಾಗಿಲನ್ನು ಮೆಲ್ಲನೆ ತಟ್ಟಿದಳು ಪಾರ್ವತಿ. ಬಾಗಿಲು ತೆಗೆಯಿತು. ಅವಳಿಗೆ ಆಶ್ಚರ್ಯವಾಯ್ತು. ರಾತ್ರಿ ಅವನು ಬಾಗಿಲು ಚಿಲುಕ ಹಾಕಿದ್ದ ಸದ್ದು ತಾನು ಕೇಳಿದ್ದಳು. ಆದ್ರೆ ಈಗ ಬಾಗಿಲು ತೆರೆದಿದೆ. ಹಾಗಾದ್ರೆ ರಾತ್ರಿ ಸುಂದರ ಎದ್ದಿದ್ದನೇ? ಮಲಗಿದ್ದ ನನ್ನನ್ನು ನೋಡಿರಬಹುದೇ? ಅಯ್ಯೋ... ನಾಚಿಕೆಯಿಂದ ಅವಳ ಮೈ ಬೆವ ರಿತು.

ಅವಳ ತಾಯಿ ಎಷ್ಟೋ ಬಾರಿ ಅವಳ ಬಳಿ ಹೇಳು ತ್ತಿದ್ದಳು. "ಪಾರವ್ವಾ ನೀನು ಮಲಗಿ ನಿದ್ದೆ ಮಾಡುವಾಗ ದೃಷ್ಟಿ ಬಡಿಯೋ ಹಾಗೆ ಕಾಣಿಸ್ತಿಯಾ ತಾಯಿ! ಅಪ್ಪಿ ನಿನ್ನ ಕೆನ್ನೆ ಕಚ್ಚಬೇಕು ಅನ್ನಿಸುತ್ತೆ ನೋಡು.'' ತಾಯಿ ಹಾಗೆ ಹೇಳಿದಾಗಲೆಲ್ಲಾ ನಸು ಕೋಪದಿಂದ "ಛಿ ನಿನಗೆ ನಾಚಿಗೇನೇ ಇಲ್ಲಮ್ಮಾ" ಎಂದು ಓಡಿ ಹೋಗುತ್ತಿದ್ದಳು. ಹಾಗಾದ್ರೇ... ನಿದ್ರಿ ಸುತ್ತಿದ್ದ ನನ್ನನ್ನು ನೋಡಿ ಸುಂದರ ಏನೆಂದು ಕೊಂಡಿರಬಹುದು...? ಪಾರ್ವತಿಯ ಮೈ ಸಿಹಿ ನೆನಪಿ ನಿಂದ ಕಂಪಿಸಿತು. ಪಾರ್ವತಿ ಭಾವನ ಕಡೆ ನೋಡಿ ದಳು.

ಅತ್ತ ಅತ್ತ ಸುಸ್ತಾಗಿ ಮಲಗಿ ನಿದ್ರಿಸುವ ಮಗು ವಿನಂತೆ ಮಲಗಿದ್ದ ಸುಂದರ ಬಲವಾದ ಆತನ ತೋಳುಗಳು ದಿಂಬನ್ನು ತಬ್ಬಿತ್ತು... ಅಲ್ಲಿ ನಾನಿದ್ದರೆ! ಬಯಕೆ ಒಮ್ಮೆ ಹೇಳಿತು. ಬಲವಂತದಿಂದ ಅದನ್ನು ಓಡಿಸಿದಳು. ಅವನ ವಿಶಾಲವಾದ ಎದೆಯನ್ನು ಅಪ್ಪಿ ದ್ದ ಆ ಕಟ್‌ಬನಿಯನನ್ನು ನೋಡಿ ನಿಟ್ಟುಸಿರು ಬಿಟ್ಟಳು ಪಾರು.

ಆಸೆಗಳನ್ನು, ಬಯಕೆಗಳನ್ನು ಅಡಗಿಸಿ, ಮೆಲ್ಲನೆ ಅವನ ಬಳಿ ಹೋಗಿ "ಭಾವ" ಎಂದು ಕರೆದಳು. ಅವಳ ತುಟಿಯಲ್ಲಿ ನಗು ತುಳುಕಿತು.

[illegible] ಕಾಫಿ" ಅವನು ಕಣ್ಣು [illegible] ಕೈ [illegible]

ಹೊಡೆತ ಹೆಚ್ಚಾಯ್ತು. ತಲೆಯ ಮೇಲೆ ಯಾರೋ ಮಂಜಿನ ಗಡ್ಡೆಯನ್ನು ಸುರಿದಂತೆ ನಡುಗಿದಳು.

ಸುಂದರ ಅವಳ ಮೆತ್ತನೆಯ ಕೈಯನ್ನು ತುಟಿಯ ಬಳಿಗೆ ತೆಗೆದುಕೊಂಡು ಹೋದಾಗ... ಪಾರ್ವತಿಯ ಅಂತರಾತ್ಮ ಕಿರುಚಿತು... "ಪಾರ್ವತಿ, ತಡೆದುಬಿಡು... ಆ ಕೈಯನ್ನು ಹೋಗಲು ಬಿಡ ಬೇಡ... ಬೇಗ, ಪಾರ್ವತಿ... ಬೇಗ" ಪಾರ್ವತಿ ಥಟ್ಟಿಂದು ಕೈ ಕೊಸರಿ ದೂರ ಹೋಗಿ ನಿಂತಳು. ಆಕೆ ಅಂತರಾತ್ಮವನ್ನು ದೂಷಿಸಿತು. "ನಿನ್ನಿಂದ ನಾನು ಸಾಯುತ್ತಿದ್ದೇನೆ... ನೀನು ಸಾಯ ಬಾರದೇ" ಅಂತರಾತ್ಮ ನಕ್ಕು ನುಡಿಯಿತು. "ನಾನಿರೋವರ್ಗೂ ನಿನ್ನಾಟ ನಡಿಯೋದಿಲ್ಲ."

ಸುಂದರ ಕಣ್ಣು ಬಿಟ್ಟು ನೋಡಿದ. ಅಲ್ಲಿ ಅವನ ಹೆಂಡತಿ ಇರಲಿಲ್ಲ ಹೆಂಡತಿಯ ತಂಗಿ ನಿಂತಿ

### ಭೂದೇವಿಯ ಅನುಭವ




ಎಲ್ಲರೂ ಲಾಲಿಸಿರಿ ಎಂದಳು ಧರಿತ್ರಿ :
ಸಾಮ್ರಾಜ್ಯವೆನ್ನುವುದು ರೇಶಿಮೆಯ ಛತ್ರಿ.
ಬಿರುಗಾಳಿ ಬರುವನಕ ನೋಡಲಿಕೆ ಚೆಂದ.
ಆ ಮೇಲೆ ರೇಶಿಮೆಯ ಛತ್ರಿ ಗೋವಿಂದ !

—ದಿನಕರ ದೇಸಾಯಿ

ದ್ದಳು. ಹಾಗಾದ್ರೆ ಇಷ್ಟಕ್ಕೂ ಮುಂಚೆ ಅವನು ಹಿಡಿ ದಿದ್ದ ಕೈಗಳ ಸ್ವಂತದಾರಳು ಇವಳೇನೇ! ಸುಂದರ ನಾಚಿಕೆಯಿಂದ ತಲೆ ಬಗ್ಗಿಸಿದ.

ಅವನ ಸ್ಥಿತಿ ನೋಡಿ ಪಾರ್ವತಿಗೆ ನಗು ಬಂತು. ನಗುತ್ತಾ ಅಂದಳು. "ಭಾವಾ ಕಾಫಿ ಕುಡಿದು ತಲೆ ಬಗ್ಗಿಸಿಕೊಂಡು ಕುಳಿತುಕೋ... ತಗೋ ಕಾಫಿ..."

ಬೆಳ್ಳನೆಯ ದುಂಡಾದ ಕೈಗಳಿಂದ ಕಾಫಿ ತಗೊಂಡ ಸುಂದರ... ಆ ಮುದ್ದಾದ ಕೈಗಳಿಗೆ ಹಸಿರು ಬಳೆಗಳು ಎಷ್ಟು ಚೆನ್ನಾಗಿ ಒಪ್ಪುತ್ತೆ.

ಕಾಫಿ ಕುಡಿದು, ಕಪ್ಪು ಅವಳಿಗೆ ಕೊಡಲು ತಲೆ ಎತ್ತಿದ...

ಬಿಳಿ ವಾಯಿಲ್ ಸೀರೆ ಉಟ್ಟು ಫುಲ್ ವಾಯಿಲ್ ಕರೀ ಜಾಕೆಟ್ಟು ಹಾಕಿದ್ದಳು. ಮೈಗೆ ಹತ್ತಿದಂತೆ ಇದ್ದ ಆ ಕರಿಯ ಜಾಕೆಟ್, ಅವಳ ಭುಜಗಳ ಮಾಟವನ್ನು ಎತ್ತಿ ತೋರಿಸುತ್ತಿತ್ತು. ಬಿಳಿಯ ವೆಲ್ ವೆಟ್ಟಿನಂತೆ ಅವಳ ಕುತ್ತಿಗೆ ಮೃದುವಾಗಿ ನುಣುಪಾಗಿ ಕಾಣಿಸುತ್ತಿತ್ತು. ಒಂದು ಸಲ ಅಲ್ಲಿ ತುದಿ ಬೆರಳಿ ನಿಂದ ಮುಟ್ಟಿದರೇ... ಜಾರೀ ಹೋಗುತ್ತೇವೋ.

ಪಾರ್ವತಿಗೆ ಯಾಕೋ ಯಾರೋ ತನ್ನನ್ನು ವಗ್ನ ವಾಗಿ ನೋಡುತ್ತಿರುವಂತೆ ಭಾಸವಾಯಿತು. ಅವಳಿಗೆ ಅಲ್ಲಿ ನಿಲ್ಲಲು ಆಗಲಿಲ್ಲ... "ಒಲೆಯ ಮೇಲೆ ಹಾಲು ಇಟ್ಟಿದ್ದೆ ಏನಾಯ್ತೊಂತ" ಅಲ್ಲಿಂದ ಜಿಂಕೆ ಮರಿ ಯಂತೆ ಓಡಿದಳು. ಅವಳು ಓಡುವಾಗ ಆ ಉದ್ದ ನೆಯ ಜಡೆ ಎಷ್ಟು ಚೆನ್ನಾಗಿ ನರ್ತಕಿಯಂತೆ ನೃತ್ಯವಾ ಡುತ್ತೆ...

ಸುಂದರ, ಒಮ್ಮೆ ಸುನಂದಳ ಫೋಟೋ ನೋಡಿ ಕೆನ್ನೆಗೆ ಹಾಕಿಕೊಂಡು ಸ್ನಾನದ ಮನೆಗೆ ಓಡಿದ.

* * * *

ಡ್ರೆಸ್ ಮಾಡಿಕೊಂಡು ಸುಂದರ ತನ್ನ ರೂಂ—ನಿಂದಲೇ "ಪಾರ್ವತಿ ನಾನು ನರ್ಸಿಂಗ್ ಹೊಂಗೆ ಹೋಗಿಬರ್ತೀನಿ" ಎಂದು ಕೂಗಿ ಹೇಳಿದ. ಅಡಿಗೆಮನೆ ಯಲ್ಲಿ ಫ್ಲಾಸ್ಕ್‌ನಲ್ಲಿ ಕಾಫಿ ಹಾಕುತ್ತಿದ್ದ ಪಾರ್ವತಿ ಕೇಳಿ ದಳು.ಯಾಕೆ "ಆಫೀಸ್‌ಗೆ ಹೋಗೋದಿಲ್ವೇ ಭಾವ?" "ಊಹಂ, ಒಂದು ವಾರ ರಜ ತಗೊಂಡಿದ್ದೀನಿ... ನನ್ನ Friend ಕೈಲಿ Leave Letter ಕಳ ಸ್ತೀನಿ."

"ಒಳ್ಳೇ ಕೆಲಸ ಮಾಡ್ದೆ"... ಪಾರ್ವತಿ ಮನ ಸ್ಪೂರ್ತಿಯಾಗಿ ಅಂದಳು.

"ನಾನು ಹೋಗಿ ಬರ್ಲೆ?"

"ಇರು ಭಾವ ! ನಾನೂ ಬರ್ತೀನಿ"

ಪಾರ್ವತಿ ಹೊರಗೆ ಬಂದಳು. ಈಗ ಅವಳು ಬಿಳಿಯ ಸೀರೆ ಉಟ್ಟಿರಲಿಲ್ಲ. ನೀಲಿ ಜಾರ್ಜೆಟ್ ಸೀರೆ ಉಟ್ಟು, ಬಿಳೀ ಜಾಕೆಟ್ ಹಾಕಿದ್ದಳು. ಅವಳ ಮಾಟವಾದ ದೇಹದ ಮೇಲೆ ಆ ಸೀರೆ ಜಾರಿ ಬಿದ್ದು, ಅವಳ ಅವಯವಗಳ ಸೌಂದರ್ಯವನ್ನು ಇಮ್ಮಡಿಸಿ ತೋರಿಸುತ್ತಿತ್ತು. ಸಡಿಲವಾಗಿ ಜಡೆ ಹಾಕಿ, ಒಂದೇ ಒಂದು ಗುಲಾಬಿ ಹೂವನ್ನು ಮುಡಿದಿದ್ದಳು. ಕೆಂಪ ನಿಯ ಕುಂಕುಮವನ್ನು ಹಣೆಯಲ್ಲಿ ತಳಕ್ಕೆಂದಿತು. ಕಣ್ಣಲ್ಲಿ ಕಪ್ಪನೆಯ ಕಾಡಿಗೆ ನಿಗ ನಿಗ ಎಂದಿತು. ಮೂಗಿನಲ್ಲಿ ಬೇಸರಿ ಪಳಕ್ಕೆಂದಿತು. ಸುಂದರ ಎಂಜಿಲು ನುಂಗಿದ. ಪಾರ್ವತಿ ನಕ್ಕಳು. ಅವಳ ಕೆನ್ನೆ ಗಳಲ್ಲಿ ಬಿದ್ದ ಗುಳಿಯನ್ನು ನೋಡಿ, ಪರಾಜಯ ಹೊಂದಿದವನಂತೆ, ಬೇಗ ಬೇಗ ಹೊರಟು ಹೋದ... ಪಾರ್ವತಿ ನಗುತ್ತಾ ಮನೆಗೆ ಬೀಗ ಹಾಕಿ ಹೊರಟಳು.

ರೂಂ ಬಳಿ ಹೋಗುತ್ತಿರುವಾಗಲೇ ನರ್ಸ್ ಮೇರಿ ನಗುತ್ತಾ ಆಹ್ವಾನಿಸಿದಳು.

"Hello Mr. Sundar, sweets ತಂದ್ರಾ ?"

ಅರ್ಥವಾಗಲಿಲ್ಲ ಸುಂದರರಗೆ "ಯಾಕೆ?" ಎಂದು

"ಮಗಳ ತಂದೆ ಆಗಿದ್ದಕ್ಕೆ" ಅಷ್ಟೇ, ಒಂದೇ ನೆಗತದಲ್ಲಿ ರೂಂಗೆ ಓಡಿದ. ಪಾರ್ವತಿ ಅವನಿಗಿಂತ ಮುಂಚೆಯೇ ಓಡಿದ್ದಳು.

ಸುನಂದ ಅವನನ್ನು ನೋಡಿ ನಾಚಿಕೆಯಿಂದ ನಕ್ಕಳು. ಅವಳ ಪಕ್ಕದಲ್ಲಿ ಪುಟ್ಟ ಮಗು... ಓ, ಎಷ್ಟು ಚೆನ್ನಾಗಿದೆ, ಮಗು... ಸುಂದರನಿಗೆ ಚಿಕ್ಕ ಹುಡುಗನಂತೆ ಕುಣಿದು, ಕುಪ್ಪಳಿಸಿ, ಗಟ್ಟಿಯಾಗಿ ನಗಬೇಕೂ ಎನ್ನಿಸಿತು. ಉಕ್ಕಿ ಹರಿಯುತ್ತಿರುವ ಆನಂದದಿಂದ ಹೇಳಿದ—

" ಸುನೀ... I became a father of a girl."

ಸುನಂದ ತೃಪ್ತಿಯಿಂದ ನೋಡಿದಳು... ಅವನು ಗರ್ವದಿಂದ, ಹೆಮ್ಮೆಯಿಂದ ಕೇಳಿದ, "ಎಲ್ಲಿ ನನ್ನ ಮಗಳು? " ಪಾರ್ವತಿ ಮಗುವನ್ನು ಮೆಲ್ಲನೆ ಎತ್ತಿಕೊಂಡು "ನನ್ನ ರಾಜಿ... ಚಿನ್ನದ ಬೊಂಬೆ... ಎಲ್ಲಾ ಅಕ್ಕನ ಹಾಗೇ ಇದ್ದಾಳೆ. ಸದ್ಯ ಭಾವನ ಬಣ್ಣ ಬರಲಿಲ್ಲ... ಮಗೂನ ನಾನಂತೂ ಖಂಡಿತ ಮುಟ್ಟುತ್ತಿರಲಿಲ್ಲ..." ಎಂದಳು.

ಸುಂದರ ಮಗುವನ್ನು ಎತ್ತಿಕೊಳ್ಳಲು ಕೈ ನೀಡಿದ... ದೂರ ಸರಿದಳು ಪಾರ್ವತಿ.

"ಊಹುಂ... ಕೊಡೋದಿಲ್ಲ... ಲಂಚ ಕೊಟ್ರೇನೆ ನೀನು ಮಗುವನ್ನು ಮುಟ್ಟೋದಕ್ಕೆ ಸಾಧ್ಯ. ಲಂಚ ಅಂದ್ರೆ ನಿಮ್ಮ ಭಾಷೆಯಲ್ಲಿ ಕಾಣಿಕೇಂತ ಅರ್ಥ."

ಸುನಂದ, ಭಾವ ನಾದಿನಿಯರ ಮಾತುಗಳನ್ನು ಕೇಳಿ ನಗುತ್ತಿದ್ದಳು.

ಸುಂದರನ ಹೃದಯದಲ್ಲಿ ಯಾರೋ ಕೈಯಿಟ್ಟು ಕಲಕಿದಂತಾಯ್ತು. ಈ ಹುಡಿಗೀಗೆ ಪ್ರಪಂಚವನ್ನೇ ಕಾಣಿಕೆಯಾಗಿ ನೀಡಬಹುದು. ತುಂಟತನದ, ಬಿಂಕದ, ಈ ಹೆಣ್ಣಿಗೆ ತನ್ನ ಸರ್ವಸ್ವವನ್ನೂ ನೀಡಬಹುದು. ಆದ್ರೆ ತಾನು ಅವಳಿಗೆ ಏನೂ ಕೊಡಲಾರ. ಅವನು ಇನ್ನೊಬ್ಬಳ ಸೊತ್ತು.

"ಹೋಗ್ಲಿ ಬಿಡು... ನೀನೇನೂ ಕೊಡಬೇಡ. ನಮ್ಮಕ್ಕನ ಹತ್ರ ವಸೂಲು ಮಾಡ್ತೀನಿ. ತಗೋ ನಿನ್ನ ಮಗಳನ್ನು" ಪಾರ್ವತಿ ನಗುತ್ತಾ ಮಗುವನ್ನು ಅವನ ಕೈಗೆ ಕೊಟ್ಟಳು. ಆದ್ರೆ ಆ ನಗುವಿನಲ್ಲಿ ಎಂದಿನಂತೆ ಜೀವವಿರಲಿಲ್ಲ... ಅತೃಪ್ತಿಯು ನೆರಳಿತ್ತು ಆ ನಗುವಿನಲ್ಲಿ.

ಸುಂದರ ಮಗಳನ್ನು ನೋಡಿ ಹಿಗ್ಗಿದ... ಮಗು ಗುಜರಾತಿ ಮಗುವಿನಂತೆಯೇ ಬೆಳ್ಳಗಿತ್ತು. ರೆಪ್ಪೆಗಳು ಪಾರ್ವತಿಯ ನೀಳ ರೆಪ್ಪೆಗಳಂತಿದ್ದವು. ಸುನಂದಳಂತೆ ಮೂಗು ಮುದ್ದಾಗಿತ್ತು... ತನ್ನ ಹಾಗೆ ಗುಂಗುರು ಕೂದಲು... ಹುಟ್ಟುವಾಗ್ಲೇ ತಲೆತುಂಬಾ ಕೂದಲಿದೆ. ದೊಡ್ಡವಳಾದ ಮೇಲೆ ಜಡೆ ನೆಲವನ್ನೇ ತಾಕುತ್ತೇನೋ.

"ಮಾತಾಡೇ ಮಗಳೇ... ನಿಮ್ಮ ಅಪ್ಪ ಬಂದಿದ್ದೀನಿ ಕಣೆ... ಸುದ್ದಿ ಹೇಳೇ... ಇಷ್ಟು ದಿವಸ ಎಲ್ಲಿದ್ದೆ ! " ಮಗಳ ಬಳಿ ಮಾತಾಡಿದ ತಂದೆ. ಸುನಂದ ಗರ್ವದಿಂದ ತಂದೆ ಮಗಳನ್ನು ನೋಡುತ್ತಾ ಮಲಗಿದ್ದಳು.

ಪಾರ್ವತಿಗೇಕೋ ತಾನಲ್ಲಿ ಒಬ್ಬಂಟಿಗಳು ಎಂಬ ಭಾವನೆ ಬಂತು. ಆ ವಾತಾವರಣದಲ್ಲಿ ಉಸಿರು ಕಟ್ಟಿದಂತಾಗಿ ಎದ್ದು ಹೊರಗೆ ನಡೆದಳು.

* * * *

ಮತ್ತೆ ಪಾರ್ವತಿ ರೂಂಗೆ ಬಂದಾಗ ಸುಂದರ ಸುನಂದಳ ತಲೆಯ ಮೇಲೆ ಮೆಲ್ಲನೆ ತಟ್ಟಿ ನಿದ್ದೆ ಮಾಡಿಸುತ್ತಿದ್ದ. ಬಳೆಗಳ ಸದ್ದು ಕೇಳಿ ತಿರುಗಿ ನೋಡಿದ. ಪಾರ್ವತಿ ದೀನಳಂತೆ, ಬರುತ್ತಿದ್ದಳು. ಇಲ್ಲಿ ತನ್ನವರು ಯಾರೂ ಇಲ್ಲವೆಂಬಂತೆ ಎಲ್ಲೋ ನೋಡುತ್ತಾ ಬಂದಳು. ಯಾವುದೋ ಮೂಕವೇದನೆಯನ್ನು ಅವಳ ಕಣ್ಣಲ್ಲಿ ಕಂಡ ಸುಂದರ.

"ನೀನು ಹೋಗಿ ಊಟ ಮಾಡಿ ಬಾ. ಆಗ್ಲೇ ಗಂಟೆ ಒಂದಾಯ್ತು. " ಎಂದು ಹೇಳುತ್ತಾ ಪಾರ್ವತಿ ಮಗುವಿನ ತೊಟ್ಟಿಲ ಬಳಿ ಹೋದಳು.

"ಊಹುಂ ನನಗೀವತ್ತು ಊಟ ಬೇಡ...ಹೊಟ್ಟೆ ತುಂಬಿದೆ." ನಗುತ್ತಾ ಹೇಳಿದ ಸುಂದರ.

"ಯಾಕೆ! ಮಗಳನ್ನು ನೋಡಿ ಹೊಟ್ಟೆ ತುಂಬಿ ಹೋಯ್ತೆ? " ಪಾರ್ವತಿ ಸರಕ್ಕನೆ ತಿರುಗಿ ಕೇಳಿದಳು. ತಿರುಗಿದಾಗ, ಅವಳ ಜಡೆ ಮುಂದೆ ಬಂದು ಬಿತ್ತು.

"ಎಷ್ಟು ಅದೃಷ್ಟ ಮಾಡಿದೆ ಆ ಜಡೆ" ಎಂದುಕೊಂಡ ಸುಂದರ. ಆಗ್ರೆ ಏನೋ ತಪ್ಪು ಮಾಡಿದವನಂತೆ ತಕ್ಷಣ ಸುನಂದಳ ಕೈಯನ್ನು ಗಟ್ಟಿಯಾಗಿ ಹಿಡಿದು "ಸುನಂದಾ" ಎಂದು ಭೀತನಾಗಿ ಕೂಗಿದ.

"ನಿದ್ದೆ ಮಾಡುತ್ತಿರುವವಳನ್ನು ಏಕೆ ಎಚ್ಚರ ಮಾಡ್ತೀಯಾ? ಭಾವಾ" ತುಸು ಕೋಪದಿಂದಲೇ ಕೇಳಿದಳು ಪಾರ್ವತಿ.

ಸುನಂದ ಮೆಲ್ಲನೆ ಕಣ್ಣು ತೆರೆದಳು "ಕೂಗಿದ್ರಾ?"

"ಇಲ್ಲ...ಇಲ್ಲ...ಏನೂಯಿಲ್ಲ ನೀನು ನಿದ್ದೆ ಮಾಡು" ತಬ್ಬಿಬ್ಬಾಗಿ ಹೇಳಿದ ಸುಂದರ.

"ಪಾರಿ ಎಲ್ಲಿ? "

"ಇಲ್ಲೇ ಇದ್ದೀನಿ ಅಕ್ಕಾ... ಕಾಫಿ ಕೊಡಲೇ?" ಅಕ್ಕನ ಬಳಿ ಬಂದು ಅಕ್ಕರೆಯಿಂದ ಕೇಳಿದಳು.

"ನನಗೇನೂ ಬೇಡಮ್ಮಾ... ಇನ್ನು ನೀವಿಬ್ಬರೂ ಹೋಗಿ. ಬೆಳಗ್ಗೆಯಿಂದ ಉಪವಾಸ ಇದ್ದೀರಿ." ಅಭಿಮಾನವಾಗಿ ತಂಗಿಯನ್ನು, ಗಂಡನನ್ನೂ ನೋಡಿ ಹೇಳಿದಳು.

ತಕ್ಷಣ ಪಾರ್ವತಿ "ಇಲ್ಲಕ್ಕಾ...ನಿನ್ನ ಬಿಟ್ಟು



ಪಾರ್ವತಿ ದೀನಳಂತೆ ಬರುತ್ತಿದ್ದಳು

ನಾನು ಖಂಡಿತ ಹೋಗೋಲ್ಲ" ಎಂದು ಅಕ್ಕನ ಬಳಿ ಕುಳಿತಳು.

"ಹುಚ್ಚು ಹುಡುಗಿ ನೋಡಿ! ನೀವು ಹೋಗಿ ತಿಂಡಿ ತಿಂದು ಪಾರಿಗೂ ಏನಾದ್ರೂ ತಿಂಡಿ ಕಟ್ಟಿಸಿಕೊಂಡು ಬನ್ನಿ. ಹಾಗೇ ನಮ್ಮ ತಂದೆಗೇ ಕಾಗದ ಬರೆದು ಹಾಕಿ ಬನ್ನಿ..." ಸುಂದರ ಪಾರ್ವತಿಯ ಕೈಲಿದ್ದ ಮಗ ಳಿಗೆ ಮುತ್ತುಕೊಟ್ಟ. ಪಾರ್ವತಿ ತಲೆ ತಿರುಗಿಸಿ ಕೊಂಡಳು, ಬಲವಂತವಾಗಿ...ಸುಂದರ ಆಚೆ ಹೊರಟ ಮೇಲೆ ಅಕ್ಕನಿಗೆ ತಿಳಿಯದಂತೆ, ಸುಂದರ ಮುತ್ತು ಕೊಟ್ಟ ಮಗುವಿನ ಕೆನ್ನೆಯ ಮೇಲೆ ತನ್ನ ತುಟಿಗಳನ್ನಿಟ್ಟಳು.

ರಾತ್ರಿ ೮ ಗಂಟೆಗೆ, ಸುನಂದ ಅವರಿಬ್ಬರನ್ನು ಬಲವಂತದಿಂದ ಕಳುಹಿಸಿದಳು...ಪಾರ್ವತಿ ಬಹು ಜಾಗ್ರತೆಯಾಗಿ ರೋಡು ಕ್ರಾಸ್ ಮಾಡಿದಳು. ನಿನ್ನೆ ಯಂತೆ ಆಗಬಾರದಲ್ಲವೆ? ತನ್ನ ಪತನಕ್ಕೆ ತಾನೇ ನಾಂದಿ ಹೂಡುವುದೇ...ಇಲ್ಲ ಇನ್ನು ಮುಂದೆ ತಾನು ಜಾಗರೂಕಳಾಗಿರಬೇಕು. ಭಾವ ದರೋಡೆಕಾರ. ಅವನು ತನ್ನ ಬಳಿ ದರೋಡೆ ಮಾಡಲು ಬಿಡಬಾರದು.

ಮನೆಗೆ ಬಂದ ಮೇಲೂ ಅವರಿಬ್ಬರ ನಡುವೆ ಮೌನ ರಾಜ್ಯವಾಳಿತು. ಆದ್ರೆ! ಪಾರೂಗೆ ಅಳು ಕುತ್ತಿಗೆವರೆಗೂ ಬಂದಿತ್ತು...ಸುಂದರ ಒಮ್ಮೆ ಅವ ಳನ್ನು "ಪಾರ್ವತಿ" ಎಂದು ಕರೆದರೆ ಸಾಕು, ದುಃಖ ಉಕ್ಕಿ ಬಂದು ಬಿಡುತಿತ್ತು. ಯಾಕೋ ಆ ದುಃಖ, ಆ ನಿರಾಶೆ, ಆ ವೇದನೆ ಅವಳಿಗೇ ಗೊತ್ತಿಲ್ಲ. ಸುಂದರ ತನ್ನ ರೂಂಗೆ ಹೋದ. ಪಾರ್ವತಿ ಅಡಿಗೆಮನೆಗೆ ಹೋದಳು.

ಸ್ಟವ್ ಹೊತ್ತಿಸಿ ಹಾಲಿಟ್ಟಳು. ಅದರ ಪಕ್ಕ-ದಲ್ಲೇ ತುಪ್ಪದ ಬಟ್ಟಲನ್ನು ಇಟ್ಟು ಒಲೆಯ ಮುಂದೆ ಮೌನವಾಗಿ ಕುಳಿತಳು.

ಬಾಯಾಳಿ ಪಾರ್ವತಿ ಇಂದು ಮೌನದ ಬೊಂಬೆ ಯಾಗಿದ್ದಳು.

ತುಪ್ಪ ಕರಗಿ ಹೋಗುತ್ತಿರುವುದನ್ನೇ ದಿಟ್ಟಿಸಿ ನೋಡುತ್ತಿದ್ದ ಪಾರ್ವತಿಯ ಕಣ್ಣಲ್ಲಿ ನೀರುತುಂಬಿತು.

ಬೆಂಕಿಯ ಶಾಕದಿಂದ ಗಟ್ಟಿಯಾದ ತುಪ್ಪ ಕರಗಿ ಹೋದಂತೆ, ಸುಂದರನನ್ನು ನೋಡುತ್ತ ನೋಡುತ್ತಾ ತಾನು ಕರಗಿ ಅವನಲ್ಲಿ ಐಕ್ಯವಾಗಿ ಹೋಗುತ್ತಾಳೋ ಏನೋ...ಇಲ್ಲ ತಾನು ತುಪ್ಪದಂತೆ ಕರಗಬಾರದು. ಕಲ್ಲಿನಂತಿರಬೇಕು. ಸುಂದರನ ಕಣ್ಣುಗಳಿಂದ ತಾನು ತಪ್ಪಿಸಿಕೊಂಡು ಓಡಿಹೋಗಬೇಕು. ತನ್ನ ಹೃದಯ ದಿಂದ ಅವನನ್ನು ಎಷ್ಟು ಸಲ ಹೊರಗೆ ತಳ್ಳಿದರೂ ಮೊಂಡು ಹುಡುಗನಂತೆ ಮತ್ತೆ ಬಂದು ಕುಳಿತು ಕೊಂಡು ಅಲ್ಲಿಂದ ಹೋಗುವುದಿಲ್ಲವೆಂದು ಹಠ ಹಿಡಿ ಯುತ್ತಾನೆ. ಆ ಸ್ಥಳವೆಲ್ಲಾ ತನ್ನದೇ ಎಂಬಂತೆ ಆಕ್ರ ಮಿಸುತ್ತಾನೆ. ತನ್ನಲ್ಲಿ ನಡೆಯುತ್ತಿರುವ ಈ ತುಮುಲ ಯುದ್ಧ ಭಾವನಿಗೆ ತಿಳಿಯದಂತೆ ಎಷ್ಟು ಜಾಗ್ರತೆ ಯಾಗಿ ನಡೆದುಕೊಳ್ಳುತ್ತಿದ್ದಾಳೆ. ಇಲ್ಲದಿದ್ದರೇ ಗುಟ್ಟುರಟ್ಟಾಗಿ ಭಾವ ನನ್ನನ್ನು ನೋಡಿ ಅವಹೇಳನೆ ಯಿಂದ ನಗುತ್ತಿದ್ದಾನೋ ಏನೊ...?

ಇನ್ನು ತಾನು ಇಲ್ಲಿರಬಾರದು. ಅಗ್ನಿಪರ್ವತ ಬಳಿ ಇರುವುದು ಯಾವಾಗಲೂ ಅಪಾಯವೇ...ತನಗೆ ಮಾತ್ರ ಅಪಾಯವಲ್ಲ. ಅಕ್ಕನಿಗೂ ಅಪಾಯ...ಅಕ್ಕ ದೇವತೆ. ಆ ದೇವತೆಗೆ ದ್ರೋಹ ಮಾಡಬಾರದು. ಅವ ಕಣ್ಣಿಗೆ ಬಿದ್ದರೂ ತಾನು ಇಲ್ಲಿಂದ ಬೇಗ ಪಾರಾಗ ಬೇಕು. ಹೃದಯದಲ್ಲಿ ಮುದ್ರಿತವಾಗಿರುವ ಭಾವನ ರೂಪವನ್ನು ಕಿತ್ತೆಸೆಯಬೇಕು. ಆ ನಗುತ್ತಿರುವ ಆ ದೊಡ್ಡ ಕಣ್ಣುಗಳನ್ನು ಮರೆಯಬೇಕು. ಬಲವಾದ ಆ ತೋಳುಗಳನ್ನು ಕಣ್ಣೆತ್ತಿ ನೋಡಬಾರದು.. ವಿಶಾಲ ವಾದ ಆ ಎದೆಯನ್ನು ದಿಟ್ಟಿಸಬಾರದು. ಆ ಗುಂಗುರು ಕೂದಲು ಕ್ರಾಫನ್ನು ತಿರುಗಿ ಸಹ ನೋಡಬಾರದು. ಚಿಗುರು ಮೀಸೆ ನನ್ನನ್ನು ನೋಡಿ ನಗುವುದಕ್ಕೆ ಮುಂಚೆ ಇಲ್ಲಿಂದ ಓಡಿ ಹೋಗಬೇಕು. ಮುದ್ದಾದ ದುಂಡು ತುಟಿಗಳು ತನ್ನನ್ನು ಆಹ್ವಾನಿಸುವುದಕ್ಕೆ ಮುಂಚೆ ತಪ್ಪಿಸಿಕೊಳ್ಳಬೇಕು...ಆದ್ರೆ..ಹೇಗೆ?... ಹೇಗೆ?? ಈ ಸುಂದರ ಬೇಟೆಗಾರನಿಂದ ತಪ್ಪಿಸಿ ಕೊಂಡು ಹೋಗಲು ಮನಸ್ಸಿಗೇಕೆ ಇಚ್ಛೆಇಲ್ಲ??

"ಹಾಲು ಉಕ್ಕಿ ಹೋಯ್ತು ಪಾರ್ವತಿ" ಪಾರ್ವತಿ ಬೆಚ್ಚಿದಳು. ಸಿಡಿಲು ಸದ್ದನ್ನು ಕೇಳಿ ನಡುಗುವ ಮಗುವಿನಂತೆ ಅವಳು ನಡುಗಿದಳು. ತಿರುಗಿ ನೋಡಿ ದಳು.

ಸುಂದರ ನಗುತ್ತಾ ನಿಂತಿದ್ದ...ಅವನು ತನ್ನನ್ನು ನೋಡಿ ನಗುತ್ತಿದ್ದಾನೆಯೇ? ತನ್ನ ಮನಸ್ಸಿನ ಹೋರಾಟ ತಿಳಿದು ಪರಿಹಾಸ್ಯ ಮಾಡುತ್ತಿದ್ದಾನೆಯೇ? ತನ್ನ ಕಣ್ಣಲ್ಲಿ ಬಯಕೆಯ ಕುಡಿಯನ್ನು ತಮಾಷೆಯಾಗಿ ನೋಡು ತ್ತಿದ್ದಾನೆ. ಪಾರ್ವತಿ ತಲೆ ತಿರುಗಿಸಿಕೊಂಡು ಹಾಲಿನ ಪಾತ್ರೆಯನ್ನು ನೋಡಿದಳು.

"ಅಲ್ಲೇನಿದೆ", ಎಲ್ಲಾ ಉಕ್ಕಿಹೋಯ್ತು ಬರೀ ಪಾತ್ರೆ", ಚೇಷ್ಟೆ ಮಾಡಿದ ಭಾವ.

"ಹೌದು, ಬರೀ ಪಾತ್ರೆ ತನ್ನ ಹೃದಯದಂತೆ... ...ಈ ಪಾತ್ರೆಯನ್ನು ಮತ್ತೆ ತುಂಬಬಹುದು. ತನ್ನ ಹೃದಯವನ್ನು ತುಂಬಲು ಸಾಧ್ಯವಿಲ್ಲ.... ಸುಂದರ ಒಬ್ಬನು ಮಾತ್ರ ತನ್ನ ಪ್ರೀತಿಯಿಂದ ಅವಳ ಹೃದಯ ವನ್ನು ತುಂಬಿಸಬಹುದು, ಆದ್ರೆ, ಅದು ಸಾಧ್ಯವೇ ಇಲ್ಲ. ತನ್ನ ಬಯಕೆಗಳು, ಆಸೆಗಳು ಉಕ್ಕಿ ನೆಲದಲ್ಲಿ ಬಿದ್ದು ಇಂಗಿ ಹೋಗಲಿ. ಯಾರಿಗೂ ತಿಳಿಯದೆ ನಾಶ ವಾಗಲಿ...ಮನಸ್ಸಿನಲ್ಲಿ ಹುಟ್ಟಿದ ಈ ಭೀಕರ ಇಚ್ಛೆ ಅಲ್ಲಿಯೇ ಸಮಾಧಿಯಾಗಲಿ."

"ಬಿಡು ಪಾರೂ...ಅಲ್ಲೇನಿದೆಂತ ದಿಟ್ಟಿಸಿ ನೋಡು ತ್ತಿದ್ದಿಯಾ? ಉಕ್ಕಿ ಹೋದ ಹಾಲನ್ನು ಮತ್ತೆ ಪಾತ್ರೆಗೆ ತೆಗೆಯಲು ಸಾಧ್ಯವೇ... ನೀರನ್ನು ತಟ್ಟೆ ಹಾಕು ಬಡಿಸು...ಕೈಕಾಲು ತೊಳ್ಕೊಂಡು ಬರ್ತೀನಿ" ಸುಂದರನ ಭಾರವಾದ ಹೆಜ್ಜೆಗಳು ದೂರವಾದಂತೆ ಪಾರ್ವತಿಗೆ ದುಃಖವನ್ನು ತಡೆಯಲು ಸಾಧ್ಯವಾಗಲಿಲ್ಲ.

ನೆಲದಲ್ಲಿ ಬಿದ್ದ ಹಾಲನ್ನು ಮತ್ತೆ ಪಾತ್ರೆಗೆ ತೆಗೆ ಯಲು ಸಾಧ್ಯವೇ? "ಓ"! ಇದು ಎಂಥಾ ಘೋರ ಪ್ರಶ್ನೆ...ಹಾಗಾದ್ರೆ ಒಂದು ಸಲ ದಾರಿ ತಪ್ಪಿದ ತನ್ನ ಮನಸ್ಸನ್ನು ಮತ್ತೆ ದಾರಿಗೆ ತರಲು ಸಾಧ್ಯವಿಲ್ಲವೆ...? ಹಾಲು ಉಕ್ಕುವುದಕ್ಕೆ ಮುಂಚೆ ಪಾತ್ರೆ ಇಳಿಸಿಬಿಟ್ಟಿ ದ್ದರೆ, ಹಾಲು ಉಕ್ಕಿ ನೆಲದ ಪಾಲಾಗುತ್ತಿರಲಿಲ್ಲ... ಹಾಗೆಯೇ ಮನಸ್ಸು ದಾರಿ ತಪ್ಪುವುದಕ್ಕೆ ಮುಂಚಿತ ವಾಗಿಯೇ ಅದನ್ನು ಹಿಡಿದು ನಿಲ್ಲಿಸಿದ್ದರೆ, ಇಂದು ಹೀಗೆ ಅಳಬೇಕಾಗಿರಲಿಲ್ಲ... ದೇವರೇ! ತಾನೇಕೆ ಇಲ್ಲಿಗೆ ಬಂದೆ... ಯಾರನ್ನೂ ಕಂಡರೂ ಚಲಿಸದ ತನ್ನ ಹೃದಯ, ಅಕ್ಕನ ಕೈ ಹಿಡಿದು, ಮಗುವಿನ ತಂದೆಯಾಗಿರುವ, ಭಾವನನ್ನು ಕಂಡು ಏಕೆ ಚಲಿಸಿತು? ಭಗವಾನ್ ಇದೇನು ಶಿಕ್ಷೆ... ನನ್ನನ್ನು ಇಲ್ಲಿಂದ ಪಾರು ಮಾಡು... ಭಾವನ ದೃಷ್ಟಿಯಿಂದ ದೂರ, ಬಹು ದೂರ ಓಡಿ ಹೋಗಬೇಕು. ಇಲ್ಲಿದ್ದರೆ ತಾನಿಲ್ಲಿ ಬಂದಿನಂತೆ ಉಳಿಯಲು ಸಾಧ್ಯವಿಲ್ಲ...ಎಂದಾದ್ರೂ ಒಂದು ದಿನ

ತಾನೆ ಓಡಿ ಹೋಗಿ ಅವನ ಮಡಿಲನ್ನು ಆಶ್ರಯಿಸಬಹುದು ಛಿ! ಬೇಡ... ಬೇಡ... ಆ ದುರ್ಗತಿ ನನಗೆ ಬರದಿರಲಿ. ಪಾರ್ವತಿ ಬಿಕ್ಕಿ ಬಿಕ್ಕಿ ಅತ್ತಳು ದಾರಿ ಕಾಣದ ಮಗುವಿನಂತೆ ಅತ್ತಳು.

ಸುಂದರ ಬಾಗಿಲು ಬಳಿ ನಿಂತು ಅಳುತ್ತಿರುವ ಪಾರ್ವತಿಯನ್ನು ನೋಡಿ ಅವನಿಗೆ ಆಶ್ಚರ್ಯವಾಯ್ತು...ಮನಸ್ಸಿಗೆ ಮುಳ್ಳು ಚುಚ್ಚಿದಂತಾಯ್ತು... ಅಳುತ್ತಿರುವ ಅವಳನ್ನು ತಬ್ಬಿ ಸಮಾಧಾನ ಮಾಡಬೇಕೆಂದು ತೋರಿತು...ಆದ್ರೇ ಅವನಿಗೇಕೋ ಧೈರ್ಯ ಬರಲಿಲ್ಲ. ಮೆಲ್ಲನೆ ಹೋಗಿ ಅವಳ ಮುಟ್ಟ್ಯಾದ ಗಲ್ಲವನ್ನು ಹಿಡಿದು ಕೇಳಿದ.

“ಯಾಕೆ ಅಳುತ್ತಾ ಇದ್ದಿಯಾ? ಹೇಳು ಪಾರೂ” ಪಾರ್ವತಿಗೆ ಮೇಘಗಳ ಮೇಲೆ ಪಯಣ ಮಾಡಿದಂ—ತಾಯ್ತು. ಗುಲಾಬಿ ರೇಖೆಗಳು ತನ್ನ ಮೇಲೆ ಸುರಿದಂತಾಯ್ತು. “ಪಾರೂ” ಎಷ್ಟು ಚೆನ್ನಾಗಿದೆ ತನ್ನ ಹೆಸರು! ಈ ನಿಮಿಷದವರೆಗೂ ತನ್ನ ಹೆಸರಿನ ಬಗ್ಗೆ ಅತೃಪ್ತಳಾದ ಅವಳು, ಈಗ ತೃಪ್ತಳಾದಳು. ಎಷ್ಟು ಸಿಹಿಯಾಗಿ ತನ್ನ ಹೆಸರನ್ನು ಹೇಳುತ್ತಾನೆ. ಅವನ ಬಾಯಿಂದ ತನ್ನ ಹೆಸರನ್ನು ಎಷ್ಟು ಸಲ ಬೇಕಾದ್ರೂ ಕೇಳುತ್ತಿರಬಹುದು.

ಸುಂದರಗೆ ಅವಳ ಮೌನದ ಕಾರಣ ತಿಳಿಯಲಿಲ್ಲ. ಅವಳ ತಲೆಯನ್ನು ಮೃದುವಾಗಿ, ಪ್ರೀತಿಯಾಗಿ ಸವರುತ್ತಾ ಕೇಳಿದ.

“ಅಪ್ಪ...ಅವ್ವ ನೆನಪು ಬಂದ್ರೇ?” ಪಾರ್ವತಿಗೆ ನಗು ಬಂತು...ಅವರನ್ನು ನೆನಸಿಕೊಂಡು ಅಳುವ ವಯಸ್ಸೇ ತನ್ನದು...ಪಾರ್ವತಿ ನಕ್ಕಳು.

ಸುಂದರ ಪೆಚ್ಚಾದ...ಎಂಥಾ ವಿಚಿತ್ರ ಹುಡುಗಿ ಇವಳು. ಒಂದು ನಿಮಿಷಕ್ಕೆ ಮುಂಚೆ ಸರ್ವವನ್ನೂ ಕಳೆದುಕೊಂಡವಳಂತೆ ಬಿಕ್ಕಳಿಸಿ ಅಳುತ್ತಿದ್ದಳು. ಈಗ ಯಾವುದೋ ನಿಧಿ ಸಿಕ್ಕಿದವಳಂತೆ ಸಂತೋಷದಿಂದ ನಗುತ್ತಿದ್ದಾಳೆ.

“ಬಡಿಸು ಪಾರ್ವತಿ” ತಟ್ಟೆ ಹಾಕಿ ಕುಳಿತುಕೊಳ್ಳುತ್ತಾ ಹೇಳಿದ ಸುಂದರ.

“ಎಷ್ಟು ಬಡಿಸಲಿ...ನಾಲ್ಕು ಸಾಕೇ” ಕಿಲಕಿಲ ನಕ್ಕಳು ಅವಳು.

ಸುಂದರಗೆ ತಾನು ಸಮೀಪದಲ್ಲಿ ನೋಡಿದ್ದ ಇಂಗ್ಲೀಷ ಪಿಕ್ಚರ ನೆನಪಿಗೆ ಬಂತು. ಆ ಚಿತ್ರದಲ್ಲಿ ಕಥಾನಾಯಕಿ, ನಾಯಕನನ್ನು ಆ ಕೆನ್ನೆಗೆ, ಈ ಕೆನ್ನೆಗೆ ಜೋರಾಗಿ ಹೊಡೆದು Get out ಎಂದು ಕಿರುಚಿ ಕೊಳ್ಳುತ್ತಾಳೆ. ಆ ನಾಯಕ ಮರುಮಾತಾಡದೆ ಹೋಗುತ್ತಿರಲು, ಅವಳು ಅಂಬಿನಿಂದ ಬಿಟ್ಟ ಬಾಣದಂತೆ ಬಂದು ಅವನನ್ನು ಅಪ್ಪಿ ಹೊಡೆದ ಕೆನ್ನೆಗಳಿಗೆ ಮುತ್ತಿನ ಮಳೆ ಕರೀತಾಳೆ.

ಆ ಕಥಾನಾಯಕಿ ಹಾಗೆ ಈ ಪಾರ್ವತಿ...ಅಳುತ್ತಾಳೆ...ಸಹಾನುಭೂತಿ ತೋರಿಸಿದಾಗ..ಗೇಲಿ ಮಾಡಿದ ಹಾಗೆ ನಗುತ್ತಾಳೆ...ಕೈ ಮೇಲೆ ಬಿಸಿಯಾದ ಪದಾರ್ಥ ಬಿದ್ದ ತಕ್ಷಣ ಬೆಚ್ಚಿ ಕೈ ಸರಕ್ಕನೆಳೆದುಕೊಂಡು ತಲೆ ಎತ್ತಿ ನೋಡಿದ.

ಪಾರ್ವತಿ ಕೈಯಲ್ಲಿ ಸಾರಿನ ಪಾತ್ರೆ ಹಿಡಿದು, ಪಕಪಕ ನಗುತ್ತಿದ್ದಳು. “ಬಡಿಸಿದ ತಟ್ಟೆಯ ಮುಂದೆ ಕುಳಿತು ಕನಸಿನ ರಾಜ್ಯದಲ್ಲಿ ವಿಹರಿಸಿದರೆ ಇದೇ ಶಿಕ್ಷೆ... ಸಾರು ಬಿಸಿ ಸಾಕೇ? ಇನ್ನು ಸ್ವಲ್ಪ ಬಿಸಿ ಮಾಡಲೇ” ಅತಿ ಪ್ರಯಾಸದಿಂದ, ಮುತ್ತಿನಂಥಾ, ಬಿಳಿಯ ಹಲ್ಲಿನಿಂದ, ಕೆಂಪನೆಯ ತುಟಿ ಕಚ್ಚಿ ನಗುವನ್ನು ತಡೆಯುತ್ತಿದ್ದಳು. ಸಹಜವಾಗಿ ಕೆಂಪುಗಿದ್ದ ಅವಳ ಚಿಕ್ಕತುಟಿಗಳು ಕಚ್ಚಿದ್ದರಿಂದ ಮತ್ತಷ್ಟು ಕೆಂಪಾಗಿ ತೊಂಡೆ ಹಣ್ಣಿನಂತೆ ಕಂಡವು...ಕಚ್ಚಿ ತಿನ್ನಲೇ ಎಂದಾಶೆ ಆಯ್ತು ಅವನಿಗೆ...ಕಷ್ಟಪಟ್ಟು ಆಶೆಯನ್ನು ತುಳಿದು, “ತುಪ್ಪ ಬಡಿಸು” ಎಂದ.

ತುಪ್ಪ ಬಡಿಸಲು ಪಾರ್ವತಿ ಬಗ್ಗಿದಾಗ, ಅವಳ ತಲೆಯಲ್ಲಿ ಮುಡಿದಿದ್ದ ಮಲ್ಲಿಗೆ ಹೂ ಅವನನ್ನು ಕೆಣಕಿತು...ಸುಂದರ ಗಟ್ಟಿಯಾಗಿ ಕಣ್ಣು ಮುಚ್ಚಿಕೊಂಡ.

“ಓ” ಭಗವಾನ್! ನನ್ನನ್ನು ಈ ಹದಿನೆಂಟು ವರ್ಷದ ಹುಡಿಗಿಯಿಂದ ಕಾಪಾಡು ರಷ್ಯನ್ ಆಟಂ ಬಾಂಬುಗಳನ್ನು ಎದುರಿಸಬಲ್ಲೆ. ಚೀನಾದವರ ಮುಂದೆ ನಿಂತು ಯುದ್ಧ ಮಾಡಬಲ್ಲೆ ಆದರೇ...ಆದರೇ... ಎಲ್ಲದಕ್ಕೂ ಮಿಂಚಿದ ಅಪಾಯಕರವಾದ ಆಯುಧಗಳನ್ನು ಪ್ರಯೋಗಿಸುತ್ತಿರುವ ಈ ಶತ್ರುವಿನಿಂದ ನನ್ನನ್ನು ಕಾಪಾಡು...”ಸುಂದರ ಮನಸ್ಸಿನಲ್ಲೇ ದೇವರನ್ನು ಪ್ರಾರ್ಥಿಸಿದ. ಮಜ್ಜಿಗೆ ಬಡಿಸಿ, ಪಾರ್ವತಿ ಹೋಗುವಾಗ, ಅವಳ ಉದ್ದನೆಯ ಜಡೆ, ಅವನ ಕೆನ್ನೆಗಳಿಗೆ ಸೋಕಿತು...ಚಂದನ, ಪನ್ನೀರು, ಜವ್ವಾದು. ಮಲ್ಲಿಗೆ, ಜಾಜಿ, ಕೆಂಡ ಸಂಪಿಗೆ, ಗುಲಾಬಿ ಎಲ್ಲಾ ಒಮ್ಮೆಲೆ ಮೇಲೆ ಸುರಿದು ಅವನಿಗೆ ಉಸಿರು ಕಟ್ಟಿಂತಾಯ್ತು. ಊಟವನ್ನು ಹೇಗೆ ಮುಗಿಸಿ ಎದ್ದನೋ ಆ ದೇವರೇ ಬಲ್ಲ...

ತನ್ನ ರೂಂಗೆ ಬಂದು ಹಾಸಿಗೆಯಲ್ಲಿ ಉರುಳಿದ ತಲೆದಿಂಬಿನ ಕೆಳಗೆ ಕೈಗೆ ಏನೋ ಸೋಕಿತು. ತೆಗೆದು ನೋಡಿದ. ಸುನಂದಳ ನಗುತ್ತಿರುವ ಫೋಟೋ... ನನ್ನನ್ನು ನೋಡಿ ನಗುತ್ತಿರಬಹುದೇ, ಈ ಅಗ್ನಿ ಪರೀಕ್ಷೆಗೆ ಗುರಿ ಮಾಡಿ, “ನೀವು ಗೆಲ್ಲುವಿರಾ ಎಂದು ಪರಿಹಾಸಮಾಡುತ್ತಿದ್ದಾಳೆ. ಸುನಂದಾ!... ನೀನು ನನ್ನ ಜೀವ...ಜೀವವನ್ನು ತೊರೆದು ನಾನು ಬಾಳಲಾರೆ. ವಿಧಿ ಪರೀಕ್ಷೆ ಮಾಡುತ್ತಿದೆ. ಸೋಲಲು ನನ್ನನ್ನು ಬಿಡಬೇಡ ಸುನಂದಾ, ಬಿಡಬೇಡಾ ನೀನು ಪವಿತ್ರ ರೂಪಸಿ ನಿನ್ನಲ್ಲಿ ದೇವತ್ವವಿದೆ ನೀನು ನಿಜವಾದ ಸುಂದರಿ”

“ಎಲೆ ಮಡಿಸಿ ಕೊಡಲೇ ಭಾವಾ” ಬಾಗಿಲಲ್ಲಿ ನಿಂತು ಪಾರ್ವತಿ ಕೇಳಿದಳು. ಬಾಗಿಲು ಮಧ್ಯ ನಿಂತಿದ್ದ ಅವಳು ಬೇಲೂರು ಶಿಲಾಬಾಲಕಿಯಂತೆ ಕಂಡಳು ಬೇಡ. ಅವಳು ಎದುರಲ್ಲಿ ಬರುವುದೇ ಬೇಡ.“ಬೇಡ” ಎಂದು ಹೇಳಲು ಬಾಯಿ ತೆರೆದ, ಆದ್ರೆ ಅವನು ಹೇಳಿದ್ದು ಮಾತ್ರ, “ಬೇಕು ತಗೊಂಡು ಬಾ”.

ಪಾರ್ವತಿ ಓಡಿದಳು. “ಈ ಹುಡುಗಿಗೆ ನಡೆಯುವುದಕ್ಕೆ ಬರುವುದಿಲ್ಲವೇನೋ. ಎಲ್ಲದಕ್ಕೂ ಓಟವೇ. ಜಿಂಕೆ ಮರಿಯಂತೆ ಚಿಮ್ಮುತ್ತಾ ಓಡುತ್ತಾಳೆ” ಪ್ರಪಂಚದಲ್ಲಿರುವ, ಚಲಾಕಿತನವೆಲ್ಲಾ ಇವಳಲ್ಲೇ ಇದೆಯೇನೋ...”

ಪಾರ್ವತಿ ತಾಂಬೂಲದ ತಟ್ಟೆಯೊಡನೆ ಬಂದಳು. “ಕೂತುಕೋ” ಅಪ್ರಯತ್ನವಾಗಿ ಅಂದ. ಆದರೆ ಅವನ ಹೃದಯದಲ್ಲಿ ರೈಲುಗಳು ಓಡಿದವು. ಒಂದ್ವೇಳೆ ಅವಳು ಹಾಸಿಗೆಯಲ್ಲಿ ಕುಳಿತರೆ? ತಾನು ಆ ದಾರಿಯನ್ನು ಎದುರಿಸಬಲ್ಲನೆ,..ಸಾಧ್ಯವೇ ಇಲ್ಲ. ಶರಣಾಗುವುದು ಖಂಡಿತ.

ಪಾರ್ವತಿ ಬಿಳಿಯ ಬೆಡ್‌ಷೀಟ್ ಹಾಕಿರುವ ಹಾಸಿಗೆಯನ್ನು ನೋಡಿದಳು. ತಲೆದಿಂಬಿನ ಮೇಲೆ “ಸಿಹಿ ಕನಸು” ಎಂದು ಎಂಬ್ರಾಡರಿ ಹಾಕಿದ್ದನ್ನು ನೋಡಿ ಅವಳ ಕಣ್ಣುಗಳು ಹೊಳೆದವು. ಆ ಹೊಳಪನ್ನು ನೋಡಿ “ಇವಳ ಕಣ್ಣುಗಳಲ್ಲಿ ವಜ್ರವಿದೆಯೇನೊ” ಎಂದು ಅಂದುಕೊಂಡ ಸುಂದರ.

ಆದರೆ ಮರುಕ್ಷಣ ಪಾರ್ವತಿ ಆಶೆಯ ಕುದುರೆಗೆ ಕಡಿವಾಣ ಹಾಕಿ ಎಳೆದಳು. ಅಲ್ಲೇಯಿದ್ದ ಕುರ್ಚಿಯ ಮೇಲೆ ಸರ್ರನೆ ಕುಳಿತುಕೊಂಡಳು.

ಒಂದೊಂದು ಎಲೆಯನ್ನು ಒರೆಸಿ ಸುಣ್ಣ ಹಚ್ಚುತ್ತಿದ್ದಳು ಪಾರ್ವತಿ. ಅಂದವಾದ ಬಿಳಿಯ ಅರಕೈಯಲ್ಲಿ, ಹಸಿರು ಎಲೆ, ನುಣ್ಣಗೆ ಉದ್ದವಾಗಿರುವ ಹಳದಿ ಬಣ್ಣದ ಬೆರಳುಗಳು. ಕೆಂಪು ಕಲ್ಲಿನಂತೆ ಹೊಳೆಯುವ ಉಗುರುಗಳು. ಸುಣ್ಣ ಹಚ್ಚುವಾಗ ಆ ಬೆರಳುಗಳ ಕದಲಿಕೆಯನ್ನು ನೋಡುತ್ತಿದ್ದರೆ, ಪ್ರಖ್ಯಾತ ಚಿತ್ರಕಾರನೊಬ್ಬ ಚಿತ್ರ ಬರೆದಂತೆಯಿತ್ತು ಮುಗ್ಧನಾಗಿ ಕುಳಿತಿದ್ದ ಸುಂದರ.

“ಭಾವ” ಆಕರ್ಷಣ, ಸಿಹಿಗಳ ಮಿಳಿತವಾಗಿತ್ತು ಆ ಕರೆಯಲ್ಲಿ.

ಕಣ್ಣೆತ್ತಿ ಅವಳನ್ನು ನೋಡಿದ. ಅವಳ ಕಣ್ಣು

ಗಳಲ್ಲಿ ತುಂಟುತನದ ನಗು ತುಳುಕುತ್ತಿತ್ತು. ತುಟಿಯಲ್ಲಿ ಕಿರುನಗೆ ನಗುವಿನ ಬಲೆ ಬೀಸುತ್ತಾಳೆ ಈ [illegible].

"ಅಡಿಕೆ" ಪಾರ್ವತಿ ಕೈ ನೀಡಿ ಅವನ ಕೈಗಳಲ್ಲಿ ಅಡಿಕೆಯಿಟ್ಟಳು. ಆಗ ಅವಳ ಬೆರಳ ತುದಿಗಳು ಅವನ ಅಂಗೈಯನ್ನು ಸ್ಪರ್ಶಿಸಿದಾಗ ಅವನ ಮೈ ಬಿಸಿ ಆಯ್ತು. ಎಷ್ಟು ಮೃದುವಾಗಿದೆ ಆ ಕೈ. ಆ ಕೈಗಳನ್ನು ಹಿಡಿದು ಹೃದಯದ ಮೇಲೆ ಇಟ್ಟರೆ. ತುಫಾನಲ್ಲಿ ಸಿಕ್ಕಿದ ಈಜು ಬಾರದ ಪ್ರಯಾಣಿಕನಂತೆ ಒದ್ದಾಡಿದ ಸುಂದರ...

ಒಂದೊಂದು ಎಲೆಯನ್ನು ಮಡಿಸಿ ಅವನಿಗೆ ನೀಡುತ್ತಿದ್ದಳು. ಅವನು ಅವಳನ್ನು ನೋಡದೆ ಎಲೆಗಳನ್ನು ಯಾಂತ್ರಿಕವಾಗಿ ಬಾಯೊಳಗೆ ತುರುಕಿಕೊಳ್ಳುತ್ತಿದ್ದ. ಎಲೆಗಳು ಮುಗಿದುಹೋಯ್ತು. ಆದ್ರೆ ತುಂಟ ಪಾರ್ವತಿ ತನ್ನ ಕಿರುಬೆರಳನ್ನು ನೀಡಿದಳು. ಎಲ್ಲೋ ನೋಡುತ್ತಿದ್ದ ಸುಂದರ ಅವಳ ಮುದ್ದಾದ ಬೆರಳನ್ನು ಬಾಯಲ್ಲಿ ಇಟ್ಟುಕೊಳ್ಳಲು ಹೋದ.

"ಓ, ಕನಸಿನ ಲೋಕದ ಚಕ್ರವರ್ತಿ! ಅದು ನನ್ನ ಬೆರಳು" ಕಿಲಕಿಲ ನಕ್ಕಳು ಆ ನವಯೌವನದ ರೂಪರಾಶಿ. ಹಿಡಿದಿದ್ದ ಬೆರಳನ್ನು ಮತ್ತಷ್ಟು ಗಟ್ಟಿಯಾಗಿ ಹಿಡಿದುಕೊಳ್ಳುತ್ತಾ ಕುಡಿದವನಂತೆ ಮತ್ತನಾಗಿ ಬಿಸಿಯುಸುರಿನ ನಡುವೆ ಮೆಲ್ಲನೆ ನುಡಿದ "ಪಾರಿ" ಪಾರ್ವತಿ ಬಳಲಿದಳು. ಅವನು ತೋಳ್ಗಳ ಸೆರೆಯೊಳಗೆ ಬಂಧಿತಳಾಗಲು ತವಕಿಸಿದಳು. ಅದರೇ...

ಮರುಕ್ಷಣ ಯಾರೋ ಬೆನ್ನಿನ ಮೇಲೆ ಹೊಡೆದಂತೆ ಎಚ್ಚರಗೊಂಡು ಕ್ಷಣದಲ್ಲಿ [illegible] ಹಾರಿ ಹೋದಳು.

"ದೇವರೇ ! ನನ್ನನ್ನು ಕಾಪಾಡಿದೆ. ನನ್ನ ಕೆಟ್ಟ ಉದ್ದೇಶ ಆ ಮುಗ್ಧಳಿಗೆ ತಿಳಿಯದಂತೆ ಕಾಪಾಡಿದೆ." ಪಾಸಿಗೆಯಲ್ಲಿ ಹೊರಳಾಡುತ್ತಾ ಸುಂದರ ದೇವರಿಗೆ ಕೈ ಮುಗಿದ.

"ತಾಯಿ! ನನ್ನ ಬಯಕೆ ಅವರಿಗೆ ತಿಳಿಯದಂತೆ ಕಾಪಾಡಿದೆ" ಎಂದು, ನಗುತ್ತಿರುವ ಲಕ್ಷ್ಮಿಯ ಪಠದ ಮುಂದೆ ನಿಂತು ಕೈ ಮುಗಿದಳು ಪಾರ್ವತಿ... ಆದ್ರೆ ಮರುಕ್ಷಣ ಅಲ್ಲೇ ಕುಸಿದು ಮೌನವಾಗಿ ಅತ್ತಳು ಆ ಅಬಲೆ.

* * *

## [೬]

ಬೆಳಿಗ್ಗೆ ಸುಂದರ ಎದ್ದು ನೋಡಿದಾಗ ಚೆನ್ನಾಗಿ ಬಿಸಿಲು ಬಂದಿತ್ತು. ಗಡಿಯಾರದ ಕಡೆ ನೋಡಿದ ಗಂಟೆ ೮ ಬೇಗ ಬೇಗ ಸ್ನಾನದ ಮನೆ ಕಡೆಗೆ ಹೊರಟ. ಆದರೆ... ಕಲ್ಲಿನಂತೆ ಅಲ್ಲಿಯೇ ಸ್ಥಂಬಿಸಿ ಹೋದ. ಪಾರ್ವತಿ ಬಚ್ಚಲಮನೆಯಿಂದ ಹೊರಗೆ ಬರುತ್ತಿದ್ದಳು. ಸೀರೆಯನ್ನು ಅರ್ಧ ಮೈಗೆ ಸುತ್ತಿದ್ದಳು. ಹಾಲಿನ ಕೆನೆಯಂಥ ಮೈ ನಿಗನಿಗನೇ ಥಳಿಸುತ್ತಿತ್ತು. ಬಿಸಿ ನೀರು ಸ್ನಾನ ಮಾಡಿದ್ದರಿಂದ ಮುಖ ಬೆವತು ಕೆಂಪಾಗಿತ್ತು. ತಲೆಗೆ ಸ್ನಾನ ಮಾಡಿದ್ದ—ಳೇನೋ! ಕೂದಲನ್ನು ಟವಲಿನಿಂದ ಸುತ್ತಿ ಕಟ್ಟಿದ್ದಳು. ಅದ್ರೂ ಆ ಕಟ್ಟಿನಿಂದ ತಪ್ಪಿಸಿಕೊಂಡ ಗುಂಗುರು ಕಪ್ಪು ಕೂದಲು ಅವಳ ಮುಖದಲ್ಲಿ ಬಿದ್ದು, ತಾವರೆ ಹೂವಿನ ಮೇಲೆ ಕುಳಿತಿರುವ ದುಂಬಿಯಂತೆ ಕಂಡಿತು.

ಒಂದೇ ಕ್ಷಣದಲ್ಲಿ ಅವಳ ಸೌಂದರ್ಯವನ್ನು ಕಣ್ಣಲ್ಲಿ ಹೀರಿದ. ಭಾವನನ್ನು ನೋಡಿದ ಪಾರ್ವತಿಗೆ ಸನ್ನಿವೇಶವನ್ನು ಹೇಗೆ ನಿಭಾಯಿಸುವುದು ಎಂದು ತಿಳಿಯದೆ ಪೆಚ್ಚಾಗಿದ್ದಳು. ಬೆದರಿದ ಹರಿಣಿಯಂತೆ ಒಮ್ಮೆ ಅವನನ್ನು ನೋಡಿದಳು. [illegible] ತನ್ನಲ್ಲಿ ಯಾವ ಉದ್ವೇಗವೂ ಇಲ್ಲವೆಂಬಂತೆ ನಿಷ್ಕಲ್ಮಷವಾಗಿ ನಕ್ಕು "ಥೂ! ನಾಚಿಕೆಯಿಲ್ಲದ ಭಾವ! ಪೋಲೀಸನವನ ಸಿಗ್ನಲ್ ಲಕ್ಷ್ಯ ಮಾಡದೇ ಹೋಗುವ ದುಡುಕು ಡ್ರೈವರನಂತೆ ಬಂದು ಬಿಡ್ತಿಯಲ್ಲಾ" ಎಂದು ಒಳಗೆ ಓಡಿದಳು.

ಭಾರವಾಗಿ, ನಿಧಾನವಾಗಿ ನಿಟ್ಟುಸಿರು ಬಿಟ್ಟ ಸುಂದರ. ಹಲ್ಲು ಉಜ್ಜುತ್ತಿರುವಾಗ, ಸ್ನಾನ ಮಾಡುವಾಗ, ಯಾವ ಕೆಲಸ ಮಾಡುತ್ತಿದ್ದರೂ, ಅವಳ ರೂಪು ಆ ಸ್ನಾನ ಸುಂದರಿಯ ಲಾವಣ್ಯ ಕಣ್ಣೆದುರಿಗೆ ಬಂದು ನಾಟ್ಯವಾಡುತ್ತಿತ್ತು. ಮರೆಯಲು ಪ್ರಯತ್ನ ಪಟ್ಟಷ್ಟೂ, ಮತ್ತೆ, ಮತ್ತೆ, ನೆನಪಿಗೆ ಬರುತಿತ್ತು. ಆ ಬಂಗಾರು ಬೊಂಬೆಯಬಿಂಬ. ಆ ಬೊಂಬೆಯನ್ನು



"ಓ ಕನಸಿನಲೋಕದ ಚಕ್ರವರ್ತಿ ಅದು ನನ್ನ ಬೆರಳು"

ತನ್ನದಾಗಿ ಮಾಡಿಕೊಳ್ಳುವವನು ನಿಜವಾಗ್ಲೂ ಭಾಗ್ಯಶಾಲಿ.

"ಭಾವಾ! ತಿಂಡಿ ತಿನ್ನೋದಿಲ್ವೆ" ಪಾರ್ವತಿ ಕೂಗು ಕೇಳಿ ಮೌನವಾಗಿ ಕುಳಿತಿದ್ದ ಸುಂದರ ಎದ್ದು ಅಡಿಗೆ ಮನೆಗೆ ಹೋದ.

ಎವರ್ ಸಿಲ್ವರ್ ಚಿಕ್ಕ ತಟ್ಟೆಯಲ್ಲಿ ಉಪ್ಪಿಟ್ಟು ಇಡುತ್ತಿದ್ದಳು ಪಾರ್ವತಿ.

ಕೆಂಪು ಸೀರೆ, ಕೆಂಪು ರವಿಕೆ ತೊಟ್ಟು ಕೆಂಪನೆಯ ಬಳೆಗಳನ್ನು ಕೈ ತುಂಬಾ ಹಾಕಿರುವ ಅವಳನ್ನು ನೋಡಿದರೆ ಅಗ್ನಿಕನ್ಯೆಯ ನೆನಪಾಗುತ್ತಿತ್ತು. ಜಡೆ ಬಿಚ್ಚಿದ್ದರಿಂದ ಬೆನ್ನು ತುಂಬಾ ಕೂದಲು ಹರಡಿ, ಸ್ವೇಚ್ಛೆಯಾಗಿ ಹಾರಾಡುತ್ತಿತ್ತು. ಆಗಾಗ್ಗೆ ಮುಖವನ್ನು ಮುತ್ತಿಡಲು ಪ್ರಯತ್ನಿಸುವಾಗ ಅವಳು ಬಲವಂತದಿಂದ ಹಿಂದಕ್ಕೆ ತಳ್ಳುತ್ತಿದ್ದಳು.

ಸೋತು ಹೋಗುತ್ತಿದ್ದಿಯಾ, ಸೋತು ಹೋಗುತ್ತಿದ್ದಿಯಾ ಎಂದು ಅಂತರಾತ್ಮ ಎಚ್ಚರಿಸಿತು. ಸರಕ್ಕನೆ ಹಿಂತಿರುಗಿ ಹೊರಟು ಹೋದ ಪಾರ್ವತಿಗೆ ಅವನೇಕೆ ಹಾಗೆ ಹೊರಟು ಹೋದನೆಂದು ತಿಳಿಯದೆ ಅಚ್ಚರಿಯಿಂದ ನೋಡಿದಳು.

"Post" ಎಂದು ಕಾಗದವನ್ನು ಬಿಸಾಕಿ post man ಹೊರಟು ಹೋದ. ಸುಂದರ ತನ್ನ ರೂಮಿನಿಂದ ಬಂದು ಕಾಗದವನ್ನು ತೆಗೆದು ವಿಳಾಸವನ್ನು ನೋಡಿದ. ಪಾರ್ವತಿಯ ಹೆಸರಿಗೆ ಬಂದಿತ್ತು.

ತಲೆ ಗಂಟು ಹಾಕಿಕೊಳ್ಳುತ್ತಾ ಪಾರ್ವತಿ ಅಲ್ಲಿಗೆ ಬಂದು.

"ಯಾರದು ಭಾವ ಕಾಗದ" ಎಂದು ಕೇಳಿದಳು. "ನಿನಗೇ ತಗೋ, ಕಾಗದವನ್ನು ನೀಡಿದ ಅವನು. "ಬೇಡ, ನೀನೇ ಓದು" ಓದುತ್ತಿದ್ದರೆ ಅವನ ರೂಪನ್ನು ನೋಡುತ್ತಾ ನಿಂತಿರಬಹುದೆಂದು ಆಸೆ ಅವಳಿಗೆ.

"ಚಿ, ಪಾರ್ವತಿಗೆ ಆಶೀರ್ವಾದಗಳು.

ಇಲ್ಲಿ ಎಲ್ಲರೂ ಕ್ಷೇಮ

ಚಿ|| ಸುನಂದ ಹೆಣ್ಣುಮಗುವಿಗೆ ಜನ್ಮವಿತ್ತ ಸುದ್ದಿ ಕೇಳಿ ಮನೆಯವರೆಲ್ಲರೂ ಸಂತೋಷಪಟ್ಟರು. ಮಗು ಬಾಣಂತಿ ಆರೋಗ್ಯವೇ? ಅಳಿಯ ದೇವರ ಆರೋಗ್ಯ ಹೇಗಿದೆ. ನಿಮ್ಮ ಅಕ್ಕನನ್ನು ಎಚ್ಚರಿಕೆಯಿಂದ ನೋಡಿಕೊಳ್ಳುವುದು.

ಇಲ್ಲಿ ನಿಮ್ಮ ಅತ್ತಿಗೆ ಗಂಡು ಮಗುವನ್ನು ಹೆತ್ತಳು. ಮಗು, ಬಾಣಂತಿ ಕ್ಷೇಮವಾಗಿದ್ದಾರೆ.

ನಾನು ಸಾಡಿದ್ದು ಬರ್ತೀನಿ. ನಿಮ್ಮ ತಾಯಿ ಎಲ್ಲರಿಗೂ ಆಶೀರ್ವಾದ ತಿಳಿಸಿದಳು.

ಇತಿ
ನಿನ್ನ ತಂದೆ
ಸುಬ್ಬಾರಾಯರು.

ಸುಂದರ ಕಾಗದವನ್ನು ಮಡಿಸಿ, ಕವರೊಳಗೆ ಇಡುತ್ತಾ ಪಾರ್ವತಿಯ ಕಡೆ ನೋಡಿದ. ತದೇಕ ಚಿತ್ತಳಾಗಿ ಅವನ ಕಡೆಯೇ ನೋಡುತ್ತಿದ್ದಳು. ಅವಳು ಕೆಂಪೇರಿ ತಲೆ ಬಗ್ಗಿಸಿದಳು,

"ನೀನು ಹೊರಟು ಹೋಗ್ತೀಯಾ ಪಾರೂ"— ಏಕೆ, ಕೇಳಿದನೋ... ಅವನಿಗೆ ಅರಿವಿಲ್ಲದೆಯೇ ಅವಳನ್ನು ಕೇಳಿದ. "ನನ್ನ ಬಿಟ್ಟು ಹೊರಟುಹೋದರೆ ನಾನು ಹೇಗಿರಲಿ... ಬೇಡ, ನನ್ನ ತೊರೆದು ಹೋಗಬೇಡ" ಎಂಬ ಆವೇದನೆ ತುಂಬಿತ್ತು, ಆ ಪ್ರಶ್ನೆಯಲ್ಲಿ.

ಪಾರ್ವತಿಯ ಹೃದಯ ಕಲಕಿದಂತಾಯ್ತು. ಉದ್ವೇಗದಿಂದ ಅವನ ತುಟಿಗಳು ಚಲಿಸಿದವು, ಅವನ ಕಣ್ಣಲ್ಲಿ ಕಣ್ಣಿಟ್ಟು, ಅವನ ವಿಶಾಲವಾದ ಎದೆಯ ಮೇಲೆ ತಲೆಯಿಟ್ಟು ಅವನ ಬಲವಾದ ಕೊರಳಿಗೆ ತನ್ನ ಕೈಗಳ ಮಾಲೆ ಹಾಕಿ, 'ಇಲ್ಲ ಭಾವ' ನಿನ್ನ ಬಿಟ್ಟು ಹೋಗೋದಿಲ್ಲ... ನಿನ್ನ ಅಗಲಿ ಒಂದು ನಿಮಿಷ ಇರಲಾರೆ." ಎಂದು ಹೇಳಲು ಅವಳ ನಾಲಿಗೆ ಬಯಸಿತು. ಆದರೆ, ಆ ಮಾತು ಅಲ್ಲಿಯೇ ಕರಗಿ ಹೋಯ್ತು. ಒಂದು ನಿಟ್ಟುಸಿರು ಮಾತ್ರ ಹೊರ ಬಂತು.

ಅವನು ಅವಳನ್ನೇ ನೋಡುತ್ತಿದ್ದ. ಆ ನೋಟದಲ್ಲಿ ಏನು ಮಾಟವಿದೆಯೋ! ಪಾರ್ವತಿ ತಲೆ ತಗ್ಗಿಸಿದಳು. ತನ್ನ ಭಾವನೆಗಳನ್ನು ಮರೆ ಮಾಚಲು ನಕ್ಕಳು ಏನೂ ತಿಳಿಯದವಳಂತೆ ನಕ್ಕು "ಯಾಕೆ! ನಾನು

**ಗಾಂಧೀಜಿ ಹೇಳಿದ್ದು**



ಜೀವನದ ಕಣಜವನು ಪೂರ್ಣ ತೆರೆದಿಟ್ಟು
ರಾಗಿ ಬೀಸಿದರೆ ಬಡವರ ಮನೆಗೆ ಹಿಟ್ಟು.
ಹೀಗೆ ಬೀಸುವರೆಷ್ಟು ಮಂದಿ, ನನ ತಂಗಿ ?
ಎಲ್ಲರೂ ಧರಿಸುವರು ಬಿಳಿ ಖಾದಿ ಅಂಗಿ.

—ದಿನಕರ ದೇಸಾಯಿ

ಹೋಗುವುದು ನಿನಗಿಷ್ಟವಿಲ್ಲವೇ ಭಾವಾ" ಎಂದಳು, ಅವನ ಆ ಅದ್ಭುತವಾದ ಮಾಯಾಜಾಲ ತುಂಬಿದ ಕಣ್ಣುಗಳನ್ನು ದಿಟ್ಟಿಸಿ ನೋಡುತ್ತಾ.

ಅವನ ಕಣ್ಣುಗಳಲ್ಲಿ ತೀವ್ರವಾದ ಚಲನೆ ಕಾಣಿಸಿತು ಒಂದು ನಿಮಿಷ ಮೌನವಾಗಿದ್ದು ಅವನು, ಅಸಹಾಯಕನಂತೆ ನುಡಿದ.

"ನನಗೆ ಗೊತ್ತಿಲ್ಲ... ಪಾರೂ... ನನಗೆ ಗೊತ್ತಿಲ್ಲ." ಅವನು ಬೇಗ ಬೇಗ ಹೊರಟು ಹೋದ.

ಪಾರ್ವತಿ,ಕೆಳಗೆ ಬಿದ್ದ ಕಾಗದ ಕೈಗೆ ತಗೊಂಡಳು ಎರಡು ತೊಟ್ಟು ಕಣ್ಣೀರು ಅದರ ಮೇಲೆ ಬಿತ್ತು.

ಎದುರು ಬೀಳೋ ಹೃದಯವನ್ನು ಹದ್ದಿನಲ್ಲಿಡಲಾರದೆ ಸುಂದರ ಪಡುತ್ತಿರುವ ಯಾತನೆ ನೋಡಿ ಅವಳಿಗೆ ಕನಿಕರವಾಯ್ತು. ತನ್ನ ಮೂಕವೇದನೆಗೆ, ಅವನ ಯಾತನೆಗೆ ಕೊನೆಯೇ ಇಲ್ಲವೆ! ಒಂದು ವೇಳೆ ಅದು ಸುಖಾಂತವಾದ್ರೆ ಎಷ್ಟು... ಚೆನ್ನ ...ಆದರೆ... ಅದು ಸಾಧ್ಯವೇ ಇಲ್ಲ... ಇಲ್ಲ... ಎಂದಿಗೂ ಸಾಧ್ಯವೇ ಇಲ್ಲ...

ಹಾಗಾದ್ರೆ ಶೋಕವೇ ತಮ್ಮ ಆಸೆಗಳ ಅಂತ್ಯವೇ. ಅಯ್ಯೋ! ನನ್ನ ಜೀವನದಲ್ಲಿ ಬೀಳೋ ಆ ಏಟನ್ನು ಹೇಗೆ ಭರಿಸಲಿ! ಅದನ್ನು ಭರಿಸಲು ನನಗೆ ಶಕ್ತಿಯಿದೆಯೇ...

ಸುಖದ ಕೊನೆ ತನಗೆ ಲಭ್ಯವಿಲ್ಲ... ಕಷ್ಟವನ್ನು ಎದುರಿಸಲಾರಳು... ಹಾಗಾದ್ರೆ ಇದರ ಅಂತ್ಯವಾದರೂ ಏನು? ಪಾರ್ವತಿ ಭಾರವಾದ ಹೃದಯದಿಂದ ಮನೆಗೆ ಬೀಗವನ್ನು ಹಾಕಿ ಹೊರಟಳು.

ಬೀದಿಯ ಕೊನೆಯಲ್ಲಿ ಸುಂದರ ನಿಂತಿದ್ದ... ಕಾತುರದಿಂದ ನೋಡುತ್ತಾ...ಪಾರ್ವತಿ ನಡೆದು ಬರುವುದನ್ನು ನೋಡುತ್ತಿದ್ದರೆ, ಇಷ್ಟಕ್ಕೂ ಮುಂಚೆ ಅವನು ತಿರ್ಮಾನಿಸಿಕೊಂಡಿದ್ದ ಕೆಲವು ನಿಯಮಗಳು ಗಾಳಿಗೆ ಹಾರಿಹೋದವು.

ಅವಳು ಸಮೀಪ ಬರುವವರೆಗೂ ಅವಳ ಅಂದವನ್ನು ಅಣು ಅಣುವಾಗಿ ನೋಡಿ ಆನಂದಿಸುತ್ತಿದ್ದ ಸುಂದರ, ಅವಳು ತೀರಾ ಸಮೀಪಕ್ಕೆ ಬಂದೊಡನೆ ಪ್ರಯಾಸದಿಂದ ಅವನು ತಲೆ ತಿರುಗಿಸಿಕೊಂಡ.

"ನೀನು ಹೊರಟು ಹೋದೆ ಎಂದು ತಿಳಿದಿದ್ದೆ... ನನಗಾಗಿ ಇಷ್ಟು ಸಮಯ ಕಾದಿದ್ದೆಯೇನು ಭಾವಾ!"

"ನಿನಗಾಗಿ ಒಂದು ಯುಗ ಬೇಕಾದ್ರೂ ಕಾಯಬಹುದು" ಸುಂದರ, ಹೇಳಬೇಕೆಂದುಕೊಂಡ ಆದರೆ ಹೇಳಲಿಲ್ಲ.

"ಇಲ್ಲ...ಯಾರೋ ಸ್ನೇಹಿತ ಸಿಕ್ಕಿದ. ಅವನೊಡನೆ ಮಾತಾಡುತ್ತಿದ್ದೆ...ನೀನೂ ಬಂದೆ ಅವನು ಹೋದ...ಬಾ, ಹೋಗೋಣ" ಅವನು ಹೇಳುತ್ತಾ ಮುಂದೆ ನಡೆದ.

ಭಾವ ಹೇಳಿದ್ದ ಸಿಹಿ ಸುಳ್ಳನ್ನು ಕೇಳಿ ಮಧುರವಾಗಿ ನಕ್ಕ ಪಾರ್ವತಿ ಅವನನ್ನು ಹಿಂಬಾಲಿಸಿದಳು.

* * *

ನರ್ಸಿಂಗ ಹೋಂಗೆ ಹೋದಮೇಲೆ ಸುಂದರನ ಮನಸ್ಸಿಗೆ ಶಾಂತಿ ಸಿಕ್ಕಿತು. ಕಳಂಕವಿಲ್ಲದೇ ನಗುತ್ತಿರುವ ಹೆಂಡತಿಯನ್ನು, ಮುದ್ದಾದ ಮಗುವನ್ನು ನೋಡಿ "ಅಬ್ಬ ಇಲ್ಲಿದೆ ಅನಂತ ಶಾಂತಿ... ಇದನ್ನು ಬಿಟ್ಟು ನಾನು ಹೋಗಬಾರದು. ಹೆಂಡತಿಯನ್ನು ಮಗುವನ್ನು ಈ ದಿನವೇ ಮನೆಗೆ ಕರೆದುಕೊಂಡು ಹೋಗಬೇಕು... ಆಗ ಮಾತ್ರ ತಾನು ಪುನೀತನಾಗಿರಬಲ್ಲ. ಸುನಂದ ತನ್ನನ್ನು ಅಗ್ನಿಜ್ವಾಲೆಯಿಂದ ಕಾಪಾಡಬಲ್ಲಳು. ತನ್ನ ಕೆಟ್ಟ ಮನಸ್ಸನ್ನು ದಾರಿಗೆ ತಂದು, ಪಾತಾಳಕ್ಕೆ ಜಾರಿ ಬೀಳದಂತೆ ತಡೆಯಬಲ್ಲಳು... ಅವಳ ನಗುವೇ ತನಗೆ ರಕ್ಷೆ...ಪಾರ್ವತಿಯ ನಗು ತನಗೆ ಶಿಕ್ಷೆ..." ಸುಂದರ ಹೆಂಡತಿಯ ಕೈಯನ್ನು ಹಿಡಿದು ಕುಳಿತುಕೊಂಡು ಆಲೋಚಿಸುತ್ತಿದ್ದ.

ಪಾರ್ವತಿ ತಂದೆಯ ಕಾಗದ ಕೊಟ್ಟಳು ಅಕ್ಕನ ಕೈಗೆ... ಪಾರ್ವತಿ ಓದಿದಳು. ಅಷ್ಟರಲ್ಲಿ. ಡಾಕ್ಟರ ಬಂದರು.

"Hello good Morning Mr. Sundar. ಏನಂತಾಳೆ ನಿಮ್ಮ ಮಗಳು..." ಆಕೆ ನಗುತ್ತಾ ಸುಂದರನನ್ನು ಕೇಳಿ, ಸುನಂದಳನ್ನು ಪರೀಕ್ಷೆ ಮಾಡಿದರು... ಸುಂದರ ಮಗುವನ್ನು ಕೈಗೆತ್ತಿಕೊಳ್ಳುತ್ತಾ.

"ಡಾಕ್ಟರ! ನಾಳೆದಿನವೇ, ಸುನಂದಳನ್ನು, ಮಗುವನ್ನು ಕರೆದುಕೊಂಡು ಹೋಗಲೇ ಡಾಕ್ಟರ" ಎಂದು

ಕೇಳಿದ. ತಲೆ ಬಗ್ಗಿಸಿಕೊಂಡು [illegible] ಹಣ್ಣಿನ ರಸ ತೆಗೆಯುತ್ತಿದ್ದ ಪಾರ್ವತಿ ತಲೆ ಎತ್ತಿ ಸುಂದರನನ್ನು ನೋಡಿದಳು. ಅವಳ ಕಣ್ಣಲ್ಲಿ ನೀರು ತುಂಬಿತು...ಪಾಪವೆ...ಪಾಪವೆ, ತನ್ನನ್ನು ನೋಡಿ ಭಾವ ಹೆದರುತ್ತಿದ್ದಾನೆಯೇ! ತಾನು ಅವನಿಗೆ ಬಲೆ ಬೀಸಿ ಕೂತಿರುವ ಪಾತರಗಿತ್ತಿ ಎಂದು ಭಾವಿಸಿರುವನೇ ಅವನು...ದೇವರೇ! ನನಗೇಕೆ ಈ ಅಪಮಾನ. ಈ ಶಿಕ್ಷೆ...ಯಾವ ಅಪರಾಧಕ್ಕಾಗಿ ಈ ದಂಡನೆ? ಪಾರ್ವತಿ ತಲೆ ಬಗ್ಗಿಸಿಕೊಂಡಳು. ಅವಳ ಹೆಣ್ಣು ಹೃದಯ ದಂಡೆಯಲ್ಲಿ ಬಿದ್ದ ಮೀನಿನಂತೆ ಒದ್ದಾಡುತ್ತಿತ್ತು.

ಡಾಕ್ಟರ ನಕ್ಕರು..."No, Mr. Sundar ಈ ದಿನ ಮಾತ್ರ ನೀವು ಕರೆದುಕೊಂಡು ಹೋಗೋದಕ್ಕೆ ಸಾಧ್ಯವೇ ಇಲ್ಲ...ನನ್ನ ಕೇಳಿದ್ರೆ, ಸುನಂದ ಇನ್ನೂ ಹತ್ತು ದಿವಸ ಇಲ್ಲೇ ಇರಬೇಕೂಂತೀನಿ" !

"Ten days, My good God please doctor, ಸುನಂದ ಮನೆಗೆ ಬರದಿದ್ದರೆ" ಸುಂದರರಗೆ ಮಾತು ಬರಲಿಲ್ಲ. ಕಾರಣ ಪಾರ್ವತಿಯ ಒಂದು ಕೆನ್ನೆ ಮಾತ್ರ ಅವನಿಗೆ ಕಾಣಿಸಿತು. ಆ ನುಣುಪಾದ ಕೆನ್ನೆಯ ಮೇಲೆ ಮುತ್ತಿನಂಥ ಕಣ್ಣೀರು ಜಾರಿ ಬೀಳುತ್ತಿತ್ತು.

"You are an ideal husband Mr. Sundar ನಿನ್ನ ಹೆಂಡ್ತಿನ ಕರ್ಕೊಂಡು ಹೋಗಿ ಮಹಾನುಭಾವಾ ಎಂತ ನಾವು ಸಾವಿರ ಸಲ ಹೇಳಿದ್ರೆ ಕೆಲವರು, "ಡಾಕ್ಟರ ನಿಮಗೆ ಕೈ ಮುಗೀತೀನಿ, ಇನ್ನು ನಾಲ್ಕು ದಿವಸ ಇಲ್ಲೇ ಇದ್ಲಿ ಕೆಲವು ದಿವಸ ಪಾದ್ರೂ ಶಾಂತಿಯಿಂದ ಇರ್ತೀನಿ" ಅಂತ ಹೇಳ್ತಾರೆ ಆದ್ರೆ ನೀವೋ......ಹೆಂಡತಿ ಇಲ್ಲದ ಮನೇಲಿರೋದಕ್ಕೆ ಆಗೋಲ್ಲಾಂತ ಅಂತೀರಲ್ಲಾ.........ಒಳ್ಳೇ ಗಂಡ ನೀವು" ನಗುತ್ತಾ ಹೇಳಿದರು ಡಾಕ್ಟರ್.

ಬಿಳುಪೇರಿದ ಸುನಂದಳ ಮುಖ ನಾಚಿಕೆಯಿಂದ ಕೆಂಪಾಯ್ತು......ಸುಂದರ ಮೌನವಾಗಿದ್ದ.

"ನಾಳೆ ಕರ್ಕೊಂಡು ಹೋಗಿ Mr. Sundar but ನೀವು ತುಂಬಾ careful ಆಗಿರಬೇಕು. She is too weak ಮೆಡಿಸಿನ್ಸ್ time ಗೆ ಸರಿಯಾಗಿ ಕೊಡಬೇಕು. ಆಕೆಯದು ಪುನರ್ಜನ್ಮಾಂತ ಭಾವಿಸಿಕೊಂಡು ನೀವು ಜಾಗ್ರತೆಯಾಗಿ ನೋಡ್ಕೊಬೇಕು. ಈಗ ತಾಯಿ ಮುಖ್ಯ ಮೂರು ತಿಂಗಳು Rest ತಗೊಂಡ್ರೆ, ಅನಂತರ ಪರ್ವಾಯಿಲ್ಲ......" ಎಂದು ಮಗುವನ್ನು ನೋಡಿ ಮೃದುವಾಗಿ ಅದರ ಕೆನ್ನೆಯನ್ನು ತಟ್ಟಿ, "healthy baby" ಹೇಳುತ್ತ ಪಾರ್ವತಿಯನ್ನು ನೋಡಿ "ಓ ಪಾರ್ವತಿ ಬಂದಿದ್ದಾಳೆಯೇ. ನಾನು ನೋಡಲೇ ಇಲ್ಲ. ನೋಡಮ್ಮಾ ಇನ್ನು ಮೂರು ತಿಂಗಳು ನೀನು ಊರಿಗೆ ಹೋಗೋ ಹಾಗಿಲ್ಲ" ಎಂದರು

ಪಾರ್ವತಿ ತಲೆ ಎತ್ತಿ ದೃಢ ಸ್ವರದಲ್ಲಿ ಹೇಳಿದಳು.

"ಇಲ್ಲ ಡಾಕ್ಟರ್. ನಾನು ಇಲ್ಲಿರೋದಕ್ಕೆ ಆಗೋಲ್ಲ. ಅಲ್ಲಿ ನನ್ನ ತಾಯಿ ಒಬ್ಬರೇ ಕಷ್ಟ ಪಡ್ತಾಯಿದ್ದಾರೆ."

"ಓ! I see". ಎಂದು ಡಾಕ್ಟರ ನರ್ಸ್ [illegible] ಹೊರಟುಹೋದರು.

[illegible] ... ಈ ಮಗುವಿನ ... ಬಂದೇಕೆ ... [illegible] ... ಅವ! ... [illegible]

ತಂಗಿಯನ್ನು ನೋಡಿದಳು. ಪಾರ್ವತಿ ಹಣ್ಣಿನ ರಸ ತಗೊಂಡು ಅಕ್ಕನ ಬಳಿ ಬಂದಳು.

"ಪಾರಮ್ಮಾ" ಸುನಂದಳ ಕರೆ, ಅವಳಿಗೆ ತಾಯಿಯನ್ನು ನೆನಪಿಗೆ ತಂದಿತು.

"ಏನಕ್ಕಾ" ಪ್ರೀತಿಯಿಂದ ಕೇಳಿದಳು.

"ನನ್ನಿಂದ ನಿನಗೆ ತುಂಬಾ ತೊಂದರೆ ಅಲ್ಲವೇ?" ಸಹಾನುಭೂತಿಯಿಂದ ಕೇಳಿದಳು.

"ಇಲ್ಲಕ್ಕಾ ! ನನ್ನಿಂದ... ನಿನಗೆ, ಅಲ್ಲ, ನಿಮಗೆಲ್ಲಾ ತೊಂದ್ರೆ... ಬೇಸರ..."

"ಛಿ! ಹಾಗೆಲ್ಲಾ ಹೇಳ್ಬೇಡ... ನೀನು ಬಂದಿದ್ದರಿಂದ ನಾನು ನೆಮ್ಮದಿಯಾಗಿದ್ದೀನಿ..." ಆದ್ರೆ ಭಾವನಿಗೆ ನೆಮ್ಮದಿಯಿಲ್ಲ– ಎಂದುಕೊಂಡಳು ಪಾರ್ವತಿ. ಭಾವ ನೆಮ್ಮದಿಯಿಂದಿರಬೇಕಾದರೆ ತಾನೇನು ಮಾಡಬೇಕು....?

ಭಾವನಿಗೆ ನೆಮ್ಮದಿ ಸಿಕ್ಕಿದರೇ, ಅಕ್ಕನಿಗೆ ನೆಮ್ಮದಿಯೇ ಇರುವುದಿಲ್ಲ. ಅಕ್ಕನಿಗೆ ನೆಮ್ಮದಿ ಸಿಗಬೇಕಾದರೆ, ತಾನು ಅಲ್ಲಿರಬಾರದು.

ತಾನು ಊರಿಗೆ ಹೋದರೆ, ತನಗೆ ನೆಮ್ಮದಿಯಿರುವುದಿಲ್ಲ. ಮೂರು ಜನಕ್ಕೂ ನೆಮ್ಮದಿ ಸಿಗಬೇಕಾದರೆ ಏನು ಮಾಡಬೇಕು ! ಎಷ್ಟು ವಿಚಿತ್ರವಾದ ಪ್ರಕೃತಿ. ಒಬ್ಬರ ನೆಮ್ಮದಿ, ಮತ್ತೊಬ್ಬರ ನಿರಾಶೆಯಲ್ಲವೆ...? ಒಟ್ಟಿನಲ್ಲಿ ತಾನು ಬರಬಾರದಾಗಿತ್ತು, ಇಲ್ಲ... ಇಲ್ಲ... ನಾನು ಹುಟ್ಟಲೇಬಾರದಾಗಿತ್ತು....

ಪಾರ್ವತಿಗೆ, ತನ್ನ ನೆನಪಿಗೆ ತನಗೇ ನಗು ಬಂತು, ನಕ್ಕಳು.

ಸುನಂದ ತಂಗಿಯನ್ನು ನೋಡಿ.

"ಅದೇನು ಪಾರಮ್ಮ ! ನಿನ್ನಷ್ಟಕ್ಕೆ ನೀನೇ ನಗ್ತಾ ಇಲ್ಲ ಹುಚ್ಚಿಯ ಹಾಗೆ" ಎಂದಳು ಕಿರುನಗೆ ಬೀರುತ್ತ. "ಊಂ... ನನಗೆ ನಿಜವಾಗ್ಲೂ ಹುಚ್ಚೇ ಹಿಡಿದಿದೆ.... ನನ್ನ ಹುಚ್ಚಿಗೆ ಯಾರು ಕಾರಣ ಗೊತ್ತೇ...?" ಪಾರ್ವತಿ ನಗುತ್ತ ಸುಂದರನ ಕಡೆ ತಿರುಗಿದಳು. ಸುಂದರನಿಗೆ ಅವಳ ನಗು ಚೇಳು ಕಚ್ಚಿದಂತಾಯ್ತು... ಅವನ ಕಣ್ಣಮುಂದೆ ಪ್ರಪಂಚವೇ ತಿರುಗಿತು... ಪಾರ್ವತಿ ಅವನ ಬಳಿ ಮೆಲ್ಲನೆ ನಡೆದುಬಂದಳು... ಅವಳು ಒಂದೊಂದು ಹೆಜ್ಜೆಯಿಡುವಾಗ, ಸುಂದರಗೆ, ಯಾರೊ ತನ್ನ ಎದೆಯ ಮೇಲೆ ಭಾರವಾದ ಕಲ್ಲನ್ನು ಹಾಕುತ್ತಿರುವಂತಿತ್ತು.

ಪಾರ್ವತಿ ಅವನ ತೀರ ಸಮೀಪಕ್ಕೆ ಬಂದಳು... ಸುಂದರನ ಮುಖದಲ್ಲಿ ಭಯ, ಬೆವರಿನ ತೋರಣ ಕಟ್ಟಿತು.

ಪಾರ್ವತಿ ಅವನ ಬಳಿಯಿದ್ದ ಮಗುವನ್ನೆತ್ತಿಕೊಂಡು "ಇವಳೇ ನೋಡಕ್ಕಾ ನನ್ನ ಹುಚ್ಚಿಗೆ ಕಾರಣ..." ಎಂದು ಮಗುವನ್ನು ಮುದ್ದಿಟ್ಟು-ಕೊಳ್ಳುತ್ತಾ.

ಸುಂದರ ಒಮ್ಮೆ ನಿಟ್ಟುಸಿರುಬಿಟ್ಟ, ಬಿಡುಗಡೆ ಪಡೆದ ಕೈದಿಯಂತೆ.

"ನನ್ನಿಂದ ನಿಮಗೆಲ್ಲಾ ತೊಂದ್ರೆ"

ಸಂನಂದ ಸಂತೋಷದಿಂದ ನಗುತ್ತಾ, ನಸು ಕೋಪದಿಂದ ನುಡಿದಳು.

"ನಿನ್ನ ಹುಚ್ಚಿಗೆ ಇವಳೇ ಕಾರಣ ಅಲ್ಲವೆ-- ಹಾಗಾದ್ರೆ, ನೀನೇ ಅವಳನ್ನು ಇಟ್ಟುಕೋ... ಹುಚ್ಚು ಬಿಡುತ್ತೆ... ಈ ಪೋಕರಿ ನನ್ನ ತುಂಬಾ ಗೋಳು ಹೊಯ್ದುಕೊಳ್ಳುತ್ತಾಳೆ. ಅವಳನ್ನು ದೊಡ್ಡವಳನ್ನಾಗಿ ಮಾಡಿ ಮದುವೆ ಮಾಡೋ ಭಾರ ನಿನ್ನದು"

ಯಾಕೋ, ಆ ಮಾತುಗಳು ಸುಂದರನ ಮನಸ್ಸಿಗೆ ಚೂರಿ ತಿವಿದಂತಾಯ್ತು. "ಹಾಗಾದ್ರೆ, ನಿನ್ನ ನಾಳೆ ಕರ್‍ಕೊಂಡು ಹೋಗ್ತಿನಿ"... ಎಂದು ಮಾತನ್ನು ಬೇರೆ ದಾರಿಗೆ ತಿರುಗಿಸಿದ.

"ಪಾರೂ! ಇನ್ನೊಂದು ಮೂರು ತಿಂಗಳು ಈ ಬಡ ಅಕ್ಕನ ಮೇಲೆ ದಯೆ ತೋರಿಸಮ್ಮಾ... ನನ್ನ ಈ ಸ್ಥಿತೀಲಿ ಬಿಟ್ಟು ಹೋಗಬೇಡಮ್ಮಾ." ದೀನಳಾಗಿ ಕೇಳಿದಳು. ಅಕ್ಕನನ್ನು ನೋಡಿ ಪಾರ್ವತಿಗೆ "ಅಯ್ಯೊ" ಎನಿಸಿತು.

"ಈಗೇಕೆ ಆ ಮಾತಕ್ಕಾ? ಅಪ್ಪ ಬರಲಿ... ಆಮೇಲೆ ಇತ್ಯರ್ಥ ಮಾಡಿದರಾಯ್ತು" ಎಂದು ಆ ವ್ಯವಹಾರವನ್ನು ಅಷ್ಟಕ್ಕೇ ನಿಲ್ಲಿಸಿದಳು.

* * *

ಸಂಜೆ, ಭಾವ ನಾದಿನಿಯರು ಬೇಗನೆ ಮನೆಗೆ ಹೊರಟರು. ಅಲೆಗಳಂತೆ ನುಗ್ಗಿಬರುವ ಜನಗಳ ನಡುವೆ ನುಸುಳಿ ಭಾವನ ಅಗಲವಾದ ಬೆನ್ನಿನ ಹಿಂದೆ ತಾಯಿ ಹಸುವನ್ನು ಹಿಂಬಾಲಿಸುವ ಎಳೆ ಕರುವಿನಂತೆ, ನಡೆಯುತ್ತಿದ್ದ ಪಾರ್ವತಿ, ಇದ್ದಕ್ಕಿದ್ದ ಹಾಗೆ ಭಾವನ ಕೈ ಮೆಲ್ಲನೆ ಹಿಡಿದು ನಿಲ್ಲಿಸಿದಳು.

"ಭಾವ! ನನ್ನ ಆಶೆ ಒಂದು ನೆರವೇರಿಸುತ್ತೀಯಾ?" ನಡುಬೀದಿಯಲ್ಲಿ ನಿಂತು ನಗುತ್ತಾ ಕೇಳುತ್ತಿರುವ ಮುದ್ದು ನಾದಿನಿಯನ್ನು ನೋಡಿ ಅವನಿಗೆ ನಗು ಬಂತು. ಹೆಮ್ಮೆ ಅನ್ನಿಸಿತು...

"ಏನು ಬೇಕು?" ಏನು ಬೇಕಾದ್ರೂ ಕೇಳು ಕೊಡುತ್ತೇನೆ ಎಂಬ ಧೀರತೆಯಿತ್ತು-- ಅವನ ಚಿಕ್ಕ ಪ್ರಶ್ನೆಯಲ್ಲಿ...

ಕೇಳಲೋ, ಬೇಡವೋ... ಎಂದು ಯೋಚಿಸಿ ನಾಚಿದವಳಂತೆ, ತಲೆ ಬಗ್ಗಿಸಿ ನಂತರ ತಲೆ ಎತ್ತಿದಳು. ಅವಳ ಮುಖ ಕೆಂಪಾಗಿತ್ತು...

"ಮತ್ತೆ... ಮತ್ತೆ... ನನಗೆ ತುಂಬಾ... ವರ್ಷದಿಂದ ಇಂಗ್ಲಿಷ್ ಪಿಕ್ಚರ್ ನೋಡಬೇಕೂಂತ ಇಷ್ಟ... ನಮ್ಮೂರಲ್ಲಿ ನಮ್ಮ ಪಕ್ಕದ ಮನೆ ಹುಡಿಗಿ ಕೂಡಾ ನೋಡಿದ್ದಾಳೆ. ನನ್ನನ್ನು ಕರೆದುಕೊಂಡು ಹೋಗುತ್ತೀಯಾ ಭಾವ!" ಸುಂದರ ಅವಳನ್ನು ಆಶ್ಚರ್ಯದಿಂದ ನೋಡಿದ.

ಅವಳು ಅವನನ್ನೇ ಕಾತರದಿಂದ ನೋಡುತ್ತಿದ್ದಳು. "ಬೇಡ" ಎಂದು ಹೇಳಿಬಿಡುವನೇನೋ ಎಂಬ ಭೀತಿ, ಕರೆದುಕೊಂಡು ಹೋಗಲೇಬೇಕು ಎಂಬ ಪ್ರೀತಿಯ ಕಟ್ಟಳೆ ತುಂಬಿತ್ತು, ಅವಳ ಆಕರ್ಷಣೀಯವಾದ ಕಣ್ಣುಗಳಲ್ಲಿ.

ಸುಂದರಗೆ ಅವಳ ಬಯಕೆಯನ್ನು ಬೇಡವೆಂದು ಹೇಳಲು ಮನಸ್ಸಾಗಲಿಲ್ಲ. ಅದೂ, ಆ ಮುದ್ದಾದ ಅಂದವಾದ ಹುಡಿಗಿಯ ಪಕ್ಕದಲ್ಲಿ ಥಿಯೇಟರಿನಲ್ಲಿ ಕುಳಿತರೇ. ಓ, ಎಷ್ಟು ಜೋಡಿ ಕಣ್ಣುಗಳು ಅವರನ್ನು ಅಸೂಯೆಯಿಂದ ನೋಡಬಹುದು. ತನಗಾಗ ಎಷ್ಟು ಹೆಮ್ಮೆ ಆಗಬಹುದು. ಅವಳ ಪುಟ್ಟ ಕೆಂಪು ಕಿವಿಯಲ್ಲಿ ತಾನು ಪಿಸುಗುಟ್ಟುತ್ತಿದ್ದರೆ, ಅವರ ಅಸೂಯೆ ಮತ್ತಷ್ಟು ಹೆಚ್ಚಾಗಬಹುದಲ್ಲವೇ! ಅವನು ನಕ್ಕು, ಮೃದುವಾಗಿ ಹೇಳಿದ.

"ಖಂಡಿತ...ಹೋಗೋಣ...... ಅದೋ ಅದೇ ಥಿಯೇಟರ್. ಒಳ್ಳೇ ಪಿಕ್ಚರ್ ಇದೆ. ಬಾ ಹೋಗೋಣಾ"

ಪಾರ್ವತಿಯ ಕಣ್ಣುಗಳಲ್ಲಿ ಸಾವಿರ ದೀಪ ಬೆಳಗಿತು.

"ನೀನು ತುಂಬ ಒಳ್ಳೆಯವನು ಭಾವ, ನಿಜವಾಗ್಩ೂ ಒಳ್ಳೆಯವನು" ಸಂತೋಷದಿಂದ, ಕೃತಜ್ಞತೆಯಿಂದ ಅವಳು ಅವನನ್ನು ನೋಡಿ ಹೇಳಿದಳು.

ಅವನು ಗರ್ವದಿಂದ ಮುಂದೆ ನಡೆದ......ಅವಳು ಆಶೆಯಿಂದ ಅವನನ್ನು ಅನುಸರಿಸಿದಳು.

* * *

ಮಹಡಿಯಲ್ಲಿ ಒಬ್ಬರೂ ಇರಲಿಲ್ಲ. ಅದನ್ನು ನೋಡಿದ ಸುಂದರನಿಗೆ ಯಾಕೋ ಮನಸ್ಸಿಗೆ ವಿಚಿತ್ರವಾದ ತೃಪ್ತಿಯಾಯ್ತು. ಸುಂದರ ಫ್ಯಾನ್ ಕೆಳಗಡೆ ನೋಡಿ ಕುಳಿತುಕೊಂಡ. ಅವನ ಪಕ್ಕದಲ್ಲಿ ಪಾರ್ವತಿ ಮುದುಡಿಕೊಂಡು ಕುಳಿತು ಹಾಲನ್ನು ಒಮ್ಮೆ ನೋಡಿದಳು.

ಹಾಲಿನ ಗೋಡೆಗಳ ಮೇಲೆ ಸುಂದರವಾದ ಚಿತ್ರಗಳನ್ನು ಬರೆದಿದ್ದರು.........

ಒಂದು ಚಿತ್ರದಲ್ಲಿ..: ಒಂದು ಹೆಣ್ಣು ನಾಟ್ಯವಾಡುತ್ತಿರಲು, ಮರದ ಕೆಳಗೆ ಕುಳಿತಿದ್ದ ಗಂಡು ಕೈಯಲ್ಲಿ ಬಟ್ಟಲು ಹಿಡಿದು ಅರ್ಧ ನಿಮೀಳಿತ ನೇತ್ರನಾಗಿ ಅವಳನ್ನೇ ನೋಡುತ್ತಿದ್ದ...ಅವನ ಕಣ್ಣುಗಳಲ್ಲಿದ್ದ ಮಾದಕತೆಯನ್ನು ನೋಡಿದರೆ ಸುಂದರನ ಕಣ್ಣುಗಳು ನೆನಪಿಗೆ ಬಂತು.... ಅಪ್ರಯತ್ನವಾಗಿ ತಿರುಗಿ ಅವನನ್ನು ನೋಡಿದಳು.

ಅವಳ ಬಿಳಿಯ ಕೆನ್ನೆಯ ಮೇಲೆ ಕೆಂಪು ಕಲ್ಲು ಲೋಲಕ್ಕಿನ ಪ್ರತಿಬಿಂಬವನ್ನು ನೋಡುತಿದ್ದ ಸುಂದರ. ಪಾರ್ವತಿ ತಿರುಗಿ ನೋಡಿದ ತಕ್ಷಣ, ಒಂದು ಕ್ಷಣ ತತ್ತರಿಸಿ,ನಂತರ, ಬಿಳಿಯ ಪರದೆಯನ್ನು ತದೇಕ ದೃಷ್ಟಿಯಿಂದ ನೋಡಲು ಆರಂಭಿಸಿದ... ಪಾರ್ವತಿ ಹೊರಗಡೆ ನೋಡಿದಳು...

ಮಳೆ, ನಿಮಿಷ ನಿಮಿಷಕ್ಕೂ ಜೋರಾಗುತ್ತಿತ್ತು... ಮಿಂಚು ಸಿಡಿಲುಗಳ ಅರ್ಭಟ ಹೆಚ್ಚಾಗುತ್ತಿತ್ತು... ಮಿಂಚಿನ ಪ್ರಕಾಶದಲ್ಲಿ ಹೊಳೆಯುವ ಮಳೆ ನೀರನ್ನು ತನ್ಮಯಳಾಗಿ ನೋಡುತ್ತಿದ್ದಳು...ಗಾಜಿನ ಕಿಟಿಕಿಯ ಮೇಲೆ ಜಾರಿ ಬಳುಕಿ ಬಳುಕಿ ಬೀಳುವ ಆ ಮಳೆಹನಿಗಳು ನೋಡುತ್ತಿದ್ದರೆ, ಅವಳಿಗೆ ಎಲ್ಲಿಲ್ಲದ ಸಂತೋಷವಾಯ್ತು.

"ಪಿಕ್ಚರ್ ಸುರುವಾಯ್ತು... ನೋಡು ಪಾರೀ" ಎಂದು ಸುಂದರ ಹೇಳಿದಾಗ, ಪಾರ್ವತಿ ಬೆಚ್ಚಿ ನೋಡಿದಳು... ಹಾಲು ಕತ್ತಲಾಗಿತು... ಏಕೋ ಅವಳಿಗೆ ದಿಗಿಲಾಯಿತು... ತೆರೆಯ ಮೇಲೆ ವಿಚಿತ್ರದ ಉಡುಪುಗಳನ್ನು ಧರಿಸಿ ಬರುವ ಗಂಡುಹೆಣ್ಣುಗಳನ್ನು "ಝೂ" ಮೊದಲಬಾರಿಗೆ ನೋಡುವ ಹುಡಿಗಿಯಂತೆ ನೋಡುತ್ತಿದ್ದಳು. ಸುಂದರ ಅವಳನ್ನು ನೋಡಿ ನಕ್ಕ...

ನಗುವಾಗ ಅವನ ಬಿಳಿಯ ಹಲ್ಲುಗಳನ್ನು ನೋಡಿದ ಪಾರ್ವತಿ "ಎಷ್ಟು ಹೊಳಪಾಗಿದೆ ಮುತ್ತಿನ ಹಾಗಿದೆ" ಎಂದುಕೊಂಡಳು...

ಚಿತ್ರದಲ್ಲಿ ಮೊದಲಬಾರಿಗೆ ರೋಮಿಯೋ ಜುಲಿಯೇಟಳನ್ನು ಚುಂಬಿಸಿದಾಗ, ಹಳ್ಳಿಯ ಮುಗ್ಧೆ ಪಾರ್ವತಿ ನಡುಗಿಹೋದಳು. ಭಯದಿಂದ ಕಣ್ಣು ಮುಚ್ಚಿಕೊಂಡಳು. ನಾಚಿಕೆಯಿಂದ ಅವಳ ಮೈ ಕಂಪಿಸಿತು. ಗಟ್ಟಿಯಾಗಿ ಕಣ್ಣು ಮುಚ್ಚಿದರೂ, ಮನಸ್ಸಿನಲ್ಲಿ ಮತ್ತೆ ಅದೇ ದೃಶ್ಯವನ್ನು ನೋಡಬೇಕೆಂದು ಬಯಕೆ... ಮೆಲ್ಲನೆ ಕಣ್ಣು ತೆರೆದಳು... ಈಗ ಹೊಡೆದಾಟದ ದೃಶ್ಯ ನಡೆಯುತ್ತಿತ್ತು... ಅಬ್ಬ... ಅಲ್ಲಿರುವ ಸಾಮಾನುಗಳೆಲ್ಲಾ ಪುಡಿಪುಡಿಯಾಗುತ್ತಿತ್ತು. ಆದರೆ, ಎಲ್ಲರೂ ಸುಮ್ಮನೆ ನಿಂತಿದ್ದಾರೆ...ಅಬ್ಬ! ಎಷ್ಟು ಭಯಂಕರವಾಗಿ ಇಬ್ಬರೂ ಹೋರಾಡುತ್ತಿದ್ದಾರೆ... ಭಾವನ ಕಡೆ ನೋಡಿದಳು. ಅವನು ಅಂಗೈಯಿಂದ ಮುಖವನ್ನು ಉಜ್ಜಿಕೊಳ್ಳುತ್ತಾ ತಲೆ ಬಗ್ಗಿಸಿಕೊಂಡು ಕುಳಿತಿದ್ದ... ಪಾರ್ವತಿ, ಭಯದಿಂದ ನೋಡಿದಳು. ಅಬ್ಬ! ಅವರ ಜಗಳ ಇನ್ನೂ ಮುಗಿಯಲೇ ಇಲ್ಲ.

"ಭಾವಾ" ಬಹು ಮೆಲ್ಲನೆ ಕೂಗಿದಳು. ಅವನು ತಲೆ ಎತ್ತಿ ನೋಡಿದ... ಅವನ ಕಣ್ಣುಗಳು ಕೆಂಪಾಗಿತ್ತು. ಗುಂಗುರು ಕೂದಲು ಕೆದರುತ್ತಾ...

"ಏನು ಪಾರಿ"... ಉದ್ವೇಗವನ್ನು ಅಡಗಿಸಿಕೊಂಡು ಕೇಳಿದ.

"ಭಯ ಆಗುತ್ತೆ ಭಾವ" ಹತ್ತಿರಕ್ಕೆ ಬರುತ್ತಾ ಅಂದಳು, ಆ ನಿಷ್ಕಲ್ಮಷ ಹಳ್ಳಿಯ ಚಲುವೆ. ಸುಂದರನ ಹೃದಯದ ಹೊಡೆತ ಜೋರಾಯ್ತು... ಅವಳ ಮೃದುವಾದ ಭುಜ ಆತನ ಭುಜಗಳನ್ನು ಸ್ಪರ್ಶಿಸಿತು. ಬೆಳಿಗ್ಗೆ ತಲೆಗೆ ಸಾಂಬ್ರಾಣಿ ಹೊಗೆ ಹಾಕಿಕೊಂಡಿರಬೇಕು. ಆ ಮಧುರ ಸುವಾಸನೆ ಅವನನ್ನು ಯಾವದೋ ದೇವಲೋಕಕ್ಕೆ ಎಳೆದುಕೊಂಡು ಹೋಯ್ತು. ಭೀತಿಯಿಂದ ನೋಡುವ ಅವಳ ಕಣ್ಣುಗಳು ಅವನನ್ನು ಮೈ ಮರೆಯುವಂತೆ ಮಾಡಿತು. ಅವನು ಅವಳ ದುಂಡಾದ ಮೆತ್ತನೆಯ ಕೈಯನ್ನು ಬಲವಾಗಿ ಹಿಡಿದು,

"ಭಯವಿಲ್ಲ ಪಾರೂ" ಎಂದ... ಪಾರ್ವತಿ ಮೈ ರಕ್ತ ಬಿಸಿ ಆಯ್ತು... ಕೈಯನ್ನು ಅವನ ಹಿಡಿತದಿಂದ ಬಿಡಿಸಿಕೊಳ್ಳಲೂ ಇಚ್ಛೆಯಿಲ್ಲದವಳಂತೆ ಮೌನವಾಗಿ ಕುಳಿತಳು.

ಮಾಡಿಯ ಮೇಲೆ ನಿಂತು ಸುಂದರಿ, ಕೆಳಗೆ ತೋಟದಲ್ಲಿ ನಿಂತಿರುವ ಯುವಕನೊಡನೆ ಮಾತನಾಡುತ್ತಾಳೆ. ಅವನು ನೂಲೇಣಿ ಸಹಾಯದಿಂದ ಮೇಲೆ ಹೋಗುತ್ತಾನೆ... ಅಲ್ಲಿ ಅವಳನ್ನು ಭರದಿಂದ ಅಪ್ಪಿ ಚುಂಬಿಸುತ್ತಾನೆ.

ಈ ಬಾರಿ ಪಾರ್ವತಿ ಕಣ್ಣು ಮುಚ್ಚಲಿಲ್ಲ. ಆದರೆ, ಅಪ್ರಯತ್ನವಾಗಿ ಭಾವನನ್ನು ನೋಡಿದಳು.

ಅವನು ಅವಳನ್ನು ನೋಡಿದ... ಅಬ್ಬ! ಆ ಕಣ್ಣುಗಳಲ್ಲಿ ತುಂಬಿತ್ತು ಆಶೆ...ಅವನು ಬಿಸಿಯುಸಿರು ಬಿಟ್ಟ. ಅವನು ತನ್ನ ಕೈಲಿರುವ ಅವಳ ಕೈಯನ್ನು ಮತ್ತಷ್ಟು ಬಿಗಿಯಾಗಿ ಹಿಡಿದ...ಪಾರ್ವತಿ ಚೈತನ್ಯ ರಹಿತಳಂತೆ ಕುಳಿತಿದ್ದಳು.

ಆ ಸುಂದರಿ ಸತ್ತಳೆಂದು ತಿಳಿದು ಅವನು ವಿಷವನ್ನು ಕುಡಿದು ಮೃತ್ಯುವನ್ನು ಅಪ್ಪುತ್ತಾನೆ. ಅವಳು ಎಚ್ಚರಗೊಂಡು, ತನ್ನ ಪ್ರಿಯನ ಕಳೇಬರವನ್ನು ನೋಡಿ, ಅವನನ್ನು ಚುಂಬಿಸಿ ಅವಳೂ ವಿಷ ಕುಡಿದು ಸಾಯುತ್ತಾಳೆ.

ಪಾರ್ವತಿಗೆ ಅಳು ಬಂತು. ಇಬ್ಬರೂ ಎಷ್ಟು ಚೆನ್ನಾಗಿದ್ದರು. ಆಗಲೇ ಅವರಿಗೆ ಸಾವು ಬಂತು. ಪಾರ್ವತಿ ಭಾವನ ಭುಜದ ಮೇಲೆ ತಲೆ ಇಟ್ಟು ಅತ್ತಳು, ಆ ಪ್ರೇಮಿಗಳ ಸಾವಿಗಾಗಿ.

ಸುಂದರ ಅವಳನ್ನು ಹತ್ತಿರಕ್ಕೆ ಎಳೆದುಕೊಂಡ ..."ಛಿ! ಪಾರೂ!! ಸುಮ್ಮನಿರು ರಾಜಾ"-- ಪಾರ್ವತಿಗೆ ಆ ದುಃಖದಲ್ಲೂ ಆಶ್ಚರ್ಯವಾಯ್ತು. ಭಾವ ಅಕ್ಕನನ್ನು ಪ್ರೀತಿಯಿಂದ "ರಾಜಾ" ಎಂದು ಕರೆಯುವುದು ಅವಳಿಗೆ ಗೊತ್ತು... ಆದ್ರೆ ತನ್ನನ್ನು ಇಂದು "ರಾಜಾ" ಎಂದು ಕರೆದು ಸಂತಯಿಸುತ್ತಿ

ಪ್ಪಾನೆ. "ಓಹೋ! ಆ ಪ್ರೀತಿಯ ಕರೆ ಕೇಳಲು ನಾನು ಎಷ್ಟು ಅದೃಷ್ಟ ಮಾಡಿರಬೇಕು!!"

ಹಾಲ್‌ನಲ್ಲಿ ದೀಪಗಳು ಬೆಳಗಿದವು. ಸುಂದರನ ಮುಖ ನೋಡಲು ಪಾರ್ವತಿಗೆ ನಾಚಿಗೆ ಆಯ್ತು— ಸುಂದರ ಒಮ್ಮೆ ಅವಳನ್ನು ನೋಡಿ ತಲೆ ಬಗ್ಗಿಸಿ ಮುಂದೆ ನಡೆದ... "ನಿನ್ನ ಬೆನ್ನ ಹಿಂದೆ ನಿಂತರೇ ಪ್ರಪಂಚವನ್ನೇ ಎದುರಿಸಬಲ್ಲೆ" ಎಂಬಂತೆ, ಅವನ ಬೆನ್ನ ಹಿಂದೆ ನಡೆದಳು ಪಾರ್ವತಿ.

ಮೈ ನಡುಗಿಸುವ ಚಳಿ ಆಪ್ಯಾಯಮಾನವಾಗಿತ್ತು ಪಾರ್ವತಿಗೆ...ತುಂತುರು ಹನಿಗಳು ಬೀಳುತ್ತಿತ್ತು... ಆಗೊಮ್ಮೆ, ಈಗೊಮ್ಮೆ ಮಿಂಚುತ್ತಿತ್ತು...ಸ್ವರ್ಗದ ನಂದನವನದಲ್ಲಿ ಗಂಧರ್ವ ಪ್ರೇಮಿಗಳು ಸಂಚರಿಸುತ್ತಿದ್ದರೆ, ಪಾರಿಜಾತ ವೃಕ್ಷದಿಂದ ಹೂಗಳು ಮೆಲ್ಲನೆ ಮೇಲೆ ಬೀಳುವಂತೆ ತಮ್ಮಿಬ್ಬರ ಮೇಲೆ ಹನಿಗಳು ಬೀಳುತ್ತಿದೆ ಎಂದುಕೊಂಡ. ಆದರೆ ಆ ಭಾವನೆ ಮನಸ್ಸಿನಲ್ಲಿ ಬಂದೊಡನೆ ಹಠಾತ್ತನೆ ರಕ್ತವೆಲ್ಲಾ ಮುಖದಲ್ಲಿ ನುಗ್ಗಿ ಬಂದಂತಾಯ್ತು. ದಾರಿಯಲ್ಲಿ ಹೋಗುತ್ತಿದ್ದ Taxiಯನ್ನು ಕೂಗಿ ನಿಲ್ಲಿಸಿದ— ಸುಂದರ. ಇಬ್ಬರೂ ಅದರಲ್ಲಿ ಹತ್ತಿ ಕುಳಿತರು ಹೋಗಬೇಕಾದ ಸ್ಥಳವನ್ನು ಹೇಳಿದ ಸುಂದರ. ಕಾರು ವೇಗವಾಗಿ ಹೊರಟುಬಿಟ್ಟಿತು.

"ಏನಾದ್ರೂ ತಿಂತೀಯಾ ಪಾರೂ!"

"ಬೇಡ ಭಾವಾ! ಏಕೋ ಹಸಿವೇ ಇಲ್ಲ. ಸಾಯಂಕಾಲ ಅಕ್ಕ ಕರಿಸಿ ಕೊಟ್ಟ ತಿಂಡಿ ಇನ್ನೂ ಗಂಟಲ್ಲೇ ಇದೆ."

"ಅಕ್ಕ" ಎಂಬ ಮಾತು ಕಿವಿಗೆ ಬಿದ್ದೊಡನೆ ಸುಂದರ ಮೌನಿಯಾದ. ಅವನ ಕಣ್ಣು ಮುಂದೆ ಸುನಂದಳ ನಿಷ್ಕಲ್ಮಷ ಮುಖ ತೇಲಿ ಬಂದು ಅವಳ ಕಲ್ಮಷವಿಲ್ಲದ ನಗು ನೆನಪಿಗೆ ಬಂತು.

ನಾನು ನಡೆಯುತ್ತಿರುವ ದಾರಿ ಸರಿಯಾದುದೇ? ಎಂದು ಒಂದು ಕ್ಷಣ ಅವನ ಹೃದಯ ಉಯ್ಯಾಲೆ ಆಡಿತು.

Taxi ತುಂಬಾ ವೇಗದಿಂದ ಓಡುತ್ತಿತ್ತು. ಆ ಮಳೆಯಲ್ಲೂ ಅವನು ವೇಗವನ್ನು ಕಡಿಮೆಮಾಡಲಿಲ್ಲ. Driver ಕಾರನ್ನು turn ಮಾಡುವಾಗ ಪಾರ್ವತಿ ಅವನ ಮಡಿಲಿಗೆ ಜಾರಿ ಜಾರಿ ಬೀಳುತ್ತಿದ್ದಳು. ಅವಳು ಎಷ್ಟೇ ಪ್ರಯತ್ನಪಟ್ಟರೂ ಆ driver ಹೋಗುವ ರಭಸದಲ್ಲಿ ಸ್ಥಿರವಾಗಿ ಕುಳಿತುಕೊಳ್ಳಲು ಆಗಲಿಲ್ಲ.

ಅವಳು ಒಂದೊಂದು ಬಾರಿ ಅವನ ಮಡಿಲಲ್ಲಿ ಬೀಳುವಾಗ ಆ ಚಳಿಯಲ್ಲೂ ಸುಂದರ ಬೆವರುತ್ತಿದ್ದ. ಆದರೆ ಅವಳು ಮಲ್ಲಿಗೆ ಹೂವಿನದಂಡೆಯಂತೆ, ಮೃದುವಾಗಿ ಬೀಳುವಾಗಲೆಲ್ಲಾ ಅವನು ಸ್ವರ್ಗವನ್ನು ನೋಡಿ ಬರುತ್ತಿದ್ದ. ಆ Taxi driver ಅವನಿಗೆ ಆಪ್ತ-ಮಿತ್ರನಂತೆ ಕಂಡ.

ಮಿಂಚಿನ ಬೆಳಕಿನಲ್ಲಿ ಸುಂದರ ಅವಳನ್ನು ನೋಡಿದ. ಆದರೆ ಅವಳ ಕಣ್ಣಿನ ಪ್ರಕಾಶದ ಮುಂದೆ ಮಿಂಚು ಚಿಕ್ಕ ದೀಪದಂತೆ ಕಾಣಿಸಿತು. ಮನೆ ಸಮೀಪಿಸಿತು. ಅವರ ಮಧುರ ಪ್ರಯಾಣ ಮುಗಿಯಿತು.

ಪಾರ್ವತಿ ಮೊದಲು ಕಾರಿಳಿದು ಮನೆಯ ಬೀಗವನ್ನು ತೆಗೆದು ದೀಪ ಹಾಕಿ ಅಡಿಗೆಮನೆಗೆ ಹೋದಳು. ಸುಂದರ ಬಾಡಿಗೆಯನ್ನು ಕೊಟ್ಟು ಒಳಗೆ ಬಂದು ಬಾಗಿಲು ಹಾಕಿದ. ಆ ಸದ್ದನ್ನು ಕೇಳಿದ ಪಾರ್ವತಿಗೆ ಹೃದಯ ಜೋರಾಗಿ ಬಡಿಯಿತು.

ಸುಂದರ ಉಡುಪು ಬದಲಾಯಿಸಿದ. ಆ ಮಳೆ ಚಳಿಯಲ್ಲೂ ಅವನಿಗೆ ಸೆಖೆಯಾಯ್ತು. ಹಾಕಿದ್ದ ಬನಿಯನ್ ತೆಗೆದು ಕಿಟಕಿಯ ಬಳಿ ಹೋಗಿ ನಿಂತ. ಪ್ರಕೃತಿಯ ಭೀಕರ ಸೌಂದರ್ಯವನ್ನು ದಿಟ್ಟಿಸುತ್ತಾ ನಿಂತಿದ್ದ.

ಸೀರೆ ಬದಲಾಯಿಸಿಕೊಂಡು ಪಾರ್ವತಿ ಅಡಿಗೆಮನೆಗೆ ಬಂದು ಹಾಲು ಕಾಯಿಸಿ ಒಂದು ಲೋಟಾದಲ್ಲಿ ಬಗ್ಗಿಸಿಕೊಂಡು ಭಾವನ ರೂಂಗೆ ನಡೆದಳು, ಪ್ರಿಯನನ್ನು ಸಂಧಿಸಲು ಹೋದ ಅಭಿಸಾರಿಕೆಯಂತೆ —"ಭಾವಾ!"

ತಿರುಗಿ ನೋಡಿದ ಸುಂದರ. ಅವಳು ಬಾಗಿಲಲ್ಲಿ ನಿಂತಿದ್ದಳು. ಮೈಸೂರು ಕ್ರೇಪ್ ಬಿಳೀ ಸೀರೆ ಉಟ್ಟಿದ್ದಳು. ಬಿಳೀ ಮಲ್ಲು ರವಿಕೆ ತೊಟ್ಟಿದ್ದಳು. ಕೈಯಲ್ಲಿ ಬಿಳೀ ಬಳೆಗಳನ್ನು ಹಾಕಿದ್ದಳು. ಕಿವಿಯಲ್ಲಿ ಮುತ್ತಿನ ಓಲೆ. ಈಗ ಅವಳು ಶ್ವೇತಸುಂದರಿಯಂತೆ ಕಂಡಳು. ಮನ್ಮಥನನ್ನು ಕಾಣಲು ಬಂದ ರತಿಯಂತಿದ್ದಳು.

"ಹಾಲು ಕುಡೀತೀಯಾ ಭಾವಾ?" ಮತ್ತೆ ಕೇಳಿದಳು. ಅವಳ ಮಾತಲ್ಲಿ ವೀಣೆಯ ನಾದವಿತ್ತು.

ಅವನು ಅವಳ ಬಳಿ ಬಂದ. ಅವನ ಬಲವಾದ ಎದೆಯನ್ನು ನೋಡಿ ಆಸೆ ನಕ್ಕಿತು. ಪುಷ್ಟವಾದ ಅವನ ತೋಳನ್ನು ಕಂಡು ಉದ್ರೇಕ ಉಯ್ಯಾಲೆಯಾಡಿತು. ರೋಮನ್ ವಿಗ್ರಹದಂತೆ ನಿಂತಿದ್ದ ಅವನನ್ನು ನೋಡಿ ಪಾರ್ವತಿ ತನ್ನನ್ನು ತಾನೇ ಮರೆತಳು. ಉಕ್ಕುವ ಉದ್ರೇಕವನ್ನು ಅಡಗಿಸಿಕೊಳ್ಳಲು ಪ್ರಯತ್ನಿಸುತ್ತಾ ಅವಳು ತಲೆ ಬಗ್ಗಿಸಿದಳು. ಲತೆಯಂತೆ ಅವಳ ಶರೀರ ಸ್ವಲ್ಪ ಅದಿರಿತು. ಅವಳ ಕೈಯಿಂದ ಅವನು ಹಾಲಿನ ಲೋಟವನ್ನು ತೆಗೆದುಕೊಂಡ. ಆಗ ಅವನ ಕೈ ಅವಳ ಕೈಯನ್ನು ಹಿಡಿಯಿತು. ಎಲ್ಲೋ ಸಿಡಿಲು ಬಿತ್ತು. ಮಳೆ ವಿಪರೀತವಾಯ್ತು, ಗಾಳಿ ಹೆಚ್ಚಾಯ್ತು. ಕಿಟಕೀ ಬಾಗಿಲುಗಳು 'ಪಠಾರ್,-ಪಠಾರ್' ಎಂದು ಹೊಡೆದು ಕೊಳ್ಳುತ್ತಿತ್ತು. ಅಲ್ಲಿ ನಿಂತರೆ ಎಲ್ಲಿ ಅವನ ಎದೆಯಲ್ಲಿ ಮುಖವಿಟ್ಟು ಮೈಮರೆತು ಬಿಡುವೆನೋ ಎಂಬ ಭಯದಿಂದ ಪಾರ್ವತಿ ಮೆಲ್ಲನೆ ಹೋಗಿ ಕಿಟಕಿಯ ಬಳಿ ನಿಂತಳು. ಗಾಳಿಗೆ ಅವಳ ಬಿಳಿಯ ಸೀರೆಯ ಸೆರಗು ಹಾರಾಡುತ್ತಿತ್ತು, ಸುಂದರನನ್ನು ಆಹ್ವಾನಿಸುತ್ತಿದೆಯೇನೋ ಎಂಬಂತೆ. ಅವಳು ಕಿಟಕೀ ಬಾಗಿಲು ಮುಚ್ಚಿದಳು.



ಮರುನಿಮಿಷ ಅವನ ತೋಳ್‌ತೆಕ್ಕೆಯಲ್ಲಿ ಬಂಧಿತಳಾಗಿದ್ದಳು

ಹೃದಯದಲ್ಲಿ ಉದ್ವೇಗವನ್ನು ಅಡಗಿಸಿಕೊಳ್ಳಲು ಅವಳು ವೃಥಾ ಪ್ರಯತ್ನಿಸುತ್ತಿದ್ದಳು. ಕಣ್ಣಿನಲ್ಲಿ ಬಯಕೆ ತುಂಬಿತ್ತು; ದೇಹ ಅವನ ಆಲಿಂಗನಕ್ಕಾಗಿ ಮಿಡಿಯುತ್ತಿತ್ತು; ಬಯಕೆ ಆಸೆಗಳು ಅವಳ ಕಣ್ಣುಗಳಲ್ಲಿ ಜ್ವಲಿಸಿತು.

ಸುಂದರನ ಹೃದಯದಲ್ಲಿ ಈಗ ಪಾರ್ವತಿಯನ್ನು ಬಿಟ್ಟು ಬೇರೆ ಇನ್ನೇನೂ ಇರಲಿಲ್ಲ. ಅವನ ನರನರಗಳು ಪಾರ್ವತೀ! ಪಾರ್ವತೀ! ಎಂದು ಕೂಗುತ್ತಿತ್ತು. ನೀನಿಲ್ಲದೆ ನಾನಿಲ್ಲ ಎಂದು ಹೃದಯ ಚೀರುತ್ತಿತ್ತು. ಆದರೆ ಅವನು ಮೂಕನಾದ. ಅವಳನ್ನೇ ನೋಡುತ್ತ ನಿಂತಿದ್ದ.

ಅವಳು ಬಲವಂತದಿಂದ ಬರಲು ಒಪ್ಪದಿರುವ ಕಾಲುಗಳನ್ನು, ಪ್ರಯತ್ನದಿಂದ ಮುಂದೆ ಇಟ್ಟಳು. ನಡೆ ಬಿಡಿ ಹೆಣಿಯಲು ಅವಳು ಮುಂದೆ ಹೋಗಲಾರದೆ ಬಳಲಿ ನಿಂತಳು.

"ಅಯ್ಯೋ ಹೋಗಬೇಡ ಪಾರೂ" ಎಂದು ಗಟ್ಟಿಯಾಗಿ ಹೇಳಬೇಕೆಂದುಕೊಂಡ ಸುಂದರ... ಆದರೆ ಅವನ ಕಣ್ಣು ಅದನ್ನು ಹೇಳಿತು.

ಅವಳು ಒಮ್ಮೆ ತಿರುಗಿ ನೋಡಿದಳು. ಆ ಕಣ್ಣುಗಳು... ಆ ದೊಡ್ಡ ಕಪ್ಪು ಕಣ್ಣುಗಳು, ತಾನು ನೋಡಿದ ದಿನವೇ ನೋಟಕ್ಕೆ ಸೋತುಹೋದ, ಆ ಆಕರ್ಷಣೀಯವಾದ ಕಣ್ಣುಗಳು—ತನ್ನನ್ನೇ ನೋಡುತ್ತಿವೆ, ಬಾಯಲ್ಲಿ ಹೇಳಲಾರದುದನ್ನು ಕಣ್ಣು ಹೇಳುತ್ತಿವೆ.

ಭಯಂಕರವಾದ ಸಿಡಿಲ ಶಬ್ದದೊಡನೆ ದೀಪ ಆರಿತು "ಭಾವಾ!" ಎಂದು ಪಾರ್ವತಿ ಆರ್ತಳಾಗಿ ಕೂಗಿದಳು. ಮರುನಿಮಿಷ ಅವನ ಬಲವಾದ ತೋಳ್ತೆಕ್ಕೆಯಲ್ಲಿ ಅವಳು ಬಂಧಿತಳಾಗಿದ್ದಳು.

ಅತ್ತು ಅತ್ತು ತನಗಿಷ್ಟವಾದ ಬೊಂಬೆಯನ್ನು ಪಡೆದು ತೃಪ್ತಿಹೊಂದುವ ಮಗುವಿನಂತೆ ಅವಳು ಅವನ ಆಲಿಂಗನದಲ್ಲಿ ಪೂರ್ಣ ಶಾಂತಿ ಹೊಂದಿದಳು. ಬೆಚ್ಚನೆಯ ಸ್ಪರ್ಶದಲ್ಲಿ, ಮೆತ್ತನೆಯ ಹಾಸುಗೆಯಲ್ಲಿ ಅವಳು ಅವನ ಕೈಗೊಂಬೆಯಾದಳು.

ಅಡುಗೇಮನೆಯಲ್ಲಿ, ಮಿಕ್ಕ ಹಾಲನ್ನು ಕರಿಯ ಮುದ್ದಾದ ಬೆಕ್ಕು ರುಚಿ ನೋಡುತ್ತಿತ್ತು.

## ೭

ಬೆಳಗ್ಗೆ ಅಡಿಗೆಮನೆಯಲ್ಲಿ ಕುಳಿತು ಪಾರ್ವತಿ ಬಿಕ್ಕಿ ಬಿಕ್ಕಿ ಅಳುತ್ತಿದ್ದಳು, ಸರ್ವಸ್ವವನ್ನೂ ಕಳೆದುಕೊಂಡವಳಂತೆ, ಆರ್ತಳಾಗಿ ಅಳುತ್ತಿದ್ದಳು. ಆವೇಶದಲ್ಲಿ ಕೊಲೆಮಾಡಿ ನಂತರ ಅದಕ್ಕಾಗಿ ಪರಿತಪಿಸಿ ಪಶ್ಚಾತ್ತಾಪದಿಂದ ದಿಕ್ಕು ಕಾಣದೆ ಅಳುವ ಅಪರಾಧಿಯಂತೆ ಅಳುತ್ತಿದ್ದಳು.

"ಇಲ್ಲ! ಇಲ್ಲ! ನಾನು ಪವಿತ್ರಳಲ್ಲ" ಎಂಬ ಒಂದೇ ಒಂದು ಮಾತು ನೆನಪಿಗೆ ಬಂದೊಡನೆ ಅವಳ ಹೃದಯ ಮತ್ತಷ್ಟು ದುಃಖದಿಂದ ಚೀರುತ್ತಿತ್ತು.

ಇನ್ನು ಈ ದೇಹ ಅವಳದಲ್ಲ... ಇದನ್ನು ಮತ್ತೊಬ್ಬರಿಗೆ 'ಪವಿತ್ರವಾದು'ದೆಂದು ಹೇಳಿ ಒಪ್ಪಿಸಲಾರಳು... ಆ...ಅಧಿಕಾರ ತನಗಿಲ್ಲ. ತಲೆ ಎತ್ತಿ ಸಂತೋಷದಿಂದ ಗರ್ವದಿಂದ ನಗುತ್ತಿದ್ದ ಅವಳು... ಇನ್ನು ತಲೆಬಾಗಿ ಮೌನವಾಗಿ ಕಣ್ಣೀರಿಡಬೇಕು.

ಅಯ್ಯೋ! ಹೃದಯವೇ? ನೀನೇಕೆ ಜಾರಿ ಅಪರ ಮಡಲಲ್ಲಿ ಬಿದ್ದೆ??

ಅಪರಾಧಿಯಂತೆ ತನ್ನ ರೂಮಿನಲ್ಲಿ ಕುಳಿತಿದ್ದ ಸುಂದರನ ಕಿವಿಗಳಿಗೆ ಅಳುವಿನ ಶಬ್ದ ಮೆಲ್ಲನೆ ಕೇಳಿಸುತ್ತಿತ್ತು, ಆ ಅಳುವನ್ನು ಕೇಳುತ್ತಿದ್ದರೇ ಸುಂದರನಿಗೆ ತನ್ನ ಮೇಲೆ ತನಗೇ ಅಸಹ್ಯವಾಯಿತು... "ಆ ಮುಗ್ಧಳ ಬಾಳನ್ನು ಒಂದೇ ಒಂದು ಕ್ಷಣದಲ್ಲಿ ತುಳಿದು ಹಾಳುಮಾಡಿದೆನಲ್ಲಾ!" ಎಂದು ತನ್ನನ್ನು ತಾನೇ ಶಪಿಸಿಕೊಂಡ... "ಆಗ ತಾನೇ ಅರಳುತ್ತಿರುವ ಗುಲಾಬೀಹೂವನ್ನು, ಸ್ವಾರ್ಥದಿಂದ ಕಿತ್ತು, ತನ್ನ ಕಾಮದ ಅಗ್ನಿಕುಂಡಕ್ಕೆ, ಬಿಸಾಕಿದೆನಲ್ಲಾ?" ಎಂದು ಪಶ್ಚಾತ್ತಾಪದಿಂದ ಅವನ ಹೃದಯ ಛಿದ್ರ ಛಿದ್ರವಾಯಿತು.

ಇಲ್ಲ! ತನಗಿನ್ನು ಪ್ರಾಯಶ್ಚಿತ್ತವೇ ಇಲ್ಲ,... ತಾನು ಕೊಲೆಗಾರ. ತನಗೆ ನ್ಯಾಯವಾಗಿ ವಿಧಿ ಶಿಕ್ಷೆ ವಿಧಿಸಬೇಕು... ನಿಜ... ತಾನು ಸಾಯಬೇಕು... ಆದರೇ... ಆದರೇ... ಸುನಂದಾ! ಅಯ್ಯೋ!... ಅವಳು ವಿಧವೆ!...... ಮಗುವನ್ನೆತ್ತಿಕೊಂಡು...... ಕುಂಕುಮ ಸೌಭಾಗ್ಯದಿಂದ ಕುಲುಕುಲು ನಗುತ್ತಿರುವ ತನ್ನ ಸುನಂದ ವಿಧವೆ!... ಬೇಡ...ಬೇಡ...ಅವಳಿಗೆ ಆ ಕಠಿಣ ಶಿಕ್ಷೆ ಬೇಡ... ತಾನು ಮಾಡಿದ ಪಾಪಕ್ಕೆ ಅವಳು ಶಿಕ್ಷೆ ಅನುಭವಿಸಬೇಕೆ?...... ಅಯ್ಯೋ! ಸುನಂದಾ! ಕಳಂಕವಿಲ್ಲದೆ ನಗುತ್ತಿರುವ ನಿನ್ನ ಮುಖವನ್ನು ನಾನು ನೋಡಲಾರೆ. ಪವಿತ್ರವಾದ ನಗುವನ್ನು ಅಪವಿತ್ರವಾದ ಕರಗಳಿಂದ ಮುಟ್ಟಲಾರೆ...ಅಯ್ಯೋ! ಸುನಂದಾ!! ನನ್ನ ಯಾತನೆಗೆ ಕೊನೆಯೇ ಇಲ್ಲವೇ? ನನ್ನ ಪಾಪಕ್ಕೆ ಮುಕ್ತಿಯೇ ಇಲ್ಲವೇ??...

ಮನೆಯ ಮುಂದೆ Taxi ಬಂದು ನಿಂತ ಸದ್ದು ಕೇಳಿ ಅಡಿಗೆಮನೆಯಲ್ಲಿದ್ದ ಪಾರ್ವತಿ, ರೂಂನಲ್ಲಿದ್ದ ಸುಂದರ ಇಬ್ಬರೂ ಬೆಚ್ಚಿದರು.

ಪಾರ್ವತಿಯ ಕೈ, ಕಾಲು ತಣ್ಣಗಾಯ್ತು. ಏಳಲು ಚೈತನ್ಯವಿಲ್ಲದವಳಂತೆ, ಕಲ್ಲಿನ ಬೊಂಬೆಯಂತೆ, ಅಲ್ಲಿಯೇ ಕುಳಿತಿದ್ದಳು.

"ಪಾರ್ವತೀ!" ತಂದೆಯ ಕೂಗು ಕಿವಿಗೆ ಬಿದ್ದರೂ ಓಗೊಡಲು ಶಕ್ತಿ ಇಲ್ಲದವಳಂತೆ, ಮೌನವಾಗಿದ್ದಳು ಅವಳು.

"ಪಾರ್ವತೀ!!" ತಂದೆಯ ಭಾರವಾದ ಹೆಜ್ಜೆಯ ಸದ್ದು ಬಾಗಿಲ ಬಳಿ ಬಂದು ನಿಂತಿತು... ಪ್ರಯತ್ನಪೂರ್ವಕವಾಗಿ ತಲೆ ತಿರುಗಿಸಿ... ಬಲವಂತವಾಗಿ... ನಕ್ಕು... ಕೇಳಿದಳು...

"ಯಾವಾಗ ಬಂದೇ ಅಪ್ಪಾ?"

ಪಾರ್ವತಿಗೆ ಆಶ್ಚರ್ಯವಾಯ್ತು, ಇದು ತನ್ನ ಕೊರಳಲ್ಲ... ಬೇರೆ ಯಾರದ್ದೋ, ಎಂದುಕೊಂಡಳು.

"ಈಗ ತಾನೇ ಬಂದೇ ತಾಯೀ! ತುಂಬಾ ಸೊರಗಿದ್ದೀಯಲ್ಲಾ ಅಮ್ಮಾ!... ಹುಷಾರಾಗಿದ್ದೀ ತಾನೇ?" ಬಳಲಿದ ಮಗಳ ಮುಖವನ್ನು ನೋಡಿ, ತಂದೆ ಕನಿಕರದಿಂದ ಕೇಳಿದರು.

ಅತಿ ಪ್ರಯತ್ನದಿಂದ ಬಲವಂತವಾಗಿ ಮಾತುಗಳನ್ನು ಹೊರಗೆ ತಳ್ಳಿದಳು.

"ಚೆನ್ನಾಗಿದ್ದೀನಪ್ಪಾ"

"ಮಗೂ, ಬಾಣಂತಿ ಆರೋಗ್ಯ ತಾನೇ!"

"ಹೂಂ"

"ಹೋಗಿ ನೋಡಿಕೊಂಡು ಬರಬೇಕು."

"ಹೂಂ"

"ಅಳಿಯಂದಿರು ಹೇಗಿದ್ದಾರೇ?"

ಯಾರೋ ಬೆನ್ನಿನ ಮೇಲೆ ಹೊಡೆದಂತಾಯ್ತು ಅವಳಿಗೆ......

ತುಂತುರು ಮಳೆ——

ಜೋರಾದ ಗಾಳಿ——

ಇಂಗ್ಲೀಷ್ ಚಿತ್ರ——

ಟ್ಯಾಕ್ಸಿ——

ರೂಂನಲ್ಲಿ ಭಾವನಿಗೆ ಹಾಲಿನ ಗ್ಲಾಸನ್ನು ಕೊಟ್ಟದ್ದು ...ಸಿಡಿಲು-

ದೀಪ ಆರಿ ಹೋದದ್ದು...

ಪಾರ್ವತಿ ಕಣ್ಣಮುಂದೆ ಎಲ್ಲವೂ ಗಲಿಬಿಲಿಯಾಗಿ ಬಂದು ನಕ್ಕಿತು. ಕಿಟಾರನೆ ಚೀರಬೇಕೆನಿಸಿತು ಅವಳಿಗೆ. ಹಲ್ಲುಗಳಿಂದ ತುಟಿಯನ್ನು ಕಚ್ಚಿ ಅಲ್ಲಿಂದ ಎದ್ದು ಹೋಗಲು ತಿರುಗಿದಾಗ ಸುಂದರ ಬಾಗಿಲ ಬಳಿ ನಿಂತಿದ್ದ...ಅವನನ್ನು ತಬ್ಬಿ ಅಳಬೇಕೆನಿಸಿತು. ಅವಳಿಗೆ. ಅದ್ರೇ . . . ಉಕ್ಕಿ ಬರುತ್ತಿರುವ ಅಳುವನ್ನು ನುಂಗಿಕೊಳ್ಳುತ್ತಾ ರೂಂಗೆ ನಡೆದಳು.

"ಸುನಂದಳನ್ನು ನೋಡಿಕೊಂಡು ಬರೋಣವೇನು?" ತಂದೆ ಕೇಳಿದರು. ಅವರಿಗೆ ಮಗಳನ್ನು ಕಾಣಲು ಎಲ್ಲಿಲ್ಲದ ಉತ್ಸಾಹ . . . ತಮ್ಮ ಪ್ರೀತಿಯ ಮಗಳು ತಾಯಿಯಾಗಿರುವುದನ್ನು ನೋಡಲು ಅವರ ಆತುರ ಹೇಳತೀರದು.

"ನೀವು ಸ್ನಾನವಾಡಿ ಕಾಫೀ ತಿಂಡೀ ಮುಗಿಸಿ... ಈ ದಿನ ಸುನಂದಳನ್ನು discharge ಮಾಡುತ್ತಾರೆ ಕರ್ಕೊಂಡು ಬರ್ತೀನಿ." ಸುಂದರ ಮಾವನ ಪ್ರತ್ಯುತ್ತರವನ್ನು ಕಾಯದೆ ಹೊರಟು ಹೋದ. ಮಾವನಿಗೆ ಅಳಿಯನನ್ನು ನೋಡಿ ನಗು ಬಂತು . . . . ತಂದೆಯಾದ ತಕ್ಷಣ ಅಳಿಯನಿಗೆ ಎಲ್ಲಿಲ್ಲದ ಗಾಂಭೀರ್ಯ ಬಂದುಬಿಟ್ಟಿದೆ ಎಂದುಕೊಂಡರು. ಹರಟು ಬಿಟ್ಟು ಸ್ನಾನಕ್ಕೆ ಹೊರಟರು ಅವರು.

ರೂಂನಲ್ಲಿ ಶಿಲೆಯಂತೆ ನಿಂತಿದ್ದಳು ಪಾರ್ವತಿ. ಇಲ್ಲೇ...ಇಲ್ಲೇ...ತನ್ನ ಸರ್ವನಾಶಕ್ಕೆ ತಾನೇ ನಾಂದಿ ಹಾಡಿದ್ದಳು. ತನ್ನ ಅಸಹ್ಯ ಜೀವಿತಕ್ಕೆ ಮೊದಲ ಹೆಜ್ಜೆ ಇಟ್ಟಳು. "ಮೊದಲ ಹೆಜ್ಜೆ" ಎಂದೋ ಓದಿದ್ದ ತ್ರಿವೇಣಿಯವರ ಪುಸ್ತಕ ಅವಳ ನೆನಪಿಗೆ ಬಂತು... ಅದರಲ್ಲಿ ಕಥಾನಾಯಕಿ ತಿಳಿಯದೆ ಆವೇಶದಲ್ಲಿ ಒಬ್ಬ ಸ್ವಾರ್ಥಿ ಗಂಡಸಿನ ಬಣ್ಣದ ಮಾತಿಗೆ ಮರುಳಾಗಿ ಬಲಿ ಆದಳು...ಅದೇ ಅವಳಿಟ್ಟ ಮೊದಲ ಹೆಜ್ಜೆ. ನಂತರ ಅದರಿಂದ ಅವಳು ಕೊಲೆಪಾತಕಿಯಾದಳು. ಜೈಲು ಜೀವನ ಅನುಭವಿಸಿದಳು. ಎಲ್ಲರೂ ಇದ್ದೂ ಅನಾಥಳಾದಳು. ಹಾಗೆಯೇ...ಹಾಗೆಯೇ...ತನ್ನ ಜೀವನ ಕೂಡಾ ಮುಗಿಯುವುದೇ!...ಅಯ್ಯೋ! ದೇವರೇ ಹಾಗಾಗದಿರಲಿ...ಹಾಗಾಗದಿರಲಿ...

ಪಾರ್ವತೀ ಹೃದಯ ಅಳುತ್ತಾ ದೇವರಲ್ಲಿ ಭಿಕ್ಷೆ ಬೇಡಿತು. "ದೇವರೇ! ನನ್ನನ್ನು ನಿರ್ದಯನಾಗಿ ಶಿಕ್ಷಿಸಬೇಡ."

ಕಣ್ಣೀರನ್ನು ಒರಸಿಕೊಂಡು ಹಾಸಿಗೆಯಮೇಲಿದ್ದ ಬೆಡ್‌ಷೀಟನ್ನು ತೆಗೆದಳು. ಅವಳಿಗೆ ಆ ಬೆಳ್ಳನೆಯ ಹೊದ್ದಿಕೆ ಹಾವಿನಂತಿತ್ತು. ಬೆಂಕಿಯಂತೆ ಸುಡುತ್ತಿತ್ತು. ನಿನ್ನೆ ಸ್ವರ್ಗವಾಗಿದ್ದ ಈ ರೂಂ ಇಂದು ನರಕವಾಗಿ ಕಂಡಿತು. ಬಲವಂತವಾಗಿ ಹಾಸಿಗೆಯನ್ನು ಹಾಕಿ, ಕೋಣೆಯನ್ನು ಸ್ವಚ್ಛಮಾಡಲು ಆರಂಭಿಸಿದಳು.

ಅಲ್ಲಿ ಬಿದ್ದಿದ್ದ ಬಿಳಿಯ ಬಳೆಯಚೂರು ಅವಳನ್ನು ನೋಡಿ ತುಂಟತನವಾಗಿ ನಕ್ಕಿತು. ಹೌದು...ರಾತ್ರಿ ಅವನ ಬಲವಾದ ಅಪ್ಪುಗೆಯಲ್ಲಿ... ಅವಳ ಬಾಳು... ಚೂರು ಚೂರಾಯಿತು...ಪಾರ್ವತಿಯ ಹೃದಯದಲ್ಲಿ ವಿಚಿತ್ರ-ವಿರುದ್ಧ ಭಾವನೆಗಳ ಹೋರಾಟ ಆರಂಭವಾಯ್ತು.

ರಾತ್ರಿಯ ಮಧುರ ಸ್ಮೃತಿ...

ತಕ್ಷಣ ಅಸಹ್ಯ...

ರಾತ್ರಿಯ ಸ್ವರ್ಗದ ಸಂತೋಷದ ಉಯ್ಯಾಲೆಯಲ್ಲಿ ತೂಗಿದ ಆನಂದ......

ಮರುಕ್ಷಣ ತನ್ನ ನೀಚತ್ವದ ಅರಿವು.

ಸುಖ .....

ದುಃಖ......

ಸಂತೋಷ......

ಅಸಹ್ಯ.

ಬೇಕು.........

ಬೇಡ.

ಇವುಗಳ ನಡುವೆ ಸಿಕ್ಕಿ ಅವಳ ಹೃದಯ ಗಾಳಿಗೆ ಸಿಕ್ಕಿದ ತರಗಲೆಯಂತೆ, ತೂರಾಡಿತು. ನಿಲ್ಲಲಾರದವಳಂತೆ ಬಳಲಿ ಟೇಬಲ್ ಮೇಲೆ ಕೈಯಿಟ್ಟು ನಿಂತಳು, ಆ ಟೇಬಲ್ ಮೇಲೆ...

ಸುನಂದಳ ಫೋಟೋ ನಗುತ್ತಿತ್ತು... ಪಾರ್ವತಿಗೆ ಭಯದಿಂದ ಚೀರಬೇಕೆನಿಸಿತು.

"ಅಕ್ಕಾ! ಅಕ್ಕಾ!...ನನ್ನನ್ನು ಕ್ಷಮಿಸು, ನಿನ್ನದೇ ಆದ ಸೊತ್ತನ್ನು ನಾನು ಅಪಹರಿಸಿಬಿಟ್ಟೆ...ನಿನ್ನ ಮನೆಯಲ್ಲಿದ್ದು ನಿನಗೇ ದ್ರೋಹಮಾಡಿದೆ...ಇಲ್ಲಕ್ಕಾ...ಇಲ್ಲ ನಿನಗೆ ಮಾತ್ರ ನಾನು ದ್ರೋಹ ಮಾಡಲಿಲ್ಲ... ನನ್ನಲ್ಲಿ ನಂಬಿಕೆ ಇಟ್ಟ ತಾಯಿ-ತಂದೆಗಳಿಗೆ ದ್ರೋಹಮಾಡಿದೆ, ನನ್ನ ಅಂತರಾತ್ಮಕ್ಕೇ ನಾನು ದ್ರೋಹಮಾಡಿದೆನಕ್ಕಾ. ನನ್ನನ್ನು ದೇವರೂ ಕ್ಷಮಿಸುವುದಿಲ್ಲ...ಬೇಡ...ನನಗೆ ಕ್ಷಮೆಯೇ ಬೇಡ ... ನನಗೆ ಘೋರ ಶಿಕ್ಷೆ ಬೇಕು... ಅದೇ ನನಗೆ ಪ್ರಾಯಶ್ಚಿತ್ತ."

ಫೋಟೋವನ್ನು ತನ್ನ ಕಣ್ಣೀರಿನಿಂದ ತೊಯ್ಸಿದಳು ಪಾರ್ವತಿ. ಅಲ್ಲಿಂದ ಮೆಲ್ಲನೆ ಹೊರಗೆ ಬಂದಳು. ತಂದೆ ಸ್ನಾನ ಮಾಡಿ ಬಂದು ಮಗಳ, ಮೊಮ್ಮಗಳ ಬರುವಿಕೆಗಾಗಿ ಕಾದು ನಿಂತಿದ್ದರು

ಪಾರ್ವತಿ ಕಾಫೀ ಉಪ್ಪಿಟ್ಟು ತಂದೆಗೆ ತಂದು ಕೊಟ್ಟಳು. ಉಪ್ಪಿಟ್ಟು ತಿನ್ನುತ್ತಾ ತಂದೆ ಒಮ್ಮೆ ಮಗಳನ್ನು ನೋಡಿ ಹೆಮ್ಮೆಯಿಂದ ನಕ್ಕು "ಸೊಗಸಾಗಿ ಮಾಡಿದ್ದೀಯ ತಾಯೀ ! ಆಹಾ ಏನು ರುಚಿ... ನಿನ್ನ ಗಂಡ ಆಗೋನು ಅದೃಷ್ಟ ಮಾಡಿರಬೇಕಮ್ಮಾ!" ಎಂದು ಹೊಗಳಿದರು ಮಗಳನ್ನು.

ಪಾರ್ವತಿ ನಿಟ್ಟುಸಿರು ಬಿಟ್ಟಳು.

ಗಂಡ... ಅದೃಷ್ಟ...

ತನಗೆ ಗಂಡ ಆಗೋನು ಅದೃಷ್ಟಶಾಲಿಯೇ ?

ಖಂಡಿತವಾಗ್ಲೂ ಅಲ್ಲ...

ಖಂಡಿತವಾಗ್ಲೂ ಅಲ್ಲ...

ನಿಜವಾಗ್ಲೂ ನಿರ್ಭಾಗ್ಯ.

ಗಂಡ...

ತನಗೆ ಗಂಡ ಯಾರು?

ಭಾವನೇ !

ಭಾವ ತನ್ನ ಗಂಡ......

ಆ ಭಾವನೆ ತನ್ನ ಮನಸ್ಸಿಗೆ ಬಂದೊಡನೆ ಶರೀರ ನಡುಗಿತು.

ಅಕ್ಕನ ಜೀವನದಲ್ಲಿ ತಾನು ಪ್ರವೇಶಿಸಬೇಕೆ!...

ಅಕ್ಕನಿಗೆ ಸವತಿ...

ಬೇಡ... ಬೇಡ... ಹಾಗಾದ್ರೆ ತಾನು...

ಮದುವೆ ಆಗಬೇಕೇ!...

ಛೀ! ಛೀ! ಆ ಪವಿತ್ರವಾದ ಬಂಧನವನ್ನು ತಾನು ಅಪವಿತ್ರ ಮಾಡಬೇಕೇ ? ಸಾಧ್ಯವೇ ಇಲ್ಲ.... ತಾನು ಮದುವೆಗೆ ಅರ್ಹಳಲ್ಲ....ತನಗೆ ಮದುವೇ ಬೇಡ...ಹಾಗಾದ್ರೆ ಏನು ಮಾಡಬೇಕು !... ಅಯ್ಯೋ ಈ ಪ್ರಶ್ನೆಗೆ ಪ್ರತ್ಯುತ್ತರ ತನ್ನ ಬಳಿ ಇಲ್ಲ.

"ಏನಮ್ಮಾ ಯೋಚ್ನೆ ಮಾಡ್ತಾ ಇದ್ದೀಯ ! ಚಿಂತೆಮಾಡ್ಬೇಡ. ನಿನಗೆ ಒಳ್ಳೇಕಡೆ ನೋಡ್ತಾ ಇದ್ದೀನಮ್ಮ... ಅಕ್ಕನ ಹಾಗೆ ನೀನೂ ಒಳ್ಳೇ ಮನೆ ಸೇರ್ತೀಯ ತಾಯಿ!... ನಿನ್ನ ಜಾತಕ ಕೊಟ್ಟಿದ್ದೀನಿ" ಕೈ ತೊಳೆದುಕೊಳ್ಳುತ್ತ ತಂದೆ ಹೇಳಿದರು.

ಜಾತಕ... ತನ್ನ ಜಾತಕ ಎಷ್ಟು ನಿಕೃಷ್ಟವಾದದ್ದೆಂತ ನಿನ್ಗೇನೆ ಗೊತ್ತಾಯ್ತಿಲ್ಲವೇ! ಅನಿಷ್ಟ ಜಾತಕ... ದ್ರೋಹದ ಜಾತಕ ತನ್ನದು. ಸುಡಬೇಕು ತನ್ನ ಜಾತಕವನ್ನು...ಬರಿದಾದ ತಟ್ಟೆಯನ್ನು ಗ್ಲಾಸನ್ನು ತೆಗೆದುಕೊಂಡು ಒಳಗೆ ಹೋದಳು ಪಾರ್ವತಿ.

* * *

"ಪಾರ್ವತೀ ! ಸುನಂದ ಬಂದಳು, ಆರತಿ ತಗೊಂಡು ಬಾಮ್ಮಾ"

ತಂದೆಯ ಸಂತೋಷ ಸಂಭ್ರಮಗಳ ಮಾತು ಕೇಳಿ ಪಾರ್ವತಿ ನಡುಗಿದಳು. ಅಕ್ಕನ ಮುಖವನ್ನು ಹೇಗೆ ನೋಡಲಿ, ಮುಂಚಿನಹಾಗೆ ನಗುತ್ತಾ, ಅಕ್ಕನನ್ನು ಚೇಷ್ಟೆ ಮಾಡುತ್ತ, ಭಾವನನ್ನು ರೇಗಿಸುತ್ತ, ಮಾತಾಡಲು ಸಾಧ್ಯವೇ?... ಇಲ್ಲ, ಸಾಧ್ಯವಿಲ್ಲ. ಅಪರಾಧಿನಿಯಂತೆ ಅಕ್ಕನ ಮುಂದೆ ತಲೆಬಾಗಲೇಬೇಕು.

ಪಾರ್ವತಿ ಆರತೀ ಮಾಡಿ ತಗೊಂಡುಹೋದಳು. ಆರತೀತಟ್ಟೆಯನ್ನು ಹಿಡಿದು ನಿಂತಿದ್ದ ಪಾರ್ವತಿಯನ್ನು ನೋಡಿ ಸುನಂದಳಿಗೆ ಆಶ್ಚರ್ಯವಾಯ್ತು. ಪಾರ್ವತಿಯಲ್ಲಿ ಏನೋ ಬದಲಾವಣೆಯಾಗಿದೆ ಎಂದುಕೊಂಡಳು. ಆದರೆ ಅವಳ ಬದಲಾವಣೆಯನ್ನು ಬಿಡುವಿಲ್ಲದ ದುಡಿಮೆಯ ಬಳಲಿಕೆ ಎಂದುಕೊಂಡಳು ಸುನಂದ.

ದೃಷ್ಟಿ ತೆಗೆದು "ಒಳಗೆ ಬಲಗಾಲಿಟ್ಟು ಬಾ ಅಕ್ಕಾ" ಎಂದಳು ಪಾರ್ವತಿ. ಅವಳ ಕಂಠದಲ್ಲಿ ಎಂದಿನಂತೆ ತುಂಟತನವಿರಲಿಲ್ಲ, ಗಾಂಭೀರ್ಯವಿತ್ತು.

ನವು ವೀರಭದ್ರಯ್ಯ



ಇವನಾರು ಗೊತ್ತಾಯ್ತೆ ? ವೀರಭದ್ರಯ್ಯ.
ಪೂರೈಕೆ ಖಾತೆಯಲಿ ತಕ ಧಿನ್ನ ಥಯ್ಯ.
ಸಕ್ಕರೆ ಸಿಮೆಂಟುಗಳು ಹಾಕಿದವು ತನನ.
ಎಲ್ಲಿ ಹೋದವು ಎಂದು ಹುಡುಕಿದರು ಗಗನ.

—ದಿನಕರ ದೇಸಾಯಿ

ಸುನಂದ ಒಳಗೆ ಬಂದು ಮಗುವನ್ನು ತಂದೆಯ ಕೈಗೆ ಕೊಟ್ಟು ಅವರ ಕಾಲಿಗೆ ನಮಸ್ಕರಿಸಿದಳು. ಅವರು ಆನಂದದಿಂದ ಮಗಳ ತಲೆಯ ಮೇಲೆ ಕೈಯಿಟ್ಟು...

"ದೀರ್ಘ ಸುಮಂಗಲಿಯಾಗಿ ಬಾಳಿ ಬದುಕು ತಾಯೀ" ಎಂದರು.

ಸುನಂದ ತಂದೆಯೊಡನೆ ತನ್ನ ರೂಂಗೆ ಹೊರಟಳು.

ಪಾರ್ವತಿ ನೋಡುತ್ತಾ ನಿಂತಿದ್ದಳು. ಇನ್ನು ಆ ರೂಂ ಅಕ್ಕನದು. ಅಲ್ಲಿ ತನಗೆ ಅಧಿಕಾರವಿಲ್ಲ. ಒಂದೇ ಒಂದು ರಾತ್ರಿ ಆ ರೂಂ ತನ್ನದಾಗಿತ್ತು. ತನ್ನನ್ನು ಸ್ವರ್ಗಕ್ಕೆ ಕರೆದುಕೊಂಡು ಹೋಗಿತ್ತು. ತನ್ನ ಆಶೆಗಳನ್ನೂ ಬಯಕೆಗಳನ್ನೂ ಸಂಪೂರ್ಣಗೊಳಿಸಿದ್ದ ಆ ರೂಂ...ಇನ್ನು ತನ್ನದಲ್ಲ. ಆ ಕೋಣೆಯೊಳಗೆ ಕಾಲಿಡಲೂ ತನಗೆ ಅಧಿಕಾರವಿಲ್ಲ... ಒಂದೇ ಒಂದು ರಾತ್ರಿ ಆ ಅಧಿಕಾರ ಪಡೆದಿದ್ದಳು. ಆ ಅಧಿಕಾರಕ್ಕಾಗಿ ಅಮೂಲ್ಯವಾದ ಕಾಣಿಕೆ ನೀಡಿದ್ದಳು. ಇನ್ನು ಅಲ್ಲಿ... ಹೆಂಡತಿ, ಗಂಡ, ಮಗು... ಪವಿತ್ರವಾಗಿ ಬಾಳುತ್ತಾರೆ. ತಾನು ಅಪವಿತ್ರಳು...ಅಲ್ಲಿ ಪ್ರವೇಶವಿಲ್ಲ. ಅಯ್ಯೋ... ತಾನು ಅಪವಿತ್ರಳು...

ಸುಂದರ Taxi ಯನ್ನು ಕಳುಹಿಸಿ ಒಳಗೆ ಬಂದಾಗ ಪಾರ್ವತಿ ಗೋಡೆಗೊರಗಿ ಬಾಯಲ್ಲಿ ಸೆರಗಿಟ್ಟುಕೊಂಡು ಮೌನವಾಗಿ ಅಳುತ್ತಿದ್ದುದನ್ನು ನೋಡಿ ಒಂದು ನಿಮಿಷ ಅಲ್ಲೇ ನಿಂತ.... ಪಾರ್ವತಿ ಒಮ್ಮೆ ಅವನನ್ನು ನೋಡಿ ಓಡಿಹೋದಳು. ಏಟು ತಿಂದ ಜಿಂಕೆಮರಿಯಂತೆ ಸುಂದರಗೆ ತನ್ನ ಹೃದಯವನ್ನು ಯಾರೋ ಹಿಂಡಿದಂತಾಯ್ತು. ನಿಟ್ಟುಸಿರು ಬಿಟ್ಟು ರೂಂಗೆ ನಡೆದ.

ಮಂಚದಲ್ಲಿ ಮಲಗಿದ್ದಳು ಸುನಂದ. ಪಕ್ಕದಲ್ಲಿ ಮಗು ಮಲಗಿತ್ತು... ಮಾವನವರು ಕುರ್ಚಿಯಲ್ಲಿ ಕುಳಿತಿದ್ದರು.

"ನೋಡೀಂದ್ರೇ!... ಅಪ್ಪನಹತ್ರ ಹೇಳಿದೆ... ಪಾರೂನ ಇನ್ನು ಮೂರು ತಿಂಗಳು ಇಲ್ಲೇ ಇರೋದಕ್ಕೆ ಒಪ್ಪಿದ್ದಾರೆ."

"ಇನ್ನೇನು ಮಾಡೋದು... ನೀನು ನೋಡಿದ್ರೆ ಇಷ್ಟು ನಿಶ್ಶಕ್ತಳಾಗಿದ್ದೀಯಾ... ಈ ಸಮಯದಲ್ಲಿ ನ್ಯಾಯವಾಗಿ ತಾಯಿ ಇರಬೇಕು."

"ಪರ್ವಾ ಇಲ್ಲಪ್ಪಾ! ಅವಳು ನನ್ನ ತಾಯಿಗಿಂತ ಹೆಚ್ಚಾಗಿ ನೋಡ್ಕೊಳ್ತಾಳೆ. ಸದ್ಯ! ನೀನು ಒಪ್ಪಿದೆಯಲ್ಲಾ."

"ಇನ್ನು ಮೂರು ತಿಂಗಳು ತಾನೇ ! ಇರಲಿ ಬಿಡು."

"ಇಲ್ಲಪ್ಪಾ ! ನಾನು ನಿನ್ನ ಜೊತೇಲೇ ಬಂದು ಬಿಡ್ತೀನಿ." ಅಲ್ಲಿಗೆ ಬಂದು ನಿಂತ ಮಗಳನ್ನು ನೋಡಿ ಆಶ್ಚರ್ಯಚಕಿತರಾದರು ತಂದೆ.

"ಯಾಕಮ್ಮಾ !"

"ಇಲ್ಲಪ್ಪಾ! ನಾನು ಹೋಗಿ ಅಮ್ಮನ್ನ ಕಳಿಸ್ತೀನಿ"

"ಹಾಗಲ್ಲ ತಾಯಿ! ನಿಮ್ಮಮ್ಮ ಮನೇನ ಬಿಟ್ಟು ಮೂರು ತಿಂಗಳು ಆಚೇ ಇದ್ದುಬಿಟ್ರೆ ಅಲ್ಲೀ ಗತಿ ಏನು ಹೇಳು ?"

"ಇಲ್ಲ ನಾನಿರೋದಿಲ್ಲ ಖಂಡಿತ ಇರೋದಿಲ್ಲ"... ಪಾರ್ವತಿ ಕೋಪದಿಂದ ಹೇಳಿದಳು,...... ಸುನಂದ ಅವಳ ಕೈಯನ್ನು ಮೃದುವಾಗಿ ಹಿಡಿದು......

"ಯಾಕಮ್ಮಾ ಅಷ್ಟು ಕೋಪ! ಅಕ್ಕನ ಮನೆ ದುಡಿತ ಅಷ್ಟು ಬೇಸರ ಬಂತೇ? ಏನು ಮಾಡ್ಲಿ ಹೇಳು ಪಾರಮ್ಮಾ... ನಾನು ಎದ್ದು ಓಡಾಡಬಾರದು.

ಮನಸ್ಸಿಗೆ– ದೇಹಕ್ಕೆ– ವಿಶ್ರಾಂತಿ ಬೇಕು, ಎಂದು ಹೇಳಿದ್ದಾರೆ ಡಾಕ್ಟರ್– ಇಲ್ಲಾಂದ್ರೇ ಮಗು ತಾಯಿಯಿಲ್ಲದ ತಬ್ಬಲಿಯಾಗುತ್ತೆ." ಎಂದು ಹೇಳುತ್ತಿರುವ ಅಕ್ಕನ ಬಾಯನ್ನು ಭಯದಿಂದ ಮುಚ್ಚಿದಳು ಪಾರ್ವತಿ.

"ಹಾಗೆಲ್ಲಾ ಹೇಳ್ಬೇಡಕ್ಕಾ! ದಯವಿಟ್ಟು ನನ್ನನ್ನು ಕ್ಷಮಿಸು... ನಾನು ಇರಲಾರೆ ಅಕ್ಕಾ... ನಿಮಗೆಲ್ಲಾ ತೊಂದ್ರೆ ಕೊಡಲಾರೆ......" ಏನನ್ನೋ ಹೇಳಲು ಪ್ರಯತ್ನಿಸಿ– ಏನನ್ನೂ ಹೇಳದೇ ಎದ್ದು ಹೋದಳು– ಆ ನಿರ್ಬಲ ಹೃದಯಿ.

ಕಿಟಕಿಯಿಂದಾಚೆ ಕಾಣುವ ಆ ಕಾ ಶ ವ ನ್ನು ನೋಡುತ್ತಾ ನಿಂತಿದ್ದ ಸುಂದರ... ತನ್ನ ಆಸೆಗೆ ಬಲಿಯಾದ– ಮುದ್ದಾದ– ಪಾರ್ವತಿ. ಮನೆಯಲ್ಲಿ ನಗುವನ್ನು ತುಂಬಿಸಿದ ತುಂಟಿ ಪಾರ್ವತಿ . . . ಇಂದು ಹುಚ್ಚಿಯಂತಾಗಿದ್ದಾಳೆ. ತನ್ನಿಂದ ಓಡಿ ಹೋಗಲು . . . ಸಾಧ್ಯವಾದರೇ– ಜೀವನದಿಂದ ಓಡಿಹೋಗಲು ತಯಾರಾಗಿ ನಿಂತಿದ್ದಾಳೆ . . . . ಅಯ್ಯೋ! ಪಾರೂ! ನನ್ನಿಂದ . . . ನನ್ನಿಂದ . . . ನಿನ್ನ ಸರ್ವನಾಶವಾಯ್ತೇ !!!

"ನೋಡಿ! ಅವಳ ಮನಸ್ಸೇಕೋ ತುಂಬಾ ನೊಂದಿದೆ . . .ಒಂದ್ವೇಳೆ ನೀವು ಕೇಳಲಿಲ್ಲವಲ್ಲಾಂತ ಬೇಸರವೇನೋ! ನೀವೂ ಒಂದು ಮಾತು ಹೇಳಿ ನೋಡಿ . . ."

ಸುನಂದಳ ಮಾತು ಕೇಳಿ ತಿರುಗಿ ನೋಡಿದ ಸುಂದರ.

"ಹೋಗೀಂದ್ರೆ ! ಕೇಳಿ ನೋಡಿ . . . ಆಮೇಲೆ ದೇವರಿಚ್ಛೆ . . ." ನಿಟ್ಟುಸಿರು ಬಿಟ್ಟಳು ಸುನಂದ.

ಅಡಿಗೇಮನೆಯಲ್ಲಿ ಮೊಳಕಾಲಿನ ಮೇಲೆ ತಲೆ ಇಟ್ಟು ಅಳುತ್ತಿದ್ದ ಪಾ ರ್ವ ತಿ ಯ ನ್ನು ನೋಡಿ ಸುಂದರನ ಕಣ್ಣಲ್ಲಿ ನೀರು ತುಂಬಿತು.

"ಪಾರೂ . . ."

ತಂಗಾಳಿ ಬೀಸಿದಂತಾಯ್ತು... ಹೌದು...ಅದೇ ಕರೆ...ಎಷ್ಟು ಆಕರ್ಷಣೆ ತುಂಬಿದೆ! ಆ ಕರೆಯಲ್ಲಿ ರಾತ್ರಿ ತನ್ನ ಕಿವಿಯ ಬಳಿ ಎಷ್ಟು ಸಿಹಿಯಾಗಿ ಕರೆದರು, ತನ್ನನ್ನು ಎಷ್ಟು ಪ್ರೀತಿಯಿಂದ ಬಾಚಿ ತಬ್ಬಿದರು...ಅವರು ನನ್ನವರು ಇದು ನನ್ನ ಮನೆ...ಇಲ್ಲ ಸುಳ್ಳು... ಈ ಮನೆ...ನನ್ನದಲ್ಲ...ಅವರೂ ನನ್ನವರಲ್ಲ...ಮತ್ತೊಬ್ಬಳು ಅಧಿಕಾರಿಣಿ ಇದ್ದಾಳೆ...ಅವಳಿಂದ ನಾನು ಅಧಿಕಾರವನ್ನು ಪಡೆಯಲಾರೆ...ಬೇಡ.. ಬೇಡ ಅವರಿಗೆ ಓಗೊಡಬೇಡ...ಆ ಕರೆಯನ್ನು ಕರೆದವರನ್ನು ಕಣ್ಣೆತ್ತಿ ನೋಡಬೇಡ...

"ಪಾರೂ ! ನನ್ನನ್ನು ಕ್ಷಮಿಸು ! ನಾನು ಮಾಡಿದ ತಪ್ಪಿಗೆ ನಿಮ್ಮ ಅಕ್ಕನಿಗೆ ಶಿಕ್ಷೆ ವಿಧಿಸಬೇಡ... ನೀನು ಕೆಲವು ದಿನವಾದರೂ ಇದ್ದು..." ತಲೆ ಎತ್ತಿ ನೋಡಿದಳು ಪಾರ್ವತಿ.

"ಆಮೇಲೆ ಹೊರಟುಹೋಗು ನಿರ್ಭಾಗ್ಯಳೇ... ಅಂತೀರಾ?" ಸಾವಿರಾರು ಹಾವುಗಳು ಕಚ್ಚಿದಂತೆ ಯಾತನೆ ಅನುಭವಿಸಿದ ಸುಂದರ.

"ಇಲ್ಲ ಪಾರೂ ! ನಾನಷ್ಟು ಕಠಿಣನಲ್ಲ...ಪಾರೂ! ಪಾರೂ !! ನನ್ನ ಹೃದಯದಲ್ಲಿ ನಡೆಯುತ್ತಿರುವ ಹೋರಾಟ ತಿಳಿಯಲಾರೆ...ಬೇಡ ಪಾರೂ......ನೀನು ಹೋಗಬೇಡ...ಇದು ನನ್ನ ಪ್ರಾರ್ಥನೆ..."

ಸುಂದರ ವೇಗವಾಗಿ ಹೊರಟುಹೋದ...

ಪಾರ್ವತಿ ಒಂದು ನಿಮಿಷ ಸ್ತಬ್ಧಳಾಗಿ ಕುಳಿತಳು. ಭಾವನಿಗೆ ತನ್ನ ಮೇಲೆ ಪ್ರೀತಿ ಇದೆಯೇ? ಇಲ್ಲವೇ ಆಕರ್ಷಣೆಯೇ !...ಅಥವಾ...ತನ್ನ ಹೆಂಡತಿ ಶುಶ್ರೂಷೆಗಾಗಿ ಈ ಪ್ರಾರ್ಥನೆಯೇ ? ಪಾರ್ವತಿಗೆ ದಿಕ್ಕೇ ತೋಚದಂತಾಯ್ತು...ಸಿಡಿಯುತ್ತಿರುವ ತಲೆಯನ್ನು ಗೋಡೆಗೆ ಜಜ್ಜಿಕೊಂಡು ಅತ್ತಳು ಆ ಅಭಾಗಿನಿ.

ಮಾರನೆಯ ದಿನ ಬೆಳಗ್ಗೆ ಪಾರ್ವತಿ ಎದ್ದು ಅಕ್ಕನ ರೂಂಗೆ ಬಂದಳು. ಸುಂದರ ಅಲ್ಲಿರಲಿಲ್ಲ...ತಂಗಿಯನ್ನು ನೋಡಿ ಸುನಂದ ನಿಶ್ಶಕ್ತಿಯಿಂದ ನಕ್ಕು...

"ಹಾಗಾದ್ರೇ ಈ ದಿನ ಅಪ್ಪನ ಜೊತೇಲಿಹೊರಟು ಹೋಗುತ್ತಿಯಾ ಪಾರೂ !" ಎಂದಳು.

ಪಾರ್ವತಿ ನಿಶ್ಚಲವಾಗಿ ನಿರ್ಧಾರವಾಗಿ ನುಡಿದಳು. "ಇಲ್ಲಕ್ಕಾ! ನಾನೆಲ್ಲೂ ಹೋಗೋದಿಲ್ಲ"

ಸಂತೋಷದಿಂದ ಸುನಂದಳ ಕಣ್ಣುಗಳು ಹೊಳೆಯಿತು.

"ನಿಜವಾಗಲೂ ! "

"ದೇವರಾಣೆ ಅಕ್ಕಾ ಇಲ್ಲಿಂದ ನನ್ನನ್ನು ಕಳುಹಿಸಬೇಡ"

ತನಗಾಗಿ ಅವಳು ಮಾಡುತ್ತಿರುವ ತ್ಯಾಗ ನೋಡಿ ಸುನಂದಳಿಗೆ ಸಂತೋಷ ಸಂಕೋಚ– ಆಯ್ತು.

"ನನ್ನ ಸೇವೆ ಮಾಡೋದಕ್ಕಾಗಿ ನಿನ್ನ ಸುಖ ತ್ಯಾಗಮಾಡ್ತಾ ಇದ್ದೀಯಲ್ಲ ಪಾರಮ್ಮಾ !..."

ಪಾರ್ವತಿ ವಿರಕ್ತಳಂತೆ ನಕ್ಕಳು.

"ತ್ಯಾಗ . . . ಇಲ್ಲಕ್ಕಾ ಇಲ್ಲ ! ನಿ ನ ಗಾ ಗಿ ನಾನೇನೂ ತ್ಯಾಗಮಾಡಲಿಲ್ಲ. ಒಂದ್ವೇಳೆ ತ್ಯಾಗ ಮಾಡಬೇಕಾದ ಸಮಯ ಬಂದ್ರೆ ಸಂತೋಷವಾಗಿ ಮನಃಪೂರ್ತಿಯಾಗಿ ತ್ಯಾಗ ಮಾಡ್ತೀನಿ . . . ಅಕ್ಕಾ ! ನನ್ನ ನಿನ್ನಿಂದ ದೂರ ಮಾಡಬೇಡ ಅಕ್ಕಾ."

ಕಳಕಳಿಯಿಂದ ನುಡಿದ ತಂಗಿಯನ್ನು ಅಪ್ಯಾಯತೆಯಿಂದ ತಬ್ಬಿ "ಹುಚ್ಚೀ ! ನೀನು ಆಜನ್ಮ ಪರ್ಯಂತರ ಇಲ್ಲೇ ಇದ್ದರೂ ನನಗೇನೂ ಅಭ್ಯಂತರ ವಿಲ್ಲ . . . ಆದ್ರೇ . . . ನೀನು ಇರೋದಿಕ್ಕೆ ಅಪ್ಪ ಬಿಡೋದಿಲ್ಲ. ಈ ವರ್ಷವೇ ನಿನಗೆ ಮದುವೆ ಮಾಡಿ ಕಳುಹಿಸಬೇಕೂಂತ ಇದ್ದಾರೆ ಗೊತ್ತಾ ? "

"ಮದುವೆ" ಮಾತು ಹೇಳಿದ ತಕ್ಷಣ ತಂಗಿ ತನ್ನ ಮೇಲೆ ಯುದ್ಧಕ್ಕೆ ಬರ್ತಾಳೆ. ಗಲಾಟೆ ಮಾಡಿ ಜಗಳ ಮಾಡಿ ಓಡಿಹೋಗುತ್ತಾಳೆ ಅಂತ ತಿಳಿದಿದ್ದ ಸುನಂದಳ ಭಾವನೆ ಸುಳ್ಳಾಯ್ತು.

ಪಾರ್ವತಿ ಎಲ್ಲೋ ಶೂನ್ಯದಲ್ಲಿ ನೋಡುತ್ತಾ . . .

"ಮದುವೆ! . . . ಇಲ್ಲಕ್ಕಾ ! ನಾನು ಈ ಜನ್ಮದಲ್ಲಿ ಮದುವೆ ಆಗಲಾರೆ . . ." ಎಂದಳು.

ವಿಚಿತ್ರವಾಗಿ ನೋಡಿದಳು ತಂಗಿಯ ಕಡೆ.

"ಛೀ ! ಹುಚ್ಚಮ್ಮಾ ಹಾಗೆಲ್ಲ ಹೇಳ್ಬಾರ್ದು. ಗಂಡಸಿಲ್ಲದೆ ಹೆಣ್ಣು ಪ್ರಪಂಚದಲ್ಲಿ ಒಂದು ಹೆಜ್ಜೆಯೂ ಇಡಲು ಸಾಧ್ಯವಿಲ್ಲ . . . ಜೊತೆ ಇಲ್ಲದೇ ಪ್ರಯಾಣ ಮಾಡಬಾರದು."

"ನನಗೆ ವಿಧಿನೇ ಜೊತೆ ಅಕ್ಕಾ ! "

"ಸಾಕು ಇದ್ದಕ್ಕಿದ್ದ ಹಾಗೇ ಏನು ವೇದಾಂತಮ್ಮಾ ಇದು . . . ಅಪ್ಪ ನಿನ್ನನ್ನೇ ನನ್ನ ಹತ್ರ ನಿಮ್ಮ ಭಾವನ ಹತ್ರ ನಿನಗೇ ಒಳ್ಳೇ ಗಂಡನ ನೋಡೋದಕ್ಕೆ ಹೇಳಿದ್ದಾರೆ . . . ನಿಮ್ಮ ಭಾವನ ಮೇಲೆ ಆ ಭಾರ ಹಾಕಿದ್ದಾರೆ."

ಹೆಮ್ಮೆಯಿಂದ ಹೇಳಿದಳು ಸುನಂದ.

ಸಿಡಿಲು ಮೇಲೆ ಬಿದ್ದಂತಾಯ್ತು...ಅಗ್ನಿಪರ್ವತ ಬಿರಿದಂತಾಯ್ತು. ಸಾವಿರಾರು ಜನಗಳು ವಿಕಾರವಾಗಿ ಒಟ್ಟಿಗೆ ಚೀರಿದಂತಾಯ್ತು. ಭಯದಿಂದ ಬೆವತು ಬಳಲಿ ಅಕ್ಕನ ಕಾಲಲ್ಲಿ ಬಿದ್ದು ಗೋಳಾಡಿದಳು ಪಾರ್ವತಿ.

"ಬೇಡಕ್ಕಾ ! ನನಗೆ ಮದುವೆ ಬೇಡ. ಅದೂ... ಅದೂ... ನೀವು ನನಗೆ ವರ ನೋಡಬೇಡ.... ದಮ್ಮಯ್ಯ... ಬೇಡ್ವೇ ಬೇಡ."

ಮಗುವಿನಂತೆ ಅಳುತ್ತಿದ್ದ ಪಾರ್ವತಿಯನ್ನು ತಬ್ಬಿಕೊಂಡಳು ಸುನಂದ. ಅಕ್ಕನನ್ನು ಮತ್ತಷ್ಟು ಗಟ್ಟಿಯಾಗಿ ತಬ್ಬಿಕೊಂಡಳು ಪಾರ್ವತಿ. ಆದರೆ ಅವಳ ಹೃದಯ ಭಗವಂತನನ್ನು ಕೇಳಿತು.

"ಭಗವಾನ್ ! ನೀನು ಸೃಷ್ಟಿಸಿದ ವಿಚಿತ್ರ ಪದಾರ್ಥಗಳಲ್ಲಿ ಅತಿ ಪವಿತ್ರವಾದದ್ದು ನನ್ನ ಪಾರ್ವತಿ ಹೃದಯವೇ? "

ರೂಂನ ಹೊರಗಡೆ ನಿಶ್ಶಬ್ದವಾಗಿ ಬಂದು ಅಕ್ಕ-ತಂಗಿಯರ ಮಾತುಗಳನ್ನು ಕೇಳುತ್ತಿದ್ದ



"ಶೀಘ್ರಮೇ ವಿವಾಹಸಿದ್ಧಿರಸ್ತು"

ಸುಂದರ ತನ್ನೊಳಗೇ ಹೇಳಿಕೊಂಡ. ಈ ಸ್ತ್ರೀ ನೀನು ಸಹನೆಯ ಪ್ರತಿರೂಪ.

ತಂದೆ ಮಗಳಿಗೆ ಹೇಳಿ ಹೊರಟರು. ಹೋಗುವಾಗ ಮತ್ತೊಮ್ಮೆ ಮಗಳಿಗೆ ಹೇಳಿದರು.

"ಸುನಂದಾ! ಪಾರ್ವತಿಯನ್ನು ಒಳ್ಳೆ ಮನೆಗೆ ಸೇರಿಸಬೇಕಾದ ಕರ್ತವ್ಯ ನಿಮ್ಮ ದಂಪತಿಗಳ ಮೇಲಿದೆ. ಅವಳ ಆಗುಹೋಗುಗಳು ನಿನ್ನ ಕೈಲಿದೆ."

ಸುನಂದ ಮೌನವಾಗಿ ತಲೆ ಆಡಿಸಿದಳು.

"ಅಳಿಯಂದಿರೇ! ನಮ್ಮ ಹುಡಿಗೀ ಜಾತಕ ಕೊಟ್ಟಿದ್ದೀನಿ. ಒಳ್ಳೇ ಗಂಡನ್ನ ನೋಡಿ ಮದುವೆ ಮಾಡಿಸಿಬಿಡಿ." ನಗನಗುತ್ತ ಅಳಿಯಂದಿರಿಗೂ ಹೇಳಿದರು. ಮಾವನ ಮಾತು ಕೇಳಿದ ಅಳಿಯ ಮಾತಾಡದೇ ಎದ್ದು ಹೊರಗಡೆ ಹೋದ Taxi ತರುವ ನೆಪದಲ್ಲಿ.

ಪಾರ್ವತಿ ಬಂದು ತಂದೆಯ ಕಾಲಿಗೆ ನಮಸ್ಕರಿಸಿದಳು. ಅಚ್ಚರಿಯಿಂದ ತಲೆಬಾಗಿ ನಮಸ್ಕರಿಸುತ್ತಿರುವ ಮಗಳನ್ನು ನೋಡಿ ಮರುಕ್ಷಣ ಪ್ರೀತಿಯಿಂದ ನಕ್ಕು ಆಶೀರ್ವಾದ ಮಾಡಿದರು.

"ಶೀಘ್ರಮೇ ವಿವಾಹಸಿದ್ಧಿರಸ್ತು"

ಪಾರ್ವತಿ ತಲೆ ಎತ್ತಿ ತಂದೆಯ ಮುಖವನ್ನು ನೋಡಿ ನಿರಾಶೆಯಿಂದ ನಕ್ಕಳು ಮಾತ್ರ. ತಂದೆ ಅವಳ ತಲೆಯನ್ನು ಅಪ್ಯಾಯಮಾನವಾಗಿ ಸವರುತ್ತ,

"ನಿಜ ಹೇಳು ಪಾರಮ್ಮ! ಏನೋ ಮುದುಕ ತಂದೆ ಹೇಳ್ತಾ ಇದ್ದಾರಲ್ಲಾ...... ಅಂತ ಇಲ್ಲಿರಲು ಒಪ್ಪಿದ್ದೀಯಾ! ಅಲ್ಲವೇ?" ಎಂದು ಕೇಳಿದಾಗ ಪಾರ್ವತಿ ನಿಶ್ಚಲವಾಗಿ ಹೇಳಿದಳು.

"ಇಲ್ಲಪ್ಪಾ...ಯಾರಿಗಾಗಿಯೂ ಅಲ್ಲ..ನನಗಾಗಿ.. ನಾನು ಇಲ್ಲಿರಲು ಮನಃಪೂರ್ತಿಯಾಗಿ ಒಪ್ಪಿದ್ದೀನಿ. ನೀನು ಚಿಂತೆ ಇಲ್ಲದೆ ಪ್ರಯಾಣ ಮಾಡು, ಈ ತುಂಟು ದುಡುಕುತನದ ಮಗಳ ಮಾತುಗಳನ್ನು ಮರೆತು ಬಿಡು."

ತಂದೆ ಹೊರಟು ಹೋದರು ಬಹಳ ಹೊತ್ತು ಒಬ್ಬಳೇ ಬಾಗಿಲಲ್ಲಿ ನಿಂತಿದ್ದಳು ಪಾರ್ವತಿ...ಸುನಂದ ಕರೆದಾಗಲೇ ಅವಳಿಗೆ ಎಚ್ಚರ...ಶೂನ್ಯವಾಗಿದ್ದ ಬೀದಿಯನ್ನೊಮ್ಮೆ ನೋಡಿ..ನಿರಾಶೆಯಾಗಿ ನಕ್ಕು,

"ನಾನು ಶೂನ್ಯ ಲೋಕದ ರಾಣಿ" ಎಂದು ತನ್ನೊಳಗೇ ಹೇಳಿಕೊಳ್ಳುತ್ತಾ ಅಡಿಗೆಮನೆಗೆ ಹೋದಳು.

* * * *

ಅಡಿಗೆ ಮಾಡಿ ಮುಗಿಸಿ ಅಕ್ಕನ ರೂಂಗೆ ಕಾಲಿಟ್ಟ ಅವಳು ಒಂದು ನಿಮಿಷ ತತ್ತರಿಸಿದಳು...ಅಕ್ಕ ಮಲಗಿದ್ದಳು, ಸುಂದರ ಅವಳ ಪಕ್ಕದಲ್ಲಿ ಕುಳಿತು ಮೆಲ್ಲನೆ ನಗುತ್ತಾ ಪ್ರೀತಿಯಿಂದ ನೋಡುತ್ತಾ ಕುಳಿತಿದ್ದ... ಏನು ಹೇಳಿದನೋ ಸುನಂದಳ ಮುಖ ನಾಚಿಕೆಯಿಂದ ಕೆಂಪಾಗಿತ್ತು. ಅವನ ಬಿಳಿಯ ಕರಟಿನ ಮೇಲೆ... ಕುಂಕುಮ...ಒಂದು ಕ್ಷಣ ಅಸೂಯೆ ಅವಳಲ್ಲಿ ಇಣುಕಿ ನೋಡಿತು... ಮರುಕ್ಷಣ ಅವಳು ಅದನ್ನು ಓಡಿಸಿ ಹಿಂದಕ್ಕೆ ಹೋಗಲು ತಿರುಗಿದಾಗ ಸುನಂದ ನೋಡಿ ಕೂಗಿದಳು.

"ಯಾಕೇ ಪಾರ್ವತಿ ಓಡ್ತೀಯಾ...ಬಾ!"

"ಅಕ್ಕಾ ನೀನು ಊಟ ಮಾಡು ಬಾ ಹೊತ್ತಾಯ್ತು" ಎಂದು ಹೇಳಿ ಅಲ್ಲೇ ಇದ್ದ ಪುಸ್ತಕದ ಒಂದೊಂದು ಹಾಳೆಯನ್ನು ಮಗುಚುತ್ತಾ ನಿಂತಳು. ತ್ರಿವೇಣಿಯ "ಶರಪಂಜರ". ಅವಳ ಕೈ ಅಲ್ಲೇ ತಡೆಯಿತು. ತ್ರಿವೇಣಿ ಅಲ್ಲ 'ದೇವತೆ'. ಆಕೆ ಹೆಣ್ಣಿನ ಮನೋಭಾವಗಳನ್ನು ಎಷ್ಟು ಚೆನ್ನಾಗಿ ಅರಿತಿದ್ದಾರೆ ಅವರು...ವಾಸು...ವಿಷ್ಣು ಸ್ವಾರ್ಥಿ...ಅಂಥ ವಾಸುಗಳು ನಮ್ಮಲ್ಲಿ ಸಾವಿರಾರು ಜನರು ಇದ್ದಾರೆ. ಅಂಥ ವಾಸುಗಳನ್ನು ಗುಂಡಿಟ್ಟು ಕೊಲ್ಲಬೇಕು ಹಠಾತ್ತನೆ ಕೇಳಿದಳು ಪಾರ್ವತಿ...

"ಅಕ್ಕಾ! ಶರಪಂಜರ ಹೇಗಿದೆ?" ಸುನಂದ ನಕ್ಕಳು...

"ನನಗೆ ಅನುಭವವಿಲ್ಲ. ಹೂವಿನ ಪಂಜರದ ವಿಷಯ ಮಾತ್ರ ನನಗೆ ಗೊತ್ತು."

"ಆ ವಾಸು...ರಾಕ್ಷಸ. ಅವನು ಪ್ರೇಮಾಂತ ಹೇಳಿ ಅವಳನ್ನು ಮೋಸಗೊಳಿಸಿ. ಅವಳ ಕೊರಳಿಗೆ ತಾಳಿ, ಕಟ್ಟಿದ...ಅಕ್ಕಾ! ನಾನು ನಿಜ ಹೇಳ್ತೀನೆ–ಪ್ರೇಮ–ಅನ್ನೋದು ಸುಳ್ಳು. ಒಂದು ಹೆಣ್ಣನ್ನು ಬಲೆಗೆ ಹಾಕಿಕೊಳ್ಳೋದಕ್ಕೆ ಉಪಯೋಗಿಸೋ ಅಂಥಹಾದ ಪದ... ಪಶುವಾಂಛೆಗೆ ಇನ್ನೊಂದು ಹೆಸರು...ಪ್ರೇಮ...

## ಮಾನವನ ಸಾಧನ



ಚಂದ್ರಗ್ರಹದಲ್ಲಿ ಖಾನಾವಳಿಯ ಹಾಕಿ
ಊಟ ಮಾಡುವುದೊಂದೆ ಉಳಿದಿರುವುದು ಬಾಕಿ.
ಎಲ್ಲರೂ ಅಲ್ಲಿಯೇ ಮಾಡಿದರೆ ಊಟ
ನಮಗಿಲ್ಲ ಆಹಾರ ಧಾನ್ಯಗಳ ಕಾಟ.

— ದಿನಕರ ದೇಸಾಯಿ

ದೈಹಿಕವಾದದ್ದು ಪ್ರೇಮವಲ್ಲ...ತಾಯಿ ಮಕ್ಕಳದು, ಅಕ್ಕ ತಂಗಿಯರದು ....ಅಣ್ಣತಮ್ಮಂದಿರದು ಪ್ರೇಮ ಈ ವಾಸು ಅವಳ ಸೌಂದರ್ಯವನ್ನು ನೋಡಿ, ಮದುವೆಯ ಬಲೆ ಬೀಸಿದ, ಆ ಬಲೆಗೆ ಪ್ರೇಮ ಎಂಬ ಬಣ್ಣ ಬಣ್ಣದ ಪಟ್ಟಿಗಳನ್ನು ಕಟ್ಟಿ ಅಲಂಕರಿಸಿದ... ಬಿದ್ದಳು ಪಾಪ" ಉದ್ರೇಕದಿಂದ ಹೇಳುತ್ತಿರುವ ತಂಗಿಯನ್ನು ವಿಚಿತ್ರವಾಗಿ ನೋಡಿ ನಂತರ ಶಾಂತವಾಗಿ ನಕ್ಕಳು ಸುನಂದ.

"ನೀನು ತ್ರಿವೇಣಿಯ ಪೂಜಾರಿಣೀಂತ ನನಗೆ ಗೊತ್ತು..."

"ವಾಸು ಕೆಟ್ಟವನೂಂತ ಹೇಳೋಕಾಗೋಲ್ಲ.,." ಸುಂದರ ಎದ್ದುನಿಂತ.

"ಸುಮೀ ಮರೆತಿದ್ದೆ! ಅರ್ಜೆಂಟಾಗಿ ಆಫೀಸಿಗೆ ಹೋಗಬೇಕು" ಆಶ್ಚರ್ಯದಿಂದ ಕೇಳಿದಳು ಸುನಂದ.

"ಈ ದಿನ ಭಾನುವಾರ" ಪೆಚ್ಚಾದ ಅವನು... ಆದ್ರೂ ನಗುತ್ತಾ...

ಗೊತ್ತು...ಪೇಪರ್ಸ್ ತುಂಬಾ ಇದೆ ಹೋಗಬೇಕು ಊಟಕ್ಕೆ ಕಾಯಬೇಡ."

ಷರ್ಟ ಹಾಕಿಕೊಂಡು ಹೊರಟೇ ಹೋದ ಸುಂದರ..

ಪಾರ್ವತಿಗೆ ಅವನನ್ನು ತಡೆದು ನಿಲ್ಲಿಸಿ ಕೆನ್ನೆಗೆ ಹೊಡೆಯಬೇಕೆನಿಸಿತು. ಸುನಂದ ನಿಟ್ಟುಸಿರಿನೊಡನೆ ಹೇಳಿದಳು...

"ಪಾಪ ಭಾನುವಾರಾನೂ ರಜ ಇಲ್ಲ ಇವರಿಗೆ. ಕೆಲಸಾಂತ ಓಡಿದ್ರು ಹಾಯಾಗಿ ಮನೆಯಲ್ಲಿ ಇರೋದಕ್ಕೂ ಪುರಸೊತ್ತು ಇಲ್ಲ."

"ಹಾಯಾಗಿ ಮನೆಯಲ್ಲಿರಲು ಅವರ ಗುಪ್ತ ಶತ್ರು ನಾನಿದ್ದೀನಲ್ಲಾ" ಎಂದುಕೊಂಡಳು ಪಾರ್ವತಿ.

"ಗಂಡಸರಿಗೆ ಮನೆಗಿಂತ ಹೊರಗೆ ಅವಿಂದ ಹೆಚ್ಚಕ್ಕಾ!"

"ನಿಮ್ಮ ಭಾವ ಹಾಗಲ್ಲಾ ಪಾರೂ! ಅವರಿಗೆ ಮನೆಯೇ ಸ್ವರ್ಗ. ಎಷ್ಟೋ ಸಲ ಅವರು ತನ್ನ ಸ್ನೇಹಿತರೊಡನೆ ಹೇಳಿದ್ದು ನಾನು ಕೇಳಿದ್ದೇನೆ... ನನ್ನ ಮನೇನೇ ಥೀಯೇಟರ್-ಸುನಂದಳೇ ಹೀರೋಯಿನ್.. ನಾನೇ ಹೀರೊ...ಇನ್ನು ಪಿಕ್ಚರ್ ಯಾಕೆ ನೋಡಬೇಕು?... ಪಾರ್ಕಿಗೆ, ಬಾ ಅಂತೀರಾ...ನನ್ನ ಮನೆ ಹಿತ್ತಲಿನಲ್ಲಿ ನನ್ನಾಕೆ ಕೈಯಾರ ಬೆಳೆಸಿದ ಹೂವಿನ ಗಿಡಗಳೇ ನನಗೆ ಲಾಲಬಾಗ. ನನ್ನವಳು ಮಾತಾಡುತ್ತಿದ್ದರೆ ಅದೇ ನನಗೆ ಎಂ. ಎಸ್. ಸಂಗೀತ ಕಚೇರಿ ಅವಳು ನಡೆಯುತ್ತಿದ್ದರೆ ಅದೇ ನನಗೆ ವೈಜಯಂತಿ ಮಾಲಾಳ ಡ್ಯಾನ್ಸ್ ಅವಳು ಪಾತ್ರೆಗಳನ್ನು ಉಜ್ಜುತ್ತಿದ್ದರೆ ಅದೇ ನನಗೆ ಚೌಡಯ್ಯನ ಪಿಟೀಲು. ಇಷ್ಟು ಮನೆಯಲ್ಲಿರೋವಾಗ ನಾನ್ಯಾಕೆ ಹೊರಗಡೆ ಬರಬೇಕೂಂತ?.. ನೋಡಿದ್ಯಾ! ನಿಮ್ಮ ಭಾವನ ಕವಿತ್ವ.."

ಸುನಂದ ನಗುತ್ತಾ ಹೇಳಿದ್ದನ್ನು ಕೇಳಿ ಪಾರ್ವತಿ ಬಲವಂತದಿಂದ ನಗುತ್ತಾ,

"ಹೌದಕ್ಕಾ! ಭಾವ ನಿನಗೆ ಸರ್ವಸ್ವ..ನೀನೇ... ಅವರ ಹೃದಯದ ರಾಜ್ಯಕ್ಕೆ ನೀನು ರಾಣಿ..ಬೇರೆ ಯಾರಿಗೂ ಅಲ್ಲಿ ಪ್ರವೇಶವಿಲ್ಲ..." ಎಂದು ಹೇಳುತ್ತಾ "ನೀನು ಬಾ ಅಕ್ಕಾ ಊಟಕ್ಕೆ" ಎಂದು ಹೊರಟು ಹೋದಳು.

"ನಿಜ ಅವರ ಹೃದಯದ ರಾಣಿ ನಾನು...ಅಲ್ಲಿ ಯಾರೂ ಇಲ್ಲ. ನಾನೊಬ್ಬಳೇ...ಕೇವಲ ನಾನೊಬ್ಬಳೇ...ಅವರ ಪ್ರೇಮವನ್ನು ಯಾರಿಗೂ ಹಂಚುವುದಿಲ್ಲ..."ಸುನಂದ ಮಗುವನ್ನು ಎದೆಗಪ್ಪಿಕೊಂಡು "ನೋಡಿದ್ಯಾ ಪಾಪಾ! ನಿಮ್ಮ ತಂದೆ ಎಷ್ಟು ಒಳ್ಳೆಯವರು...ತುಂಬಾ ತುಂಬಾ ಒಳ್ಳೆಯವರು..."ಪಾಪ ತಾಯಿಯನ್ನು ನೋಡಿ ನಕ್ಕಿತು. ತಾಯಿ ನಕ್ಕಳು ಆದರೇ.. ಅಡಿಗೇ ಮನೆಯಲ್ಲಿ ಕುಳಿತಿದ್ದ ಪಾರ್ವತಿ ಅತ್ತಳು.

* * * *

## ೮

ವೃಂದಾವನದಲ್ಲಿ ಒಬ್ಬನೇ ಕುಳಿತು ಪ್ರಕೃತಿ ಸೌಂದರ್ಯವನ್ನು ದಿಟ್ಟಿಸುತ್ತಿದ್ದ.

ಅಲ್ಲೇ ಹೋಟಲಿನಲ್ಲಿ ಇಳಿದಿದ್ದ ಸ್ನೇಹಿತನನ್ನು ಕಾಣಲು ಬಂದ ಆತನು ಸ್ನೇಹಿತನೊಡನೆ ಒಂದು ಮಾತೂ ಆಡದೆ ಮಿನುಗುವ ಕಾರಂಜಿಗಳನ್ನು ತನ್ಮಯನಾಗಿ ನೋಡುತ್ತಾ ನಿಂತಿದ್ದ.

ಇದೂ ವೃಂದಾವನವಲ್ಲ ಭೂತಲ ಸ್ವರ್ಗ. ಪ್ರೇಮಿಗಳ ಪುಣ್ಯಸ್ಥಳ...ಯೋಗಿನಿಯ ಮನಸ್ಸೂ ಇಲ್ಲಿ ಒಂದು ಕ್ಷಣ ಚಂಚಲವಾಗುವುದು.

ಒಂದು ಕಡೆ ಕಾವೇರಿ ರಭಸದಿಂದ 'ಹೋ' ಎಂದು ಕೂಗುತ್ತಾ ಹೋಗುತ್ತಿದ್ದಾಳೆ. ಹದ್ದು ಮೀರಿದ ಹೆಣ್ಣಿನಂತೆ. ಮತ್ತೊಂದು ಕಡೆ ಸುಂದರಳಾಗಿ ನವ ವಧುವಿನಂತೆ ನಾಚಿ ನಗುತ್ತಿದ್ದಾಳೆ. ಒಂದು ಕಡೆ ಭೀಕರ ಸೌಂದರ್ಯ...ಒಂದು ಕಡೆ ಮುಗ್ಧ ಸೌಂದರ್ಯ...ಒಂದು ಕಡೆ ಅಳುತ್ತಾ ಎಲ್ಲ ಕಳೆದುಕೊಂಡವಳಂತೆ ರೋದಿಸುತ್ತಾ ರಭಸದಿಂದ ನುಗ್ಗಿ ಹೋಗುತ್ತಿರುವ ಕಾವೇರಿ. ಮತ್ತೊಂದು ಕಡೆ ಏನೂ ತಿಳಿಯದೆ ಪ್ರಪಂಚದ ಮಾಲಿನ್ಯವನ್ನು ಅರಿಯದೇ ನಿಷ್ಕಲ್ಮಷವಾಗಿ ನಗುತ್ತಿರುವ ಕಾವೇರಿ. ಹೌದು ಒಂದು ಕಡೆ ನಗು, ಒಂದು ಕಡೆ ಅಳು...ನಗುವಿನ ಹಿಂದೆ ಅಳುವು...ಅಳುವಿನ ಹಿಂದೆ ನಗುವು...ನಗುತ್ತಿದ್ದ ಪಾರ್ವತಿ ಈಗ...ಅಳುತ್ತಿದ್ದಾಳೆ...ಈಗ ನಗುತ್ತಿರುವ ಸುನಂದ ಮುಂದೆ ಅಳುತ್ತಾಳೆ...

"ಬಾ...ಬಾ...ನನ್ನ ರಾಜಾ ಕಾಣುವ ಪ್ರೇಮದ ರೋಜಾ..."

ಸುಂದರ ತಿರುಗಿ ನೋಡಿದ. ವೃಂದಾವನದಲ್ಲಿ ಚಿತ್ರೀಕರಣ ನಡೆಯುತ್ತಿತ್ತು. ಕಥಾನಾಯಕಿ ಸಂತೋಷದಿಂದ ಕುಣಿಯುತ್ತಾ ಒಯ್ಯಾರದಿಂದ ಬಳುಕುತ್ತಾ ಹಾಡುತ್ತಾ ಕೈ ಬೀಸಿ ಕರೆಯುತ್ತಿದ್ದಾಳೆ ಪ್ರಿಯನನ್ನು.

ಸುಂದರಗೆ ನಗು ಬಂತು...ಎಲ್ಲೆಲ್ಲೂ ಈ ಪ್ರೇಮ ಕಾಮಗಳ ಹೊಯ್ದಾಟವೇನೇನಾ! ಈ ನಿರ್ಮಾಪಕರಿಗೆ ಬೇರೆ ಕಥೆಯೇ ಸಿಗುವುದಿಲ್ಲವೇನೋ...ಹುಡಿಗೀ...ಹುಡುಗಾ, ಪ್ರೀತೀ...ಪ್ರೇಮ, ಕಾಲು ಜಾರೋದು ಏಟು ಬಿದ್ದಾಗ ತತ್ತರಿಸಿ ಅಳೋದು...ಆ ಮೇಲೆ ಪಶ್ಚಾತ್ತಾಪ...ಸಾಹಿತಿಗೆ ಮೂಡ್ ಚೆನ್ನಾಗಿದ್ದರೆ ಅವರಿಗೆ ಮದುವೆ ಅಂದ್ರೇ ಸುಖಾಂತ. ಹೆಂಡ್ತಿ ಮೇಲೆ ಆ ಬಡ ಸಾಹಿತಿ ಸಿಟ್ಟು ಮಾಡಿಕೊಂಡಿದ್ದರೇ ವಿಷಾದಾಂತ್ಯ..ಅವರನ್ನು ಹೇಳಿ ಏನು ಪ್ರಯೋಜನ? ನಿತ್ಯ ಜೀವನವನ್ನು ಕಣ್ಣ ಮುಂದೆ ತರೋದಕ್ಕೆ ಪ್ರಯತ್ನಪಡ್ತಾರೆ. ಹುಡುಗ ಹುಡಿಗಿ, ಪ್ರೀತಿ ಇವು ಮೂರು ಪ್ರಪಂಚ ಇರೋವರ್ಗೂ ನಿತ್ಯನೂತನ...ಹೌದು ತಾನೂ ಪ್ರೀತಿಸಿದ ಯಾರನ್ನು? ಸುನಂದಳನ್ನೇ!... ಇಲ್ಲ ಇಲ್ಲ ಅವಳನ್ನು ದೇವತೆಯಂತೆ ಪೂಜಿಸಿದ... ಭಕ್ತನಂತೆ ಆರಾಧಿಸಿದ. ಅವಳ ವ್ಯಕ್ತಿತ್ವದ ಮುಂದೆ ಅವನು ಚಿಕ್ಕ ಹುಡುಗನಂತಾಗುತ್ತಿದ್ದ. ಅವಳ ಅನಂತ ಪ್ರೇಮವನ್ನು ನೋಡಿ ಅವಳ ಸೇವಕನಾಗಿದ್ದ ಆದ್ರೇ...ಪಾರ್ವತಿ ತುಂಟ ಪಾರ್ವತಿ ನಕ್ಕು ನಗಿಸುವ ಪಾರ್ವತಿ. ಮೊಟ್ಟ ಮೊದಲು ರೈಲ್ವೇ ಸ್ಟೇಷನ್ನಿನಲ್ಲಿ ತುಂಟು ನಗುವಿನಿಂದ ರೇಗಿಸುವ ನೋಟದಿಂದ, ತೃಪ್ತಿಯಿಂದ ಮಲಗಿದ್ದ ಹೃದಯವನ್ನು ಮೆಲ್ಲನೆ ಚಿವುಟಿ ಎಬ್ಬಿಸಿದ ಪಾರ್ವತಿ...ಅವಳನ್ನು ಪ್ರೀತಿಸಿದನೇ... ಇಲ್ಲ...ಇಲ್ಲ...ಹೃದಯ ಇಬ್ಬರನ್ನು ಬಯಸುವದಿಲ್ಲ ಹಾಗೆ ಬಯಸಿದರೇ ಅದು ಪ್ರೇಮವಲ್ಲ...ಕಾಮ. ಪ್ರೀತಿ ಅಲ್ಲ ಆಶೆ. ನಿರ್ಮಲವಾದದ್ದಲ್ಲ ಕೊಚ್ಚೆಯ ಗುಂಡಿ...

ಸುನಂದಳಲ್ಲಿ ಕಾಣದ ತುಂಟತನ, ನಗು, ಮಾತು ಅವಳಲ್ಲಿ ಕಂಡೆ. ಅದನ್ನು ಬಯಸಿದೆ ಪಡೆದೆ ಹಾಗಾದ್ರೇ...ಅವಳ ಗತಿ??? ರೋದಿಸುತ್ತಾ ರಭಸದಿಂದ ಹೋಗುವ ಕಾವೇರಿ—

ಭಯಂಕರಳಾದ ಕಾವೇರಿ—

ಭೀಕರಳಾದ ಕಾವೇರಿ...

"ಪ್ರೇಮದಿಂದ ವಂಚಿತರಾದ ಹೆಣ್ಣುಗಳು ಕಾವೇರಿಯಲ್ಲಿ ಬಂದು ಬಿಚ್ಚಿಟ್ಟುಕೊಳ್ತಾರಂತೆ! ನಿಜವೇ?"

ಸ್ನೇಹಿತನು ಹಠಾತ್ತನೆ ಕೇಳಿದಾಗ ಆಲೋಚನೆಯ ಹೆಣ್ಣನ್ನು ತಬ್ಬಿನಿಂತಿದ್ದ ಸುಂದರ ನಡುಗಿ ಹೋದ.

ಅಳುವ ಪಾರ್ವತಿ.

ಕಾಲು ಜಾರಿದ ಪಾರ್ವತಿ

ಮದುವೆಗೆ ಮುಂಚೆ ಭಾವನ ಮಡಿಲಿಗೆ ಬಿದ್ದ ಪಾರ್ವತಿ...ಕಾವೇರಿಯಲ್ಲಿ ಬಿಚ್ಚಿಟ್ಟುಕೊಳ್ತಾಳೆಯೇ?

"ಪ್ರೇಮದಿಂದ ವಂಚಿತರಾದ ಹೆಣ್ಣುಗಳನ್ನು ಕಾವೇರಿ ತಾಯಿ ಮಡಿಲಿನಲ್ಲಿ ಬಿಚ್ಚಿಟ್ಟುಕೊಳ್ಳುತ್ತಾಳೆಯೇ?"

ಸ್ನೇಹಿತನ ಪ್ರಶ್ನೆ...ಅಲ್ಲ...ಅಂತರಾತ್ಮದ ಪ್ರಶ್ನೆ ಇಲ್ಲ...ತಾನು ಉತ್ತರಿಸಲಾರ.

ಆಗ ತಾನೆ ಅರಳಿ ಮಂಜಿನಲ್ಲಿ ತೊಯ್ದ ಗುಲಾಬಿ ಹೂವಿನಂತೆ ಇದ್ದ ಪಾರ್ವತಿ.

ಸಣ್ಣಜಾಜಿಯಂತೆ ತೆಳ್ಳಗೆ ಬೆಳ್ಳಗಿದ್ದ ಪಾರ್ವತಿ.

ಸಂಪಿಗೆ ಹೂವಿನಂತೆ ನಗುವ ಪಾರ್ವತಿ.

ಮನೋರಂಜಿತ ಪುಷ್ಪದಂತೆ ಮತ್ತೇರಿಸುವ ಪಾರ್ವತಿ.

ಕಮಲದ ಕಣ್ಣುಗಳಿಂದ ಕಥೆ ಹೇಳುವ ಪಾರ್ವತಿ.

ಕಾವೇರಿಯಲ್ಲಿ ಬಿದ್ದರೆ...??...ಅಯ್ಯೊ!!! ಆಗ ಅವಳನ್ನು ನೋಡಲು ಸಾಧ್ಯವೇ???

ಮೀನುಗಳು ತೃಪ್ತಿಯಿಂದ ಕಚ್ಚಿತಿಂದು ಮೆಂಗಿಸಿದ ದೇಹ...

ಮೊಸಳೆ ಪ್ರೀತಿಯಿಂದ ತುಂಡು ಮಾಡಿದ ಕೈ...

ಗುಂಗುರು ಕಪ್ಪು ಕೂದಲಿಲ್ಲದೆ ಅಲ್ಲಲ್ಲಿ ಕಾಣಿಸುವ ಬುರುಡೆ ನೀರಿನಲ್ಲೇ ಇದ್ದು ಕೊಳೆತು ಹೋದ ದೇಹ...

ಉಬ್ಬಿ ವಿಕಾರವಾದ ಮುಖ...

ಭಯಂಕರವಾಗಿ ತೆರೆದ ಕಣ್ಣುಗಳು...

ಸೌಂದರ್ಯದ ಸಮಾಧಿ–ಜಾರಿದ ಹೆಣ್ಣು ತನಗೆ ತಾನೆ ವಿಧಿಸಿಕೊಂಡ ಘೋರ ಶಿಕ್ಷೆ. ಸುಂದರವಾದ ಪುಷ್ಪ ಸ್ವಾರ್ಥಕ್ಕೆ ಆವೇಶಕ್ಕೆ ಬಲಿಯಾಯ್ತು.

ಸುಂದರಿ...ಹೆಣ,

ಯೌವನದ ಆಟ...ಸಾವಿನಲ್ಲಿ ಮುಕ್ತಾಯ. "ಓ!! ಪಾರೂ...ನೀ ಸಾಯಬೇಡ. ನಿನ್ನ ಶಿಥಿಲ ಸೌಂದರ್ಯವನ್ನು ನಾನು ನೋಡಲಾರೆ...ಪಾರೂ...ಪಾರೂ" ಗಟ್ಟಿಯಾಗಿ ಚೀರಬೇಕೆನಿಸಿತು ಅವನಿಗೆ.

"ಥೂ! ಈ ದಿನ ಯಾಕೋ ನಿನಗೆ ಮೂಡಿಲ್ಲ... ನಾನೊಂದು ಪೆಗ್ ಕುಡಿತೀನಿ. Dont worry ನಾನು ಪರಮಿಟ್ ಹೋಲ್‌ಡರ್" ಎಲ್ಲಿಂದಲೋ ತೂರುತ್ತ ಬಂದ ಅವನ ಸ್ನೇಹಿತ ನಗುತ್ತಾ Bottle open ಮಾಡಿದ.

"ಪರ್ಮಿಟ್ ಹೋಲ್‌ಡರ್ !"

'ಪರ್ಮಿಟ್' ಇದೇ ಕುಡಿಯಬಹುದು...ಅಂದ್ರೆ... ಧೈರ್ಯವಾಗಿ ಅನೀತಿಯ ಕೆಲಸವನ್ನು ಜಯಪ್ರದವಾಗಿ ಮಾಡಬಹುದು...ಕುಡಿಯೋದು ತಪ್ಪು... ಸರ್ವನಾಶಾಂತ... ಮತ್ತೆ... 'ಪರ್ಮಿಟ್' ಯಾಕೆ ಕೊಡ್ತಾರೆ! ಅವನೊಬ್ಬ ನಾಶವಾದರೆ ದೇಶಕ್ಕೇನೂ ನಷ್ಟವಿಲ್ಲ ಅಂತಲೇನು! 'ಪರ್ಮಿಟ್' ಇದ್ದರೆ, ಬಾಯಿ ಇಲ್ಲದ ಜಂತುಗಳನ್ನು ಬೇಟೆಯ ನೆಪದಲ್ಲಿ ಧೈರ್ಯವಾಗಿ ಕೊಲ್ಲಬಹುದು. ಸತ್ತ ಹುಲಿಯ ತಲೆಯ ಮೇಲೆ ಕಾಲಿಟ್ಟು Photo ತೆಗೆಸಿಕೊಳ್ಳಬಹುದು... 'ಪರ್ಮಿಟ್' ಇದ್ದರೇ ಬಾಟಲ್ ಅಜೆ ಇಟ್ಟುಕೊಂಡು ಕುಡಿದು ಕುಡಿಯದಿದ್ದವರಲ್ಲಿ ಆಶೆಯನ್ನು ಎಬ್ಬಿಸಬಹುದು...ಹಾಗಾದ್ರೇ ದೈಹಿಕವಾಗಿ ಕೆಡೋದಕ್ಕೆ 'ಪರ್ಮಿಟ್' ಯಾಕೆ ಕೊಡಬಾರ್ದು!... ಹಾಗೆ ಕೊಟ್ರೆ ಹೆಂಗಸರು ಸಮಾಜದ ಕ್ರೂರ ಕೈಗಳಲ್ಲಿ ಸಿಕ್ಕಿ ಪರಿತಪಿಸಬೇಕಾಗಿಲ್ಲ. ಜೀವನವನ್ನು ಅಣು ಅಣುವಿಗೆ ಅನುಭವಿಸಿ ಆನಂದಿಸಬಹುದು, ಗಂಡಸಿನಂತೆ.

ಅಂದವಾದ ಮದುವೆಯ ಮಂಟಪದಲ್ಲಿ ಕೃತಜ್ಞತೆ ತುಂಬಿದ ತನ್ನ ದೊಡ್ಡ ಕಣ್ಣುಗಳಿಂದ ನನ್ನನ್ನು ನೋಡಿ, ನಾಚಿ ತಲೆಬಾಗಿ ಕುಳಿತಿರುವ ನವವಧು ಪಾರ್ವತಿಯ ನುಣುಪಾದ ಕೊರಳಿಗೆ ಮಾಂಗಲ್ಯ ಕಟ್ತೀನಿ. ಅವಳ ಕಿರುಬೆರಳು ಹಿಡಿದು ಅಗ್ನಿಯನ್ನು ಪ್ರದಕ್ಷಿಣೆ ಮಾಡ್ತೀನಿ... ಅಯ್ಯೋ! ಅಗ್ನಿ ಅದರಲ್ಲಿ ಯಾರೋ ಸುಟ್ಟು ಹೋಗ್ತಾಯಿದಾರಲ್ಲಾ........ ಯಾರದೂ!.., ಸುನಂದ...ನನ್ನ ಸುನಂದ... ಬಂದು ಬಿಡು ಸುನಂದಾ!!...ಆ ಅಗ್ನಿಕುಂಡದಿಂದ ಎದ್ದು ಬಂದುಬಿಡು. ಹೊರಟು ಹೋಗೋಣ ಎಲ್ಲಿಗಾದ್ರೂ ನಿನ್ನ ದುಃಖವಿಲ್ಲದ ಕಡೆ ಹೊರಟು ಹೋಗೋಣ...ಬಾ ....ಸುನಂದಾ!....ಬಾ....! ನಿನ್ನ ಬಿಟ್ಟು ಇರಲಾರೆ ನೀನು ನನ್ನ ಗೃಹದೇವಿ, ನನ್ನ ಪೂಜೆಗೆ ಅರ್ಹಳಾದ ದೇವತೆ, ನನ್ನ ಹೃದಯಮಂದಿರವನ್ನು ಭಗ್ನ ಮಾಡಿ ಹೋಗಬೇಡ.ಬಾ ಸುನಂದಾ! ಕೈ ಚಾಚಿದ ಅಲ್ಲಿ ಸುನಂದ ಇಲ್ಲ...ಕಂಬ ಹಿಂದೆ ತಿರುಗಿ ನೋಡಿದ ಸ್ನೇಹಿತ ಕುಡಿಯುತ್ತಾ ಕುಳಿತಿದ್ದ ಮಧು..ಮಾನಿನಿ.. ಎರಡೂ ಒಂದೇ, ಎರಡರಲ್ಲೂ "ನಿಷಾ" ಇದೆ. ಅದರಲ್ಲಿ ಸಿಗುವ ಮತ್ತಿಗಾಗಿ ಸರ್ವಸ್ವವನ್ನೂ ಧಾರೆ ಎರೆದವರೂ ಎಷ್ಟೋ ಜನ... ಆದ್ರೇ ತನ್ನ ಅನುಭವದಲ್ಲಿ ಎರಡರಲ್ಲೂ ತಲೆನೋವಿದೆ.

ಒಂದು ದಿನ ಆಫೀಸಿಗೆ ಬಂದ ಯೂರೋಪಿಯನ್ ಅತಿಥಿಗೆ ತಮ್ಮ ಬಾಸ್ 'ಪಾರ್ಟಿ' ಕೊಟ್ಟರು..ಆ ಪಾರ್ಟಿಯಲ್ಲಿ ಮಧು ನಾಟ್ಯವಾಡಿತು..ಅದರ ಗೆಜ್ಜೆಯ ಸದ್ದು ಹಾಲ್‌ನಲ್ಲಿ ತುಂಬಿತ್ತು. Officer ತನ್ನನ್ನು ಕರೆದು ಪ್ರೀತಿಯಿಂದ whisky ಕೈಗೆ ಕೊಟ್ಟಾಗ ಬೇಡವೆನ್ನಲು ಆಗಲಿಲ್ಲ, ಬೇಡವೆಂದರೇ ನಾಳೆ ಅವರು ತನ್ನನ್ನು ಆಫೀಸ್‌ನಲ್ಲಿ "ಬೇಡ"ವೆಂದುಬಿಟ್ಟರೆ. ನಡುಗುವ ಕೈಗಳಿಂದ ನಗುತ್ತಾ ಗ್ಲಾಸನ್ನು ಕೈಗೆ ತಗೊಂಡ... ಆಫೀಸರ್ ನಕ್ಕರು. ಕುಡಿಯುವವರಿಗೆ ಒಂದು ಚಟ ಎಲ್ಲರಿಗೂ ಕುಡಿಸಬೇಕೂ ಅನ್ನೋ ಆಶೆ. ಈ ವಿಚಾರದಲ್ಲಿ ಕೃಪಣ ಕೂಡಾ ಕರ್ಣನಾಗುತ್ತಾನೆ. ಕುಡಿಯಬೇಕು ಎಲ್ಲರೂ ಕುಡಿಯಬೇಕು ಇದೇ ಅವನ ಆಶಯ.

ಸುಂದರ ಗಟಗಟನೆ ಕ್ವೈನಾಮಿಕ್ಸ್‌ಚರಂತೆ ಕುಡಿದ. ಆದ್ರೆ ವಿಚಿತ್ರ ಮತ್ತೆ ಆ ಸಿಹಿಯನ್ನು ಕುಡಿಯಬೇಕೆನಿಸಿತು. ಅದರಲ್ಲಿ ವಿಲಕ್ಷಣವಾದ ಸುಖವಿತ್ತು.. ಮತ್ತೆ ಕುಡಿದ ಅಷ್ಟಕ್ಕೆ ಮತ್ತಿನ ಕನ್ಯೆ ಅವನಿಗೆ ಮುತ್ತು ಕೊಟ್ಟಳು. ತನ್ಮಯವಾಗಿ ಮಲಗಿದ. ಆಗ ಅವನಿಗೆ ಮದುವೆ ಆಗಿರಲಿಲ್ಲ. ಆದ್ರೇ ಆಮೇಲೆ ಅವನು ಕುಡಿಯುವ ಆಶೆಯನ್ನು ಬಿಟ್ಟ. ಕಾರಣ ಸುನಂದಳ ಆಗಮನ. ಅವಳು ನೀಡುತ್ತಿರುವ ಸುಖದಲ್ಲಿ ಅವನಿಗೆ ಮತ್ತು ಸಿಗುತ್ತಿತ್ತು. ಆದರೆ ಕುಡಿದ ಮಾರನೆಯ ದಿನ ಅವನಿಗೆ ವಿಪರೀತ ತಲೆನೋವು... ಭರಿಸಲಾರದ ವೇದನೆ ಸ್ನೇಹಿತನೊಡನೆ ಹೇಳಿಕೊಂಡ ಅವನು ಹೇಳಿದ ಪರಿಹಾರ ವಿಚಿತ್ರವಾಗಿತ್ತು.

"ಇನ್ನೂ ಸ್ವಲ್ಪ ಕುಡಿ ಸರಿಹೋಗುತ್ತೆ"

ಸುಂದರಗೆ ನಗು ಬಂತು-"ಸಾಯುತಾ ಇದ್ದೇನೇ ಜೀವ ಉಳಿಸೋ" ಅಂದ್ರೇ "ಪೂರ್ತಿ ಸಾಯಿ ಜೀವ ಬರುತ್ತೇ" ಅಂದ ಹಾಗೇ ಅಂತ ಅಂದುಕೊಂಡ. ಕುಡಿದ ಸುಖಕ್ಕಿಂತ ಕುಡಿದ ನಂತರ ಅನುಭವಿಸ್ತೋ

ಯಾತನೆಯನ್ನು ಅವನು ಮರೆಯಲಿಲ್ಲ. ಹಾಗೆ ಪಾರ್ವತಿ...ಪಾರ್ವತಿಯನ್ನು ತನ್ನವಳನ್ನಾಗಿ ಮಾಡಿಕೊಂಡ ರಾತ್ರಿ ಓಹ್...ಸ್ವರ್ಗ ಸುಖ ಎನಿಸಿತು ನಿಜವಾದ ಸ್ವರ್ಗ ಪಾರ್ವತಿಯಲ್ಲಿದೆ ಎಂದುಕೊಂಡ, ಎಂದೂ ಜೀವನದಲ್ಲಿ ಪಡೆಯಲಾರದ ಸುಖ, ತೃಪ್ತಿ ಪಡೆದ, "ಪ್ರಪಂಚವೇ ಮುಳುಗಿ ಹೋಗಲಿ ನೀನು ಮಾತ್ರ ಇದ್ದರೇ ಸಾಕು" ಎಂದು ಅವಳನ್ನು ತಬ್ಬಿ ಮಲಗಿದ್ದ. ಆದರೆ ಮಾರನೆಯ ದಿನ ಸೂರ್ಯ ರಶ್ಮಿ ಕಂಡೊಡನೆ ತನ್ನ ಮೇಲೆ ತನಗೇ ಅಸಹ್ಯವಾಯ್ತು. ಮನಸ್ಸಿನ ಯಾತನೆ, ಅಂತರಾತ್ಮದ ಅಣಕ ಹೇಳತೀರದು. ಇಂದೂ ಸಹ ಅಂದಿನ ರಾತ್ರಿಗಾಗಿ...

"ಸುಂದರ ಹೆಂಡ್ತಿ ಇಲ್ಲದೆ ವೃಂದಾವನಕ್ಕೆ ಬರಬಾರದು ಕಣೋ, ರಾಧಾನೋ ಭಾನುನೋ ಇದ್ದರೇನೇ ವೃಂದಾವನ, ರಸಜೀವನ"

ಸ್ನೇಹಿತ ಕುಡಿದಿದ್ದರಿಂದ ಕೆಂಪೇರಿದ ಕಣ್ಣುಗಳನ್ನು ಉಜ್ಜುತ್ತಾ ನುಡಿದ...ಇಷ್ಟು ಸಮಯ ಅವನೇನು ಕನಸು ಕಾಣುತ್ತಿದ್ದನೊ!...ಹೆಣ್ಣಿಲ್ಲದ ಗಂಡಿಗೆ ಜೀವನದಲ್ಲಿ ರಸವಿಲ್ಲವೇನೋ! ... ಸುಂದರ ಕೇಳಿದ..

"ನಿನ್ನ Wife ನ ಕರ್ಕೊಂಡು ಬರಬಹುದಾಗಿತ್ತು" ಸ್ನೇಹಿತ ರೇಗಿದ.

"ಅವಳು ಡೆಲಿವರಿಗೆ ತವರು ಮನೆಗೆ ಹೋಗಿದ್ದಾಳೆ" ತಪ್ಪೆಲ್ಲಾ ಹೆಂಡ್ತಿಯದೇ ಎಂಬ ಕೋಪವಿತ್ತು ಅವನ ಕೊರಳಲ್ಲಿ.

"ರಾಧಾ! ಅಕ್ಕನ ಬಿಟ್ಟು ಬರೋಲ್ಲಾಂತ ದೊಡ್ಡೋಳ ಹಿಂದೆ ಹೋದಳು"

ಸ್ನೇಹಿತನ ಮಾತು ಅರ್ಥವಾಗಲಿಲ್ಲ ಸುಂದರಗೆ.

"ಅಂದ್ರೇ?"

ತಡೆದು ತಡೆದು ಕೇಳಿದ

ನೀರು ಕುಡಿದವನಂತೆ ಹೇಳಿದ ಸ್ನೇಹಿತ:

"ಅಂದ್ರೇ ನನಗಿಬ್ಬರು ಹೆಂಡ್ತಿಯರು Sorry. ನನ್ನ ಎರಡನೇ ಮದುವೆ ವಿಚಾರ ನಿನಗೆ ಗೊತ್ತಿಲ್ಲ. Love marriage. ನನ್ನ wife friend ರಾಧೆ" ವಿಚಿತ್ರವಾದ ವಸ್ತುವನ್ನು ನೋಡಿದವನಂತೆ ಸ್ನೇಹಿತನನ್ನು ನೋಡಿದ ಸುಂದರ... ಸಿಂದಬಾದ್ ಕಥೆಯನ್ನು ಆಶ್ಚರ್ಯದಿಂದ ಕೇಳುವ ಬಾಲಕನಂತೆ ಅವನ ಮಾತುಗಳನ್ನು ಕುತೂಹಲದಿಂದ ಕೇಳುತ್ತಿದ್ದ.

"ಯಾಕೆ ಹಾಗೆ ನೋಡ್ತೀಯಾ my dear friend ! ಇಬ್ಬರು ಹೆಂಡ್ತಿಯರು ಇದ್ದರೆ ಅದೇ ಒಂದು ಸುಖ; ನಿನಗೆ ಗೊತ್ತಿಲ್ಲ."

ಕಣ್ಣು ಮಿಟುಕಿ ನಕ್ಕು ಮತ್ತೆ ಗ್ಲಾಸಿಗೆ ಕೈ ಹಾಕಿದ ಸ್ನೇಹಿತ.

ಇಬ್ಬರು ಹೆಂಡ್ತಿಯರು... ಮನಸ್ಸಿನಲ್ಲಿ ಯಾರೋ ಮೆಲ್ಲನೆ ನುಡಿದರು... ಸುನಂದ... ಪಾರ್ವತಿ ಅವರಿಬ್ಬರ ನಡುವೆ ಬಾಳು ವಸಂತ ಋತುವಾಗಿರುತ್ತೆ... ಅಷ್ಟುಮಾತ್ರವಲ್ಲ, ತಾನು ಅವಳಿಗೆ ಅನ್ಯಾಯ ಮಾಡಲಿಲ್ಲ ಎಂಬ ಶಾಂತಿ ದೊರೆಯುತ್ತದೆ... ಹಾಗಾದ್ರೇ ಆ ಕೆಂಡ ಸಂಪಿಗೆ ಮಾಲೆಯಂತೆ, ಪಾರ್ವತಿಯನ್ನು ನಾನು ಕೈ ಹಿಡೀಬೇಕು... ಸುನಂದಳು ಸಮ್ಮತಿಸಿದರೆ ಸಾಕು... ಸುನಂದಳ ಸಮ್ಮತಿ... ಸುಂದರನ ಯೋಚನೆ ಅಲ್ಲಿಗೇ ನಿಂತಿತು.

"ಸುನೀ! ನನ್ನನ್ನು ಕ್ಷಮಿಸು, ಈ ಹುಚ್ಚು ಹುಡಿಗಿಗೆ ನಿನ್ನಲ್ಲಿ ಸ್ವಲ್ಪ ಸ್ಥಳ ಕೊಡು." ಎಂದು ದೀನನಾಗಿ ಕೇಳಿದರೇ 'ಇಲ್ಲ'ವೆಂದು ಹೇಳಲಾರಳು ಸುನಂದ. ಮೇಲಾಗಿ ಒಂದೇ ರಕ್ತವನ್ನು ಹಂಚಿಕೊಂಡು ಹುಟ್ಟಿದ ಅಕ್ಕತಂಗಿಯರು, ತಂಗಿಯ ಬಾಳು ಬರಡಾಗಲು ಅವಳು ಬಿಡುವುದಿಲ್ಲ, ತಮ್ಮಿಬ್ಬರನ್ನೂ ತಂಪಾಗಿ



ಹೆಚ್ಚಿಗೆ ಮಾತಾಡಿದರೆ ನಿನ್ನ ಹಲ್ಲು ಮುರಿಯುತ್ತೇನೆ.

ನೋಡಿ ಮೃದುವಾಗಿ ನಕ್ಕು, ಮನಸ್ಪೂರ್ತಿಯಾಗಿ ಕ್ಷಮೆ ನೀಡುತ್ತಾಳೆ. ಎಂದೋ ಯಾಕೆ! ಈ ದಿನವೇ ಸುನಂದಳ ಬಳಿ ಹೇಳಬೇಕು. ಅವಳ ಕ್ಷಮೆ ಸಮ್ಮತಿ ಎರಡೂ ಪಡೆದು ಪಾರ್ವತಿಗೆ ಅಮೃತದ ಬಾಳನ್ನು ನೀಡಬೇಕು.

ಪಾರೂ! ಪಾರ್ವತಿ ಒಂದು ತಿಂಗಳಾಯ್ತು ಅವಳೊಡನೆ ಮಾತನಾಡಿ, ಶಾಪಗ್ರಸ್ತ ದೇವತೆಯಂತೆ ಇಂಗ್ಲೀಷ್ ಕಥೆಗಳ ಶೋಕ ನಾಯಕಿಯಂತೆ ಮೌನವಾಗಿ ಶೋಕಮೂರ್ತಿಯಂತೆ ಮನೆಯಲ್ಲಿ ಮೆಲ್ಲನೆ ನಡೆಯುತ್ತಾ ಕೆಲಸಗಳನ್ನು ಮಾಡುತ್ತಿರುವ ಪಾರ್ವತಿಯನ್ನು ನೋಡಿದ್ರೆ ಅವನಿಗೆ ಹೃದಯವೇ ಬಾಯಿಗೆ ಬಂದಂತಾಗುತ್ತಿತ್ತು. ಅವಳನ್ನು ಸಮಾಧಾನ ಮಾಡಬೇಕು, ನಗಿಸಬೇಕು. ಅವಳ ಶೀತಲವಾದ ಕೆನ್ನೆಯ, ಮೃದು ತುಟಿಗಳನ್ನು ಬೆಚ್ಚಗೆ ಮಾಡಬೇಕೆಂದು ಎಷ್ಟೋ ಬಾರಿ ಬಯಸಿದ. ಆದರೆ ಅವಳನ್ನು ಒಬ್ಬಂಟಿಗಳಾಗಿ ಶೂನ್ಯಲೋಕದ ಕಡೆ ದೃಷ್ಟಿಸಿ ನೋಡುತ್ತಾ ನಿಂತಿರುವ ಆ ಅಭಾಗಿನಿಯನ್ನು ಹಠಾತ್ತಾಗಿ ನೋಡಿಬಿಟ್ಟರೆ ಅವನು ಕಳ್ಳನಂತೆ ಹೇಡಿಯಂತೆ ಓಡಿ ಹೋಗುತ್ತಿದ್ದ. ನಿಜ! ತಾನು ಕಳ್ಳನೇ. ಮನೆಯವರನ್ನು ತನ್ನ ನುಡಿಯಿಂದ ನಡೆಯಿಂದ ನೋಟದಿಂದ ಆಕರ್ಷಿಸಿ, ಆಕರ್ಷಣೆ ಬಲೆಯಲ್ಲಿ ಬಿದ್ದಾಗ ಅವರ ಸರ್ವಸ್ವವನ್ನೂ ದೋಚಿಕೊಂಡು ಹೋದ ದ್ರೋಹಿ ತಾನು. ಪಾರ್ವತಿಯ ಅಪೂರ್ವ ಅಮೂಲ್ಯ ಶೀಲಸಂಪತ್ತನ್ನು ದೋಚಿದ ಕೊಳ್ಳೆಗಾರ ತಾನು. ಅದಕ್ಕೆ ಅವಳನ್ನು ನೋಡಿದರೆ ಹೆದರಿಕೆ ಅವಳನ್ನು ಕ್ಷಮೆ ಕೇಳಿದರೆ ತನ್ನ ದುಡುಕು ನಡತೆಗೆ ದಂಡನೆ ಕೊಡು ಎಂದು ಕೇಳಿದರೇ.... ಊಂ.... ಹೂಂ! ಅವಳನ್ನು ಕೇಳಲಾರೆ.

ಅಯ್ಯೋ! ಯೋಚನೆ ಅನಂತ ಯೋಚನೆ. ಇದಕ್ಕೆ ಕೊನೆಯೇ ಇಲ್ಲವೇ! ಪರಿಹಾರ ಮಾಡಲೇಬೇಕು. ಏನಾದ್ರೂ ಆಗಲಿ ಸುನಂದಳ ಬಳಿ ಹೇಳಲೇಬೇಕು. ಪಾರ್ವತಿಯನ್ನು ಮದುವೆ ಆಗಲೇಬೇಕು.

ಸುನಂದಳ ಬಳಿ ತಕ್ಷಣ ವಿಷಯ ತಿಳಿಸಿಬಿಟ್ರೆ! ಮೊದಲೇ ಹೃದಯ ದೌರ್ಬಲ್ಯದಿಂದ ನರಳುತ್ತಿರುವ ಅವಳು ತನ್ನನ್ನು ಮೋಸ ಮಾಡಿ ಹೊರಟು ಹೋದರೆ....ಅಯ್ಯೋ! ನೆನಸಿದರೇನೇ ಮೈ ಕಂಪಿಸುತ್ತದೆ. ಅವಳು ಸಾವಿನ ಬಗ್ಗೆ ಮಾತಾಡಿದಾಗಲೆಲ್ಲಾ ಅವನು ನಡುಗಿ ಹೋಗಿ ಅವಳ ಬಾಯನ್ನು ಭಯದಿಂದ ಮುಚ್ಚುತ್ತಿದ್ದ. ಅವಳು ಅವನ ಕೈಯನ್ನು ಮೃದುವಾಗಿ ತಳ್ಳಿ ನಗುತ್ತಾ ಕೇಳುತ್ತಿದ್ದಳು.

"ನಿಜ ಹೇಳಿ! ನಾನು ಸತ್ರೇ ನೀವೇನು ಮಾಡ್ತೀರಿ?"

ಅವನ ಕಪ್ಪು ದೊಡ್ಡ ಕಣ್ಣುಗಳಲ್ಲಿ ನೀರು ತುಂಬುತ್ತಿತ್ತು. ಅವಳ ಮಡಿಲಲ್ಲಿ ತಲೆ ಇಟ್ಟು ಚಿಕ್ಕ ಹುಡುಗನಂತೆ ಅಳುತ್ತಾ,

"ನಾನೂ ಸಾಯ್ತೀನಿ.. ಸುನೀ! ನೀನಿಲ್ಲದ ಸ್ವರ್ಗ ಕೂಡಾ ನನಗೆ ನರಕ—ಬೇಡ ಸುನೂ—ನೀನು ಸಾಯಬೇಡ—ಇಬ್ಬರಿಗೂ ವಯಸ್ಸಾದ ಮೇಲೆ ಮಾತಾಡಿಕೊಂಡು ವಿಷ ಕುಡಿದು ನಗುತ್ತಾ ಮೃತ್ಯುದೇವತೆಗೆ ಮುತ್ತು ಕೊಡೋಣ." ಎಂದು ಹೇಳುತ್ತಿದ್ದ—ಆಗ ಸುನಂದಳ ಹೃದಯ ಪತಿಯ ಪ್ರೇಮದಿಂದ ತುಂಬಿ ತುಳುಕಾಡುತ್ತಿತ್ತು.

ಅವಳ ಬಳಿ ತನ್ನ ಪಾರ್ವತಿಯ ವಿಚಾರ ಮೆಲ್ಲನೆ ಹೇಳಬೇಕು. ಹೌದು ಅವಳ ಮನಸ್ಸಿನ ಮೇಲೆ ಪರಿಣಾಮವಾಗದಂತೆ ಹೇಳಬೇಕು. ಸುಂದರಗೆ ಇದ್ದಕ್ಕಿದ್ದ ಹಾಗೆ ಒಂದು ಅದ್ಭುತವಾದ ಯೋಜನೆ ಹೊಳೆಯಿತು. ಅದೇ ಸರಿಯಾದ ಮಾರ್ಗ. ಸುಂದರಗೆ ಎಲ್ಲೋ ಅಡಗಿ ಕುಳಿತಿದ್ದ ಉತ್ಸಾಹ ಬಂದು ತಬ್ಬಿಕೊಂಡಿತು. ಉಲ್ಲಾಸದಿಂದ ವಿಸಿಲ್ ಹಾಕಿ ಸ್ನೇಹಿತನ ಕಡೇ ನೋಡಿ,

"ನಾಳೆ ವಿಸಿಟ್ ಮಾಡ್ತೀನಿ ಭಾಯೀ!"

ಎಂದು ಹೇಳಿ, ಹೋಟಲ್ ಮೆಟ್ಟಲುಗಳನ್ನು ಅವಸರ ಅವಸರವಾಗಿ ಇಳಿದು ಹೊರಟುಹೋದ.

೯

ಸುನಂದಳಿಗೆ ಪಾರ್ವತಿಯ ವಿಚಿತ್ರ ನಡತೆ ಅರ್ಥವಾಗಲ್ಲ. ಒಮ್ಮೊಮ್ಮೆ ತನ್ನೊಡನೆ ಗಂಟೆಗಟ್ಟಲೆ ಅವ್ಯಾಯವಸಾನವಾಗಿ ಮಾತನಾಡುತ್ತಾ ಕುಳಿತು ಕೊಳ್ಳುವ ಆ ಹುಡಿಗಿ ಒಂದೊಂದು ಸಲ ಅಪರಾಧಿಯಂತೆ ತಲೆ ಬಗ್ಗಿಸಿ, ದೀನಳಾಗಿ, ಮೌನವಾಗಿ ಇರುತ್ತಾಳೆ, ಏಕೆ ಹೀಗಾದಳು?

ವಯಸ್ಸಿನ ಪರಿಣಾಮವಿರಬೇಕು. ಜತೆಗಾರನನ್ನು ಬಯಸುವ ವಯಸ್ಸು, ಆಶೆಗಳೂ–ಆಕಾಂಕ್ಷೆಗಳೂ ತುಂಬಿರುವ ಮನಸ್ಸು... ಪಾರೂಗೆ ಬೇಗ ಮದುವೆ ಮಾಡಬೇಕು. ಆಗ ಅವಳು ಮಾತಿನ ಮಲ್ಲಿ ಆಗುತ್ತಾಳೆ. ವಸಂತಕಾಲದ ಕೋಗಿಲೆಯಾಗುತ್ತಾಳೆ. ಮನೆಯ ನಂದಾದೀಪವಾಗುತ್ತಾಳೆ.

ತಂದೆಗೆ ತಾನು ಮಾತು ಕೊಟ್ಟಿದ್ದಾಳೆ, ಅವಳಿಗೆ ತಕ್ಕ ವರನನ್ನು ನೋಡುವುದಾಗಿ. ಆ ಮಾತು ಉಳಿಸಿಕೊಳ್ಳಲೇ ಬೇಕು. ಅಣ್ಣಯ್ಯನಿಗೆ ಪುರು–ಸೊತ್ತೂ ಇಲ್ಲ, ಆಸಕ್ತಿನೂ ಇಲ್ಲ.. ದುಡ್ಡು ಸಂಪಾದಿಸುವುದು ಒಂದೇ ಅವನ ಮಹದಾಶಯ.

ಅದಕ್ಕೆ ತಂದೆ ಗುರುತರವಾದ ಕೆಲಸವನ್ನು ತಮ್ಮ ದಂಪತಿಗಳ ಕೈಲಿ ಒಪ್ಪಿಸಿದ್ದಾರೆ. ಆ ಪುನೀತವಾದ ಕೆಲಸವನ್ನು ತಾವು ಜಯಪ್ರದವಾಗಿ ನಿರ್ವಹಿಸಬೇಕು. ಅವರು ಎಲ್ಲೋ ಈಚೀಚೆಗೆ ಮನೆಯಲ್ಲಿಯೇ ಇರುವುದಿಲ್ಲ... ಆಫೀಸು ಕೆಲಸ, ಇವೆರಡರಲ್ಲೇ ಮುಳುಗಿ ಹೋಗಿದ್ದಾರೆ. ಪಾಪ ಮನೆಗೆ ಬಂದೊಡನೆ ತನ್ನ ಬಳಿ ಗಂಟೆಗಟ್ಟಲೆ ಕುಳಿತು ಮಾತನಾಡಿ, ಮಗುವನ್ನು ಆಡಿಸಿ, ಒಂದು ತುತ್ತು ಕೂತಲ್ಲೇ ಊಟಮಾಡಿ ಮಲಗುತ್ತಾರೆ. ಅಬ್ಬ! ಅವರಿಗೆ ಹೆಂಡತಿ, ಮಗು ಎಂದರೆ ಎಷ್ಟು ಪ್ರೇಮ! ತನ್ನ ಮೇಲೆ ತನಗೇ ಅಸೂಯೆ ಬರೋಷ್ಟು ಪ್ರೇಮ! ಓ! ನಾನು ಪೂರ್ಣಸುಖಿ. ತಂದೆಯ ಅಕ್ಕರೆಯ ಮಗಳಾಗಿ, ಗಂಡನ ಪ್ರೇಮದ ಪತ್ನಿ–ಯಾಗಿ, ಮಗುವಿನ ಮಮತೆಯ ತಾಯಿಯಾಗಿದ್ದೀನಿ... ನಾನು ಅದೃಷ್ಟವಂತಳು. ದೇವತೆಗಳಿಗಿಂತ ನಾನು ಅದೃಷ್ಟವಂತಳು. ಎಲ್ಲಾ ದೇವತೆಗಳಿಗೂ ಸವತಿಯ ಕಾಟವಿದೆ. ವಿರಹದ ಬಾಧೆ ಇದೆ...ನನಗೆ ಯಾವುದೂ ಇಲ್ಲ. ದೇವರಿಗಿಂತಲೂ ಆದರ್ಶ ಮೂರ್ತಿ ನನ್ನ ಗಂಡ. ಶ್ರೀರಾಮನು ಕೂಡ ವೇದವತಿಗೆ ಮಾತುಕೊಟ್ಟಿದ್ದ. "ನಾನು ಕೃಷ್ಣಾವತಾರ ಮಾಡಿದಾಗ ನೀನು ಸತ್ಯಭಾಮೆಯಾಗಿ ಹುಟ್ಟುವೆ. ಆಗ ನಿನ್ನನ್ನು ಮದುವೆ ಆಗುತ್ತೇನೆ" ಎಂದು ಹೇಳಿದ್ದ...ಆದ್ರೆ ಇವರು ಕನಸಿನಲ್ಲೂ ಅಂಥಾಮಾತು ಕೊಡೋದಿಲ್ಲ. ಅವರ ರಕ್ತದ ಒಂದೊಂದು ಕಣದಲ್ಲೂ ನಾನು, ಅವರ ಹೃದಯದ ತುಂಬಾ ನಾನು, ಅವರಲ್ಲಿ ನಾನು...ಓ! ಭಗವಾನ್! ಈಗ ನೀನು ನನಗೆ ಸಾವಿನಗೀತೆ ಹಾಡಿದರೂ ದುಃಖವಿಲ್ಲ...ಸಂತೋಷಳಾಗಿ ತೃಪ್ತಳಾಗಿ, ಕಣ್ಣು ಮುಚ್ಚುತ್ತೇನೆ. ಆದ್ರೆ ಒಂದೇ ಒಂದು ಭಿಕ್ಷೆ ನೀಡು. ನಾನು ಎಷ್ಟು ಜನ್ಮ ತಾಳಿದರೂ ಅವರನ್ನೇ ಪತಿಯಾಗಿ ಅನುಗ್ರಹಿಸು

ಸುನಂದಳು ತೃಪ್ತಿಯಿಂದ ಮಗುವನ್ನು ತಬ್ಬಿಕೊಂಡಳು. ಗಂಟೆ, ಹತ್ತು ಹೊಡೆಯಿತು. "ಇನ್ನೂ ಇವರೇಕೆ ಮನೆಗೆ ಬರಲಿಲ್ಲ" ಪಾರ್ವತಿ ತನಗೆ ನಿದ್ದೆ ಬರುತ್ತೆಂತ ಹೇಳಿ ಕ್ಯಾರಿಯರ್‌ನಲ್ಲಿ ಊಟ ಹಾಕಿ ತಂದು ರೂಂ ನಲ್ಲಿ ಇಟ್ಟು, ಅಡಿಗೇ ಮನೆ ದೀಪ ಆರಿಸಿ ಮಲಗಿಬಿಟ್ಟಳು.

ಪಾಪ! ದಿನದಿನಕ್ಕೆ ಸೊರಗಿ ಹೋಗ್ತಾ ಇದ್ದಾಳೆ. ಬರೋ ತಿಂಗಳು ಊರಿಗೆ ಕಳುಹಿಸಬೇಕು. ಅವಳಿಗೆ ಒಳ್ಳೆ ಉಡುಗೊರೆ ಕೊಡಬೇಕು. ಸುನಂದ ಅಡಿಗೇ ಮನೇ ಕಡೇ ನೋಡಿದಳು. ಬಾಗಿಲು ಮುಚ್ಚಿತ್ತು.

ಮುಚ್ಚಿದ್ದ ಬಾಗಿಲ ಹಿಂದೆ ಪಾರ್ವತಿ ಬಿಕ್ಕಿ ಬಿಕ್ಕಿ ಅಳುತ್ತಿದ್ದಳು.

"ದೇವರೇ! ನನಗೇಕೆ ಈ ತರ ಶಿಕ್ಷೆ ವಿಧಿಸಿದೆ!" ಎಂದು ಆವಳು ದೇವರನ್ನು ದೀನಳಾಗಿ ಕೇಳುತ್ತಿದ್ದಳು.

ಇಲ್ಲ...ದೇವರಿಲ್ಲ...ದೇವರು ಸಹ ಗಂಡಸು.. ಅದಕ್ಕೇ ಅವನಿಗೆ ಪಕ್ಷಪಾತಬುದ್ಧಿ...ಮಾಡಿದ... ಪಾಪಕ್ಕೆ ಹೆಣ್ಣು ಶಿಕ್ಷೆ ಅನುಭವಿಸಬೇಕು...ಗಂಡು... ನಿರ್ಭಯನಾಗಿ ಪಾಪವನ್ನು ಮಾಡದವನಂತೆ ಧೈರ್ಯವಾಗಿ ಸಮಾಜದಲ್ಲಿ ಗಂಭೀರ ಸದ್ಗೃಹಸ್ಥನಾಗಿ ಬಾಳುತ್ತಾನೆ.

ಹೆಣ್ಣುತನ ಅವಳು ಮಾಡಿದ ಪಾಪದ ಪರಿಣಾಮವನ್ನು ತೋರಿಸುತ್ತದೆ....ಅಪರಾಧಿ ಎಂದು ಸಾರುತ್ತದೆ.

ಆ ಪಾಪದ ಗುಂಡಿಗೆ ತಳ್ಳಿದ ಗಂಡು ಸಹಾ ಆ ಹೆಣ್ಣನ್ನು ನೋಡಿ...ಅಪಹಾಸ್ಯ ಮಾಡಿ ನಗುತ್ತಾನೆ! ಎಂಥಾ ದ್ರೋಹಿಗಳು...ಇವರು...ಸೈತಾನ್ ಅಂತ ಒಬ್ಬನಿದ್ದರೇ ಅವನ ಅಂಶದವರೇ ಈ ಗಂಡಸರು.

ಅಯ್ಯೋ! ಹೆಣ್ಣೇ...ನಿನಗೆ ವಿವೇಚನೆಯೇ ಇಲ್ಲವೇ! ಈ ಗಂಡಸರ ಕಬ್ಬಿಣದ ಕಾಲ್ಕೆಳಗೆ ನೀನು ನಶಿಸಿ ಹೋಗಬೇಕೇ!

ಪಾರ್ವತಿ ತಲೆದಿಂಬೊಳಗೆ ಮುಖವಿಟ್ಟುಕೊಂಡು ಅಕ್ಕನ ಕಿವಿಗೆ ಬೀಳದಂತೆ ಅತ್ತಳು... ಅಕ್ಕನಿಗೆ ದ್ರೋಹ ಮಾಡಿದೆ. ಅದಕ್ಕೆ ದೇವರು ನನಗೆ ಶಿಕ್ಷೆ ಕೊಟ್ಟನೇನೊ.... ಇದು...ಶಿಕ್ಷೆಯೇ....ಹೌದು.. ಈಗ ಇದು ಘೋರ ಶಿಕ್ಷೆ...ಯಾರೂ ಮನ್ನಿಸಲಾರರು...

ಇದೇ ಶಿಕ್ಷೆ ಮದುವೆ ಆದ ಮೇಲೆ ಸಿಕ್ಕಿದರೇ ಶಿಕ್ಷೆ ಎಂದು ತೋರುತ್ತಿರಲಿಲ್ಲ...ಗಂಡ ಹೆಂಡತಿಯರ ಪ್ರೇಮದ ರಕ್ಷೆ ಎಂದು ಭಾವಿಸುತ್ತಿದ್ದರು. ಮಗುವನ್ನೆತ್ತಿ—

"ಎಲ್ಲಾ ಅಪ್ಪನ ಹಾಗೆ."

ಎಂದು ಹೇಳುವಾಗ ತಾನು ನಾಚಿಕೆಯ ಮುದ್ದೆಯಾಗುತ್ತಿದ್ದಳು...ಆದರೆ... ಈಗ...ತಾನು ತಾಯಿಯಾದ್ರೆ...ಮಗುವನ್ನು ಮರೆತೂ ಯಾವ ಹೆಣ್ಣು ಮುಟ್ಟುವುದಿಲ್ಲ...ಮುಟ್ಟಿದರೆ ಆ ಪಾಪ ತಮಗೆಲ್ಲಿ ಸೋಕುತ್ತದೊ ಎಂದು ಹೆದರಿಕೆ.ಏನೋ ಅವರಿಗೆ.

ಒಂದೊಂದು ಬಾರಿ ಪಾರ್ವತಿಗೆ ತನ್ನ ಗರ್ಭದಲ್ಲಿ ಮೌನವಾಗಿ ಮಲಗಿರುವ ಆ ಶಿಶುವಿನ ಮೇಲೆ ಅಪಾರ ಪ್ರೀತಿ ಬರುತ್ತಿತ್ತು. ಪ್ರೀತಿಯಿಂದ ಗರ್ಭವನ್ನು ಸವರುತ್ತಿದ್ದಳು... ಆದರೆ ಮರುಕ್ಷಣ ಆ ಗರ್ಭಕ್ಕೆ ಕತ್ತಿಯಿಂದ ಚುಚ್ಚಿ ಪೊಳೆಯುವ ಆ ಪೊಗ್ಗನ್ನು ಕತ್ತರಿಸಬೇಕೆನ್ನುವಷ್ಟು ದ್ವೇಷ ಅವಳಲ್ಲಿ ನುಗ್ಗಿ ಬರುತ್ತಿತ್ತು...

ಪಾರ್ವತಿ ಬಳಲಿದಳು. ಅತಿ ಪ್ರಯಾಸದಿಂದ ಅಕ್ಕನ ದೃಷ್ಟಿಯಿಂದ ತಪ್ಪಿಸಿಕೊಳ್ಳುತ್ತಿದ್ದಳು. ಅವಳ ಮುಂದೆ ನಡೆಯುವುದನ್ನು ಕಡಿಮೆ ಮಾಡಿದಳು. ಯಾವುದಾದ್ರೂ ಕೆಲಸವನ್ನು ಕಲ್ಪಿಸಿಕೊಂಡು ಅದಕ್ಕೂ ಅಕ್ಕನಿಂದ ದೂರವಿರುತ್ತಿದ್ದಳು.

"ಅಕ್ಕಾ ಲೀವು ತಗೊಂಡೀದೀವೀ" ಅಂತ ಸುಳ್ಳು ಹೇಳಿ ಮೂರು ದಿನ ಹೊರಗೆ ಕುಳಿತು ಬಂದಳು. ಆ ಮೂರು ದಿವಸ ಅನುಭವಿಸಿದ ಯಾತನೆಗೆ ಅಂತ್ಯವೇ ಇಲ್ಲ ಯೋಚನೆಗಳಿಗೆ ಕೊನೆಯೇ ಇಲ್ಲ...ಅಳುವೇ ಅವಳ ಗೆಳತಿಯಾಗಿದ್ದಳು.

ಘೋರ ಅರಣ್ಯದ ನಡುವೆ ಸಿಕ್ಕಿಕೊಂಡ ಅಂಧಳಂತೆ ದಾರಿಕಾಣದೆ ತತ್ತರಿಸಿದಳು.

ಈಜು ಬಾರದವನು ಭಯಂಕರವಾದ ಅಲೆಗಳ ನಡುವೆ ಸಿಕ್ಕಿದಂತೆ—ಇತ್ತು–ಅವಳ ಸ್ಥಿತಿ.

ತನ್ನನ್ನು ಈ ಸ್ಥಿತಿಗೆ ಗುರಿ ಮಾಡಿದವನು ಪಾತ್ರ ಹೆಂಡತಿಯ ಸೆರಗಿನಲ್ಲಿ ಆಶ್ರಯ ಹೊಂದಿದ್ದಾನೆ.

ಯಾವ ಗಂಡಿಗಾಗಿ ತನ್ನ ಕಲ್ಲಿನಂಥ ಹೃದಯ ಕರಗಿತೋ, ಅವನು ಹೇಡಿಯಂತೆ, ಓಡುತ್ತಿದ್ದಾನೆ. ತನ್ನನ್ನು ಅಪರಿಚಿತಳಂತೆ ನೋಡುತ್ತಾನೆ. ಅವನ ಕಪ್ಪು ನೀಳಗಣ್ಣುಗಳನ್ನು ಎತ್ತಿ ತನ್ನನ್ನು ನೋಡಲು ಹೆದರುತ್ತಾನೆ. ಮಾಡಿದ ಪಾಪವನ್ನು ಮುಚ್ಚಿಡಲು ಪ್ರಯತ್ನಿಸುವ ಹೇಡಿ...

ಹೆಂಡತಿಗೆ ದ್ರೋಹಮಾಡಿ ಅವಳ ಮುಂದೆ ಏನೂ ತಿಳಿಯದವನಂತೆ ನಟಿಸುವ ಘೋರ ಅಪರಾಧಿ ಅವನು

ತನಗೇಕೋ ಅವನನ್ನು ಕಂಡರೆ ದ್ವೇಷವೇ ಹೆಚ್ಚುತ್ತಿದೆ.. ನಿಜವೇ... ಹೆದರುವ ಗಂಡು... ಶಿಖಂಡಿಗಿಂತಲೂ ಕೀಳು. ಅಂಥಾ ಗಂಡಿಗೆ ತಾನೇಕೆ ಮರುಳಾದಳು... ಒಮ್ಮೆ ಧೈರ್ಯವಾಗಿ ಅವನು ತನ್ನನ್ನು ನೋಡಿ,

"ಪಾರೂ"

ಎಂದು ಕರೆದಿದ್ದರೆ ಸಾಕು, ತಾನು ಪಾಪವೇನೂ ಮಾಡಿಲ್ಲ ಎಂಬಂತೆ ನಿಶ್ಚಿಂತೆಯಿಂದ ಇರುತ್ತಿದ್ದಳು. ಸಂಪೂರ್ಣ ಪ್ರೇಮದಿಂದ ಅವನು ತನ್ನನ್ನು ಸ್ವೀಕರಿಸಿದ್ದಾನೆ ಎಂದು ತಿಳಿದರೆ ಸಾಕು, ತನಗೆ ಈ ಪ್ರಪಂಚದಲ್ಲಿ ಇನ್ನೇನೂ ಬೇಕಿಲ್ಲ.

ಒಮ್ಮೆ... ಒಂದೇ ಒಂದು ಬಾರಿ ಅವನನ್ನು ಕಂಡು ತನ್ನ ಬಾಳಿನ ಬಗ್ಗೆ ಪ್ರಶ್ನಿಸಬೇಕು.. ಅವನು ತನಗೆ ಬಾಳು ನೀಡುತ್ತಾನೋ.. ಹೀಗಿನ ಪಾಲು ಮಾಡುತ್ತಾನೋ— ಕೇಳಬೇಕು.. ಅವನನ್ನು ಕೇಳಿ ಉತ್ತರ ಪಡೆಯಬೇಕು.

ಅಕ್ಕನ ಬಾಳನ್ನು ಹಾಳು ಮಾಡಲು ತಾನು ಸಿದ್ಧಳಿಲ್ಲ.. ತಾನು ಮಾಡಿದ್ದು ತಪ್ಪು.. ಮಲಗಿದ್ದ ಸಿಂಹವನ್ನು ರೇಗಿಸಿ, ಎಬ್ಬಿಸಿ, ಅದು ಮೇಲೆ ಬಿದ್ದು.. ಗಾಯ ಮಾಡಿದ ನಂತರ ಗಾಯಗಳನ್ನು ನೋಡಿ ಅತ್ತರೇ ಅದು ಯಾರ ತಪ್ಪು.. ತಾನು ಮಾಡಿದ ಈ ಅಕ್ಷಮ್ಯ ಅಪರಾಧಕ್ಕಾಗಿ ಅಕ್ಕನ ಬಾಳನ್ನು ಬಲಿ ತೆಗೆದುಕೊಳ್ಳಬೇಕೇ!

ಪಾರ್ವತಿಗೆ ಮತ್ತೊಂದು ಯೋಚನೆ ಹೊಳೆಯಿತು. ಸುನಂದಳ ಕಾಲಲ್ಲಿ ಬಿದ್ದು ಕ್ಷಮೆ ಬೇಡಿದರೇ..

"ಅಕ್ಕಾ! ನಿನ್ನಂತೆ ನಾನೂ ತಾಯಿಯಾಗಲಿದ್ದೇನೆ—

ಅದಕ್ಕೆ ತಂದೆ ನಿನ್ನ ಪತೀ."

ಎಂದು ಹೇಳಿ ಅವಳ ಮಡಿಲಲ್ಲಿ ತಲೆ ಇಟ್ಟು ಹೃದಯ ಭಾರ ತೀರುವವರೆಗೂ ಅಳಬೇಕೆನ್ನಿಸುವುದು.. ಆದರೇ ಮರುಕ್ಷಣ ಅವಳ ಅಂತರಾತ್ಮ ತಡೆಯುವುದು.

"ಬೇಡ! ಕಳಂಕಿನೀ! ಬೇಡ.. ಆ ಪುಣ್ಯವತಿ ಮುಂದೆ ಏನು ಹೇಳುತ್ತೀಯೆ!"

ನೀನು ಯಾರನ್ನು ಹೃದಯದಲ್ಲಿಟ್ಟು ಪ್ರೇಮದಿಂದ ಪೂಜೆ ಮಾಡುತ್ತಿದ್ದೆಯೋ ಆ ಪುಣ್ಯಾತ್ಮ ನನ್ನ ಮಗುವಿನ ತಂದೆ.

'ಪ್ರಪಂಚದಲ್ಲಿಯೇ ಪವಿತ್ರ ಮೂರ್ತಿ ನನ್ನ ಪತಿ' ಎಂದು ಭಾವಿಸಿದ್ದೆಯೋ ಆತನೇ ನನ್ನನ್ನು ಕಳಂಕ ಮಾಡಿರುವ ಮಹನೀಯನು.

'ಕೈ ಹಿಡಿದವಳೇ ದೇವತೆ' ಎಂದು– ನನ್ನ ಪತಿ ಹೇಳುತ್ತಾರೆ. ಎಂದು ಹಿಗ್ಗಿನಿಂದ ಹೇಳಿ, ಸಂತೋಷ

ದಿಂದ ನೆಗುತ್ತಿದ್ದೆಯಲ್ಲಾ ಅಕ್ಕಾ! ಆ ಉತ್ತಮ ವ್ಯಕ್ತಿಯೇ.. ನನ್ನನ್ನು ಕನ್ಯಾಸೆರೆಯಿಂದ ಬಿಡಿಸಿದ.. ಕಠೋರ ಚಂಚಲ ಪುರುಷನೆಂದು ಹೇಳುತ್ತೀ ಏನು!.. ಹೋಗು ಹುಚ್ಚೀ! ಅವಳ ಬಾಳ ದಾರಿಯಲ್ಲಿ ಕಲ್ಲೆಸೆಯ ಬೇಡ.., ಮುಳ್ಳಾಗಿರಬೇಡ ತೊಲಗಿ ಹೋಗು..''

ಅಂತರಾತ್ಮದ ಅಣಕದ ಮಾತು ಕೇಳಿ, ನಡುಗಿ ಹೋಗುತ್ತಿದ್ದಳು ಎಳೆ ಬಸುರಿ ಪಾರ್ವತಿ..

ಅವಳು ಆಲೋಚಿಸಿ ಆಲೋಚಿಸಿ ಒಂದು ನಿರ್ಧಾರಕ್ಕೆ ಬಂದಳು.

ಸುಂದರನನ್ನು ಒಮ್ಮೆ ಸಂಧಿಸಿ ಮಾತಾಡಬೇಕು. ತನ್ನನ್ನು ಹೆಂಡತಿಯಾಗಿ ಸ್ವೀಕರಿಸು ಎಂದು ಕೇಳಬೇಕು. ಅವನು ಒಪ್ಪಿದರೇ ನಾನು ಒಬ್ಬನ ಪತ್ನಿ, ಪ್ರೀತಿಸಿ ಪಡೆದ ಪತಿ ಅವನು, ಎಂಬ ಸಂತೋಷ, ತೃಪ್ತಿಯಿಂದ ಕಾವೇರಿಯಲ್ಲಿ ಕಲೆತು ಹೋಗಬೇಕು.. ಕಾವೇರಿಯೊಡನೆ ತನ್ನ ಪ್ರಣಯದ ವಿಷಯ ತಿಳಿಸಿ, ಅವಳು ಮೂಕಿಯಾದಾಗ, ಸನ್ಯಾಸಿಯ ಪತ್ನಿ ನೀನು ನಿನಗೇನು ಗೊತ್ತು. ಪ್ರಣಯದ ಕಾವು ಎಂದು ನಗಬೇಕು. ಸಾವಿನಲ್ಲೂ ಸಂತೋಷವಿಡೆ.. ಆದರೆ.. ಸುಂದರ ತನ್ನನ್ನು ನಿರಾಕರಿಸಿದರೇ..

ಸುಂದರನನ್ನು ಸಂಧಿಸಲು ಸಮಯವೇ ಸಿಗುತ್ತಿಲ್ಲ. ಸಮಯಕ್ಕಾಗಿ ಕಾಯಬೇಕು. ತನ್ನನ್ನು ನೋಡಿ — ಓಡಿಹೋಗಲು ಪ್ರಯತ್ನಿಸುತ್ತಿರುವ ಭಾವನನ್ನು ಕಲೆತು ಮಾತಾಡಲೇಬೇಕು..

''ಏಯ್ ಹೇಡಿ ಗಂಡಸೇ! ನಿನ್ನ ಮನಳಿಗೆ ತಮ್ಮನೋ ತಂಗಿಯೋ ಹುಟ್ಟುತ್ತಾರೆ. ಆಗ ನೀನೆಲ್ಲಿ ಓಡುತ್ತಿಯ?'' ಎಂದು ಕೇಳಬೇಕು.. ಆಗ ಸುಂದರಗೆ ಸಂತೋಷವಾಗುತ್ತೆಯೋ ಅಥವಾ..

ಬಾಗಿಲು ತಟ್ಟಿದ ಶಬ್ದವಾಯ್ತು ಓಡಿ ಹೋಗಿ ಬಾಗಿಲು ತೆಗೆಯಲು ಮನಸ್ಸು ಹಾತೊರೆಯಿತು. ಅವನ ಬರುವಿಕೆಗಾಗಿ ಎಷ್ಟೋ ಸಾಯಂಕಾಲಗಳು ಅವಳು ಬಾಗಿಲನ್ನೊರಗಿ ಕಾದು ನಿಂತಿರುತ್ತಿದ್ದಳು.. ಅವನ ರೂಪು ದೂರದಲ್ಲಿ ಕಂಡೊಡನೆ, ಒಮ್ಮೆ ನೋಡಿ, ಇನ್ನು ಅಲ್ಲಿ ನಿಲ್ಲಲಾರದೇ ಅಡಿಗೆಮನೆಗೆ ಧಾವಿಸುತ್ತಿದ್ದಳು. ಅವನು ಅಕ್ಕನ ಕೋಣೆಗೆ ಹೋಗುವಾಗ.. ಮತ್ತೊಮ್ಮೆ ಅವನನ್ನು ನೋಡಿ ನಿಟ್ಟುಸಿರು ಬಿಡುತ್ತಿದ್ದಳು.. ಅವಳ ಹೃದಯ ಈಗ ಒಂದು ವಿಚಿತ್ರ ಪ್ರಪಂಚವಾಗಿತ್ತು.

ಪ್ರಣಯದ ಆರ್ಭಟ ಪ್ರಚಂಡವಾಗಿತ್ತು. ಪಾರ್ವತಿಗೆ ಹಳೆಯ ನೆನಪು ಬಂತು.. ಅಕ್ಕ ಭಾವನ ದಾರಿ ಕಾಯುತ್ತಾ ನಿಂತಿರುವಾಗ ತಾನು, ಅವಳನ್ನು ನೋಡಿ ನಕ್ಕಿದ್ದಳು..

''ದಿನಾ ನೋಡೋ ಭಾವಾ ತಾನೇ''

ಎಂದಿದ್ದಳು,. ಕಾತರದಿಂದ ಕಾಯುವ ಅಕ್ಕನನ್ನು ಕಂಡು ಪರಿಹಾಸ್ಯ ಮಾಡಿದ್ದಳು,. ಈಗ..

ಈಗ ತಾನೂ ಹಾಗೇ ಆಗಿದ್ದಾಳೆ.. ಅವನ ಬರುವಿಗಾಗಿ ಕಾತರತೆಯಿಂದ ಕಾಯುತ್ತಾಳೆ, ಅವನ ಹೆಜ್ಜೆಯ ಧ್ವನಿಗಾಗಿ ಕಾದು ಕುಳಿತಿರುತ್ತಾಳೆ..

ಮತ್ತೆ ಬಾಗಿಲ ಸದ್ದು.. ಅಕ್ಕ ನಿದ್ದೆ ಹೋದಳೇನೋ!.. ಸೀರೆಯ ನೆರಿಯ ಶಬ್ದ, ಬಳೆಗಳ ಶಬ್ದ, ಕೇಳಿಸಿತು.. ಪಾರ್ವತಿ ತನ್ನ ದಿಂಬನ್ನು ಆಶ್ರಯಿಸಿದಳು.. ಮನಸಾರೆ ಅಳಲು..

ಹೊರ ಬಾಗಿಲ ಆಚೆ ನಿಂತಿದ್ದ ಸುಂದರ ಸಂತೋಷದಿಂದ ಮೆಲ್ಲನೆ ಸಿಳ್ಳು ಹಾಕುತ್ತಾ ಉತ್ಸಾಹದಿಂದ ಮೃದುವಾಗಿ ಬಾಗಿಲು ತಟ್ಟಿದೆ..

ಪಾರು ಬಂದು ಬಾಗಿಲು ತೆಗೆದರೆ.. ಓಹ್! ಸ್ವರ್ಗದ ಬಾಗಿಲನ್ನು ತೆರೆದಂತಾಗುತ್ತದೆ.. ಅವನ ಹೃದಯದಲ್ಲಿ ಆಸೆ ಇಣುಕಿ ನೋಡಿತು.. ಚಪಲವೆಂಬ ಕಿಟಕಿಯಿಂದ.

ಅದೋ! ಬಳೆಗಳ ಶಬ್ದ.. ಹೌದು.. ಆ ರಾತ್ರಿ ಈ ಬಳೆಗಳ ಶಬ್ದವನ್ನು ಅವನು ಕೇಳಿದ್ದ.. ಸುಮಧುರ.. ಸಂಗೀತದಂತಿತ್ತು ಆ ಬಳೆಗಳ ನಾದ. ಸೀರೆಯ ನೆರಿಯ ''ಸರಕ್ ಸರಕ್'' ಎಂಬ ಸದ್ದು... ''ಸ್ವರ್ಗವೇ ನಡೆದು ಬರುವ ಹಾಗಿದೆ'' ಎಂದುಕೊಂಡ ಸುಂದರ..

ಪಾರು.. ಮಹೇಂದ್ರ ಜಾಲಗಳನ್ನು ಕಣ್ಣಲ್ಲಿ ತುಂಬಿಕೊಂಡಿರುವ ಮಾಯಾವಿನಿ..

ಆ ಕಣ್ಣುಗಳಲ್ಲಿ ಕಾಮನ ಬಿಲ್ಲಿದೆ—

ಕೋಟಿ ಕೋಟಿ ಆಸೆಗಳಿವೆ.

ಅವಳೊಡನೆ ಮಾತಾಡಿ ಎಷ್ಟು ಯುಗಗಳಾಯ್ತು! ಅವಳನ್ನು ಕಂಡು ಮುಗುಳ್ನಗೆಯನ್ನು ಬೀರಿ ಎಷ್ಟು ಕಾಲ ಕಳೆದು ಹೋಯ್ತು..

ಈಗ ಅವಳು ಬಾಗಿಲು ತೆಗೆದ ತಕ್ಷಣ ಅವಳನ್ನು ನೋಡಬೇಕು, ಮೆಲ್ಲನೆ ನಗಬೇಕು, ಮೃದುವಾಗಿ ಅವಳ ನುಣುಪಾದ ಕೆನ್ನೆಯ ಮೇಲೆ– ತನ್ನ ಒರಟಾದ ತುಟಿಗಳನ್ನಿಡಬೇಕು.. ಅವಳ ನಗುವಿನಲ್ಲಿ ಸಗ್ಗವನ್ನು ಕಾಣಬೇಕು.. ಅದೋ.. ಬಾಗಿಲು ತೆಗೆಯುತ್ತಿದ್ದಾಳೆ.. ಬಾಗಿಲು ತೆಗೆಯಿತು.

ಸುಂದರ ಆಸೆಯಿಂದ ನೋಡಿದ.. ಮರುಕ್ಷಣ ನಿರಾಶೆ.. ಅವನನ್ನು ತಬ್ಬಿತು.. ಬಂದವಳು ಹೆಂಡತಿಯ ತಂಗಿಯಲ್ಲ.. ಹೆಂಡತಿ.. ನಿರಾಶೆಯನ್ನು ತನ್ನ ನಗುವಿನಲ್ಲಿ ಮುಚ್ಚಿಡುತ್ತಾ.. ''ನಿದ್ದೆ ಮಾಡ್ತಾ ಇದ್ದೆಯಾ ರಾಜಾ!''

ಎಂದು ಕೇಳಿದ.. ಸುನಂದಳನ್ನು ತನ್ನ ಬಳಿಗೆ ಎಳೆದುಕೊಳ್ಳುತ್ತಾ..

'ರಾಜಾ'- ಆ ರಾತ್ರಿ ಸಿನಿಮಾ ನೋಡುತ್ತಾ ತಾನು ಸಾವಿನ ದೃಶ್ಯ ನೋಡಿ ಅತ್ತಾಗ ಸುಂದರ ತನ್ನನ್ನು ತಬ್ಬಿ ಸಮಾಧಾನ ಪಡಿಸುತ್ತಾ...

''ಛೀ... ಸುಮ್ಮನಿರು ರಾಜಾ !''

ಎಂದು ಹೇಳಿದ್ದು ಪಾರ್ವತಿಯ ಕಣ್ಣಮುಂದೆ ಬಂದಿತು... ಅವಳು ಮತ್ತಷ್ಟು ದುಃಖಿಯಾದಳು.

ಸುನಂದ ನಕ್ಕಳು ಮಾತ್ರ...

''ಕ್ವೀನ್ ಆಫ್ ಷಿಬಾ... ನಿದ್ದೆ ಮಾಡಿದ್ದಾಳ್ಯೇ!''
ಸುಂದರ ಕೇಳಿದ.

ನಿಮ್ಮ ಮಗಳು ಬಹಳ ತುಂಟಿ... ಇಷ್ಟೊತ್ತೂ ಆಟ ಆಡಿ ಈಗ ತಾನೇ ಮಲಗಿದ್ದಾಳೆ.''

ಹೆಮ್ಮೆಯಿಂದ ನುಡಿದಳು ಸುನಂದ.

ಸುಂದರ ಮಲಗಿರುವ ಮಗಳನ್ನು ಒಮ್ಮೆ ತೃಪ್ತಿಯಿಂದ ನೋಡಿ... ಆದರ ಮೆತ್ತನೆಯ ಕೈಗೆ ಮೆಲ್ಲನೆ ಮುತ್ತು ಕೊಟ್ಟ.

''ಕೈಗೆ ಮುತ್ತು ಕೊಡಬೇಡಿ ಕಳ್ಳಿ ಆಗ್ತಾಳೆ''

''ಖಂಡಿತ ಆಗ್ತಾಳೆ... ಒಂದು ಗಂಡಿನ ಮನಸ್ಸನ್ನು ಕದಿಯೋ ಕಳ್ಳಿ ಆಗ್ತಾಳೆ.''

ಗಂಡ ಹೆಂಡತಿಯರು ಇಬ್ಬರೂ ನಕ್ಕರು...ಮಗು ಕಣ್ಣು ಮುಚ್ಚಿಕೊಂಡೆ ಅತ್ತು ಮತ್ತೆ ನಕ್ಕಿತು... ಸುಂದರ ಆಶ್ಚರ್ಯದಿಂದ ಹೆಂಡತಿಯ ಕಡೆ ನೋಡಿದ... ಈ ಅಳು...ನಗುಗಳ ಅರ್ಥ ತಿಳಿಯದೆ...

ಸುನಂದ ಮಗುವಿನ ತಲೆಯನ್ನು ಬಹು ಮೆಲ್ಲನೆ ತಟ್ಟಿ... ಮಗುವಿನ ಮೇಲೆ ಜಾರಿ ಬಿದ್ದಿದ್ದ ಶಾಲು ಹೊದ್ದಿಸಿದಳು. ಗಂಡನ ಕಡೆ ತಿರುಗಿ... ನಕ್ಕು...

''ನಿಮ್ಮ ಮಗಳಿಗೆ ಕನಸಿನಲ್ಲಿ ದೇವರು ಬಂದು– 'ನಿಮ್ಮ ಅಮ್ಮ ಸತ್ತು ಹೋದಳೂಂತ... ಹೇಳಿದಾಗ ಮಗು ಅಳುತ್ತೆ... ಮತ್ತೆ... 'ಅದೋ ಬಂದಳು' ಎಂದಾಗ ನಗುತ್ತೆ... ಅದಕ್ಕೆ ಆ ಅಳು... ನಗು...'' ಎಂದಾಗ ಸುಂದರಗೆ ಮತ್ತಷ್ಟು ಆಶ್ಚರ್ಯವಾಯ್ತು...

''ಈ ಪುಟ್ಟ ಮಕ್ಕಳ ಮನಸ್ಸು ನೋಯಿಸಿ ಅಳಿಸುವುದರಲ್ಲಿ ಆ ದೇವರಿಗೇಕೆ ಇಷ್ಟು ಸಂತೋಷ...!''

ಸುಂದರ ಮಾತಾಡದೆ Night dress ಹಾಕ್ಕೊಳ್ಳಲು... ಎದ್ದು ಹೋದ... ಆದರೆ ಅವನ ಮನಸ್ಸು ಕೇಳಿತು...

''ದೇವರನ್ನು ಅಂತೀಯಲ್ಲಾ... ನೀನು ಪಾರ್ವತಿಯ ಮನಸ್ಸು ನೋಯಿಸ್ತಾಯಿಲ್ಲವೇ ! ಅದರಲ್ಲಿ ನಿನಗೇನು ಸಂತೋಷ?''

''ಕ್ಯಾರಿಯರನಲ್ಲಿ ಊಟ ಹಾಕಿಟ್ಟಿದ್ದಾಳೆ ಕೂತ್ಕೊಳ್ಳಿ ಬಡಿಸ್ತೀನಿ''

ಗಂಡನಿಗೆ ತಟ್ಟೆ ಹಾಕಿ ನೀರಿಡುತ್ತಾ ಹೇಳಿದಳು ಸುನಂದ.

ಸುಂದರನ ಹೃದಯವನ್ನು ಯಾರೋ ಗಟ್ಟಿಯಾಗಿ ಹೊಡೆದಂತಾಯ್ತು.

''ಯಾಕೇ... ಪಾರ್ವತಿಗೆ ಮೈ ಹುಷಾರಿಲ್ಲವೇ !''
ಕಾತರತೆಯಿಂದ ಕೇಳಿದ.

''ಇಲ್ಲ... ಏನೋ ಬೇಸರ ಅವಳಿಗೆ... ಮುಂಚಿನ ಪಾರ್ವತಿ ಅಲ್ಲ ಇವಳು... ಮಾತಿನ ಮಲ್ಲಿ ಈಗ ಮೌನಗೌರಿಯಾಗಿದ್ದಾಳೆ...''

ತಟ್ಟೆಯಲ್ಲಿ ಅನ್ನ ಬಡಿಸುತ್ತಾ ಹೇಳಿದಳು ಸುನಂದ.

ಸುಂದರ ಮೌನಿಯಾದ.

''ಬರೋ ತಿಂಗಳೇ ಅವಳನ್ನು ಊರಿಗೆ ಕಳಿಸಬೇಕು...'' ಸಾರು ಬಡಿಸಿ ಗಂಡನ ಪಕ್ಕದಲ್ಲಿ ಕುಳಿತಳು ಸುನಂದ.

'' ಊ ''

ಅನ್ನ ಕಲಸಿಕೊಳ್ಳುತ್ತಾ ಸುಂದರ ಹೇಳಿದ.

''ಎಲ್ಲಾದ್ರೂ ಒಳ್ಳೇ ವರ ನೋಡಿ, ಅವಳ ಮದುವೆ ನೀವೇ ಮಾಡಬೇಕು''

ನುಂಗಿದ ತುತ್ತು ಗಂಟಲ್ಲಲ್ಲಿಯೇ ನಿಂತಿತು ಸುಂದರಗೆ... ಗ್ಲಾಸಿನಲ್ಲಿದ್ದ ನೀರನ್ನು ಗಟ ಗಟನೆ ಕುಡಿದ.

''ನಮ್ಮ ಪಾರೂಗೆ ಗಂಡ ಹೇಗಿರಬೇಕೂಂತ ನಿಮಗೆ ಗೊತ್ತಿಲ್ವೆ !''

'' ಊ ''

'' ಮುಖ್ಯ ಗುಣ ಇರಬೇಕು ''

'' ಊ ''

''ತಕ್ಕಮಟ್ಟಿಗೆ ರೂಪು, ಇನ್ನೊಬ್ಬರ ಹತ್ರ ಕೈ ಚಾಚದೆ ಇರೋಹಾಗೆ ಸಂಪಾದನೆ ಇದ್ದರೆ ಸಾಕು.''

'' ಹೂಂ ''

'' ಎಲ್ಲದಕ್ಕಿಂತಲೂ ಮುಖ್ಯ, ನಮ್ಮ ಪಾರೂನ ಪ್ರೀತಿಯಿಂದ ನೋಡ್ಕೋಬೇಕು... ಅವಳು ಪ್ರೀತಿಗೆ ಬಗ್ಗೋ ಹೆಣ್ಣೇ ವಿನಾ, ಅಧಿಕಾರಕ್ಕೆ ತಲೆಬಾಗೋ ಹೆಣ್ಣಲ್ಲ ''

'' ಹೂಂ ''

''ಏನ್ರೀ ನೀವು... ಎಲ್ಲಾದಕ್ಕೂ 'ಹೂಂ' ಗುಟ್ತಾ ಇದ್ದೀರಲ್ಲಾ... ಏನು ಯೋಚನೆ ? ''

''ಆ...ಹ... ಇದೇ ಸಮಯ ಉಪಯೋಗಿಸಿಕೋ''... ಎಂದಿತು ಉಪಾಯ.

''ಸ್ವಲ್ಪ ಜಾಗ್ರತೆಯಾಗಿರು ಜೀವನದ ಪ್ರಶ್ನೆ ಇದು... ದುಡುಕಬೇಡ''.... ಎಂದಿತು ವಿವೇಕ.

ಮತ್ತೆ ನೀರು ಕುಡಿದ ಸುಂದರ...

‹‹ಯೋಚನೆ ಅಲ್ಲ ಸುನಂದಾ! ಒಂದು ಪ್ರಶ್ನೆ… ಅದಕ್ಕೆ ಉತ್ತರ ಸಿಗದೆ ತೊಂದ್ರೆ ಆಗಿದೆ.”

‹‹ನನಗೆ ತಿಳಿಯದೇ ನಿಮಗೆ ಎಂಥಾ ಪ್ರಶ್ನೆ ಇದೆ!” ಸುನಂದ ನಕ್ಕು ಕೇಳಿದಾಗ…

‹‹ಅಯ್ಯೋ ಮುಗ್ಧ ಹೆಣ್ಣೇ…” ಎಂದಿತು ಅವನ ಮನಸ್ಸು.

‹‹ನನಗಲ್ಲ ಸುನೀ! ನನ್ನ ಸ್ನೇಹಿತನ ಪ್ರಶ್ನೆ ಇದು…”

‹‹ಅಭ್ಯಂತರವಿಲ್ಲದಿದ್ದರೆ ಹೇಳಿ.”

‹‹ಅಭ್ಯಂತರವೇ! ನೀನು ಸರಿಯಾದ ಜವಾಬು ಕೊಡಬಲ್ಲೆ ಎಂದು ತಿಳಿದೇ ನಾಳೇವರೆಗೂ Time ತಗೊಂಡಿದ್ದೀನಿ”

‹‹ಹೇಳಿ…ಏನದು!”

ಕೈ ತೊಳೆದು ಟವಲಿಗೆ ಒರಸಿಕೊಳ್ಳುತ್ತಾ ಎದ್ದು ಕುರ್ಚಿಯಲ್ಲಿ ಬಂದು ಕುಳಿತ ಸುಂದರ.

ಕ್ಯಾರಿಯರನ್ನು ಒಂದು ಕಡೆ ಇಟ್ಟು… ತಟ್ಟೆ ತೆಗೆದು ಆಚೆ ಇಟ್ಟು, ಬಂದು ಮಗುವಿನ ಪಕ್ಕದಲ್ಲಿ ಕುಳಿತು ಮತ್ತೆ ಕೇಳಿದಳು…

‹‹ಹೇಳಿ! ಏನು ಪ್ರಶ್ನೆ”

‹‹ಒಂದು ಹೆಣ್ಣಿನ ಬಾಳಿನ ಪ್ರಶ್ನೆ”

‹‹ಬಾಳೇ…! ಸರಿಯಾಗಿ ಹೇಳಿ!”

‹‹ನನ್ನ ಸ್ನೇಹಿತ ರಾಮುಗೆ ಮದುವೆಯಾಗಿದೆ. ಹೆಂಡತಿ ಅಂದರೆ ಪ್ರಾಣ”

‹‹ನಿಮಗಿಂತಲೂ!”

ಕೆನ್ನೆಗೆ ಹೊಡೆದಂತಾಯ್ತು ಸುಂದರಗೆ.

‹‹ಯಾಕೇ ಸುಮ್ಮನಾದಿರಿ ಹೇಳಿ!”

‹‹ಅವನ ಕಣ್ಣಿಗೆ ಹೆಂಡತಿ ದೇವತೆ, ಹೆಂಡತಿಗೆ ತನ್ನ ಗಂಡ ದೇವರು… ಅಷ್ಟು ಅನ್ಯೋನ್ಯ ಅನುರಾಗದ ದಂಪತಿಗಳು… ಹೋದ ವರುಷ ಅವರ ಮನೆಯ ಎದುರು ಮನೆಗೆ ಯಾರೋ ಬಾಡಿಗೆಗೆ ಬಂದರು. ಆಗಲಿಂದ ಷುರುವಾಯ್ತು ಅವನ ಪ್ರಶ್ನೆ. ಅವನಿಗೆ ಅರಿವಿಲ್ಲದೆಯೇ ಎದುರು ಮನೆಯ ಶಶಿಯನ್ನು ಪ್ರೀತಿಸಿದ… ಅವನು ಮದುವೆ ಆದವನೆಂತ ತಿಳಿದೂ ಅವನ ಮೇಲಿನ ಪ್ರೇಮವನ್ನು ಕತ್ತರಿಸಿಕೊಳ್ಳಲು ಆಗಲಿಲ್ಲ ಶಶಿಗೆ… ಬೇರೆ ಯಾರನ್ನೂ ಮದುವೆಯಾಗಲು ಒಪ್ಪುತ್ತಿಲ್ಲ ಶಶಿ…

“ಅವಳನ್ನು ಕೈ ಬಿಡಲು ರಾಮೂಗೂ ಇಷ್ಟವಿಲ್ಲ ಈಗ ಏನು ಕರ್ತವ್ಯ! ಇದೇ ಅವನ ಪ್ರಶ್ನೆ…”

“ಈ ಪ್ರಶ್ನೆಗೆ ನಿನ್ನ ಉತ್ತರವೇನು!”

ಸುಂದರ ನಿರರ್ಗಳವಾಗಿ ಅಬದ್ಧಗಳ ಮಾತುಕೆಯನ್ನು ಕಟ್ಟಿ… ಅದು ಬೀಳುವುದೋ, ಬಾಳುವುದೋ ನೋಡಲು ಕಾಯುತ್ತಾ ಕುಳಿತ…

ಸುನಂದಳ ಅಂದವಾದ ಹುಬ್ಬುಗಳು ಗಂಟು ಹಾಕಿಕೊಂಡಿತ್ತು. ಮುಖ ಸ್ವಲ್ಪ ಕೆಂಪಾಯ್ತು.

‹‹ ಎಂಥಾ ನೀಚ ನಿಮ್ಮ ಸ್ನೇಹಿತ… ಕೈ ಹಿಡಿದವಳಿಗೆ ಮೋಸ ಮಾಡಿದ ದ್ರೋಹಕ್ಕಿಂತ, ಮದುವೆಯಾಗದ ಒಂದು ಹೆಣ್ಣಿನ ಮನಸ್ಸನ್ನು ಕೆಡಿಸಿದ ಜಂಟಾಲಿ…”

ಎಲ್ಲಿಂದಲೋ ಒಬ್ಬ ರಾಕ್ಷಸ ಸುಂದರನ ಮೇಲೆ ಬೆಟ್ಟಗಳನ್ನು ಸಾಲಾಗಿ ಬೀಸಿದಂತಾಯ್ತು… ಕುಗ್ಗಿ ಹೋದ ಅವನು… ತಗ್ಗಿದ ಧ್ವನಿಯಲ್ಲಿ ಕೇಳಿದ…

‹‹ಹಾಗಾದ್ರೆ ಆ ಹುಡಿಗೀ ಗತೀ!”

‹‹ದೇವರೇ ಕಾಪಾಡಬೇಕು…”

ನಿಟ್ಟುಸಿರು ಬಿಟ್ಟ ಸುಂದರ.

‹‹ ನಿಜ ದೇವರೇ ಕಾಪಾಡಬೇಕು… ಸುನೀ! ಒಂದ್ವೇಳೆ ಹೆಂಡತಿಯನ್ನು ಒಪ್ಪಿಸಿ ಶಶಿಯನ್ನು ರಾಮು ಮದುವೆಯಾದರೇ!”

‹‹ಸಾಧ್ಯವೇ ಇಲ್ಲ… ಒಂದು ಹೆಣ್ಣು ಪ್ರಾಣದಲ್ಲಿ ಭಾಗ ಕೊಡುತ್ತಾಳ್ಯೇ ವಿನಾ, ಪ್ರಣಯದಲ್ಲಿ ಕೊಡೋದಿಲ್ಲ. ಗಂಡನನ್ನು ಮತ್ತೊಬ್ಬಳ ಕೈಲಿ ಕೊಡಲು ಯಾವ ಹೆಣ್ಣೂ ಸಮ್ಮತಿಸುವುದಿಲ್ಲ…”

“ಹೌದು ನೀ ಹೇಳಿದ್ದೇ ನಿಜ.. ಶಶಿಗೆ ಬಾಳಿಲ್ಲ” ನಿರಾಶನಾಗಿ ಹೇಳಿದ.

“ನಿಮ್ಮ ಸ್ನೇಹಿತ ಸಮಾಜದ್ರೋಹಿ”

“ಹೌದು.. ದ್ರೋಹಿ..”

ಪೆಚ್ಚಾದ ಸುಂದರ.

“ನೀವು ಅವರ ವಿಚಾರದಲ್ಲಿ ಎಷ್ಟು ನೊಂದ್ಕೊಳ್ತೀರಿ..ನಿಮ್ಮ ಹೃದಯ ನವನೀತ.. ಎಲ್ಲಾ ಗಂಡಂದಿರೂ ನಿಮ್ಮ ಹಾಗೇ ಇದ್ದರೇ ಸಂಸಾರ ಸ್ವರ್ಗ ಆಗುತ್ತೆ..” ಮಾತಾಡದೆ ಎದ್ದು ದೀಪವನ್ನಾರಿಸಿದ ಸುಂದರ.. ಅವನ ಕಡೆಯ ಆಶೆಯ ಕಿಡಿಯು ಆರಿ ಹೋಯ್ತು.. ಸುಂದರನ ಕಣ್ಣಲ್ಲಿ ನೀರು ತುಂಬಿತು.. ಅವನ ಮನಸ್ಸು ಗಟ್ಟಿಯಾಗಿ ಅಳುತ್ತಾ ಹೇಳಿತು..

“ಪಾರೀ! ನನ್ನನ್ನು ಕ್ಷಮಿಸು.. ಈ ರಾಕ್ಷಸ ನಿನಗೆ ಬಾಳು ಕೊಡಲಾರ.. ಇಲ್ಲ ಪಾರ್ವತೀ ಇಲ್ಲ, ಸುನಂದಳನ್ನು ತ್ಯಾಗ ಮಾಡಲಾರೆ.. ಅವಳ ಮಗುವನ್ನು ತಾಯಿ ಇಲ್ಲದ ತಬ್ಬಲಿ ಮಾಡಲಾರೆ..ನನ್ನನ್ನು ಕ್ಷಮಿಸು.. ನೀನು ಎಲ್ಲಿಯಾದ್ರೂ ಬಾಳು…”

## ೬

ಮಗುವಿಗೆ ಮೂರು ತಿಂಗಳು ತುಂಬಿತು.. ಪಾರ್ವತಿಗೂ ಮೂರು ತಿಂಗಳು ತುಂಬಿತು. ಅವಳು ಅಕ್ಕನ ಮುಂದೆ ಸುಳಿಯುವುದನ್ನು ಕಡಿಮೆ ಮಾಡಿದಳು… ವಿಧಿ ಇಲ್ಲದಿದ್ದಾಗ ಮಾತ್ರ ಒಂದೆರಡು ನಿಮಿಷ ಬೆಂಕಿಯ ಮೇಲೆ ನಿಂತವಳಂತೆ ನಿಂತು… ಹೊರಟು ಹೋಗುತ್ತಿದ್ದಳು. ಅಕ್ಕನ ಅಕ್ಕರೆಯ ಕೂಗು ಕಿವಿಗೆ ಬಿದ್ದಾಗ ಭಯದಿಂದ ತತ್ತರಿಸುತ್ತಿದ್ದಳು… ಅವಳು ತನ್ನನ್ನು ನೋಡಿದರೆ ತನ್ನ ಕಳಂಕದ ಹೊರೆ ಅಕ್ಕನ ದೃಷ್ಟಿಗೆ ಬಿತ್ತೇನೋ ಎಂಬ ಸಂದೇಹ.

ತನ್ನನ್ನು ಕರೆದರೆ ತನ್ನ ಗುಟ್ಟಿನ ಪ್ರಣಯ ಬಯಲಾಯ್ತೇನೊ… ಶಿಕ್ಷೆ ವಿಧಿಸಲು ಕೂಗುತ್ತಿದ್ದಾಳೇನೋ… ಎಂಬ ಭಯ.

ತಂಗಿ ದಿನದಿನಕ್ಕೂ ಕ್ಷೀಣಿಸಿ ಹೋಗುತ್ತಿರುವ ಕಾರಣ ಸುನಂದಳಿಗೆ ತಿಳಿಯಲಿಲ್ಲ.

ಆಯ್ತು ಇನ್ನು ಅವಳನ್ನು ಈ ವಾರದೊಳಗೇ ಕಳುಹಿಸಿಬಿಡಬೇಕು… ಎಂದು ನಿಶ್ಚಯಿಸಿಕೊಂಡಳು ಸುನಂದ.

ಪಾಪ… ಇಷ್ಟು ದಿನ ತನ್ನೊಡನೆ ಇದ್ದಳು- ಕಷ್ಟದಲ್ಲಿ ಭಾಗಿ ಆದಳು… ತನ್ನನ್ನು ಹೂವಿನಲ್ಲಿಟ್ಟು ಕಾಪಾಡಿದಳು… ಇನ್ನು ಹೊರಟು ಹೋಗುತ್ತಾಳೆ… ತನ್ನನ್ನು ಅಗಲಿ ಹೊರಟು ಹೋಗುತ್ತಾಳೆ.

ಇನ್ನು ತಾನು ಅವಳನ್ನು ಮದುವೆಯ ಹೆಣ್ಣಾಗಿ ನೋಡುತ್ತಾಳೆ… ಮದುವೆಯ ಮಂಟಪದಲ್ಲಿ- ಮದುಮಗನ ಪಕ್ಕದಲ್ಲಿ ಮೌನ ಸುಂದರಿಯಾಗಿ — ನಾಚಿ— ತಲೆಬಾಗಿ ಕುಳಿತುಕೊಳ್ಳುವ ತಂಗಿಯನ್ನು ಕಾಣಲು— ಬಹು ದೂರವಿಲ್ಲ. ಅಪ್ಪನಿಂದ ಮೊನ್ನೇನೇ ಕಾಗದ ಬಂತು… ‹‹ಪಾರೂಗೆ ಗಂಡು ನೋಡಿದ್ದೀನಿ ಆದಷ್ಟು ಬೇಗ ಅವಳನ್ನು ಕಳುಹಿಸಿಕೊಡು- ಹುಡುಗ ಲಕ್ಷಣವಾಗಿದ್ದಾನೆ, ಶ್ರೀಮಂತ ಮನೆತನ, ಒಬ್ಬನೇ ಮಗ, ಪಾರ್ವತಿಯ ಫೋಟೋ ನೋಡಿ ಒಪ್ಪಿದ್ದಾನೆ.”

ಎಂದು ಬರೆದ ಆ ಕಾಗದವನ್ನು ಸಾವಿರಬಾರಿ ಓದಿಕೊಂಡಳು ಸುನಂದ. ಶ್ರೀಮಂತನ ಕೈಹಿಡಿಯುವ ತನ್ನ ತಂಗಿ ಅದೃಷ್ಟವಂತಳು. ಪಾರ್ವತಿ ರೂಪಿಗೆ ತಕ್ಕವನಾಗೇ ಇರಬೇಕು- ಗುಣವಂತನೂ ಆಗಿರಬೇಕು. Photo ನೋಡಿ ಮೆಚ್ಚಿದ್ದಾನಲ್ಲವೇ? ಹುಡುಗಿಯನ್ನು ನೋಡಿ ಕಾಗದ ಬರೀತೀನಿ ಅಂತ ಬಿಗುಮಾನದಿಂದ ಹೇಳಹೋಗಲಿಲ್ಲ. ಮನಸ್ಸಿನಲ್ಲಿ ಒಪ್ಪಿ, ಅದನ್ನು ಸ್ಪಷ್ಟಪಡಿಸಿ, ಮುಹೂರ್ತ ನೋಡಿ, ಎಂದು ಹೇಳಹೋಗುವುದನ್ನು ನೋಡಿದರೆ- ಅತ ನಿಜವಾಗಲೂ ಗುಣವಂತನೇ ಇರಬೇಕು

ಪಾರೂಗೆ ಮದುವೆ ಆದ ತಕ್ಷಣ ದಂಪತಿಗಳನ್ನು



“ ಎಂಥಾ ನೀಚ ನಿಮ್ಮ ಸ್ನೇಹಿತ ”

ಕರೆತಂದು, ಉಪಚರಿಸಿ ಕಳುಹಿಸಬೇಕು. ಅವರಿಬ್ಬರೂ ಜೋಡಿಯಾಗಿ, ಉಲ್ಲಾಸವಾಗಿ ಹೋಗಿ ಬರುವುದನ್ನು ಕಣ್ಣು ತುಂಬ ಕಾಣಬೇಕು.

ಹಾಲುಕೆನೆಯಂಥ ಮೈಬಣ್ಣ ಪಾರ್ವತಿಯದು– ಅವಳ ಕಣ್ಣು ನೋಡಿದರೆ– ಜಿಂಕೇಮರಿಯ ನೆನಪು ಬರುತ್ತೆ– ನನ್ನ ಪಾರ್ವತಿ ತುಂಬು ಸಂಸಾರಿಯಾಗುತ್ತಾಳೆ, ಒಬ್ಬರ ಮನೆಯ ಗೃಹಲಕ್ಷ್ಮಿ ಆಗುತ್ತಾಳೆ–

ಸುನಂದ ತಂಗಿಯ ನೆನಪಿನಲ್ಲಿ ಮಗಳನ್ನೂ ಮರೆಯುತ್ತಿದ್ದಳು– ಮಗು ಬಿಕ್ಕಿ ಅತ್ತಾಗ ಅವಳನ್ನು ಪ್ರೀತಿಯಿಂದ ಎದೆಗಪ್ಪಿ ಅವ್ಯಕ್ತ ಆನಂದ ಅನುಭವಿಸುತ್ತಿದ್ದಳು– ಅವಳ ಹೃದಯ ಹೆಮ್ಮೆಯ ಶಿಖರದಲ್ಲಿ ನಿಂತು ಕಿಲಕಿಲ ನಗುತ್ತಿತ್ತು–

"ಪಾರೂ".. ಸುನಂದ ತಂಗಿಯನ್ನು ಕರೆದಳು. ಓಡಿಹೋಗಿ ಬಿಚ್ಚಿಟ್ಟುಕೊಳ್ಳುವ ಆ ಮಗುವಿನೊಡನೆ ಮಾತಾಡುವ ಹಂಬಲ ಅವಳಿಗೆ.

ಚಾಟಿಯಿಂದ ಹೊಡೆಸಿಕೊಂಡವಳಂತೆ ವೇದನೆಯಿಂದ ಸರಕ್ಕನೆ ತಿರುಗಿ ನೋಡಿದಳು ಪಾರ್ವತಿ.

"ಪಾರಮ್ಮಾ" ಅಕ್ಕನ ಆಪ್ಯಾಯತೆಯ ಕೂಗು... ಮತ್ತೊಮ್ಮೆ ಕೇಳಿಸಿತು.

ಅವಳ ಮುಖ ಬೆವರಿತು. ದೇಹ ನಡುಗಿತು... ಒಣಗಿದ ತುಟಿಗಳನ್ನು ಎಂಜಲು ಮಾಡಿಕೊಂಡು ಮೆಲ್ಲನೆ ಎದ್ದಳು. ಮುಂಚಿನಂತೆ ಅವಳು ಚುರುಕಾಗಿ ಏಳಲು ಅವಳ ಗರ್ಭದಲ್ಲಿದ್ದ ಪುಟ್ಟ ಮಗು ಬಿಡುತ್ತಿಲ್ಲ. ಪಾರ್ವತಿ ಹೆಜ್ಜೆ ಮೇಲೆ ಹೆಜ್ಜೆ ಇಟ್ಟುಕೊಂಡು ಉರಿ ಶಿಕ್ಷೆಗೆ ಹೋಗುವ ಕೈದಿಯಂತೆ ಅಕ್ಕನ ಬಳಿ ಬಂದು ನಿಂತಳು.

ತಲೆಬಾಗಿ ಮಗಳನ್ನು ನೋಡಿ ಆನಂದಿಸುತ್ತಿದ್ದ ಸುನಂದ ತಲೆ ಎತ್ತಿ ಪಾರ್ವತಿಯನ್ನು ನೋಡಿದಳು. ಅಕ್ಕನ ಕಣ್ಣಿಗೆ ತಂಗಿ ಹೊಸಬಳಂತೆ ಕಂಡಳು.

ಮುಖ ಸೊರಗಿದೆ... ಆದರೂ ಆ ಮುಖದಲ್ಲಿ ಅಪೂರ್ವ ಸೌಂದರ್ಯ ತುಂಬಿದೆ.

ಕಣ್ಣುಗಳು ಮಂಕಾಗಿವೆ. ಆ ಮಂಕಾದ ಕಣ್ಣುಗಳಲ್ಲಿ ಮತ್ತತೆ ಇದೆ. ಅರ್ಧ ನಿಮೀಳಿತ ನೇತ್ರಳಾಗಿ ನಿಂತಿರುವ ಪಾರ್ವತಿ ಅಜಂತ ಸುಂದರಿಯಂತೆ ಕಂಡಳು.

ಮೊದಲಿಗಿಂತಲೂ ಈಗ ಅವಳ ಬಣ್ಣ ಬದಲಾಗಿದೆ.

ಆಗ ಅವಳು ಹಾಲು ಕೆನೆಯಾಗಿದ್ದರೆ!

ಈಗ ಅವಳು ಕೆಂಪು ಸಕ್ಕರೆಯಾಗಿದ್ದಾಳೆ.

ಆಗ ಅವಳು ದೋರಹಣ್ಣು ಆಗಿದ್ದರೆ!

ಈಗ ಅವಳು ರಸವತ್ತಾದ ಹಣ್ಣಾಗಿದ್ದಾಳೆ.

ಓಹ್... ಪಾರ್ವತಿಯಲ್ಲಿ ಎಷ್ಟು ಬದಲಾವಣೆ... ಏಕೇ..., ಏಕೇ? ... ಅರ್ಥವೇ ಆಗುತ್ತಿಲ್ಲ.

ಸುನಂದಳ ದೃಷ್ಟಿಯನ್ನು ಎದುರಿಸಲು ಬಲ ಇಲ್ಲದವಳಂತೆ ಬಲಹೀನಳಾಗಿ ಕುಸಿದು ಕುಳಿತಳು. ಬಡಕಲಾಗಿರುವ ಅವಳ ಕೈಗಳನ್ನು ತನ್ನ ಕೈಗಳಲ್ಲಿ ತೆಗೆದುಕೊಂಡಳು ಸುನಂದ...

ಪಾರ್ವತಿಯ ಕೈ ನಡುಗಿತು.

'ಪುಣ್ಯ'ದ ಮುಂದೆ 'ಪಾಪ' ಹೆದರುವಂತೆ ನಡುಗಿದಳು.

"ಯಾಕೇ ಪಾರೀ! ಮೈ ಹುಷಾರಿಲ್ಲವೇನೇ??" ಮಮತೆಯಿಂದ ಕೇಳಿದಳು ಸುನಂದ.

ಪಾರ್ವತಿಗೆ ಹೃದಯ ಒಂದು ಕ್ಷಣ ನಿಂತಿತು.

"ಇಲ್ಲಕ್ಕಾ ಚೆನ್ನಾಗಿದ್ದೀನಿ"

ಮತ್ತೆ ಇಬ್ಬರಲ್ಲಿ ಮೌನ... ಪಾರ್ವತಿ ಸಂದೇಹದಿಂದ ಭಯದಿಂದ ಒಂದೊಂದು ಮಾತನ್ನೂ ಬಿಡಿಸಿದಂತೆ ಕೇಳಿದಳು.

"ನನ್ನ ನೋಡಿದರೆ... ಮೈ ಹುಷಾರಿಲ್ಲದವಳಂತೆ.. ಕಾಣ್ತೀನ್ಯೆ?..."

ಹಗುರವಾಗಿ ನಕ್ಕಳು ಸುನಂದ.

"ಮುಂಚಿಗಿಂತಲೂ ಈಗ ನೀನು ತುಂಬಾ ಚೆಲುವಾಗಿದ್ದೀ ತಂಗೀ...ನೀನು ಇಲ್ಲಿಗೆ ಬಂದಾಗ ಮಗುವಿನ ಹಾಗೆ ಬಂದೆ...ಆದ್ರೇ...."

ಮಗು ಅತ್ತಿತು ಸುನಂದ ಮಾತನ್ನು ನಿಲ್ಲಿಸಿ ಮಗುವನ್ನೆತ್ತಿಕೊಂಡಳು.

ಪಾರ್ವತಿಗೆ ಭೂಮಿ ಬಾಯಿ ಬಿಡಬಾರದೇ ಎನ್ನಿಸಿತು...ಅಕ್ಕನ ಬಾಯಿಂದ ಬರುವ ಆ ಮಾತುಗಳನ್ನು ಕೇಳುವುದಕ್ಕೆ ಮುಂಚೆಯೇ ಭಾವಿಗೆ ಹಾರಿಕೊಳ್ಳಬೇಕು.

ಸುನಂದ ನಕ್ಕು ಹೇಳಿದಳು.

"ಆದ್ರೇ... ಈಗ ನೀನು ತುಂಬು ಯೌವನವತಿಯಾಗಿ ಆಂದೇ ಅರಳಿದ ಸಂಪಿಗೆಯಂತೆ ಇದ್ದೀಯೆ"

ಪಾರ್ವತಿ ಒಮ್ಮೆ ಕಣ್ಣು ಮುಚ್ಚಿ ನಿಟ್ಟುಸಿರು ಬಿಟ್ಟಳು.

ಇಲ್ಲ...ಅಕ್ಕನಿಗೆ ತನ್ನ ಮೇಲೆ ಸಂದೇಹವಿಲ್ಲ... ಆ ಪುಣ್ಯವತಿಗೆ ಯಾರ ಮೇಲೂ ಸಂದೇಹವಿಲ್ಲ...

ಅಯ್ಯೋ...ಅವಳಿಗೆ ತಾನು ಮಾಡಿದ ಮೋಸ.

ಅಬ್ಬ. .ಎಷ್ಟು ಭಯಂಕರ!!

ಅಕ್ಕನ ಮುಂದೆ. ಅಲ್ಲ-ಅಲ್ಲ ಅವಳ ನೆಳಲಿನಲ್ಲಿ ನಿಲ್ಲಲೂ ತನಗೆ ಯೋಗ್ಯತೆ ಇಲ್ಲ.. ಅವಳು ತುಳಿದ ಮಣ್ಣನ್ನು ತಲೆಯಲ್ಲಿಟ್ಟು ಪೂಜಿಸಿದರೂ ತನಗೆ ವಿಮೋಚನೆ ಇಲ್ಲ....ಇಲ್ಲ....ಇರಬಾರದು....ಇನ್ನು ಬದುಕಬಾರದು..ಬದುಕಿ ಅಕ್ಕನ ಬಾಳ ಬೆಳಕನ್ನು ಆರಿಸಬಾರದು. ಯಮನ ಕೊರಳಿಗೆ ಮಾಲೆಯನ್ನು ಹಾಕಲು ತಾನು ಈ ಕ್ಷಣದಿಂದ ಸಿದ್ಧವಾಗಿರಬೇಕು...ಯಮ ತನ್ನನ್ನು ನಿರಾಕರಿಸುವುದಿಲ್ಲ.. ಅವನು ಯಮಧರ್ಮರಾಜ...ಧರ್ಮನ ತಂದೆ ಅವನು ತಾನು ಮಾಡಿದ ಹೇಯ ಕೆಲಸವೇ ಸರಿ---ನೀಚ ಕಾರ್ಯವೇ ಸರಿ--ಸಂದೇಹವೇ ಇಲ್ಲ--ಆದರೂ... ಆದರೂ...ಅದರಲ್ಲಿ ತನ್ನ ಒಬ್ಬಳದು ಮಾತ್ರ ಅಪರಾಧವಿಲ್ಲ...ಅನ್ಯಾಯವಿಲ್ಲ .ದ್ರೋಹ ಚಿಂತೆ ಇಲ್ಲ...

ನೈಸರ್ಗಿಕ ಪ್ರಭಾವ.

ಯೌವನದ ಕ್ರಾಂತಿ.

ಎಲ್ಲವೂ...ಎಲ್ಲವೂ ತನ್ನನ್ನು ಜಾರುವಂತೆ ಮಾಡಿತು.

ಜಾರಿದಳು ಅಧಃಪಾತಾಳಕ್ಕೆ ಜಾರಿಹೋದಳು..

ಇನ್ನು ಅಲ್ಲಿಂದ ಅವಳು ಯಮನ ಮಡಿಲಿಗೆ ಜಾರಬೇಕು.

ಸುಂದರ ಯಮ...

ಒಬ್ಬನಿಗೆ ಯೌವನ ಅರ್ಪಿಸಿದಳು.

ಮತ್ತೊಬ್ಬನಿಗೆ ಪ್ರಾಣ ನೀಡಲು ತಯಾರಾಗಿರುವಳು.

"ನಿನಗೂ ಒಬ್ಬರು ಕಾದು ನಿಂತಿದ್ದಾರೇ ಪಾರೀ! ನಿನ್ನ ಬೇಗ ಕಳುಹಿಸಬೇಕು."

ನಗುತ್ತಾ ಸುನಂದ ಅಂದಾಗ ಪಾರ್ವತಿಗೆ ಮೈ ಮೇಲೆ ತಣ್ಣನೆಯ ನೀರು ಎರಚಿದಂತಾಯ್ತು. ಮುಖ ಬಿಳುಪೇರಿತು. ನಡುಗುವ ತುಟಿಗಳನ್ನು ಕಚ್ಚಿ ಅಕ್ಕನನ್ನು ದೃಷ್ಟಿಸಿ ನೋಡಿದಳು.

"ಯಾಕೆ ಹಾಗೆ ನೋಡ್ತಿಯಾ! ಹುಚ್ಚು ಹುಡುಗಿ ನಿನಗೆ ವರನನ್ನು ನೋಡಿಯಾಯ್ತು! ಹುಡುಗ ಒಪ್ಪಿಯಾಯ್ತು. ಒಪ್ಪದೇ ಏನು ಹೇಳು! ನಿನ್ನಂಥಾ



" ಅಲ್ಲಾ, ಖಾಲಿ ಕೊಡ ಈ ಪಾಟಿ ಭಾರವಾಗಿದೆ. ನಂಗೆ ನೀರು ಸೇದೋಕ್ಕೆ ಸಾಧ್ಯವಾಗುತ್ತಾ?"

ಕನ್ಯೆ ಸಿಗಬೇಕಾದರೆ..." ಅಕ್ಕ ಮಾತನ್ನು ಪೂರ್ತಿಗೊಳಿಸುವುದರೊಳಗೇ ಪಾರೂ ವೇದನೆಯಿಂದ ಯಾತನೆಯಿಂದ ಅಲ್ಲಿಂದ ಓಡಿ ಹೋದಳು.

"ನಾಚಿಗೆಯ ಬೊಂಬೆ ನನ್ನ ತಂಗಿ."

ಅವಳ ನರಕಯಾತನೆಯನ್ನು ನಾಚಿಗೆ ಎಂದು ಭಾವಿಸಿದಳು ಅವಳಾಯಿಕಳು ಸುನಂದ.

"ಪಾರೂ ನಿಮ್ಮ ಭಾವ ಮಧ್ಯಾನ್ಹ ಬೇಗ ಬಂದು ಬಿಡ್ತಾರೆ ಶನಿವಾರ ಅಲ್ಲವೇ! ನೀನು ನಿನ್ನ ಭಾವೀ ಪತಿಯ ನೆನಪಿನಲ್ಲಿ ಅಡಿಗೆ ಕೆಡಿಸಬೇಡ." ಸುನಂದ ನಗುತ್ತಾ ಕೂಗಿ ಹೇಳಿದಳು.

"ಭಾವೀ ಪತಿ ಯಾರು...? ಯಾರಿಗೆ! ಸುಂದರ ನನಗೆ ಅಲ್ಲ... ಅಲ್ಲ ಆತ ಅಕ್ಕನ ಗಂಡ ಭಾವ, ದೇವರೇ ದೇವರೇ ಸಾಕುಮಾಡು ಈ ಯಾತನೆ." ಈ ವೇದನೆಯನ್ನು ಅಂತ್ಯಮಾಡಿ ಪಾರ್ವತಿ ಒಲೆಯ ಮುಂದೆ ಕಾಳತು ಅತ್ತಳು.

ಹಾಗಾದ್ರೆ! ಅಲ್ಲಿ ಅಪ್ಪ ತನಗೆ ವರ ಹುಡುಕಿದ್ದಾರೆ.. ಹಾಸಿಲ್ಲಿ "ವರ" ಹಿಡಿದಿದ್ದಾಳೆ.. ಎಂಥಾ ದೀರ್ಘವಾದ ತರ, ಕಾಠವಾದ ದರ.... ಈ ವರಕ್ಕೆ ತಾನು ಅಧೀಶಿ ಆಗಲೇಬೇಕು.. ಪಾಪ.. ಅಪ್ಪ.

ಪಾರ್ವತಿಯ ಕಣ್ಣಮುಂದೆ ಅಜಾನುಬಾಹು ವಾದ ತಂದೆಯ ಆಕಾರ ಸುಳಿಯಿತು. ಕಣ್ಣುಗಳಲ್ಲಿ ಕರುಣೆ, ಆ ಅಗಲವಾದ ಮುಖದಲ್ಲಿ ಮಮತೆ, ಆ ದಪ್ಪ ತುಟಿಗಳಲ್ಲಿ ಪ್ರೀತಿಯ ಮುಗುಳ್ನಗೆ ತಾನು ದೊಡ್ಡವಳಾಗುವ ವರೆಗೂ ತನ್ನನ್ನು ಮಡಿಲಲ್ಲಿ ಕೂರಿಸಿಕೊಂಡು ಬಾಯಿಗೆ ತುತ್ತು ನೀಡುತ್ತಿದ್ದರು, ಅವರು. ಕಡೆಯ ಮಗಳೆಂದು ತನ್ನ ಮೇಲೆ ವಿಶ್ವಾಸ ಪ್ರೇಮ ಅವರಿಗೆ. ಮಕ್ಕಳಿಲ್ಲದ ಈ ಮನೆಯಲ್ಲಿ ತಾನೇ ಮಗುವಾಗಿದ್ದಳು.

ಅಪ್ಪ ಮಾತ್ರವಲ್ಲ ತನ್ನ ಮೇಲೆ ಅವರಿಗೆ ಅಪಾರ ನಂಬಿಕೆ, ತಮ್ಮ ಊರಲ್ಲಿ ತಮ್ಮ ಪರಿಚಯದ ಹುಡುಗಿ ಒಬ್ಬಳು, ಪಕ್ಕದ ಮನೆ ಹುಡುಗನೊಡನೆ ಓಡಿಹೋದಳು. ಕಾರಣ.. ತಂದೆ ನೋಡಿದ ಮುದುಕ ವರನಿಗೆ ಕತ್ತು ಬಗ್ಗಿಸಲಾರದೆ ಹೊಸ ಲೋಕಕ್ಕೆ ಹಾರಿಹೋದಳು.

ತನಗೆ ಅವಳ ವಿಷಯದಲ್ಲಿ ಎಳ್ಳಷ್ಟೂ ಅಸಹ್ಯ ವೆನಿಸಲಿಲ್ಲ. ಒಂದು ತಿಂಗಳ ಕಾಲ ಊರೇ ಅವಳನ್ನು ಥೂ...! ಥೂ...! ಎಂದಿತು. ತನೊಬ್ಬಳನ್ನು ಬಿಟ್ಟು ತನಗೆ ಮನಸ್ಸಿನಲ್ಲಿ ಒಂದು ವಿಧವಾದ ಸಂತೋಷವೂ ಆಯ್ತು, ಹೆಮ್ಮೆ ಎನಿಸಿತು.

ಆ ಹುಡುಗೀ ವಿಚಾರದಲ್ಲಿ ಅಪ್ಪ ಅವರ ಸ್ನೇಹಿತರು ಮಾತಾಡುವಾಗ ತಾನು ಕಾಫೀ ತಗೊಂಡು ಹೋದಳು...ಸ್ನೇಹಿತ ಕೇಳಿದ

"ನಿನ್ನ ಮಗಳಲ್ಲವೇ? ಎಷ್ಟು ಬೆಳೆದಿದ್ದಾಳೆ! ಬೇಗ ಮದುವೆ ಮಾಡಿಬಿಡೋ."

ಅಪ್ಪ ಗರ್ವದಿಂದ ನಕ್ಕರು.

"ನನ್ನ ಮಗಳು ಓಡಿ ಹೋಗೋಲ್ಲ. ಅವಳು ಅಪರಂಜಿ."

"ಮುದುಕ ಗಂಡನ್ನ ನೋಡು ಆಗ ಏನು ಹೇಳ್ತಾಳೆ ಕೇಳು! ನಿನ್ನ ಮಗಳನ್ನ!!"

ಸ್ನೇಹಿತ ನಗುತ್ತಾ ಹೇಳಿದಾಗ ಅಪ್ಪ ಏನು ಹೇಳ್ತಾರೋ ಅಂತ ಭಯದಿಂದ ತಾನು ಓಡಿ ಹೋದಳು. ಆದ್ರೇ ತಾನು ಒಳಗೆ ಓಡಿ ಹೋಗಲಿಲ್ಲ. ಕೋಣೆ ಬಾಗಿಲ ಮರೆಯಲ್ಲಿ ನಿಂತುಕೊಂಡಳು. ಅವರ ಮಾತುಗಳನ್ನು ಕೇಳಬೇಕೆಂಬ ಆಸೆ...

"ಮುದುಕನಾಗಲೀ ಕುಂಟನಾಗಲೀ ನಾನು ನೋಡಿದ 'ವರ'ನ ಅವಳು ಬೇಡಾಂತ ಕನಸಿನಲ್ಲೂ ಹೇಳೋದಿಲ್ಲ."

ಮೀಸೆ ಸವರುತ್ತಾ ತಂದೆ ಹೇಳಿದರು.

"ಅವಳ ನಡತೆ ನೋಡಿ ಊರು ಹುಡುಗಿಯರು ಕಲಿಯಬೇಕು."

ತಂದೆ ಮತ್ತೆ ಹೇಳಿದ್ದು ಕೇಳಿ ತಾನು ಗರ್ವದಿಂದ ತಲೆ ಎತ್ತಿ ಒಳಗೆ ನಡೆದು ಹೋದಳು. ಆ ಗರ್ವದ ನಡೆ ಇನ್ನಿಲ್ಲ...

ಅವಮಾನದಿಂದ ತಲೆಬಾಗಿ, ಕತ್ತಲಲ್ಲಿ ಮರೆಯಾಗಿ, ಮತ್ತೊಬ್ಬರ ಕಣ್ಣಿಗೆ ಬೀಳದೆ ನಡೆಯಬೇಕು. ತನ್ನ ಈ ನಡತೆಯಿಂದ ಅಪ್ಪ ಎಷ್ಟು ಅವಮಾನ ಅನುಭವಿಸಬೇಕು...ಊರ ಜನರ ಕುಹಕ ದೃಷ್ಟಿ ಅವರನ್ನು ಸೀಳಿದಾಗ ಅಬ್ಬ ಅವರು ಅನುಭವಿಸುವ ಯಾತನೆ.. ಓಹ್!... ದೇವರೇ ನನ್ನಿಂದ ಅಪ್ಪನಿಗೆ ಅವಮಾನ ದುಃಖ ಇಲ್ಲ ಇರಬಾರದು. ತಾಗಿರಲೇಬಾರದು. ಸಮಾಜದ ಹದ್ದಿನ ಕಣ್ಣಿಗೆ. ತನ್ನ ನಿಲುವು ತಿಳಿಯುವುದಕ್ಕಿಂತ ಮುಂಚೆಯೇ ಗಂಗೆಯ ಪಾಲಾಗಬೇಕು ತಾನು. ತಾನು ಸತ್ತರೆ ತಾಯಿ ಅಳಬಹುದು... ಹೆತ್ತ ಕರುಳು...ಮಗಳ ಸಾವನ್ನು ಭರಿಸಲಾರದು.

ಅಮ್ಮ..ಗಂಡನ ಮನೆಗೆ ಕಾಲಿಟ್ಟ ದಿನದಿಂದ ಆ ಮನೆಯ ಉನ್ನತಿಗಾಗಿ ಚಂದನದ ಕಟ್ಟಿಗೆಯಂತೆ... ಸವೆದುಹೋಗಿದ್ದಾಳೆ. ಬಡಕಲು ದೇಹ... ಆದರೂ ಆರೋಗ್ಯದ ತವರುಮನೆ ಆಕೆ. ಒಂದು ದಿನವೂ ತಲೆನೋವೆಂದು ಮಲಗಿಲ್ಲ ಅವಳು. ದುಡಿಯುವುದೇ ಆಕೆಯ ಧ್ಯೇಯ... ಗಂಡನ ಸೇವೆಯೇ ದೇವರ ಸೇವೆ... ಮಕ್ಕಳ ಆನಂದವೇ ಆಕೆಯ ಸಂತೋಷ.

ಒಂದು ದಿನ ಆಟವಾಡುತ್ತಾ ಬಿದ್ದುಬಿಟ್ಟಳು ತಾನು.. ಏಟು ಬಿದ್ದು ರಕ್ತ ಬಂತು. ಅಬ್ಬ ಆಗ ಆ ತಾಯಿಯ ದುಃಖ ಹೇಳತೀರದು. ಏಟು ತಾಕಿದ ಕಡೆ ಅರಿಶಿನ ಹಚ್ಚಿ ಕಟ್ಟು ಕಟ್ಟಿ, ತನ್ನನ್ನು ತೊಡೆಯ ಮೇಲೆ ಮಲಗಿಸಿಕೊಂಡು.. ಮೃದುವಾಗಿ ತಲೆಯನ್ನು ಸವರಿದಳು. ಅಬ್ಬ!... ಆ ತಾಯಿಯ ಮಡಿಲಲ್ಲಿ ಇರುವ ಸುಖ..ಆ ಕೈಗಳ ಸ್ಪರ್ಶದಲ್ಲಿ ಇರುವ ಹಿತ ತಾನೆಲ್ಲೂ ಅನುಭವಿಸಿಲ್ಲ... ಮಲಗಿದ್ದ ತಾನು ಕೇಳಿದಳು...

"ಯಾಕಮ್ಮಾ ನಿನಗೆ ಅರಿಶಿನ ಅಂದ್ರೆ ತುಂಬಾ ಇಷ್ಟ!"

"ಯಾಕೆ ಮಗೂ ಹಾಗೆ ಕೇಳ್ತಿಯಾ?"

"ಮತ್ತೆ ನೀನು ಏಟು ಬಿದ್ರರೇ ಅರಿಶಿನ ಹಾಕಿ ಕಟ್ತೀಯಾ! ನೆಗಡಿ, ಕೆಮ್ಮು ಆದ್ರೇ ಅರಿಶಿನ ಹಾಕಿ

ಹಾಲು ಕಾಯಿಸಿ ಕೊಡ್ತೀ. ತುಂಬಾ ಸೀತಾ ಆಯ್ತೂಂತಂದ್ರೆ ಅರಿಶಿನ ಸುಣ್ಣ ಕಲಸಿ ಬಿಸಿ ಮಾಡಿ ಕುತ್ತಿಗೆಗೇ ಮೂಗಿನ ಮೇಲೆ ಪಟ್ಟಿ ಹಾಕೀ...."

"ಹೌದಮ್ಮಾ ಅರಿಶಿನ ಅಷ್ಟು ಶ್ರೇಷ್ಠವಾದದ್ದು ಹೆಂಗಸಿನಂತೂ ಅರಿಶಿನ ಕುಂಕುಮವೇ ಜೀವನ... ಅದರೊಡನೆ ಸಾಯುವುದೇ ಅವಳಿಗೆ ಸ್ವರ್ಗ'' ತಾಯಿ ಭಕ್ತಿಯಿಂದ ಹೇಳುತ್ತಿರುವಾಗಲೇ ತಾನು ಕಣ್ಣು ಮುಚ್ಚಿ ನಿದ್ದೆ ಮಾಡಿದ್ದಳು.

ನಿಟ್ಟುಸಿರು ಬಿಟ್ಟಳು ಪಾರ್ವತಿ. ಅರಿಶಿನ ಕುಂಕುಮದೊಡನೆ ಸಾಯಬೇಕು... ಈಗ ತಾನು ಅರಶಿನ ಕುಂಕುಮದೊಡನೆ ಸಾಯಲು ಹೊರಟಿದ್ದಾಳೆ...ಪ್ರಪಂಚದ ದೃಷ್ಟಿಯಲ್ಲಿ ಕನ್ಯೆಯಾಗಿ ಸಾಯುತ್ತಾಳೆ. ತನ್ನ ಅಂತರಾತ್ಮಕ್ಕೆ ಗೊತ್ತು... ತಾನು ಮುತ್ತೈದೆಯಾಗಿ ಸಾಯುತ್ತಿರುವಳೆಂದು ಸಾಯಲು ಸಿದ್ಧಳಾಗಿರುವ ತಾನು ಇನ್ನು ಅಳಬಾರದು ನಗುತ್ತಾ ಇರಬೇಕು. ನಾಳೇನೇ ತನ್ನ ಅಂತಿಮ ಯಾತ್ರೆ...ಒಂದು ದಿನ ಒಂದೇ ಒಂದು ದಿನ ತಾನೀ ಪ್ರಪಂಚದಲ್ಲಿರುತ್ತಾಳೆ. ಅದಕ್ಕೆ ನಗಬೇಕು ಚೆನ್ನಾಗಿ ನಗಬೇಕು..ತನ್ನ ಸಂತೋಷವನ್ನು ನೋಡಿ ತಾನೇ ಅಸೂಯೆಪಡೋಷ್ಟು ನಗಬೇಕು. ನಗುನಗುತ್ತಾ ಯಮನನ್ನು ಅಪ್ಪಿ ಚುಂಬಿಸಬೇಕು—ನಗು— ಸಂತೋಷ. ಹೌದು...ಇನ್ನು ತನ್ನ ಒಂದು ದಿನದ ಜೀವನದಲ್ಲಿ ದುಃಖಕ್ಕೆ ಎಡೆ ಇಲ್ಲ.

ಏನೂ ಇಲ್ಲ. ಅಕ್ಕನೊಡನೆ ತೃಪ್ತಿಯಿಂದ ಹರಟಬೇಕು...ಮುಂಚಿನಂತೆಯೇ ತುಂಟತನವಾಗಿ ಮಾತಾಡಬೇಕು... ಈ ಒಂದೇ ಒಂದು ದಿನ ಅಕ್ಕನಿಗೆ ತಂಗಿಯಾಗಿ ಬಾಳಬೇಕು..ಅಕ್ಕ ಚೆನ್ನಾಗಿ ಬಾಳಲಿ, ಸಾಯುವುದಕ್ಕೆ ಮುಂಚೆ ಭಾವನೊಡನೆ ಐದು ನಿಮಿಷ ಮಾತು. ನಂತರ...

ನಗುತ್ತಾ ಬೇರೆಯಾಗಬೇಕು

ಭಾವನಿಂದ ತಿರಸ್ಕೃತಳಾದರೇ...ಅಳು... ಇಲ್ಲ

ಆಗಲೂ ಅಳಬಾರದು ನಗಬೇಕು..

"ಅಯ್ಯೋ! ಹೇಡೀ!!'' ಎಂದು ಟೀಯ್ಯಾಳಿಸಿ ನಗುತ್ತಾ ಹೊರಟು ಹೋಗಬೇಕು

ಭಾವ ಸ್ವೀಕರಿಸಿದರೇ...

"ನಾನೇ ಪುಣ್ಯವತಿ'' ಎಂದು ನಗುತ್ತಾ ಹೆಜ್ಜೆ ಹಾಕಬೇಕು. .

ಹೂಂ .ನಗು..ಪಾರ್ವತೀ..ನಗೂ..

ಗಟ್ಟಿಯಾಗಿ ನಕ್ಕಳು ಪಾರ್ವತಿ. ಅವಳ ನಗುವಿನ ಅಲೆ ಸುನಂದಳ ಕಿವಿಗಳಿಗೆ ತಾಕಿತು. ಎಷ್ಟೋ ದಿನಗಳ ನಂತರ ತಂಗಿಯ ನಗು ಕೇಳಿ ಅವಳಿಗೆ ಆಶ್ಚರ್ಯ, ಆನಂದ ಆಯ್ತು. ನಿಜವಾಗ್ಲೂ ಪಾರು ವಿಚಿತ್ರ ಹುಡುಗಿ ಬಂದಾಗ ಸಂತೋಷದ ಚಿಲುಮೆಯಾಗಿದ್ದಳು, ನಂತರ ಇದ್ದಕ್ಕಿದ್ದಂತೆ ಶೋಕದೇವತೆಯಾದಳು. ಈಗ ಮತ್ತೆ ಮುಂಚಿನ ಹಾಗೆ ನಗಲು ಆರಂಭಿಸಿದ್ದಾಳೆ.

"ಏನಕ್ಕಾ ಯೋಚ್ನೇ? ಭಾವ ಬಂದುಬಿಡ್ತಾರೆ ಯೋಚನೇ ಮಾಡಬೇಡ"

ಕಾಫೀ ತಗೊಂಡು ಬಂದ ಪಾರ್ವತಿ ತುಂಟತನವಾಗಿ ಅಂದಳು.

ಸುನಂದ ತೃಪ್ತಿಯಿಂದ ತಂಗಿಯನ್ನು ನೋಡಿ

''ಈಗ ನೀನು ನನ್ನ ತಂಗಿ''

"ಯಾಕೇ! ಇಷ್ಟು ದಿವಸ ಯಾರ ತಂಗಿಯಾಗಿದ್ದೆ?"

''ಶೋಕದೇವತೆಯ ಮುದ್ದಿನ ತಂಗಿಯಾಗಿದ್ದೆ ''

ಸುನಂದ ಕಾಫಿಯನ್ನು ಚಪ್ಪರಿಸಿ ಕುಡಿಯುತ್ತಾ

''ಕಾಫೀ ಎ-ಒನ್–ಇವತ್ತು ಕಾಫೀ ತುಂಬಾ ರುಚಿಯಾಗಿದೆ'' ಸುನಂದ ಹೇಳಿದಳು.

ತುಂಟುತನವಾಗಿ ನಕ್ಕಳು ಪಾರ್ವತಿ.

''ಹಾಗಾದ್ರೇ ಬಹುಮಾನ ಕೊಡು''

''ಏನು ಬೇಕು ಕೇಳು ಕೊಡ್ತೀನೀ''

''ಹಾಗೆಲ್ಲಾ ಮಾತು ಕೊಡಬೇಡ..ಬಲಿ ವಾಮನನಿಗೆ ವಚನ ಕೊಟ್ಟು ಪಾತಳಕ್ಕೆ ಹೋದ''

''ಪಾತಾಳಕ್ಕೆ ಹೋದ್ದರಿಂದ ಬಲಿಗೇನೂ ನಷ್ಟವಾಗಲಿಲ್ಲ...ನಿತ್ಯ ದೇವದರ್ಶನ ಮಾಡಿಕೊಂಡು ಹಾಯಾಗಿದ್ದ ಆ ಭಾಗ್ಯ ನನಗೆ ಸಿಗುತ್ತ್ಯೆ?''

''ಹಾಗಾದ್ರೇ ನನಗೆ ಒಂದು ಮಾತು ಕೊಡು... ನನ್ನನ್ನ ಎಂದೆಂದಿಗೂ ದ್ವೇಷಿಸೋದಿಲ್ಲಾ, ಅಸಹ್ಯ ಪಡೋದಿಲ್ಲಾಂತ...ಪ್ರಮಾಣ ಮಾಡು''

"ಛೀ! ಹುಚ್ಚಿ... ಮಗುವನ್ನು ಯಾರಾದ್ರೂ ದ್ವೇಷಿಸುತ್ತಾರ್ಯೇ? ಅದರ ಮುದ್ದು ಮಾತುಗಳನ್ನು ಅಸಹ್ಯಿಸಿಕೊಳ್ಳುತ್ತಾರೆಯೇ... ಹೋಗೋಗು ನೀನು ನಿಜವಾಗ್ಲೂ ಹುಚ್ಚೀನೆ "

"ಹೇಳಕ್ಕಾ! ನಾನು ಎಲ್ಲಿದ್ರೂ ಹೇಗಿದ್ರೂ ಕೋಪಿಸಿಕೊಳ್ಳೋದಿಲ್ಲ, ಕ್ಷಮಿಸ್ತೀನೀಂತ ಒಂದು ಸಾರಿ ಹೇಳಕ್ಕಾ" ಪಾರ್ವತಿ ಪ್ರಾರ್ಥಿಸಿಕೊಂಡಳು.

"ಪಾರೂ! ನೀನು ವಿಚಿತ್ರದ ಹುಡುಗಿ...ನಿನ್ನ ಮಾತುಗಳು ನನಗೆ ಅರ್ಥವಾಗೋದೇ ಇಲ್ಲ...ಆದರೂ ಒಂದು ಮಾತ್ರ ನಿಜ ಹೇಳ್ತೀನಿ. ಇಂದಿನಂತೆ ಎಂದೆಂದಿಗೂ ನಿನ್ನ ಮೇಲೆ ನನ್ನ ಪ್ರೇಮ ಹೀಗೇ ಇರುತ್ತೇ. ಕಿಂಚಿತ್ತೂ ಕಡಿಮೆ ಆಗೋದಿಲ್ಲ... ಪ್ರೇಮವಿದ್ದ ಕಡೆ ದ್ವೇಷ ಇರೋಲ್ಲ ಅಲ್ಲವೇ?"

"ಅಕ್ಕಾ" ಪಾರ್ವತಿ ಸುನಂದಳನ್ನು ತಬ್ಬಿ ಮುದ್ದಿಟ್ಟಳು.

"ಛೀ!... ಕಳ್ಳೀ... ಈಗಲಿಂದ ಅಭ್ಯಾಸವೇ?"

"ಅಕ್ಕಾ ನೀನು ಏನು ಹೇಳಿದ್ರೂ ನಾನು ನಾಚಿಕೊಳ್ಳೋದಿಲ್ಲ.... ನಾಚಿಗೇನೆಲ್ಲಾ ಗಂಟುಕಟ್ಟಿ ಕಾವೇರೀಲಿ ಹಾಕಿಬಿಟ್ಟೆ."

"ಹೆಂಗಸರು ನಾಚಿಗೇನ ಕಮ್ಮಿಮಾಡ್ಕೋಳ್ಳೋದು ಯಾವಾಗ ಗೊತ್ತೇ?"

''ಯಾವಾಗ?"

"ಒಂದು ಮಗುವಿನ ತಾಯಿಯಾದಾಗ"

"ನಾನೂ ಆಗಿದ್ದೀನಲ್ಲಾ"

''ಛೀ!... ಕೆಟ್ಟ ಹುಡುಗಿ... ಏನು ಮಾತೇ ಅದು''

"ಹೌದಕ್ಕಾ! ನಿನ್ನ ಮಗಳು ನನ್ನ ಮಗಳಲ್ಲವೇನು?"

"ಸದ್ಯ ಸುಮ್ಮನಿರು... ತಮಾಷೆಯಾಗಿ ಅಕ್ಕನ ಗಂಡನ ಹತ್ರ ಮಾತಾಡಿದರೇನೇ... ಏನೇನೋ ಹೇಳ್ತಾರೆ ಕೆಟ್ಟ ಜನ. ನೀನೇನಾದ್ರೂ ನನಗೆ ಮಗಳಿದ್ದಾಳೇಂತ ಹೇಳ್ಬಿಟ್ರೆ ಮುಗೀತು...ನಿನ್ನ ಕುಂತೀ ಅಂತ ಹೇಳ್ಬಿಡ್ತಾರೆ.''

ಪಾರ್ವತಿ ಹೃದಯ ಸಿಡಿದಂತಾಯ್ತು.

ಕುಂತೀ... ...ತಾನು ..

ತನ್ನ ಅಚಾತುರ್ಯ ಅವಸರದ ಫಲವಾಗಿ ಪಡೆದ ಮಗುವನ್ನು ನೀರಿನ ಪಾಲು ಮಾಡುತ್ತಾಳೆ... ಅದರೆ ಕುಂತಿಗಿಲ್ಲದ ಧೈರ್ಯ ತನಗಿದೆ.

ಅವಳು ಸಾಯಲಿಲ್ಲ ತನ್ನ ಮಗುವಿನೊಡನೆ ತಾನು ಸಾಯುತ್ತಾಳೆ.

ಮಗುವನ್ನು ಹೊಟ್ಟೆಯಲ್ಲಿ ಬಚ್ಚಿಟ್ಟುಕೊಂಡು ಸಾಯುತ್ತಾಳೆ. ಒಂದು ವಿಚಾರದಲ್ಲಿ ಕುಂತೀದೇವಿಗಿದ್ದ ಮನೋಸ್ಥೈರ್ಯ ಧೈರ್ಯ, ತನಗಿಲ್ಲ.

ಅವಳು ತಾಯಿಯಾದ ನಂತರ ವಧುವಾಗೇ ಗಂಡನ ಮನೆಗೆ ಹೋದಳು... ಅವನೊಡನೆ ಬಾಳಿದಳು. ಅವನ ಅನುಮತಿಯಿಂದ [illegible] ಳನ್ನು ಪಡೆದಳು. ಮಕ್ಕಳ ತಾಯಿಯಾದರೂ ಕೈ ಹಿಡಿದ ಗಂಡನ ಮೇಲೆ ಅವಳಿಗೆ ಪ್ರೀತಿ ಇತ್ತು.

ಆದರೇ... ...

ತನಗಾ ಧೈರ್ಯವಿಲ್ಲ... ತಾನು ತಾಯಿಯಾಗಿದ್ದಾಳೆ, ತಾಯಿಯಾಗಿಯೇ ಸಾಯುತ್ತಾಳೆ. ತಾಯಿ ಆಗುವುದಕ್ಕಿದ್ದ ಧೈರ್ಯ... ಮತ್ತೆ 'ವಧು'ವಾಗುವುದಕ್ಕೆ ಇಲ್ಲ.

'ವಧು'ವಿನ ವೇಷ ಧರಿಸದೆಯೇ ತನ್ನ ಜೀವನ ನಾಟಕ ಮುಗಿಯುತ್ತದೆ... ಕಡೆಯ ಅಂಕವಿದು. ಅಂಕದ ತೆರೆದ ಜಾರುವುದಕ್ಕೆ ಮುಂಚೆ ಪ್ರೇಕ್ಷಕಳಾದ ಅಕ್ಕನ ಮುಂದೆ ನಲಿಯಬೇಕು. ಅವಳನ್ನು... ಸಂತೋಷ ಪಡಿಸಿ., ತಾನು ರಂಗಸ್ಥಳದಿಂದ ಓಡಿ ಹೋಗಬೇಕು;, ಅಕ್ಕನ ಜೀವನದ ನಾಯಕ ತನ್ನೊಡನೆ ನಟಿಸಿದ್ದಕ್ಕಾಗಿ ಅವನಿಗೆ ಕೃತಜ್ಞತೆ ಸಲ್ಲಿಸಿ ಮರೆಯಾಗಬೇಕು.

"ಏನೇ ಅದು ಯೋಚನೇ?"

"ಸಂಜೇನಕ್ಕಾ ಯೋಚನೇ! ನಿರಾಲೋಚನೆ" ಪಾರ್ವತಿ ಕಾಫಿ ಕಪ್ಪು ತಗೊಂಡು ತಿಂತಿರುಗಿದಾಗ ಒಂದು ಕ್ಷಣ ಸ್ತಂಬಿಸಿ ಹೋದಳು.. ಅಲ್ಲಿ...

ಭಾವ ನಿಂತಿದ್ದ ಕೈಯಲ್ಲಿ ಹೂವಿನ ಚಂಡು ಮತ್ತೊಂದು ಕೈಯಲ್ಲಿ ಸಿಹಿ ತಿಂಡಿ.

ಪಾರ್ವತಿಯನ್ನು ಹಠಾತ್ತಾಗಿ ನೋಡಿದಾಗ ಒಂದು ನಿಮಿಷ ಸಂತೋಷ ಮುಖದಲ್ಲಿ ಮಿನುಗಿತು. ಮರುಕ್ಷಣ ಅದು ಮಾಯವಾಯ್ತು.

ಪಾರ್ವತಿ ಚೇತರಿಸಿಕೊಂಡು ನಕ್ಕಳು— ಅವನಿಗೆ ಆಶ್ಚರ್ಯವಾಯಿತು...

ತನ್ನನ್ನು ನೋಡಿದ ತಕ್ಷಣ ಮಾತಾಡದೆ ಮೌನಿಯಾಗಿ ತಲೆಬಾಗಿ ಹೊರಟು ಹೋಗುವ ಪಾರ್ವತಿ, ಇಂದು ತನ್ನನ್ನು ನೋಡಿ ನಗುತ್ತಿದ್ದಾಳೆ, ತಾನು ಮಾಡಿದ ಅಪರಾಧವನ್ನು ಕ್ಷಮಿಸಿಬಿಟ್ಟಳೇ! ಅವಳ ತಂದೆ ನೋಡಿದ ವರನನ್ನು ಕೈ ಹಿಡಿಯಲು ತಯಾರಾಗಿಬಿಟ್ಟಳೇ!! ಹೊಸ ಜಗತ್ತಿಗೆ ಭಾವೀ ಪತಿಯೊಡನೆ ಉಲ್ಲಾಸ ಪ್ರಯಾಣ ಹೋಗಲು ಸಿದ್ಧಳಾದಳೇ!!!

ಈಗ ಅವಳ ಮುಖದಲ್ಲಿ ಶೋಕವಿಲ್ಲ, ಕಣ್ಣಲ್ಲಿ ದುಃಖಾಶ್ರುವಿಲ್ಲ ಅದಕ್ಕೆ ಬದಲಾಗಿ...

ಮುಖದಲ್ಲಿ ಸಂತೋಷ...

ತುಟಿಗಳಲ್ಲಿ ಕಿರುನಗೆ...

[illegible] ತನ....

ಹೌದು... ಈ ಪಾರ್ವತಿ... ಅಂದಿನ ಪಾರ್ವತಿ... ತಾನು ಸ್ಟೇಷನ್‌ನಲ್ಲಿ ನೋಡಿದ ಪಾರ್ವತಿ... ಮನೆಯಲ್ಲಿ ಅಕ್ಕನೊಡನೆ ಮಾತಾಡುತ್ತಾ ಮಾತಿಗೊಮ್ಮೆ ಕಿಲ ಕಿಲ ನಗುವ ಪಾರ್ವತಿ.

ಪಾರ್ವತಿ ಗಟ್ಟಿಯಾಗಿ ನಕ್ಕಳು.

"ಏನು ಭಾವಾವ್ರೇ! ಶಿಲೆಯಾಗಿ ನಿಂತುಬಿಟ್ರಲ್ಲ ಏನು ವಿಚಾರ!"

ತಬ್ಬಿಬ್ಬಾದ ಸುಂದರ

"ಇಲ್ಲ...ಇಲ್ಲ...ಏನೋ ಯೋಚನೆ ?"

"ಏನು ಯೋಚನೆ ಮಹಾಸ್ವಾಮಿ ತಮಗೆ... ಯಾರನ್ನು ಉದ್ಧಾರ ಮಾಡೋಣ.... ಯಾರಿಗೆ ಕೈ ಕೊಡೋಣ ಅಂತ ಯೋಚನೆ ಏನೋ!... "

ಮತ್ತೆ ನಗು...

ಮುಳ್ಳಿನಿಂದ ಚುಚ್ಚಿದಂತಾಯ್ತು ಸುಂದರನಿಗೆ...

ಹಾಗಾದ್ರೇ ಇವಳು ತನ್ನನ್ನು ಕ್ಷಮಿಸಿಲ್ಲ...

ಸುನಂದ ನಗುತ್ತಾ ಹೇಳಿದಳು.

"ನಿನ್ನ ಮದುವೆ ವಿಚಾರ ಯೋಚನೆ ಮಾಡ್ತಾ

ಇಪ್ಪಾರೆ ಜಾರೀ! ಅದೂ ಅಲ್ಲದೇ..." ಸುನಂದ ತಡೆದಳು....

"ಅಯ್ಯೋ...ಬೇಡಾಕ್ಕಾ! ನಿನ್ನ ಗಂಡನಿಗೆ ನನ್ನ ವಿಚಾರದಲ್ಲಿ ಅಷ್ಟು ಯೋಚನೆ ಮಾಡಬೇಡಾಂತ ಹೇಳು... ನನ್ನ ವಿಚಾರ ನಾನು ನೋಡ್ಕೋಬಲ್ಲೆ..." ಅಲ್ಲಿಂದ ನಗು ನಗುತ್ತಾ ಹೊರಟು ಹೋದಳು... ಅವಳ ನಗುವಿನ ಹಿಂದೆ ಅಳು ತುಂಬಿತ್ತು... ಮಾತಿನ ಹಿಂದೆ ಯಾತನೆ ತುಂಬಿತ್ತು.

ನೋಟದ ಹಿಂದೆ ನೋವು ತುಂಬಿತ್ತು. ನಗುತ್ತಾ ಹೋದ ತಂಗಿಯನ್ನು ನೋಡಿ ಸುನಂದ ಸಂತೋಷದಿಂದ ಅಂದಳು.

"ಈ ದಿನ ಪಾರ್ವತಿಯಲ್ಲಿ ಬದಲಾವಣೆ ಆಗಿದೆ... ಅಲ್ಲವೇ!"

ಹಲ್ಲು ಬಿಚ್ಚುತ್ತಾ—

"ಹೂಂ" ಗುಟ್ಟಿದ ಸುಂದರ.

"ಅವಳ ನಗುಮುಖ ನೋಡಿ ಎಷ್ಟು ದಿನಗಳಾಗಿತ್ತು ಅಲ್ಲವೆ?"

"ಹೂಂ."

"ಏನೋ—ಮಂಕು ಕವಿದ ಹಾಗೆ ಇದ್ದಳು ಇಷ್ಟು ದಿನ"

"ಹೂಂ"

ಸುನಂದ ಗಂಡನನ್ನು ಆಶ್ಚರ್ಯದಿಂದ ನೋಡಿದಳು.

"ನೀವೇಕೆ ಹೇಗೋ ಇದ್ದೀರಿ! ಮತ್ತೆ ರಾಮು—ಶಶಿಯರ ವಿಷಯ ಏನಾದ್ರೂ ತಿಳಿಯಿತೇನೂ?"

ಬೆಚ್ಚಿ ಹೇಳಿದ.

"ಇಲ್ಲ—ಇಲ್ಲ ರಾಮೂನ ಭಾಗಕ್ಕೆ ಶಶಿ ಇನ್ನಿಲ್ಲ. ಈಗ ಅವನ ಹೆಂಡತಿಯೊಡನೆ ಇದ್ದಾನೆ". ತೃಪ್ತಿಯಿಂದ ಹೇಳಿದಳು. "ಅವನು ಒಳ್ಳೇ ಗಂಡ...ಆದರೆ... ಪಾಪ.., ಶಶಿ ಏನಾದಳೋ?"

"ಏನೋ ಗೊತ್ತಿಲ್ಲ."

ಕಣ್ಣಲ್ಲಿ ತುಂಬಿದ ನೀರನ್ನು ಮರೆಮಾಚಲು ಅವನು ಸ್ನಾನದ ಮನೆಗೆ ಹೊರಟ...

ಊಟ ಬಡಿಸುವಾಗ ಭಾವನನ್ನು ರೇಗಿಸಿದಳು. ಬಿಸಿ ಸಾರು ಅವನ ಕೈ ಮೇಲೆ ಹಾಕಿ ಅವನು ಬೆಚ್ಚಿದಾಗ ಕಿಲ-ಕಿಲ ನಕ್ಕಳು. ಅಕ್ಕನನ್ನು ಛುಡಾಯಿಸಿದಳು. ಓಹ್, ಅವಳ ಆನಂದ ಹೇಳತೀರದು. ಅವಳ ನಗುವಿನಿಂದ ಮನೆ ಬೆಳಗಿತು. ವಿಳ್ಯದೆಲೆ ಮಡಿಸಿ ಭಾವನಿಗೆ ಕೊಟ್ಟಳು.

ಆಗ ಒಂದು ಕ್ಷಣ ಮಾತ್ರ ಅವಳ ಕೈ ನಡುಗಿತು. ಆ ಮಧುರ ರಾತ್ರಿ...

ಸಿಹಿಯ ನೆನಪು ಮರುಕಳಿಸಿ ಮೈ ಜುಂ—ಎಂದಿತು. ಮರುಕ್ಷಣ ನಕ್ಕು,

"ಭಾವಾ ನಿಮ್ಮ ಯೋಚನೆಯ ಹಕ್ಕಿ ಮುಂದಕ್ಕೆ ಹಾರುತ್ತಿದೆಯೋ ಹಿಂದಕ್ಕೆ ಹಾರುತ್ತಿದೆಯೋ ಹೇಳ್ತೀರಾ... ಹಿಂದೆ ನಡೆದದ್ದು ಮರೆತು ಬಿಡಿ ಮುಂದೆ ನಡಿಯೋ ವಿಚಾರಕ್ಕೆ ಅವಸರ ಬೇಡ. ಮಗುವಿಗೆ ಕನಿಷ್ಟ ಪಕ್ಷ ೯ ತಿಂಗಳು ತುಂಬಬೇಕು"

ಅಂದಾಗ ಸುನಂದ ನಾಚಿಕೆಯಿಂದ ಕೆಂಪಾದಳು. ಕೃತಕ ಕೋಪದಿಂದ ತಂಗಿಯನ್ನು ಗದರಿಸಿದಳು.

"ಥೂ!.. ಪೋಕರಿ ...ಹೋಗ್ತೀಯಾ ಅಥವಾ ಪೊರಕೆಯಿಂದ ಏಟು ತಿನ್ನಲೀ?"

"ಬೇಡಾ ತಾಯೀ! ನಿನ್ನ ಹತ್ರ ತಳ್ಳಿಸಿಕೊಂಡು ನಾನು ಹೋಗೋದಿಲ್ಲ. ಅದಕ್ಕೆ ಮುಂಚೇನೇ ಟಾ! ಟಾ!! ಹೇಳ್ತೀನಿ... ಸ್ವಲ್ಪ ಸಮಯ ಕಾಯಬೇಕು ಅಮ್ಮಾವ್ರೇ ಆಮೇಲೆ ತಮ್ಮದೇ ರಾಜ್ಯ. ಶ್ರೀಮಾನ್ ಸುಂದರರಾವ ರಾಜ... ತಾವು ರಾಣಿ.."

"ತಾವು!"

"ಜೋಕರ್! ಸಮಯಕ್ಕೆ ಉಪಯೋಗಿಸ್ಕೋಬಹುದು ಅಲ್ಲವೆ! ಭಾವಾ!"

"ನೀನು ಮಾತುಗಾತಿ"

"ಹೂಂ!...ಆದರೇ ಛಲಗಾತಿ ಅಲ್ಲ". ಸುಂದರ ಪೆಚ್ಚಾದ

"ಅಕ್ಕಾ! ನೀನು ಮಲಗು ನಾನು ಸ್ವಲ್ಪ ಪಕ್ಕದ ಮನೆಗೆ ಹೋಗಿ ಹೊಸ ಎಂಬ್ರಾಯ್ಡರಿ ಕಲಿತುಕೊಂಡು ಬರ್ತೀನಿ."

ಪಾರ್ವತಿ ಪುಟ್ಟ ಹೊಲಿಗೆ ಡಬ್ಬಿ ತೆಗೆದುಕೊಂಡು ಪಕ್ಕದ ಮನೆಗೆ ನಡೆಯುತ್ತಾ ಗಡಿಯಾರ ನೋಡಿದಳು ಘಂಟೆ ಮೂರಾಗಿತ್ತು.

## ಅನ್ನಮಂತ್ರಿಯ ಪ್ರಕಟನೆ



ನಿಮಗಿರಲಿ ಕೋಳಿ ಸಾಕಣೆಯ ಹವ್ಯಾಸ.
ಸರಿಯಾಗಿ ಹೊಂದುವುದು ಜೀವನದ ಪ್ರಾಸ.
ನಿತ್ಯವೂ ತಿನಬಹುದು ಎಳೆಂಟು ಮೊಟ್ಟೆ.
ಅಕ್ಕಿ ಸಿಗದಿದ್ದರೂ ತುಂಬುವುದು ಹೊಟ್ಟೆ.

—ದಿನಕರ ದೇಸಾಯಿ

ಸುಂದರಗೆ ಪಾರ್ವತಿಯ ವರ್ತನೆ ಅರ್ಥವಾಗದ ಪ್ರಶ್ನೆಯಾಗಿತ್ತು. ಇದ್ದಕ್ಕಿದ್ದಂತೆ ಇವಳಿಗೇಕಿಷ್ಟು ಸಂತೋಷ, ಉತ್ಸಾಹ, ನಗು ..ನಿನ್ನೆಯ ದಿನದ ವರೆಗೂ ಶೋಕದೇವತೆಯಾಗಿದ್ದಳು... ಇಂದು...

ಆನಂದ ಸಾಮ್ರಾಜ್ಯದ ರಾಣಿಯಾಗಿದ್ದಾಳೆ.

ನಗುವಿನ ಕಾರಂಜಿ ಆಗಿದ್ದಾಳೆ.

ಸಂತೋಷದ ಚಲುವೆಯಾಗಿದ್ದಾಳೆ.

ತನ್ನ ಮನಸ್ಸಿನಿಂದ ದೊಡ್ಡ ಹೊರೆ ಇಳಿದಂತಾಗುತ್ತದೆ.

ಅವಳು ಊರಿಗೆ ಹೋದರೇನೇ ಕ್ಷೇಮ, ಅವಳು ತನ್ನನ್ನು ಮರೆಯಬಲ್ಲಳು...ತಾನು ಮಾಡಿದ ನೀಚ ಕೆಲಸವನ್ನು ಕ್ಷಮಿಸಬಲ್ಲಳು.

ತಾನು ಸದಾ ನೆಮ್ಮದಿಯಿಂದ ಇರಬಹುದು. ಅವಳು ತನ್ನ ಮುಂದೆ ಸುಳಿಯುತ್ತಿದ್ದರೇ...ತಾನವಳಿಗೆ ಮಾಡಿದ ದ್ರೋಹದ ನೆನಪು ತಿವಿಯುತ್ತದೆ... ಅವಳ ದುಃಖ ನೋಡಿ, ತನ್ನ ಕರಳು ಕತ್ತರಿಸುತ್ತದೆ, ಎಂದಾದ್ರೂ...ಒಂದು ದಿನ ಅವಳ ದುಃಖ ನೋಡಲಾರದೆ ತಾನು ಸುನಂದಳ ಬಳಿ ನಿಜ ಹೇಳಿಬಿಟ್ಟರೆ....ಸುನಂದ ತನ್ನ ಬಾಳಿಂದ ಹೊರಟು ಹೋಗುತ್ತಾಳೆ...

ಅಯ್ಯೊ....ಅಬ್ಬಾ!...ಸುನಂದಳ ಸಾವು... ಆ ಮಾತು ನೆನೆದರೇನೇ ಅವಳ ಮೈ ಕಂಪಿಸಿತು... ಬೆದರಿದವನಂತೆ ಸುನಂದಳ ಕಡೆ ನೋಡಿದ. ಅವಳು ಶಾಂತವಾಗಿ ನಿದ್ರಿಸುತ್ತಿದ್ದಳು.

ಸದ್ಯ ಪಾರ್ವತಿ ತಂದೆಯ ಮನೆಗೆ ಆದಷ್ಟು ಬೇಗ ಹೊರಟುಹೊದರೆ ಸಾಕು...ಇಬ್ಬರಿಗೂ ಕ್ಷೇಮ.... ತಾನು ಹೆಂಡತಿಯೊಡನೆ ಸುಖವಾಗಿರಬಹುದು. ಅವಳೂ ಗಂಡನ ಮನೆಗೆ ಹೋಗಿ ಸಂತೋಷವಾಗಿರಬಹುದು.

ಸುಂದರ ಮೆಲ್ಲನೆ ಎದ್ದು ಸುನಂದಳಿಗೆ ಹೊದ್ದಿಸಿ ಮನೆಯ ಹಿಂಭಾಗಕ್ಕೆ ಹೋಗಿ, ಮಲ್ಲಿಗೇ ಚಪ್ಪರದ ಕೆಳಗೆ ಕುಳಿತು, ಕಾದಂಬರಿ ಓದಲು ಆರಂಭಿಸಿದ. ಹೆಜ್ಜೆ ಸದ್ದು ಕೇಳಿ ಸುಂದರ ಕೇಳಿದ.

"ಸುನೀ, ಯಾಕೆ ರಾಜ ಎದ್ದುಬಂದೆ, ನಿದ್ದೆ ಬರಲಿಲ್ಲವೆ ?"

"ನಾನು, ಪಾರ್ವತಿ."

ಭಯದಿಂದ ತಿರುಗಿ ನೋಡಿದ. ಪಾರ್ವತಿ ನಿಂತಿದ್ದಳು. ಈಗ ಅವಳ ಮುಖದಲ್ಲಿ ನಗುವಿರಲಿಲ್ಲ. ತುಂಟತನವಿರಲಿಲ್ಲ. ಮಾತಿನಲ್ಲಿ ಮೃದುತ್ವವಿರಲಿಲ್ಲ. ಅವಳ ಮುಖ ಕಲ್ಲಿನಂತೆ ಭಾವರಹಿತವಾಗಿತ್ತು. ಕಣ್ಣಿನಲ್ಲಿ ದೃಢತೆ ಎದ್ದುಕಾಣುತ್ತಿತ್ತು. ಅನ್ಯಾಯಕ್ಕೆ ಶಿಕ್ಷೆ ವಿಧಿಸಲು ಬಂದ ನ್ಯಾಯದೇವತೆಯಂತೆ ನಿಂತಿದ್ದಳು ಅವಳು. ಸುಂದರ ಏಕೋ ಅವಳ ರೂಪವನ್ನು ನೋಡಿ ನಡುಗಿದ.

"ಏನು ಪಾರ್ವತಿ ! ಏನು ಬೇಕು ?"

"ನ್ಯಾಯ ಬೇಕು"

"ಅಂದ್ರೇ"

"ನ್ಯಾಯಕ್ಕೆ ಅರ್ಥ ಗೊತ್ತಿಲ್ವೇ ಭಾವಾ? ಅನ್ಯಾಯದ ಪರಿಚಯ ಮಾತ್ರ ಇದೆ ಅಲ್ಲವೆ ನಿನಗೆ?"

ಸುಂದರ ಸುಮ್ಮನೇ ಕುಳಿತಿದ್ದ.

"ಭಾವಾ! ಈ ದಿನ ನಾನು ನಿನ್ನ ಪ್ರೇಯಸಿಯಂತೆ ಬಂದಿಲ್ಲ. ದುಷ್ಯಂತನ ಬಳಿ ಬಂದ ಶಕುಂತಲೆಯ ಹಾಗೆ ಬಂದಿದ್ದೇನೆ. ನೀನೂ ಅವನಂತೆ ತಿರಸ್ಕರಿಸಿ ಅವಮಾನ ಮಾಡ್ತೀಯಾ ಭಾವಾ ! ..."

"ನಿನ್ನ ಮಾತು ಅರ್ಥವಾಗಲಿಲ್ಲ ಪಾರೂ!"

"ಭಾವಾ ! ನಾನೀಗ ಶಕುಂತಲೆಯ ಸ್ಥಿತಿಯಲ್ಲಿಯೇ ಇದ್ದೇನೆ."

"ಅಂದರೆ? "

"ನೀನು ಒಂದು ರಾತ್ರಿ ನನಗೆ ಪ್ರೇಮದಿಂದ ಗುಪ್ತವಾಗಿ ಕೊಟ್ಟ ಕಾಣಿಕೆ... ಪಾಪದ ಬಳ್ಳಿ ಬೆಳೆದ ಹಾಗೆ ನನ್ನ ಗರ್ಭದಲ್ಲಿ ಬೆಳೀತಾ ಇದೆ." ವೇದನೆಯೊ ಅವಮಾನವೊ... ಇರಲಿಲ್ಲ ಅವಳ ಮಾತಿನಲ್ಲಿ. ಅಷ್ಟು ಸಹಜತೆ ಇತ್ತು ಅವಳ ಧ್ವನಿಯಲ್ಲಿ.

ಅಗ್ನಿಪರ್ವತ ಸಿಡಿಯಿತೇ! ಹಿಮಾಲಯದ ಶಿಖರ ಜಾರಿ ತನ್ನ ಮೇಲೆ ಬಿತ್ತೇ! ಕಾಲಡಿಯಲ್ಲಿ ಇದ್ದ ಭೂಮಿ ಬಿರುಕು ಬಿಟ್ಟಿತೇ! ಉಸಿರು ಕಟ್ಟಿದಂತಾಯಿತು ಸುಂದರನಿಗೆ.

ಮೈ ಬೆವರಿತು, ತುಟಿಗಳು ಒಣಗಿತು, ಮುಖ ಕಪ್ಪಾಯ್ತು.

"ನೀನು ಗರ್ಭಿಣಿ..." ಮಾತು ತುಂಬ ತಪ್ಪ ರಿಂದ ಹೊರಬಂತು.

ಪಾರ್ವತಿ ನಕ್ಕಳು. ಆಶ್ಚರ್ಯದಿಂದ ನೋಡಿದ ಸುಂದರ.

"ಹೌದು... ತಾಯಿಯಾದ ನಾನು ಇಷ್ಟು ನಡುಗಿ ಹೋಗಲಿಲ್ಲ, ಆದರೆ ತಾಯಿಯನ್ನಾಗಿ ಮಾಡಿದ ನೀನು ಭಯಪಡ್ತಾ ಇದ್ದೀಯಲ್ಲಾ... ವಿಚಿತ್ರ ಪ್ರಪಂಚ ಭಾವಾ! ಅಪರಾಧ ಮಾಡಿದವನು ನಿಶ್ಚಿಂತೆ-ಯಿಂದ ಇರುತ್ತಾನೆ. ಆದ್ರೇ ನಿರಪರಾಧಿ ಶಿಕ್ಷೆ ಅನುಭವಿಸುತ್ತಾಳೆ."

"ಅದ್ರೇ... ನಾನು ನಿರಪರಾಧಿ ಅಲ್ಲ, ಅಪ-ರಾಧಿ. ನನ್ನನ್ನು ದೇವರೂ ಕ್ಷಮಿಸೋದಿಲ್ಲ."

"ಅದರಲ್ಲಿ ನನ್ನ ಭಾಗವೂ ಇದೆ. ಅಪರಾಧ ಮಾಡಲು ಪ್ರೋತ್ಸಾಹಿಸಿದ್ದು ನಾನು ... ಅದಕ್ಕೆ ಶಿಕ್ಷೆ ಅಧಿಕ, ನಿನಗೆ ಗೊತ್ತಿಲ್ವೇ ಭಾವಾ!" ನಗುತ್ತ ಅಂದಳು ಪಾರ್ವತಿ.

"ಪಾರ್ವತೀ! ನೀನು ದೇವತೆ. ಮಾಡಿದ ಪಾಪ ವನ್ನು ಮರೆಯುವುದು ಮನುಷ್ಯ ಸ್ವಭಾವ, ಕ್ಷಮಿ-ಸೋದು ದೇವಗುಣ... ನೀನು ಸುಖವಾಗಿ ಬಾಳು ಪಾರ್ವತಿ. ದೇವರು ನಿನಗೆ ಒಳ್ಳೆಯ ಬಾಳನ್ನು ಬಾಳಲಿ."

"ದೇವರು ನನಗೆ ಬಾಳು ಕೊಡಲಾರ ಭಾವಾ!"

"ಮತ್ತೆ?"

"ನೀನು ಕೊಡಬಲ್ಲೆ .... ಕೊಡ್ತಿಯಾ ಭಾವಾ?"

ದೈನ್ಯದಿಂದ ಕೇಳಿದಳು ಅವನ ಕಾಲಬಳಿ ಕುಳಿತು ಪಾರ್ವತಿ ... ಮನೆಯ ಮುಂದೆ ಭಿಕ್ಷೆಗಾಗಿ ಕಾದು ಕುಳಿತಿರುವ ಭಿಕ್ಷುಕಿಯಂತೆ ದೀನಳಾಗಿ ಅವನ ಕಡೆ ನೋಡುತ್ತಾ ಕುಳಿತಿದ್ದಳು ಪಾರ್ವತಿ.

ಸುಂದರ ಎದ್ದುನಿಂತ .... ಮುಖವನ್ನು ಮತ್ತೊಂದು ಕಡೆ ತಿರುಗಿಸಿ ಒಂದು ಕ್ಷಣ ನಿಂತು ನಂತರ ಹೇಳಿದ--

"ಇಲ್ಲ"

ಪಾರ್ವತಿ ಬೆಚ್ಚಿದಳು--

ಬೆದರಿದಳು--

ನಡುಗಿದಳು--

ಅವಮಾನದಿಂದ ತತ್ತರಿಸಿದಳು--

ಶೋಕದಿಂದ ಮುದ್ದೆಯಾದಳು--

ದ್ವೇಷದಿಂದ ಅವಳ ಉಸಿರು ಬಿಸಿಯಾಯ್ತು--

ಕ್ರೋಧದಿಂದ ಕಣ್ಣು ಕೆಂಪಾಯ್ತು- ಸರಕ್ಕನೆ ಎದ್ದುನಿಂತಳು.

"ನೀನು ನನ್ನ ಮದುವೆ ಆಗೋದಿಲ್ಲವೇ?"

"ನನಗೆ ಹೆಂಡತಿ ಇದ್ದಾಳೆ ಪಾರ್ವತಿ!"

ಕಠೋರವಾಗಿ ನಕ್ಕಳು ಪಾರ್ವತಿ.

"ಹೌದೇನು! ಆ ವಿಷಯ ... ಆ ರಾತ್ರಿ... ಮರೆತುಹೋಯ್ತೆ?"

ನಿಟ್ಟುಸಿರು ಬಿಟ್ಟ ಸುಂದರ. "ಪಾರ್ವತೀ! ನನ್ನಿಂದ ಮಹಾಪರಾಧವಾಯ್ತು. ನಿಜ ನೋಡು ನೀನು ಬೇರೆ ಯಾರನ್ನಾದ್ರೂ ಮದುವೆ ಆಗು..."

ಅವನು ಮಾತು ಮುಗಿಸಲಿಲ್ಲ ಪಾರ್ವತಿ ಅವನ ಕೆನ್ನೆಯ ಮೇಲೆ ಫಳಾರ್ ಎಂದು ಹೊಡೆದಳು ... ಅಸಹ್ಯದಿಂದ ಬೇಕರಿಸಿ ಉಗುಳಿದಳು... "ಥೂ! .... ಹೇಡೀ ... ನನ್ನ ಸೂಳೇಂತ ತಿಳಿದೇನು? ನಿನ್ನ ಕಾಮ ತೀರಿಸಲು ಬಂದ ಬೆಲೆವೆಣ್ಣೂಂತ ಭಾವಿಸಿದೆಯೇನು? ನೀನು ಮನುಷ್ಯನಲ್ಲ ಮೃಗ."

"ಪಾರ್ವತೀ!"

ಆಳು ಭಯಗಳಿಂದ ಬೆಲ್ಲಗೆ ಬೀರಿದ ಸುಂದರ.

"ನೀವು ಗಂಡಸರು, ನಿಮಗೆ ಸಮಾಜ ಮಾತ್ರವಲ್ಲ ಪ್ರಕೃತಿಕೂಡ ಸಹಾಯವಾಗಿ ನಿಂತಿದೆ. ಹೆಣ್ಣು ಗಂಡು ಸೇರಿ ಮಾಡಿದ ಅಪರಾಧಕ್ಕೆ ಹೆಣ್ಣು ಶಿಕ್ಷೆ ಅನುಭವಿಸುತ್ತಾಳೆ ... ಕಾರಣ ... ಪ್ರಕೃತಿ"

"ಕ್ಷಮಿಸು ಪಾರಿ! ... ನೀನು ನನ್ನ ಕೊಂದರೂ ನಾನು ಸುನಂದಳನ್ನು ಬಿಟ್ಟು ಬೇರೇ ಮದುವೆ ಆಗ ಲಾರೆ... ನನ್ನ ಜೀವನದಲ್ಲಿ ನನಗೊಬ್ಬಳೇ ಹೆಂಡತಿ."

"ಮಿಕ್ಕವರು ನಿನ್ನ ಸೂಳೆಯರು, ನಿನ್ನ ಕಾಮ ದಾಹವನ್ನು ತೀರಿಸುವ, ಹೆಣ್ಣುಬೊಂಬೆಗಳು, ಅಲ್ಲವೇ? ಥೀ! ನೀನೂ ಒಬ್ಬ ಗಂಡಸೇ!"

ಕೋಪದಿಂದ ನಾಗರಹಾವಿನಂತೆ ಬುಸುಗುಟ್ಟು ತ್ತಿದ್ದ ಪಾರ್ವತಿ, ಮತ್ತೆ ಹೆಣ್ಣಾದಳು, ಬಿಕ್ಕಿ-ಬಿಕ್ಕಿ ಅಳುತ್ತಾ ನೆಲದಲ್ಲಿ ಕುಸಿದು ಬಿದ್ದಳು.

ಬಾಗಿಲ ಹಿಂದೆ ನಿಂತು ಎಲ್ಲ ಮಾತುಗಳನ್ನೂ ಕೇಳುತ್ತಿದ್ದ ಸುನಂದ, ಜೀವಚ್ಛವದಂತೆ ಮೆಲ್ಲನೇ ಅಡಿಯ ಮೇಲೆ ಅಡಿ ಇಟ್ಟು, ಮೂಕಳಾಗಿ ತನ್ನ ಕೋಣೆಗೆ ನಡೆದಳು. ಮಂಚದ ಮೇಲೆ ವಿಗ್ರಹದಂತೆ ಕುಳಿತಳು ಅವಳ ಮುಖದಲ್ಲಿ, ದುಃಖವೋ, ಕ್ರೋಧವೋ, ಕಿಂಚಿತ್ತೂ ಇರಲಿಲ್ಲ. ಕಲ್ಲಿನ ಬೊಂಬೆ ಯಾಗಿದ್ದಳು, ನಡುಕಡಲಿನಂತೆ ಗಂಭೀರವಾಗಿದ್ದಳು. ಅವಳು ತನ್ನ ಕಣ್ಣುಗಳನ್ನು ತಾನೇ ನಂಬದಾದಳು.

ತಾನು ಬಾಳಿ ಬದುಕಿದ ಪ್ರಪಂಚವೇ ಇದು? ಅಲ್ಲ... ಇದು ಆ ಪ್ರಪಂಚ ಅಲ್ಲ ... ಸುಳ್ಳು ಅಲ್ಲವೇ ಅಲ್ಲ ... ತಾನು ಬಾಳಿದ ಪ್ರಪಂಚದಲ್ಲಿ... ಕಪಟವಿಲ್ಲ, ಕಲ್ಮಷವಿಲ್ಲ, ದ್ರೋಹವಿಲ್ಲ, ವಂಚನೆ ಇಲ್ಲ ಆದರೆ ತಾನೀ ಕ್ಷಣದಲ್ಲಿ ಬೇರೇ ಲೋಕಕ್ಕೆ ಹಠಾತ್ತನೆ ಜಾರಿ ಬಿದ್ದಿದ್ದಾಳೆ.

ಇಲ್ಲಿ ದ್ರೋಹ ನಗುತ್ತಿದೆ.

ನ್ಯಾಯ ಅಳುತ್ತಿದೆ.

ವಂಚನೆ ಬಾಳುತ್ತಿದೆ.

ನಂಬಿಕೆ ನಾಶವಾಗುತ್ತಿದೆ.

ಥೀ!...ಇದು ತಾನು ಬಾಳಿದ ಪ್ರಪಂಚವಲ್ಲ... ಇಲ್ಲಿಂದ ತನ್ನ ಪ್ರಪಂಚಕ್ಕೆ ಓಡಿಹೋಗಬೇಕು... ... ಆದಷ್ಟು ಬೇಗ ಓಡಿಹೋಗಬೇಕು...ಹೌದು... ಈಗಲೇ ಈ ನಿಮಿಷವೇ ಓಡಿಹೋಗಬೇಕು.

ಸುನಂದ ಎದ್ದು ನಿಂತಳು.

ಓಡಿಹೋಗಲು ಮುನ್ನುಗ್ಗಿದಳು.




" ಥೀ ! ನೀನೂ ಒಬ್ಬ ಗಂಡಸೇ ! "

ಗಾಳಿಗೆ ತಲೆಹಾಕಿ ಮುಗ್ಗರಿಸಿ ಬಿದ್ದಳು.

ಬಳಿ ಒಡೆದ ಮೂಲೆಯಲ್ಲಿ ಚಿತ್ರ ಕಾಣಿಸಿತು.

ಸುನಂದಾ ಕಣ್ಣುಜ್ಜಿಕೊಂಡು ಸುತ್ತಲೂ ಹೊಸಬಳಂತೆ ತೀಕ್ಷ್ಣವಾಗಿ ನೋಡಿದಳು.

ಅದೇ ಕೋಣೆ

ಅದೇ ಮಂಚ

ಅದೇ ಪಾಪನ ತೊಟ್ಟಿಲು

ಕನ್ನಡಿ...

ಬಟ್ಟೆ ಬೀರು...

ಬಟ್ಟೆಸ್ಟಾಂಡು...

ಅದೋ ಅದೇ Photo

ಮದುವೆಯ ದಿನ ತಾನು ಗಂಡನೊಡನೆ ತೆಗೆಸಿಕೊಂಡ Photo. ಅಲ್ಲಿ ಕನ್ನಡಿ ಬಳಿ ತನ್ನ ನಗುತ್ತಿರುವ ಭಾವಚಿತ್ರ.

ಯಾರನ್ನು ನೋಡಿ ಆ ಫೋಟೋ ನಗುತ್ತಿದೆ!...

ತನ್ನನ್ನು ನೋಡಿ ನಗುತ್ತಿರಬೇಕು. ತಾನು ಮೋಸಹೋಗಿದ್ದನ್ನು ಕಂಡು ಕೇಕೆಹಾಕಿ ನಗುತ್ತಿರಬೇಕು. ತಾನು ವಂಚಿಸಲ್ಪಟ್ಟದ್ದನ್ನು ನೋಡಿ ನಲಿಯುತ್ತಿರಬೇಕು. ತನ್ನ ಬಾಳು ದ್ರೋಹದ ಹಳ್ಳಕ್ಕೆ ಬಿದ್ದಿದ್ದನ್ನು ನೆನೆದು ಹೀಯಾಳಿಸಿ ನಗುತ್ತಿರಬೇಕು.

ಸುನಂದ ಮೆಲ್ಲನೆ ಎದ್ದುಬಂದು ಹಾಸಿಗೆಯಲ್ಲಿ ಬಿದ್ದುಕೊಂಡಳು.

"ನನ್ನ ಮನೆಯೇ ಸ್ವರ್ಗ ನನ್ನ ಹೆಂಡತಿಯೇ ದೇವತೆ" ಗಂಡ ಹೇಳುತ್ತಿದ್ದ ಮಾತು ನೆನಪಿಗೆಬಂತು. ಸುನಂದಳ ಕಣ್ಣಲ್ಲಿ ಈಗ ನೀರು ತುಂಬಿತು.

ತನ್ನಮೇಲೆ ಎಷ್ಟು ಪ್ರೇಮವಿತ್ತು ಅವರಿಗೆ... ತನ್ನನ್ನು ಅಗಲಿ ಒಂದು ಕ್ಷಣ ಇರುತ್ತಿರಲಿಲ್ಲ. ಮತ್ತೊಂದು ಹೆಣ್ಣನ್ನು ಕಣ್ಣೆತ್ತಿ ನೋಡುತ್ತಿರಲಿಲ್ಲ.

ಅವರು...ಅವರೇ...ಇಂದು ಒಂದು ಹೆಣ್ಣಿಗೆ ಅಲ್ಲ ಇಬ್ಬರಿಗೂ ಮೋಸ ಮಾಡಿದ್ದಾರೆ...ಒಬ್ಬಳನ್ನು ಉಳಿಸಿಕೊಳ್ಳಲು ಮತ್ತೊಬ್ಬಳನ್ನು ಸಾವಿನ ದಡಕ್ಕೆ ತಳ್ಳಿದ್ದಾರೆ. ಅಯ್ಯೊ!

ಅವರು ತನ್ನ ದೇವರಲ್ಲ

ಅಯ್ಯೋ! ಇವರೇಕೆ ಹೀಗಾದರು!

ಯಾರು ಕಾರಣ !!

ತನ್ನ ಒಡಹುಟ್ಟಿದವಳೇ !!!

ತಾನು ಎತ್ತಿ ಆಡಿಸಿದ ಪಾರ್ವತಿ ತನ್ನ ಬಾಳಿಗೆ ಬೆಂಕೀ ಹಚ್ಚಿದಳೇ ?

ಅಯ್ಯೋ ಪಾರೂ .. ಪಾರಮ್ಮಾ .. ನೀನು ನನ್ನ ಗಂಡನನ್ನು ಏಕೆ ಪ್ರೀತಿಸಿದೆ ಪಾರೂ !

ನಾನವರಲ್ಲಿ ದೇವರನ್ನು ಕಂಡೆ, ಕೈ ಹಿಡಿದವಳಿಗೆ ಗಂಡನೇ ದೇವರೆಂದು ಪೂಜಿಸಿದೆ . . . . ಪ್ರೀತಿಸಿದೆ. ಅನುರಾಗದ ಹಗ್ಗದಿಂದ ಬಂಧಿಸಿದೆ.

ಓಹ್ ! ಪಾರಮ್ಮಾ .. ಆ ಬಂಧನದಿಂದ ಅವರು ಹೇಗೆ ತಪ್ಪಿಸಿಕೊಂಡರು ! ಹೇಳಮ್ಮಾ ನೀನು ಅದಕ್ಕೆ ಕಾರಣಳೇ ? ಛೆ..ಛೆ..ಇರಲಾರದು. ನೀನು ನನ್ನ ಸಲಿಗೆಯ ತಂಗಿ. ನನ್ನ ಬಾಳನ್ನು ಹಾಳು ಮಾಡಲು ನೀನು ಎಂದೆಂದಿಗೂ ಇಚ್ಛಿಸುವುದಿಲ್ಲ. ದೇವರಾಣೆ ನಿನಗಾ ಇಚ್ಛೆ ಇಲ್ಲ ಅಲ್ಲವೇ? ಹಾಗಾದ್ರೆ ಇದು ಯಾರ ತಪ್ಪು ಅಲ್ಲ.

ವಿಧಿಯ ಕೈವಾಡ

ಅವಳ ಆಟ.

ಅವಳ ಕೈಗೊಂಬೆಗಳು ನಾವು. ಅವಳ ಬೊಂಬೆಯಾಟದಲ್ಲಿ. ಯಾವ ಬೊಂಬೆ ಎಲ್ಲಿ ಹೋಗುತ್ತೋ, ಯಾವ ಬೊಂಬೆ ಗೂಡಕ್ಕೆ ಹೋಗಿ ಬೀಳುತ್ತೋ... ಯಾರು ಬಲ್ಲರು! ಏಕೆ ಸುಂದರನ ಬೊಂಬೆಯನ್ನು ದೂರ ಸರಿಸಿ, ಪಾರ್ವತಿ ಬೊಂಬೆಯನ್ನು ಸುಂದರನ ಬೊಂಬೆಯ ಬಳಿ ಇಟ್ಟು ಆಡುತ್ತಿದೆ. ಪಾಪ! ಅದರ ಆಟವನ್ನು ತಾನೇಕೆ ಕೆಡಿಸಬೇಕು. ಕೆಡಿಸಲು ಸಾಧ್ಯವೂ ಇಲ್ಲ. ಉಳಿಸಲು ಪ್ರಯತ್ನಿಸಬೇಕು. ಹೇಗೆ?

ಅಯ್ಯೋ !... ಈ ಪ್ರಶ್ನೆಗೆ ಉತ್ತರವೇ ಇಲ್ಲವೆ? ಅರ್ಥವಾಗದ ಪ್ರಶ್ನೆ ಇದೆ... ಇಲ್ಲ... ಅರ್ಥವಾಗುವುದೇ ಇಲ್ಲ... ಒಂದು ದಿನ ತಾನು ಗಂಡನೊಡನೆ ಹೇಳಿದ್ದಳು.

"ನಿಮ್ಮನ್ನು ನೀವು ಅರ್ಥಮಾಡಿಕೊಳ್ಳುವುದಕ್ಕಿಂತ ನಾನು ನಿಮ್ಮನ್ನು ಚೆನ್ನಾಗಿ ಅರ್ಥಮಾಡಿಕೊಂಡಿದ್ದೇನೆ."

ಇಲ್ಲವೇ ಇಲ್ಲ... ತಾನು ಅವರನ್ನು ಎಳ್ಳಷ್ಟೂ ಅರ್ಥಮಾಡಿಕೊಳ್ಳಲಿಲ್ಲ. ಅರ್ಥವಾಯಿತೆಂದು ತಿಳಿದು

## ಕನಸಿಗೆ




ಎಲೆ ಕನಸೆ, ನಿನಗಿಲ್ಲ ಯಾವ ಕುಲಗೋತ್ರ
ನೀನು ಮೈದೋರುವುದು ನಿದ್ದೆಯಲಿ ಮಾತ್ರ
ಈ ರೀತಿ ನಡೆಯಲಾರದು ಇನ್ನು ಮುಂದೆ
ರಾಷ್ಟ್ರೀಯ ಯೋಜನೆಗೆ ನೆರವಾಗು ಅಂದೆ

—ದಿನಕರ ದೇಸಾಯಿ

ಅರ್ಥಮಾಡಿಕೊಳ್ಳುವುದಕ್ಕೆ ಪ್ರಯತ್ನಿಸಲೂ ಇಲ್ಲ. ಅದರಿಂದ ಎಷ್ಟು ಅನಾಹುತವಾಯಿತು.

ತನ್ನ ತಂಗಿಗೆ ದ್ರೋಹವಾಯ್ತು.

ತನ್ನ ಗಂಡ ದ್ರೋಹಿಯಾದ. ಬಾಣಂತನಕ್ಕೆ ಬಂದ ಅವಳು ಬಸುರಿಯಾದಳು. ಅದಕ್ಕೆ ತಾನೇ ಕಾರಣ.

ಕೆಂಡವನ್ನು ಕೆಂಡವಲ್ಲವೆಂದು ತಿಳಿದು, ಬೆಣ್ಣೆಯನ್ನು ಅದರ ಪಕ್ಕದಲ್ಲಿಟ್ಟಿದ್ದಳು. ಕೆಂಡದ ಕಾವಿಗೆ ಬೆಣ್ಣೆ ಕರಗಿತು. ಇದರಲ್ಲಿ ಕೆಂಡದ ಅಪರಾಧವಿಲ್ಲ. ಬೆಣ್ಣೆಯ ದೋಷವೂ ಇಲ್ಲ. ಅದು ಪ್ರಕೃತಿ ನಿಯಮ. ಸಹಜ. ಅಂದು ಗಂಡ ಆ ವಿಷಯ ಹೇಳುವಾಗ ತನ್ನ ಜವಾಬು ಕೇಳಿ ಅತನ ಮುಖ ಬಿಳಚಿಕೊಂಡಿದ್ದಕ್ಕೆ ಕಾರಣ ಈಗ ಅರ್ಥವಾಗುತ್ತಿದೆ... ಶಶಿಗೆ ಬಾಳಿಲ್ಲ ಎಂದು ಹೇಳುವಾಗ ಗಂಡನ ಕಣ್ಣಲ್ಲಿ ನೀರು ತುಂಬಿದ್ದಕ್ಕೆ ಕಾರಣ... ತಾನೇ... ಅಯ್ಯೋ! ಅವರ ಪ್ರಣಯದ ವಿಷಯ ತಿಳಿಸಲು ಅವರು ಎಷ್ಟು ಸಂಕೋಚಪಟ್ಟಿರಬೇಕು! ತನ್ನ ಬಳಿ ಸುಳ್ಳಿನ ಕಥೆ ಹೇಳುವಾಗ ಎಷ್ಟು ಯಾತನೆ ಅನುಭವಿಸಿರಬೇಕು. ಅಬ್ಬಾ! ತಾನೆಷ್ಟು ಮೂಢಳು.

ಪಾಪ! ಪಾರು ಇದಕ್ಕಾಗಿ ಏನೋ ತನ್ನ ಮುಂದೆ ಸುಳಿಯುತ್ತಿರಲಿಲ್ಲ. ಅಯ್ಯೋ! ತಾನು ಗಂಡನೊಡನೆ ನಕ್ಕುನಲಿಯುತ್ತಿದ್ದರೆ ಆ ಚಿಕ್ಕ ಹುಡುಗಿ ಮನಸ್ಸಿನಲ್ಲಿ ಎಷ್ಟು ಗೋಳಾಡಿರಬೇಕು. ಹೃದಯ ವೇದನೆಯನ್ನು ಅಡಗಿಸಿಟ್ಟಿರಬೇಕು. ಓಹ್! ಅವಳ ವೇದನೆ... ಯಾತನೆ, ಆ ದೇವರಿಗೆ ಮಾತ್ರ ತಿಳಿದಿರಬೇಕು. ಅವಳು ಶೋಕದೇವತೆಯಾಗಿದ್ದಳು. . . ಆದರೆ ಇಂದು ಇದ್ದಕ್ಕಿದ್ದ ಹಾಗೆ ಏಕೆ ಬದಲಾದಳು! ಅದಕ್ಕೆ ಏನು ಕಾರಣ? ಅಯ್ಯೋ ದೇವರೇ! ಈ ಮನುಷ್ಯರ ಮನಸ್ಸನ್ನು ಅರ್ಥಮಾಡಿಕೊಳ್ಳಲು ನನಗೇಕೆ ಜಾಣ್ಮೆ ಕೊಡಲಿಲ್ಲ. ಬಾಳಿ ಬದುಕಬೇಕಾದವಳು ಪಾರ್ವತಿ. ಅವಳು ಸಾಯಲು ನಿರ್ಧರಿಸಿದರೆ . . ಅಯ್ಯೋ ಅ ಪಾಪ ತನ್ನದಲ್ಲವೇ? ಅವಳ ಶಾಪ ತಮ್ಮ ವಂಶವನ್ನೇ ಅಳಿಸುತ್ತದೆ.

"ನಮ್ಮ ರಕ್ಷಣೆಯಲ್ಲಿ ನಿಮ್ಮ ಮಗಳು ಕ್ಷೇಮವಾಗಿರುತ್ತಾಳೆ."

ತಂದೆಯೊಡನೆ ಹೇಳಿದ ಮಾತು ನೆನಪಿಗೆ ಬಂತು. ಸುನಂದಳಿಗೆ ತಲೆಯ ಮೇಲೆ ಕಲ್ಲುಬಿದ್ದಂತಾಯ್ತು.. "ರಕ್ಷಣೆ", "ಕ್ಷೇಮ" ಇಲ್ಲ ಅವಳಿಗೆ ರಕ್ಷಣೆಯೇ ಇಲ್ಲದಾಯ್ತು... ತನ್ನ ಮಾತು ಉಳಿಸಿಕೊಳ್ಳಲು ಆಗಲಿಲ್ಲ. ಈಗ ತಂದೆಯ ಮುಖವನ್ನು ತಲೆ ಎತ್ತಿ ಹೇಗೆ ನೋಡುವುದು?

"ಇದು ನ್ಯಾಯವೇ ?" ಎಂದು ತಂದೆ ಕೇಳಿದರೆ ಈ ಪ್ರಪಂಚದಲ್ಲಿ ಯಾವ ಮೂಲೆಗೆ ಹೋಗಿ, ತಾನು ಬಚ್ಚಿಟ್ಟುಕೊಳ್ಳಬೇಕು !

ತಾಯಿ ದೀನಳಾಗಿ "ಇವಳು ನಿನ್ನ ಮಗಳಾಗಿದ್ದರೆ ನನ್ನ ಸಂಕಟ ಅರ್ಥವಾಗುತ್ತಿತ್ತು ಸುನಂದಾ" ಎಂದು ಹೇಳಿದಾಗ ಬೆಟ್ಟದಿಂದ ಉರುಳಿ ಸಾಯಬೇಕು ತಾನು...

ಹಾಗಾದರೆ ಈಗ ಕರ್ತವ್ಯವೇನು! ಅವಳಿಗೂ ತನ್ನ ಬಾಳನಲ್ಲಿ ಭಾಗ ಕೊಟ್ಟರೆ ಸಾಧ್ಯವೆ? ಅವರ ಪ್ರೇಮವನ್ನು ಇಬ್ಬರು ಹಂಚಿಕೊಂಡು ಬಾಳಲು ಸಾಧ್ಯವೆ? ಇಂದು ತನ್ನ ಹೃದಯ ಸಮ್ಮತಿಸಬಹುದು. ಒಂದಲ್ಲ ಒಂದು ದಿನ ಇದೇ ಹೃದಯ ಅವಳನ್ನು ದ್ವೇಷಿಸಬಹುದು. ಅಸೂಯೆ ಹುಟ್ಟಿ ನಂತರ ಹೆಣ್ಣು ಹುಟ್ಟಿದಳು ಎಂದು ಗಾದೆಯಂತೆ ತನ್ನ ಮನಸ್ಸಿನಲ್ಲೂ ಅಸೂಯೆ ಇಣಿಕಿ ಹಾಕಬಹುದು. ಪಾರ್ವತಿ ಅಭಿಮಾನದ ಹೆಣ್ಣು, ಮುಂಗೋಪಿ. ತಾವಿಬ್ಬರು ಪೂರ್ತಿ ಸವತಿಯರಾಗಿ ಬಾಳಲು ಸಾಧ್ಯವೇ ? ಈ ಎರಡು ಸಂಸಾರಗಳ ನಡುವೆ ಅವರ ಬಾಳು ಏನಾಗಬಹುದು ?

ತನಗೆ ಆ ಜೀವನವೇ ಬೇಡ.

ಹಾಗಾದರೆ ತನ್ನ ಗಂಡನನ್ನು ಮೃಗವೆಂದು ಹೇಳಿದ ಪಾರ್ವತಿಗೆ ಅತ ಮೃಗವಲ್ಲ ಮನುಷ್ಯನೆಂದು ತಿಳಿಸಬೇಕು.

ಹೇಗೇ !

ಅತ ಪಾರೂನ ಮದುವೆಯಾಗಲಿ. ತಾನೇ ಅವರಿಂದ ದೂರವಾಗುತ್ತಾಳೆ. ಅವರಿಂದ ಮಾತ್ರವಲ್ಲ ಈ ಪ್ರಪಂಚದಿಂದಲೇ ದೂರವಾಗಬೇಕು.

ತಂದೆಗೆ ಕೊಟ್ಟ ಮಾತು ಉಳಿಸಿಕೊಳ್ಳಬೇಕು.

ತಾಯಿಗೆ ದುಃಖ ನೀಡಬಾರದು.

ಪಾರ್ವತಿಗೆ ಬಾಳು ಕೊಡಬೇಕು.

ಗಂಡನನ್ನು ಮನುಷ್ಯನನ್ನಾಗಿ ಮಾಡಬೇಕು..... ಹಾಗಾದರೆ ಅದಕ್ಕೆ ಒಂದೇ ದಾರಿ.

''ಆತ್ಮಹತ್ಯೆ''

ಅದನ್ನುಳಿದು ಬೇರೆ ದಾರಿ ಇಲ್ಲ. ತಾನು ಸಾಯ ಬೇಕು. ಸತ್ತು ಪಾರೂಗೆ ಸ್ವರ್ಗ ತೋರಿಸಬೇಕು. ಅವಳ ಬಾಳು ನಂದನವನವಾಗಬೇಕು. ತನಗಿನ್ನು ಜೀವನದಲ್ಲಿ ಏನೂ ಬೇಕಿಲ್ಲ.

ಆವರೆ ಮಗುವಿಗೆ ತಾಯಿ ಪಾರು ತನ್ನ ಮಗುವಿನ ತಾಯಿಯಾಗಬಲ್ಲಳೇ ! ತನ್ನ ಪಾರು ಒಳ್ಳೆಯವಳು. ಮಗುವಿನಮೇಲೆ ಅವಳಿಗೆ ತುಂಬ ಪ್ರೀತಿ. ಅದನ್ನವಳು ದ್ವೇಷಿಸಲಾರಳು. ತನಗೆ ಬಾಳು ಕೊಟ್ಟವಳ ಬಾಳಿನ ಕುಡಿಯನ್ನು ಚಿವುಟಿ ಹಾಕಲಾರಳು. ಅಕ್ಕನ ಮಗಳು ತನ್ನ ರಕ್ತ ಹಂಚಿಕೊಂಡು ಹುಟ್ಟಿದವಳ ಮಗಳು ಎಂಬ ಅಭಿಮಾನ ಇದ್ದೇ ಇರುತ್ತದೆ ಅವಳಿಗೆ. ಆಮೇಲೆ ವಾತ್ಸಲ್ಯ ಅವಳಲ್ಲಿ ಅಳಿಸಿ ಹೋಗುವದೇ ಇಲ್ಲ. ಮಗುವಿನ ವಿಷಯ ತಾನು ಚಿಂತಿಸಬೇಕಾಗಿಲ್ಲ. ತಾನು ಹೋಗಲು ದಾರಿ ಮಾತ್ರ ಹುಡುಕಬೇಕು.

ಒಬ್ಬರನ್ನೊಬ್ಬರು ಮೋಸ ಮಾಡಿಕೊಳ್ಳಲು ಮನುಷ್ಯರು ವಿಷವನ್ನು ಹೃದಯದಲ್ಲಿ ಬಚ್ಚಿಟ್ಟುಕೊಂಡಿದ್ದಾರೇನೋ...... ಸುನಂದಳ ಕಣ್ಣಿಗೆ ಬೆರಳಲ್ಲಿದ್ದ ವಜ್ರದ ಉಂಗುರ ಕಾಣಿಸಿತು...ತಕ್ಷಣ ಅವಳಿಗೆ ಯೋಚನೆ ಹೊಳೆಯಿತು.

ತನ್ನ ಬಾಳಿಗೆ ನಾಂದಿಯಾಗಿದ್ದ ಉಂಗುರ . . . . ತನ್ನ ಬಾಳನ್ನು ನಂದಿಸಲು ಸಹಾಯ ಮಾಡುತ್ತದೆ.. ಈ ಉಂಗುರವನ್ನು ಅಂದು ಅವರು...ಮದುವೆಯಾದೊಡನೆ ತನ್ನನ್ನು ಇಲ್ಲಿಗೆ ಕರೆತಂದ ರಾತ್ರಿ ಆ ಮಧುರ ರಾತ್ರಿ......

ಮಲ್ಲಿಗೆ ಹೂವಿನ ಹಾಸಿಗೆಯಲ್ಲಿ ಸುಂದರ ಮಲಗಿ ಇನಿಯಳಿಗಾಗಿ ಕಾದಿದ್ದ. . . .

ನಾಚಿಕೆಯಿಂದ ಬಾಗಿಹೋಗಿ, ಮೆಲ್ಲನೆ ಕೈಯಲ್ಲಿ ಹಾಲಿನ ಬಟ್ಟಲು ಹಿಡಿದು ಬಂದಳು ಸುನಂದ. ಹಣೆಯಲ್ಲಿ ದೊಡ್ಡ ಕುಂಕುಮ... ಕಣ್ಣುತುಂಬಾ ಕಾಡಿಗೆ, ಅರಿಷಣ ಹಚ್ಚಿದ ಮುಖ, ತಲೆತುಂಬಾ ಹೂ, ಬಿಳೀ ಜರೀಸೀರೆ, ಕೈಲಿ ಕೆಂಪು-ಹಸಿರು ಬಳೆಗಳು ತೊಟ್ಟು ನಿಂತಿದ್ದ ಹೊಸ ಹೆಂಡತಿಯನ್ನು ಬಿಗಿದಪ್ಪಿ, ಪ್ರಥಮ ಕಾಣಿಕೆಯನ್ನು ನೀಡಿ, ವಜ್ರದ ಉಂಗುರವನ್ನು ತನ್ನ ಕೈಯಿಂದಲೇ ಅವಳ ಮೃದುವಾದ ಬೆರಳಿಗೆ ತೊಡಸಿದ.

" ಈ ವಜ್ರದ ಹೊಳಪಿನಂತೆ ನಮ್ಮ ಬಾಳು ಎಂದೆಂದಿಗೂ ಹೊಳಪಾಗಿರುತ್ತೆ ಸುನೀ." ಎಂದು ನುಡಿದ. ಸುನಂದ ಮೈಮರೆತು ಅವನನ್ನು ತಬ್ಬಿ ಸಂತೋಷದಿಂದ ಕಣ್ಣು ಮುಚ್ಚಿದಳು.

ಸುನಂದ ಉಕ್ಕಿಬರುವ ಅಳುವನ್ನು ತಡೆದುಕೊಂಡು ಉಂಗುರಕ್ಕೆ ಮುತ್ತನ್ನು ಕೊಟ್ಟಳು. ಮಗು ಮೆಲ್ಲನೆ ಅಳಲು ಷುರು ಮಾಡಿತು. ಆದರೆ ಸುನಂದ ಮಗುವನ್ನು ಎತ್ತಿ ಹಾಲು ಉಣಿಸಲಿಲ್ಲ.... ಮೌನವಾಗಿ ಮಲಗಿದ್ದಳು.

ಮಗು ಮತ್ತಷ್ಟು ಅತ್ತಿತು. ತಾಯಿ ತನ್ನನ್ನು ಎತ್ತಿ ಆಡಿಸಲಿಲ್ಲ ಎಂಬ ಹಠದಿಂದ ರೇಗಿ ಅತ್ತಿತು... ಆದರೂ. . . . . ಸುನಂದ ಮಗುವಿನ ಬಳಿ ಧಾವಿಸಿ ಹೋಗಲಿಲ್ಲ. ಹಾಗೆಯೇ ಮಲಗಿದ್ದಳು.

ಅಳುತ್ತಾ ಮಲಗಿದ್ದ ಪಾರು. . . . ಎದ್ದು ಓಡಿ ಬಂದಳು. ಅಳುತ್ತಿದ್ದ ಮಗುವನ್ನು ಎದೆಗಪ್ಪಿಕೊಂಡಳು. ಮಗು ಸುಮ್ಮನಾಯ್ತು.

''ಅಕ್ಕಾ! ಅಕ್ಕಾ!!... ಎದ್ದೇಳಕ್ಕಾ... ಮಗು




" ನಿಜವಾದ ವಯಸ್ಸು ಕೇಳಿ ಎಂಥಾ ಧರ್ಮಸಂಕಟಕ್ಕೆ ಗುರಿಮಾಡಿದಿಯಲ್ಲೆ ತಾಯಿ ! ದೇವರ ಮುಂದೆ ಸುಳ್ಳು ಹೇಳೊಹಾಗಿಲ್ಲ— ಹೆಂಗಸಾಗಿ ನಿಜವಾದ ವಯಸ್ಸು ತಿಳಿಸೋದು ಅಪರಾಧ."

ತುಂಬಾ ಅಳ್ತಾಯಿದೆ" ಅಕ್ಕ ನಿದ್ದೆ ಮಾಡ್ತಿರಬಹುದೆಂದು ಎಣಿಸಿ ಪಾರು, ಅಕ್ಕನ ಭುಜವನ್ನು ಹಿಡಿದು ಅಡಿಸಿದಳು. ಸುನಂದ ಎಚ್ಚತ್ತವಳಂತೆ ಎದ್ದು ಮೈ ಮುರಿಯುತ್ತಾ ಕೇಳಿದಳು,

''ಏನೇ ನಿನ್ನ ಗಲಾಟೆ?''

''ನಿನ್ನ ಮಗಳದು, ನನ್ನದಲ್ಲ.''

''ಅವಳು ನಿನ್ನ ಮಗಳು ಅಲ್ಲವೇನೋ ! ''

''ಇಲ್ಲಾಂತ ಹೇಳಿದ್ದು ಯಾರು !''

''ನೋಡು ಪಾರೀ ! ಈ ಮುದ್ದು ರಾಕ್ಷಸೀನ ಸುಧಾರಿಸುವುದಕ್ಕೆ ನನ್ನಿಂದ ಆಗೋಲ್ಲ... ನಿನ್ನ ಕೈಲಿ ಒಪ್ಪಿಸುತ್ತೇನೆ..... ಅವಳನ್ನ ಸಾಕಿ ದೊಡ್ಡವಳನ್ನಾಗಿ ಮಾಡೋ ಭಾರ ನಿಂದು.'' ಮಗುವಿನ ಕೆನ್ನೆಯ ಮೇಲೆ ಮೆಲ್ಲನೆ ಮುತ್ತಿಡುತ್ತಾ ಸುನಂದ ಹೇಳಿದಳು.

ಪಾರ್ವತಿ ನಿಟ್ಟುಸಿರುಬಿಟ್ಟಳು.

''ಏಕೆ ! ನನ್ನ ಮಗಳ ಮೇಲೆ ನಿನಗೆ ಪ್ರೀತಿ ಇಲ್ಲವೇ ? '' ನಗುತ್ತ ಭಯದಿಂದ ಕೇಳಿದಳು ಆ ತಾಯಿ.

ಕಳಕಳಿಯಿಂದ ನುಡಿದಳು ಪಾರ್ವತಿ,

" ನನ್ನಾಣೆ...ಹಾಗೆಲ್ಲಾ ಮಾತಾಡಬೇಡಕ್ಕಾ.... ಅಮ್ಮನ ಮೇಲೆ ಆಣೆ ಇಟ್ಟು ಹೇಳ್ತೀನಿ... ಪ್ರಪಂಚದಲ್ಲೇ ನಾನು ಹೆಚ್ಚಾಗಿ ಪ್ರೀತಿಸೋದು ಈ ಮಗುವನ್ನೇ "

ಭಾರ ತೀರಿದವಳಂತೆ ನಿಟ್ಟುಸಿರುಬಿಟ್ಟು ನಕ್ಕಳು ಸುನಂದ. " ಹಾಗಾದ್ರೇ ನನ್ನ ಮಗಳನ್ನು ಸಾಕೋ ಭಾರನಿನ್ನದೇ "

ಪಾರ್ವತಿ ಎಲ್ಲೋ ನೋಡುತ್ತಾ ಹೇಳಿದಳು. " ಹೋ ....ನಾನಿದ್ದರೆ .... "

" ಇಲ್ಲದೆ .... ಎಲ್ಲಿ ಓಡಿ ಹೋಗುತ್ತೀಯಾ ! "

ಪಾರ್ವತಿ ನಕ್ಕಳು.

" ಎಷ್ಟು ದಿನ ಇರಲು ಸಾಧ್ಯ ಅಕ್ಕಾ ! ಬಂದ ಕೆಲಸ ಆದ ಮೇಲೆ ಹೋಗಬೇಕಾದ್ದು ಕರ್ತವ್ಯ."

ಸುನಂದ ವಿಚಿತ್ರವಾಗಿ ನಕ್ಕಳು

''ನಿನ್ನ ಕರ್ತವ್ಯ ಇನ್ನೂ ಆರಂಭವೇ ಆಗಿಲ್ಲ. ಅಷ್ಟರೊಳಗೆ ಮುಗಿಯಿತೂಂದ್ರೆ ಹೇಗೆನಂಬಲಿ ?

''ಅಂದರೇ ?''

''ಅಂದರೆ ಅರ್ಥವಾಗಲಿಲ್ಲವೇ ಹುಚ್ಚು ಹುಡುಗಿ

ನಿನಗೆ ಮದುವೆ ಆಗಬೇಕು. ನನ್ನ ಮಗಳನ್ನು ಸಾಕಿ ದೊಡ್ಡವಳನ್ನಾಗಿ ಮಾಡಿ ಒಬ್ಬ ಒಳ್ಳೆಯವನ ಕೈಲಿ [illegible] ತೃಪ್ತಿ."

ನಗೆಯಾಗಿ ನಕ್ಕು ಮುಗಿಸಿದಳು ಸುನಂದ.

"ಅದೇನಕ್ಕ ನಿನ್ನ ಮಾತು ವಿಚಿತ್ರವಾಗಿದೆ! ದೇಹ ಮನಸ್ಸು ತೃಪ್ತಿ ಹೊಂದಬೇಕೇ ವಿನಾ ಆತ್ಮ ಹೇಗೆ ತೃಪ್ತಿ ಹೊಂದುತ್ತೆ?"

ಸುನಂದ ಮತ್ತೆ ನಕ್ಕಳು.

"ಇದು ನಿನಗೆ ಅರ್ಥವಾಗುವುದಿಲ್ಲ ಹೋಗೇ ಹುಡುಗಿ! ಇದು ವೇದಾಂತಾಮ್ಮಾ ವೇದಾಂತ"

"ಯಾವ ದಂತವೊ" ಎಂದು ತೃಪ್ತಿಯಿಂದ ನಕ್ಕಳು ಪಾರ್ವತಿ.

ಮೇಘದಿಂದ ಹೊರಬಂದ ಎಳೆಸೂರ್ಯನಂತೆ ಬೆಳಗಿತು ಅವಳ ಮುದ್ದು ಮುಖ. ಸುನಂದ ಮನಸ್ಸಿನಲ್ಲೇ ದೇವರನ್ನು ಪ್ರಾರ್ಥಿಸಿದಳು.

"ಭಗವಾನ್! ಈ ನಗು ನನ್ನ ತಂಗಿಯ ಮುಖದಲ್ಲಿ ಎಂದೆಂದಿಗೂ ಇರಲಿ."

"ಪಾರೂ!"

ಅಕ್ಕನ ಕೂಗು ಕೇಳಿ, ಹೋಗುತ್ತಿದ್ದ ಪಾರ್ವತಿ ತಿರುಗಿ ನೋಡಿ ಕೇಳಿದಳು.

"ಏನಕ್ಕಾ?"

"ದೇವರ ಮುಂದೆ ತುಪ್ಪದ ದೀಪ ಹಚ್ಚಿಡಮ್ಮಾ!"

"ಆಗಲಕ್ಕಾ"

"ನೋಡಮ್ಮಾ ಪಾರೀ! ನೀನು ಹಾಲು ಕೀರು ಚೆನ್ನಾಗಿ ಮಾಡ್ತೀಯಲ್ಲಾ... ರಾತ್ರಿ ಮಾಡೋಕೆ ಆಗುತ್ಯೇ ತಾಯೀ"

ಪಾರ್ವತಿ ಅಕ್ಕನ ಕಡೆ ನೋಡಿದಳು. ತಾನು ಸಿಹಿ ತಿಂದು, ಸಾಯಬೇಕೆಂದು, ದೇವರ ಇಚ್ಛೆ ಏನೋ, ಅದಕ್ಕೆ ಎಂದೂ ಕೇಳದ ಅಕ್ಕ ಇಂದು ಹಾಲುಣ್ಣಲು ಆಸಿಸುತ್ತಿದ್ದಾಳೆ.

"ಸರಿ ಅಕ್ಕಾ."

"ಪಾರಮ್ಮಾ"

ಪಾರ್ವತಿಗೆ ಅಕ್ಕನ ಕೂಗಿನಲ್ಲಿ ಅಪ್ಯಾಯತೆ ತುಂಬಿ ತುಳುಕುತ್ತಿದೆ ಏನೋ ಎಂದೆನಿಸಿತು.

"ಏನು ಬೇಕಕ್ಕಾ?"

ಮಮತೆಯಿಂದ ಕೇಳಿದಳು ಪಾರು.

"ನನ್ನ ಬಟ್ಟೆಬೀರುನಾ ತೆಗೆದು ನನ್ನ ಸೀರೆ ನಳೆಲ್ಲಾ ಜೋಡಿಸಿ ಇಡ್ತಿಯಾ? ತುಂಬಾ ದಿವಸ ವಾಯ್ತು. ಜಿರ್ಲೆ ಕಚ್ಚಿಬಿಟ್ಟರೆ ಕಷ್ಟ. ನನ್ನ ಮದುವೇ ಸೀರೆಯಂತೂ ಏನಾಗಿದೆಯೋ ಏನೋ!"

"ನಾಳೆ ಬಿಸಲಿಗೆ ಹಾಕಿದ್ರೇ"

"ನಾಳೆ ಹಾಕೋಣ . . . ಪಾರೂ! ಒಂದು ಕೆಲಸ ಮಾಡು [illegible] . . . ಆ ಸೀರೆ ಈಗ ಉಟ್ಟು [illegible]"

"[illegible] ಅಕ್ಕಾ!"

[illegible]

"[illegible]! [illegible] ಉಟ್ಟುಕೋ. ತಕ್ಷಣ ನಿನಗೆ ಮದುವೆ ಆಗುತ್ತೆ."

ನಗುತ್ತಾ ಹೇಳಿದಳು ಸುನಂದ.

"ಮದುವೆ ಅಲ್ಲ ಮರಣ" ಎಂದುಕೊಂಡಳು ಪಾರ್ವತಿ.

"ಏನಮ್ಮಾ ಯೋಚನೆ?"

ತಾನಿರುವುದು ಇನ್ನು ಸ್ವಲ್ಪ ಸಮಯ . . . ಈ ಮನೆಗೆ ತಾನು ನಗುತ್ತಾ ಬಂದಳು, ಎಲ್ಲರನ್ನೂ ನಗಿಸಿದಳು. ಈಗ ಹೋಗುವಾಗಲೂ ನಗುತ್ತಾ, ಮಿಕ್ಕವರನ್ನು ನಗಿಸಿ ಹೋಗಬೇಕು, ಅಕ್ಕನ ಎಲ್ಲಾ ಆಸೆಗಳನ್ನೂ ಪೂರೈಸಬೇಕು.

"ಅಕ್ಕಾ . . . ಉಟ್ಕೊಳ್ತೀನಿ"

"ಸೀರೆ ಉಟ್ಕೊಂಡ್ರೆ ಸಾಲದು. ಚೆನ್ನಾಗಿ ಅಲಂಕಾರ ಮಾಡ್ಕೋ– ನೋಡಬೇಕೂಂತ ಆಸೆಯಾಗಿದೆ."

"ಅಯ್ಯೋ ವಿಧೀ! ನೀನೆಷ್ಟು ಕ್ರೂರಳು" ಪಾರ್ವತಿ ಮನಸ್ಸಿನಲ್ಲೇ ಅತ್ತಳು, ಆದರೆ . . . ನಗುವಿನ ಮುಖವಾಡ ಧರಿಸಿ.

"ಆಮೇಲೆ ಇನ್ನೇನು ಇಷ್ಟ ಹೇಳು" ಅಂದಳು.

"ಇನ್ನೇನೂ ಇಲ್ಲ ಅಷ್ಟೇ"

ಪಾರ್ವತಿ ಬೀರು ತೆಗೆದು ಸೀರೆ ತಗೊಂಡು ಅಡಿಗೆಮನೆಗೆ ನಡೆದಳು, ಸುನಂದ ಕಣ್ಣುಮುಚ್ಚಿ ಕುಳಿತಳು.

ಹೆಜ್ಜೆ ಸದ್ದು ಕೇಳಿ ಕಣ್ಣು ತೆರೆದು ನೋಡಿದಳು. ಸುಂದರ ಬಂದು ನಿಂತಿದ್ದ. ಗಂಡನನ್ನು ನೋಡಿದೊಡನೆ ಅವನ ಎದೆಯಲ್ಲಿ ತಲೆ ಇಟ್ಟು ಬಿಕ್ಕಿ ಬಿಕ್ಕಿ ಅಳಬೇಕೆನಿಸಿತು ಅವಳಿಗೆ.

"ನಾನೆಷ್ಟು ಕೆಟ್ಟವಳು! ನಿಮಗೆ ನಾನು ಸುಖ ಕೊಡಲಾರದೇ ಹೋದೆ. ನಿಮ್ಮ ಸುಖದ ಬಾಳಿಗೆ ಅಡ್ಡ ನಿಂತೆ." ಎಂದು ಹೇಳಬೇಕೆನಿಸಿತು. ಪ್ರಯತ್ನಪಟ್ಟು ತನ್ನ ಉದ್ವೇಗವನ್ನು ತಡೆದುಕೊಂಡಳು ಸುನಂದ. ಆದರೂ ಕಣ್ಣಲ್ಲಿ ನೀರು ತುಂಬಿತು. ಸುಂದರ ಅವಳ ಕಣ್ಣೀರನ್ನು ನೋಡಿ ಆಶ್ಚರ್ಯದಿಂದ ಕೇಳಿದ.

"ಏಕೆ ರಾಜಾ ಕಣ್ಣೀರು?" ಸುನಂದ ನಗುತ್ತಾ ಅಂದಳು.

"ಇಷ್ಟಕ್ಕೂ ಮುಂಚೆ ಕಣ್ಣಲ್ಲಿ ಧೂಳು ಬಿತ್ತು"

ಸುಂದರ ಬಾಯಿಬಳಿ ಬಟ್ಟೆಇಟ್ಟು ಬಿಸಿರುಸಿರಿನಿಂದ ಬಿಜ್ಜೆಗೆ ನೂಡಿ ಅದನ್ನು ಕಣ್ಣಿಗೆ ಮೃದುವಾಗಿ ಒತ್ತುತ್ತ,

"ಹೇಗೆ ಬಿತ್ತು" ಎಂದು ಕೇಳಿದ.

ಸುನಂದ ನಕ್ಕಳು. ಆ ನಗುವಿನಲ್ಲಿ ವಿಷಾದದ ಛಾಯೆ ಮೆಲ್ಲನೆ ಕಾಣಿಸಿತು.

"ಹೂಂ ಧೂಳು ಬೀಳುವುದಿಲ್ಲವೆಂಬ ಗರ್ವದಿಂದ ನಾವು ಕಣ್ಣುತೆರೆದೇ ನೋಡುತ್ತಿರುತ್ತೀವಿ. ಧೂಳು ಎಲ್ಲಿದೇ ಎಂದು ಕಾಣಿಸುವುದೂ ಇಲ್ಲ. ಆದರೆ, ಇದ್ದಕ್ಕಿದ್ದ ಹಾಗೆ ಕಣ್ಣಲ್ಲಿ ಧೂಳು ಬೀಳುತ್ತೆ. ಅದೇ ಈ ಪ್ರಪಂಚದಲ್ಲಿ ನಡೆಯೋ ವಿಚಿತ್ರ".

"ಸುನಂದಾ" ಆಶ್ಚರ್ಯದಿಂದ ಹೆಂಡತಿಯನ್ನು ನೋಡಿ ಕರೆದ.

"ಯಾಕ್ರಿ?"

"ಇದೇನು ಹಠಾತ್ತನೆ ವೇದಾಂತ ಹೇಳ್ತಾ ಇದೀಯಲ್ಲಾ."

"ವೇದಾಂತಾ ಅಂದ್ರೆ ಹುಚ್ಚುತನ" ಅಂತ ಹೇಳುತ್ತಿದ್ದ ಸುನಂದಳ ಬಾಯಿಂದ ವೇದಾಂತದ ಮಾತು ಕೇಳಿ ಸುಂದರನಿಗೆ ನಗು ಬಂತು. ನಕ್ಕ.

ಅವನ ಬಿಳುಪಾದ ಹಲ್ಲುಗಳನ್ನು ನೋಡಿದಳು, ಸುನಂದ.

"ಪಾರ್ವತಿ ಭಾಗ್ಯಶಾಲಿ" ಎಂದಿತು ಅವಳ ಹೆಣ್ಣು ಹೃದಯ.

"ಅಂತೂ ನೀನು ಬದಲಾದೆ" ಸುಂದರ ನಕ್ಕು ನುಡಿದ.

"ಜೀವನಗಳೇ ಬದಲಾಗುತ್ತೆ, ಇನ್ನು ನಾನು ಬದಲಾಗುವುದು ಹೆಚ್ಚೇನು?"

"ನಿನ್ನ ಮಾತುಗಳು ಯಾಕೋ ಈ ದಿನ ನನಗೆ ಅರ್ಥವೇ ಆಗುತ್ತಿಲ್ಲ."

ಸುನಂದ ಕಿಲ-ಕಿಲ ನಕ್ಕಳು. ಅವಳ ಅಂತರಾತ್ಮ ಗಳ-ಗಳ ಅತ್ತಿತು.

"ನಾನು ತಮಾಷೆಯಾಗಿ ಮಾತಾಡಿದರೂ ನೀವು ಅರ್ಥ ಮಾಡಿಕೊಳ್ಳೋದಿಲ್ಲ. ನೀವು ನಿಜ ಹೇಳಿದರೂ ನಾನು ಅರ್ಥಮಾಡಿಕೊಳ್ಳೋದಿಲ್ಲ".

ಸುಂದರ ಅವಳನ್ನು ತಬ್ಬಿ ಹೇಳಿದ...

"ಇಲ್ಲ ಸುನೀ! ನಿನ್ನನ್ನು ನಾನು ಚೆನ್ನಾಗಿ ಅರ್ಥ ಮಾಡಿಕೊಂಡಿದ್ದೇನೆ. ನಿನ್ನ ಉಳಿದು ನನಗಿನ್ನೇನೂ ಬೇಕಿಲ್ಲ––ನೀನು––ನೀನು ಮಾತ್ರ ಬೇಕು. ನಿನ್ನ ಪ್ರೇಮದಿಂದ ದೂರವಿರಲಾರೆ" ಎಂದ. ಸುನಂದ ತಮಾಷೆಯಾಗಿ ನಕ್ಕಳು. ಸುಂದರ ಅವಳನ್ನು ಮತ್ತಷ್ಟು ಬಿಗಿದಪ್ಪಿದ, ಅವನ ಆಲಿಂಗನದಲ್ಲಿ ಸುನಂದ ಮೈಮರೆತಳು.

ಘಂಟೆ ಎಂಟು ಹೊಡೆಯಿತು. ಪಾರ್ವತಿ ಒಳಗೆ ಬಂದಳು–– ಕುರ್ಚಿಯಲ್ಲಿ ಕುಳಿತು ತ್ರಿವೇಣಿಯ 'ಸೋತು ಗೆದ್ದವಳು' ಓದುತ್ತಿದ್ದ ಸುಂದರನನ್ನು ಒಮ್ಮೆ ತಿರಸ್ಕಾರವಾಗಿ ನೋಡಿ ಅಕ್ಕನಕಡೆ ತಿರುಗಿ,–

"ಬರ್ತೀಯಾಕ್ಕಾ ಬಡಿಸ್ತೀನಿ– ಬನ್ನಿ ಭಾವಾವ್ರೇ– ರುಚಿ ನೋಡಿ– ಇಷ್ಟವಿಲ್ಲದಿದ್ದರೆ ಬಿಸಾಕಿ ಬಡಿ– ಹಾಲುಖೀರನ್ನ–"

ಸುಂದರ ತಲೆತಗ್ಗಿಸಿಕೊಂಡು ಎದ್ದುಹೋದ.

"ಹಾಲುಖೀರು ಬಿಸಾಡ್ತಾರೇನೇ ಹುಚ್ಚಿ ಹೋಗು ತಟ್ಟೆಹಾಕು ಬರ್ತೀನಿ" ಎಂದು ನಗುತ್ತಾ ಸುನಂದ ಹೇಳಿದಳು. ಪಾರ್ವತಿ ಹೋಗಲು ತಿರುಗಿದಳು.

"ಪಾರೂ ಸ್ವಲ್ಪ ನಿಲ್ಲು"

ಸುನಂದ ಪಾರ್ವತಿಯನ್ನು ಒಮ್ಮೆ ಕಾಲಿಂದ ಮುಡಿವರೆಗೂ ನೋಡಿ ತೃಪ್ತಿಯಿಂದ ನಕ್ಕು,

"ಈಗ ಮದುವೆ ಹೆಣ್ಣಿನಂತೆ ಇದ್ದಿಯಾಮ್ಮಾ ತಲೆ

ತುಂಬಾ ಹೂವು, ಕುಂಕುಮ, ಕೈಯಲ್ಲಿ ಹಸಿರು ಬಳೆ ಭಾಗ್ಯಲಕ್ಷ್ಮಿಯ ಹಾಗೆ ಇದ್ದಿರಿಯಾ" ಎಂದಳು.

"ಭಾಗ್ಯಲಕ್ಷ್ಮಿಯ ಹಾಗೆ ಸಾಯುವುದು ಒಂದು ಅದೃಷ್ಟವೇ. ಅಕ್ಕ ಈ ವಿಷಯದಲ್ಲಿ ನನ್ನ ಭಾಗದ ದೇವತೆಯಾಗಿದ್ದಾಳೆ" ಮನಸ್ಸಿನಲ್ಲೇ ಅಕ್ಕನನ್ನು ವಂದಿಸಿದಳು. ಆದರೆ ಏಕೋ ಅಕ್ಕನ ಕಾಲಿಗೆ ನಮಸ್ಕರಿಸಬೇಕೆನಿಸಿತು ನಮಸ್ಕರಿಸಿದಳು.

"ದೀರ್ಘ ಸುಮಂಗಲೀ ಭವ" ನಗುನಗುತ್ತಾ ಆಶೀರ್ವಾದ ಮಾಡಿದಳು ಸುನಂದ. ಪಾರ್ವತಿ ಆಶ್ಚರ್ಯದಿಂದ ಅಕ್ಕನನ್ನು ನೋಡಿ ಬಲವಂತದಿಂದ ತೃಪ್ತಿಯ ನಗು ಬೀರಿ "ಮದುವೆ ಆದಮೇಲೆ ಮಾಡಬೇಕಾದ ಆಶೀರ್ವಾದ ಇದು" ಎಂದಳು.

"ನನ್ನ ಕಣ್ಣಿಗೆ ನೀನು ಈದಿನ ಮದುವಣಗಿತ್ತಿಯ ಹಾಗೆ ಕಂಡೆ, ಅದಕ್ಕೆ ನನ್ನರಿವಿಲ್ಲದೆಯೇ ಹಾಗೆ ಆಶೀರ್ವಾದ ಮಾಡಿದೆ. ಸರಿ ಹೋಗಿ ಅನ್ನ ಬಡಿಸು..." ಸುನಂದ ಪಾರ್ವತಿಯನ್ನು ಕಳುಹಿಸಿ ಮಗುವಿಗೆ ಹಾಲು ಕೊಟ್ಟು ಮಲಗಿಸಿದಳು.

ಮಗುವಿಗೆ ಎಷ್ಟು ಹಾಲುಣ್ಣಿಸಿದರೂ ಸುನಂದಳಿಗೆ ತೃಪ್ತಿಯಾಗಲಿಲ್ಲ. ಹಾಲು ಕುಡಿಯುವಾಗ ಮಗುವಿಗೆ ಎಷ್ಟು ತೃಪ್ತಿ ದೊರೆಯುತ್ತದೋ ಅಷ್ಟೇ ತೃಪ್ತಿ ತಾಯಿಗೂ ಇರುತ್ತದೆ ಎಂದುಕೊಂಡಳು ಸುನಂದ.

ಪಾರ್ವತಿ ಒಳಗಿಂದ ಅಕ್ಕನನ್ನು ಕೂಗಿದಳು. ಮಗುವನ್ನು ಎದೆಗಪ್ಪಿ ಮಮತೆ ಪ್ರೀತಿ ವಾತ್ಸಲ್ಯಗಳಿಂದ ಮುತ್ತುಕೊಟ್ಟು ತೊಟ್ಟಿಲಲ್ಲಿ ಮಲಗಿಸಿ ಸುನಂದ ಅಡಿಗೆಮನೆಗೆ ಹೋದಳು.

ಸುನಂದಳ ಪಕ್ಕದಲ್ಲಿ ಸುಂದರ ಕುಳಿತುಕೊಂಡ. ಪಾರ್ವತಿ ಅನ್ನ ಬಡಿಸಿದಳು. ತಲೆ ಬಗ್ಗಿಸಿ ಊಟ ಮಾಡುತ್ತಿದ್ದ ಸುಂದರ ತಲೆ ಎತ್ತಿ ನೋಡಿದರೆ ಪಾರ್ವತಿಯ ಕೆಂಪನೆಯ ಕ್ರೋಧ ತುಂಬಿದ ಕಣ್ಣುಗಳನ್ನು ಕಾಣಬೇಕಾಗುವುದೇನೋ ಎಂಬ ಹೆದರಿಕೆ. ಆದರೆ ಪಾರ್ವತಿ ಅಕ್ಕನೊಡನೆ ನಗುತ್ತಾ ಮಾತಾಡುತ್ತಿದ್ದಳು. ಸುನಂದ ತುಂಬು ಸಂತೋಷದಿಂದ ಇದ್ದಳು.

"ಅಕ್ಕಾ ಪಾಯಸ ಬಡಿಸಲೆ?"

"ಈವತ್ತು ನನಗೆ ತುಂಬಾ ಬಡಿಸು" ಪಾರ್ವತಿ ಅಕ್ಕನಿಗೆ ಬಡಿಸಿದಳು. ಸುನಂದ ರುಚಿನೋಡಿ "ಶಭಾಷ್ ತಂಗಿ ಅಮೃತದಹಾಗೆ ಇದೆ."ಎಂದು ಪಾತ್ರೆಯನ್ನು ತೆಗೆದು ಗಂಡನ ತಟ್ಟೆಗೆ ಬಗ್ಗಿಸಿದಳು. ಅವಳ ಕೈಯಿಂದ ಪಾತ್ರೆ ಜಾರಿ ತಟ್ಟೆಯಲ್ಲಿ ಬಿತ್ತು.

"ಅರೇರೇ ಏನು ಸುನಿ ಇದು!" ಸುಂದರ ಬೆಚ್ಚಿ ಬಿದ್ದು ಕೇಳಿದ. ಸುನಂದ ಪಕ ಪಕ ನಗುತ್ತಿದ್ದಳು.

"ಪಾರೀ ನಿನಗೆ ಹಾಲುಖೀರು ಮಿಗಿಸಲೇ ಇಲ್ಲ ನೋಡು ಅವರ ತಟ್ಟೆಯಿಂದ ಸ್ವಲ್ಪ ತಗೊ" ಸುನಂದ ನಗುವಿನ ನಡುವೆ ಹೇಳಿದಾಗ ನಗುತ್ತಿದ್ದ ಪಾರ್ವತಿಯ ಮುಖ ಬಿರುಸಾಯ್ತು.

"ಬೇಡಕ್ಕಾ ನನಗೆ ಹಾಲು ಖೀರು ಇಷ್ಟವಿಲ್ಲ."

"ನಾವಿಬ್ಬರೂ ಸಿಹಿ ತಿಂದು ನೀನು ಹಾಗೇ ಇರಬೇಕೇನು." "ದಯವಿಟ್ಟು ಬಲವಂತಪಡಿಸಬೇಡಕ್ಕ ನೀನು ತಿಂದರೆ ನಾನು ತಿಂದಷ್ಟು ಸಂತೋಷ."

"ನೀನು ತಿನ್ನದಿದ್ದರೆ ನನಗೆ ತುಂಬಾ ದುಃಖ ಆಗುತ್ತೆ ಪಾರಿ" ನೊಂದು ಹೇಳಿದಳು ಸುನಂದ.

ಪಾರ್ವತಿ ತಲೆ ಬಗ್ಗಿಸಿ ಹೇಳಿದಳು "ಕ್ಷಮಿಸಕ್ಕ ನಾನು ಎಂಜಲು ತಿನ್ನೋದಿಲ್ಲ."

ಗಟ್ಟಿಯಾಗಿ ನಕ್ಕು ಹೇಳಿದಳು ಸುನಂದ "ಅವರ ಎಂಜಲು ನೀನು ತಿಂದಿಲ್ವೆ? ಬರೀ ಸುಳ್ಳು" ಏಟು ತಿಂದವನಂತೆ ಸುಂದರ ತಲೆ ಎತ್ತಿ ಸುನಂದಳಕಡೆ ನೋಡಿದ.




"ಲೋ ಖಾಲಿ ಪರ್ಸ್ ಕಣೊ ಅದು, ಲಪಟಾಯಿಸಿದರೆ ನಿಂಗೆ ತುಂಬ ನಿರಾಸೆ ಆಗುತ್ತೆ ನೋಡು !"

ಪಾರ್ವತಿ ಸಂದೇಹದಿಂದ ತುಸು ಭೀತಿಯಿಂದ ಅಕ್ಕನನ್ನು ನೋಡಿದಳು.

"ಪಾರಮ್ಮಾ ನೀನು ನನ್ನ ಎಂಜಲು ತಿಂದಿಲ್ವೆ?"

"ಹೂಂ ಆದರೆ ನಾನು...ನಾನು ನಿಮ್ಮ ಭಾವನ ಎಂಜಿಲು ತಿಂದಿದ್ದೀನಿ''

ಪಾರ್ವತಿ ಮೌನಿಯಾದಳು.

ಎಂಜಲು ಹಣ್ಣು ತಾನು. ಅದೂ ಭಾವ ಕಚ್ಚಿದ ಹಣ್ಣು ತಾನು.

ಸಾಯಲು ಹೊರಟಿರುವ ತಾನು ಅಕ್ಕನ ಮನಸ್ಸೇಕೆ ನೋಯಿಸಬೇಕು?

ಪಾರ್ವತಿ ಭಾವನ ತಟ್ಟೆಯಿಂದ ಹಾಲುಖೀರು ತಗೊಂಡು ಕುಡಿದಳು. ಅವಳಿಗೆ ಮದುವೆಯ ಶಾಸ್ತ್ರ ನೆನಪಿಗೆ ಬಂತು. ನಿಟ್ಟುಸಿರು ಬಿಟ್ಟಳು ಪಾರ್ವತಿ. ಸುಂದರ ತಲೆಬಗ್ಗಿಸಿಕೊಂಡು ಹಾಲುಖೀರು ಕುಡಿದ. ಮದುಮಕ್ಕಳನ್ನು ನೋಡಿ ತೃಪ್ತಿ ಪಡುವ ತಾಯಿಯಂತೆ ಅವರಿಬ್ಬರನ್ನೂ ಕಣ್ಣು ತುಂಬಾ ನೋಡುತ್ತಾ ಮೈಮರೆತಳು ಸುನಂದ.

"ಅಕ್ಕಾ ! ನೀನು ಎಂದಾದ್ರೂ ಇಂಗ್ಲಿಷ್ ಚಿತ್ರ ನೋಡಿದ್ದೀಯೇನು ?" ಇದಕ್ಕಿದ್ದ ಹಾಗೆ ಕೇಳಿದಳು ಪಾರ್ವತಿ.

ಮಜ್ಜಿಗೆ ಅನ್ನ ಕಲಿಸುತ್ತಿದ್ದ ಸುಂದರನ ಕೈಗಳು ಒಂದು ಕ್ಷಣ ಹಾಗೆಯೇ ನಿಂತವು . . . ಪ್ರಪಂಚವೇ ಚಲನವಿಲ್ಲದೆ ನಿಂತಂತಾಯ್ತು ಅವನಿಗೆ. ಪಾರ್ವತಿ, ಚೇತನವಿಲ್ಲದೆ ನಿಂತ ಅವನ ಕೈಯನ್ನು ನೋಡಿ ನಕ್ಕು ಮತ್ತೆ ಕೇಳಿದಳು . . . "ನೋಡಿದಿ ಏನಕ್ಕಾ"

"ಇಲ್ಲ''— ತಂಗಿಯ ಪ್ರಶ್ನೆಯಲ್ಲಿ ಅರ್ಥ ಏನಿರಬಹುದೆಂತ ಊಹಿಸುತ್ತಾ ಉತ್ತರವಿತ್ತಳು ಸುನಂದ.

"ನಾನು ಕಥೆ ಪುಸ್ತಕ ಒಂದು ಓದಿದ್ದೆ, ಅದರಲ್ಲಿ, ಕಥಾನಾಯಕ, ಛೆ ಛೆ.... ಅಲ್ಲ ಖಳನಾಯಕ

ಅವನೇ……… ಹುಡುಗಿಯೊಡನೆ ಪಾರ್ಕಿಗೆ ಹೋಗ್ತಾನೆ.... ಹುಡುಗಿ ಇಂಗ್ಲಿಷ್ ಚಿತ್ರ ನೋಡ ಬೇಕೂಂತ ಕೇಳ್ತಾಳೆ ಆ ಹುಚ್ಚಿ; ಆಶೆಗಳಿಗೆ ಕಡಿವಾಣ ಹಾಕೋದಕ್ಕೆ ಆಗದ ಹುಚ್ಚು ಅವಳು.... ಸರಿ ಚಿತ್ರ ನೋಡಿದರು....ಮಳೆ ಚಳಿ....ಕೇಳ್ಬೇಕೆ?....ಎಂದು ಗುಡುಗಿನ ಶಬ್ದಕ್ಕೆ ಇಬ್ಬರೂ ಒಂದಾದ್ರೂ.... ಅಷ್ಟೇ–– ಮುಗೀತು ಕಥೆ.... ಹುಡುಗ ಚಲಚಲ್‌ರೇ ಸಾಜನಾನಂತೆ ಹೊರಟು ಹೋದ.... ಹುಡುಗಿ 'ಮರತ್ತೂಕು ಕಾಯಿ ಭಾರಮಾಂತ' ಹಾಡೋದಕ್ಕೆ ಶುರುಮಾಡಿದಳು..."

ಕಿಲ ಕಿಲ ನಕ್ಕಳು ಪಾರ್ವತಿ.... ಸುನಂದಳಿಗೆ ಅರ್ಥವಾಯಿತು....ಆ ಹೆಣ್ಣು ಗಂಡು ಬೇರೆ ಯಾರೂ ಅಲ್ಲ ತನ್ನ ಗಂಡ ತನ್ನ ತಂಗಿ.... ಆದರೆ ತಂಗಿ ಹೇಳಿದ ರೀತಿ ನೋಡಿ ಅವಳಿಗೆ ನಗು ಉಕ್ಕಿ ಬಂತು–ಅವಳು ತಂಗಿಯೊಡನೆ ಸೇರಿ ನಕ್ಕಳು....

ಆ ಅಕ್ಕತಂಗಿಯರ ನಗುವಿನ ಸಮುದ್ರದಲ್ಲಿ ಮುಳುಗಿದ ಸುಂದರ ಉಸಿರು ಕಟ್ಟಿದಂತಾಗಿ ಒಳ ಗೊಳಗೆ ಒದ್ದಾಡುತಿದ್ದ.... ಅವನಿಗೆ ಅಲ್ಲಿಂದ ಎದ್ದು ಹೋದರೂ ಸಾಕೆನಿಸಿತು.

ಸುನಂದ ನಗು ನಿಲ್ಲಿಸಿ ಗಂಡನ ಕಡೆ ತಿರುಗಿ ಕೇಳಿದಳು, "ಈ ದಿನ ಚಿತ್ರಕ್ಕೆ ಹೋಗೋಣವೇ?"–

ಸುಂದರ ತಲೆ ಎತ್ತದೆ ಕೇಳಿದ 'ಯಾವ ಪಿಕ್ಚರಿಗೆ?'

"ಶ್ರೀನಿವಾಸ ಕಲ್ಯಾಣ ಬಂದಿದೆಯಂತೆ. ಒಳ್ಳೇ ಚಿತ್ರ ಅಲ್ವೆ ಪಾರೀ"

"ಹು ಹುಂ.... ನನಗೆ ಶ್ರೀನಿವಾಸನ್ನ ಕಂಡ್ರೆ ಆಗೋದಿಲ್ಲ ಅಕ್ಕಾ"

"ಯಾಕೆ!" ಆಶ್ಚರ್ಯದಿಂದ ಕೇಳಿದಳು.... ಸುನಂದ.

"ಅವನು ದ್ರೋಹಿ....ಚಂಡಾಲ....ಪಾಪಿ"

"ಸಾಕು ನಿಲ್ಲಿಸು....ದೇವರನ್ನ ಹಾಗೆಲ್ಲಾ ಬೈಯ ಬೇಡ ಸದ್ಯ" ಭಯದಿಂದಲೇ ಹೇಳಿದಳು ಸುನಂದ.

"ತಪ್ಪು ಮಾಡಿದವನು ದೇವರೇ ಆಗಲಿ ಯಾರೇ ಆಗ್ಲಿ ಬುದ್ಧಿ ಕಲಿಸಲೇಬೇಕು...."

"ಏನು ತಪ್ಪು ಮಾಡಿದ?"

"ನೀನೇ ಹೇಳಕ್ಕಾ.... ಲಕ್ಷ್ಮಿ ಅಂದರೆ ಪ್ರಾಣ ಶ್ರೀನಿವಾಸನಿಗೆ. ಅವಳನ್ನು ಎದೆಯಲ್ಲಿಯೇ ಇಟ್ಟು ಕೊಂಡಿದ್ದ, ಆ ಬೂಟಾಟಕೆ ದಾಸಯ್ಯ.... ಸರಿ, ವೈಕುಂಠ ಬಿಟ್ಟು ಲಕ್ಷ್ಮೀ ಬಂದಾಗ.... ಈ ದೇವ ರನೋ ರಾಕ್ಷಸ ಹೆಂಡತೀನ ಹುಡುಕ್ತೀನಿಂತ ವೈಕುಂಠ ಬಿಟ್ಟುಬಂದು ಬಿಟ್ಟ .... ಪಾಪ ಹೇಳಿದ ಹಾಗೆ ಮಾಡಿದ. ಹೆಂಡತಿಯನ್ನು ಹುಡುಕಿದ.... ಆದರೇ ಲಕ್ಷ್ಮಿಯನ್ನಲ್ಲ ಪದ್ಮಾವತಿಯನ್ನ..."




ಚುಟಕನ್ನು, ನಿನಗೆ ಬೇಕೇನು ಪ್ರಖ್ಯಾತಿ ?
ಪ್ರಖ್ಯಾತಿ ಗಳಿಸಿದರೆ ಬೀದಿಯಲಿ ಕೋತಿ
ಎಲ್ಲರೂ ಬೆನ್ನುಹತ್ತುವರು, ನೂರಾಯಾ
ಬಾಯೊಳಗೆ ಹಾಕುವರು ಪಂಚಕಜ್ಜಾಯ

— ದಿನಕರ ದೇಸಾಯಿ

"ಏನು ಮಾಡೋದು.... ಪದ್ಮಾವತಿಯ ಮೇಲಿನ ಅವನಿಗೆ ಪ್ರೇಮ ಉಂಟಾಯಿತು...."

ಅವನ ತಲೆ––

"ಮೋಹ....ಪ್ರೇಮ ಅಷ್ಟೆ.... ಸರಿ ಹೇಳ್ತಾನೆ ಮದುವೆಮಾಡಿಕೊಂಡ. ಮಧುಚಂದ್ರಕ್ಕೆ, ಬಂದ, ಲಕ್ಷ್ಮಿ ಬಂದು ಗಂಡನ್ನ ಇದು ನ್ಯಾಯವೇಂತೆ? ಕೇಳಿದಾಗ ಈ ದೇವರನ್ನ.... ಮನುಷ್ಯ ಏನುಹೇಳಬೇಕು....

"ತಪ್ಪಾಯ್ತು....ಅವಳಿಗೂ ಬಾಳು ಕೊಟ್ಟುಬಿಟ್ಟೆ ನೀನೇ ಕಾಪಾಡೂಂತ ಹೇಳಿರಬೇಕು. ಆದ್ರೆ ಆ ದೇವರು ಅನ್ನೊ ಸ್ವಾರ್ಥಿ ನೀವಿಬ್ಬರೂ ಜಗಳ ಆದ್ರು ಮಾಡಿ, ಖೂನಿಯಾದ್ರು ಮಾಡ್ಕೊಳ್ಳಿಂತ ಕಲ್ಲಾಗಿ ನಿಂತು ಬಿಟ್ಟ...."

ಸುನಂದ "ಹೋ" ಎಂದು ನಕ್ಕಳು....

ಸುಂದರನಿಗೆ, ತನ್ನನ್ನ ಯಾರೋ ಮರಕ್ಕೆ ಕಟ್ಟಿ ಹಾಕಿ ಬೆನ್ನಿನ ಮೇಲೆ ಕಾದ ಕಬ್ಬಿಣ ಇಟ್ಟಂಗಾಯ್ತು.... ಅವನ ಮುಖ ಬೆವೆತು ಕೆಂಪಾಯ್ತು.... ಅದನ್ನು ನೋಡಿ ಸುನಂದಳ ಹೃದಯ "ಅಯ್ಯೋ ಪಾಪ...." ಎಂದು ಕೊಂಡಿತು....

"ನೋಡು ಪಾರು, ಪದ್ಮಾವತಿಯನ್ನ ಮದುವೆ ಯಾಗದಿದ್ದರೆ ಕಲಿಯುಗಕ್ಕೆ ಕಂಡ ಕಂಡ ದೇವ್ರು ಶ್ರೀನಿವಾಸ ಸಿಗುತ್ತಿದ್ದನೇ ಎಲ್ಲಾ ಅವನ ಲೀಲೆ ತಾಯಿ!"

ಸುಂದರ ಕೈ ತೊಳಕೊಂಡು ಎದ್ದು ಹೋದ.

"ಸರಿಸರಿ ಬೇಗ ಏಳು ಮದುವೆಗೆ ಹೊತ್ತಾಯ್ತು" ಸುನಂದ ಕೈತೊಳೆಯುತ್ತಾ ಹೇಳಿದಾಗ, ಪಾರ್ವತಿ ಆಶ್ಚರ್ಯದಿಂದ ಕೇಳಿದಳು.

"ಯಾರ ಮದುವೆ ಅಕ್ಕ."

"ಶ್ರೀನಿವಾಸ ಕಲ್ಯಾಣಕ್ಕೆ" ನಗುತ್ತಾ ಹೇಳಿದ ಸುನಂದ ತನ್ನ ರೂಂಗೆ ನಡೆದಳು.

ಅಲ್ಲಿ ಹಾಸಿಗೆಯಲ್ಲಿ ಬೆಪ್ಪಾಗಿ ಕುಳಿತಿರುವ ಗಂಡ ನನ್ನು ನೋಡಿ ಅವಳ ಕಣ್ಣಲ್ಲಿ ನೀರು ತುಂಬಿತು. ಅದನ್ನು ಮರೆಮಾಚಿ ನಗುತ್ತಾ ಕೇಳಿದಳು.

"ಏನು ಯಜಮಾನ್ರೇ! ಇಲ್ಲಿ ನೀವು ಕಲ್ಲಿನಹಾಗೆ ಕುಳಿತಿದೀರಲ್ಲ"

ಸುಂದರ ಮಾತಾಡದೆ ಸುನಂದಳ ಕೈಹಿಡಿದು ತನ್ನ ಬಳಿಗೆ ಎಳೆದುಕೊಂಡ.

ಸುನಂದ ಅವನ ಗುಂಗುರು ಕ್ರಾಪನ್ನು ಬೆರಳಿನಿಂದ ಚಿಕ್ಕು ಬಿಡಿಸುತ್ತಾ ಕೇಳಿದಳು. "ನಾನೊಂದು ಕೇಳ್ತೀನಿ ನಿಜ ಹೇಳ್ತೀರಾ ! "

ಸುಂದರನ ಹೃದಯ ಜೋರಾಗಿ ಹೊಡೆದುಕೊಂಡಿತು. ಒಣಗಿದ ಧ್ವನಿಯಲ್ಲಿ ಹೇಳಿದ "ಹೂ ಏನು!"

"ನನ್ನ ನೀವು ತುಂಬಾ ಪ್ರೀತಿಸ್ತೀರಾ ನಿಜ ಹೇಳಬೇಕು."

ನಿಟ್ಟುಸಿರು ಬಿಟ್ಟ ಸುಂದರ.

"ಸುನೀ ದೇವರಲ್ಲಿ ನಾನು ಕೇಳೂದು ಒಂದೇ ಒಂದು ಕೋರಿಕೆ ಏನು ಗೊತ್ತೆ, ಏಳೇಳು ಜನ್ಮಕ್ಕೂ ಸುನೀನೇ ನನ್ನ ಹೆಂಡತಿಯಾಗಿ ಅನುಗ್ರಹಿಸು ಎಂದು. ಸುನೀ ನೀನು ನನ್ನ ದೇವತೆ."

ಗಂಡನನ್ನು ಒಮ್ಮೆ ಪ್ರೀತಿಯಿಂದ ತಬ್ಬಿ ಅವನ ತುಟಿಗಳಿಗೆ ಆಶೆ ಆಕಾಂಕ್ಷೆಗಳಿಂದ ಮುತ್ತು ಕೊಟ್ಟಳು.

ಸುಂದರ ಆಶ್ಚರ್ಯದಿಂದ ಹೆಂಡತಿಯನ್ನು ನೋಡಿದ.

"ಇದೇನು ಇದ್ದಕ್ಕಿದ್ದಹಾಗೆ ದೇವಿಗೆ ಭಕ್ತನ ಮೇಲೆ ಅಪಾರ ಕರುಣೆ, ಕೇಳಿದ್ರೂ ಕೊಡದಿರೊ ವರಾನ್ನ ಕೇಳದೇನೇ ಅನುಗ್ರಹಿಸಿಬಿಟ್ಟರಲ್ಲಾ"

ಸುನಂದ ಮುಗಳ್ನಗೆ ಬೀರಿದಳು ಅಷ್ಟೇ. ಸುಂದರ ಹೆಂಡತಿಯ ಕಡೆ ತಿರುಗಿ ತುಂಟತನವಾಗಿ ಕೇಳಿದ.

"ಗಂಡು ಮಗು ಸಿಗಬೇಕೂಂತ ಆಸೆ ಏನು!"

"ಆಗೇ ಆಗುತ್ತೆ" ಸುನಂದ ನಗುತ್ತಾ ತೊಟ್ಟಿಲ ಕಡೆ ಹೋದಳು.

"ಸರಿ ದೇವಿಯಿಚ್ಛೆ"

"ಸ್ವಲ್ಪ ಹೂವು. ವೀಳೆದೆಲೆ ತರ್ತೀರಾ?"

"ಓ ಎಸ್ ಅಮ್ಮಾವ್ರು ಏನು ಹೇಳಿದ್ರೂ ತರ್ತೀನಿ"

ಸುಂದರ ಚಿಕ್ಕ ಹುಡುಗನಂತೆ ಓಡಿದ. ಅವನಿಗೆ ಹೆಂಡತಿಯ ಪ್ರೇಮದಲ್ಲಿ ಪಾರ್ವತಿಯ ಅಳು, ಕೋಪ ಮರೆತು ಹೋಯ್ತು.

ಸುನಂದಳಿಗೆ ಅಳು ಬಂತು... ನನ್ನ ಜೀವನದಲ್ಲಿ ಇದೇ ಕೊನೆ ದಿನ ಸುದಿನ... ತನ್ನ ತಂಗಿಗೆ ಬಾಳನ್ನು ಕೊಡುವ ದಿನ... ತನ್ನ ಗಂಡನನ್ನು ದೇವರನ್ನಾಗಿ ಮಾಡುವ ದಿನ. ಸುನಂದ ಬಾಗಿಲು ಮುಚ್ಚಿ ಕಾಗದ ಬರೆಯಲು ಆರಂಭಿಸಿದಳು... ಅರ್ಧ ಗಂಟೆ ಒಳಗೆ ಕಾಗದಗಳನ್ನು ಬರೆದು ಮುಗಿಸಿ ತಲೆದಿಂಬು ಕೆಳಗೆ ಇಟ್ಟು, ಉಂಗರವನ್ನು ತೆಗೆದು ಪುಡಿಮಾಡಿದಳು.

*

ಬಾಗಿಲು ತಟ್ಟಿದ ಶಬ್ದ ಕೇಳಿ ಸುನಂದ ಬಾಗಿಲು ತೆಗೆದಳು. ಪಾರ್ವತಿ ಹಾಲು ಗ್ಲಾಸು ಹಿಡಿದು ನಿಂತಿದ್ದಳು. ಎಷ್ಟು ಸಮಯ ಅವಳು ಅಳುತ್ತಿದ್ದಳೇನೋ ಕಣ್ಣು ಕೆಂಪಾಗಿತ್ತು.

"ಹಾಲು ಕುಡಿಯಕ್ಕಾ"

"ಅಲ್ಲೇ ಇಡು ಅವರೂ ಬರಲಿ. ಅಡಿಗೆಮನೆ ಕೆಲಸ ಮುಗಿಸಿದಿಯಾ? "

"ಇಲ್ಲಕ್ಕಾ ಮುಗಿಸ್ತೀನಿ"

"ಬೇಗ ಬೇಗ ಟೈಂ ಆಯ್ತು"

"ಆಗಲಕ್ಕಾ" ಪಾರ್ವತಿ ಹೊರಟು ಹೋದಳು. ಹಾಲು ತುಂಬಿದ ಗ್ಲಾಸನ್ನು ಒಮ್ಮೆ ನೋಡಿ ನಕ್ಕಳು. ನಂತರ ವಜ್ರದ ಪುಡಿಯನ್ನು ತೆಗೆದು ಕಲಿಸಿದಳು. ಮತ್ತೊಂದು ಹಾಲಿನ ಗ್ಲಾಸನ್ನು ದೂರವಿಟ್ಟಳು.

ಮತ್ತೆ ಮಗುವನ್ನು ಎತ್ತಿಕೊಂಡು ಹಾಲುಕೊಟ್ಟಳು. ಏಕೋ ಅವಳಿಂದ ದುಃಖ ತಡೆಯಲು ಆಗಲಿಲ್ಲ.

"ಇನ್ನು ಈ ಮಗು ತಾಯಿಯಿಲ್ಲದ ತಬ್ಬಲಿ. ತಾಯಿ ಹಾಲುಣ್ಣಲು ಭಾಗ್ಯ ಪಡೆಯದ ಮಗು ಪಾಪಿ ಪಾ - - ಪು" ಅವಳ ತಾಯಿ ಹೃದಯ ಚೀರಿತು. ಮಗುವನ್ನು ರಭಸದಿಂದ ಅಪ್ಪಿ ಮುದ್ದಿಟ್ಟಳು. ತಾಯಿಮಡಿಲಿನಲ್ಲಿ ಸುಖ ಇನ್ನು ತನಗಿಲ್ಲ ಎಂದು ತಿಳಿಯದ ಮಗು ನಕ್ಕಿತು - - -

"ನಗು ಕಂದಾ, ನಗು--- ನಗನಗುತ್ತಾ ಬಾಳಿ ಬದುಕು" ತಾಯಿ ಆಶೀರ್ವಾದ ಮಾಡಿದಳು ಮನಸ್ಸಿಲ್ಲದೆಯೆ ಮಗುವನ್ನು ತೊಟ್ಟಿಲಲ್ಲಿ ಬಿಟ್ಟು ಕಣ್ಣು ಒರೆಸಿ ನಗುವಿನ ಮುಖವಾಡ ಧರಿಸಿ, ಗಂಡನಿಗಾಗಿ ಕಾದು ಕುಳಿತಳು.

ಸುಂದರ ಹೂವು ವೀಳದೆಲೆ ತಂದು ಸುನಂದಳ ಮುಂದೆ ಇಟ್ಟು,

"ಹೂಂ-- next ಏನಾಜ್ಞೆ?" ಎಂದು ನಕ್ಕ- ಅವನ ನಗುವಿನ ಮುಖವನ್ನು ನೋಡುತ್ತಾ ಮೈ. ಮರೆತಳು.

"ಛಿ! ನನ್ನನ್ನೇನು ಹೊಸದಾಗಿ ನೋಡ್ತಾಇದಿರಾ" ಸುನಂದ ಎಚ್ಚೆತ್ತಳು. ಅವಳ ನೆನಪು ಹಿಂದಕ್ಕೆ ಹೋಯ್ತು--- ಒಂದು ದಿನ ತಂದೆ ತನ್ನನ್ನು ತವರಿಗೆ ಕರೆದುಕೊಂಡು ಹೋಗಲು ಬಂದಾಗ ಇದೇ ಮಾತು ಹೇಳಿದ್ದ ಗಂಡ. ಇಂದು ಕೂಡ ತಾನು ತವರಿಗೆ ಹೊರಟಿದ್ದಾಳೆ. ಮರಳಿಬಾರದ ತವರುಮನೆಗೆ.

"ಏನು ಯೋಚನೆ ರಾಣಿಸಾಹೇಬರಿಗೆ?" ಚೇಷ್ಟೆಯಿಂದ ಕೇಳಿದ ಸುಂದರ.

"ಏನಾಜ್ಞೆ ಕೊಡೋಣಾಂತ ಯೋಚನೆ ಮಾಡ್ತಾ ಇದ್ದೀನಿ"



"ಅವರು, ಮಗು ನನ್ನ ಎರಡು ಕಣ್ಣು ಚೆನ್ನಾಗಿ ನೋಡಿಕೊ" ಎಂದು ಬಹಳ ಕಷ್ಟದಿಂದ ಹೇಳಿ ಅವರ ಕೈಸೇರಿಸಿದಳು.

"ಹೇಳಿ ಒಡ್ತಿ, ಏನು ನಿಮ್ಮ ಆಣತಿ''

"ಹೇಳಿದ ಮೇಲೆ ತಪ್ಪಬಾರದು''

"ಹು ಹೂಂ-- ಇಲ್ಲ''

"ಸರಿ, ಈಗ ಆ ಹಾಲು ಕೊಡಿ. ನೀವೇ ಕುಡಿಸಬೇಕು'' ಮುದ್ದಿನಿಂದ ಹೇಳಿದಳು ಆ ಅಭಾಗಿನಿ.

"ಆಹಾ! ಧನ್ಯನಾದೆ ದೇವಿ. ಧನ್ಯನಾದೆ''

ಅವಳ ಹೃದಯ ಯಾತನೆಯಿಂದ ಚೀರಿತು.

ಸುಂದರ ಗ್ಲಾಸು ತಂದ. ಸುನಂದ ಆ ಗ್ಲಾಸನ್ನು ನೋಡಿ ತಲೆ ತಿರುಗಿಸಿಕೊಂಡಳು.

"ಸುನಿ! ನಾನು ಕುಡಿದು ನಿನಗೆ ಕೊಡ್ತೀನಿ, ಆಗಿನ್ನೂ ರುಚಿ---'' ಗ್ಲಾಸನ್ನು ತುಟಿಯ ಬಳಿ ತೆಗೆದುಕೊಂಡು ಹೋದ, ಸುನಂದ ಭಯದಿಂದ ಚಟ್ಟನೆ ಗ್ಲಾಸು ಅವನ ಕೈಯಿಂದ ಕಿತ್ತುಕೊಂಡಳು.

"ಬೇಡಿ, ಬೇಡಿ'' ಎಂದು ಹಾಲನ್ನು ಒಂದೇ ಗುಟುಕಿನಲ್ಲಿ ಕುಡಿದುಬಿಟ್ಟಳು.

ಸುಂದರ ಜೋರಾಗಿ ನಕ್ಕು,

"ಹೊಟ್ಟೆಬಾಕಿ ಕಣೆ ನೀನು" ಎಂದ.

ಸುನಂದ ದೀನವಾಗಿ ಗಂಡನ ಕಡೆ ನೋಡಿ ಎರಡೂ ಕೈ ಚಾಚಿದಳು. ಸುಂದರ ಅವಳ ಆಲಿಂಗನದಲ್ಲಿ ಕರಗಿಹೋದ.

ಒಂದು ನಿಮಿಷದನಂತರ ಸುನಂದ ಕೇಳಿದಳು.

"ರಾಮು--ಶಶಿ ಏನಾದರು ?''

ಬೆಂಕಿ [illegible] ಮಾತಿನಿಂದ ಸುಂದರ [illegible] ಹೇಳಿದ "ಈಗೇಕೆ ಅವರ [illegible] ?''

ನಕ್ಕಳು ಆ [illegible].

"ಶಶಿನ ಮದುವೆ ಮಾಡ್ಕೋಬಹುದು ರಾಮು''

"ಸುನೀ''-- ಗಟ್ಟಿಯಾಗಿ ಕೂಗಿದ ಸುಂದರ.

"ಹೌದು, ರಾಮುನ ಹೆಂಡತಿ ಇನ್ನು ಅವರ ಬಾಳಿಗೆ ಕಲ್ಲಾಗಿರೋದಿಲ್ಲ...ಮಣ್ಣಾಗಿರುತ್ತಾಳೆ''

ಪ್ರಪಂಚವೇ ತಿರುಗಿದಂತಾಯ್ತು.

"ಸುನೀ... ಸುನೀ'' ಆರ್ತನಾಗಿ ಕೂಗಿದ.

"ನನಗೆಲ್ಲಾ ಗೊತ್ತಾಯ್ತು, ನಾನಿರೋವಾಗ ಪಾರೂಗೆ ನೀವು ಬಾಳು ಕೊಡೋದಿಲ್ಲ. ಅದಕ್ಕೆ ನನ್ನ ಬಾಳು ಅವಳಿಗೆ ಕೊಟ್ಟು ನಾನು ಸಂತೋಷದಿಂದ ಕಣ್ಣು ಮುಚ್ಚುತ್ತೇನೆ''.

"ಏನು ಮಾಡ್ಕೊಂಡೆ ಸುನೀ ನೀನು ಏನು ಮಾಡ್ಕೊಂಡೆ!'' ಆತುರನಾಗಿ ಅವಳನ್ನು ಅಪ್ಪಿ ಕೇಳಿದ.

"ವಿಷ'' ಸೊರಗುತ್ತ ಬಂದಳು ಸುನಂದ.

ಅಲ್ಲಿಗೆ ಓಡಿ ಬಂದ ಪಾರ್ವತಿಯ ಕಿವಿಯಲ್ಲಿ ಆ ಮಾತು ಬಿದ್ದಾಗ ಚೀರಿ ಅಕ್ಕನ ಕಾಲಮೇಲೆ ಬಿದ್ದಳು.

"ಡಾಕ್ಟರನ್ನ ಕರೆತರ್ತೀನಿ'' ಓಡಲು ಹೋದ ಸುಂದರ. ಅವನನ್ನು ಬಲವಾಗಿ ಹಿಡಿದುಕೊಂಡಳು, ಸುನಂದ.

"ಈಗ ನೀವು ನನ್ನ ಬಿಟ್ಟು ಎಲ್ಲೂ ಹೋಗ್ಬೇಡಿ. ಪ್ರಮಾಣ ಮಾಡಿ ಪಾರ್ವತಿಯನ್ನು ಮದುವೆ ಆಗ್ತೀನಿ ಅಂತ ನನ್ನ ಮುಂದೆ ಪ್ರಮಾಣ ಮಾಡಿ'' ಆಯಾಸ ಹೆಚ್ಚಾಯ್ತು ಸುನಂದಳಿಗೆ. ಮುಖ ಕಪ್ಪಾಗುತ್ತ ಬಂತು, ಬಾಯಿಂದ ಸ್ವಲ್ಪ ನೊರೆ ಬಂದಿತು.

ಪಾರ್ವತಿ ಅನಾಥಳಂತೆ, ಆಶ್ರಯಹೀನಳಂತೆ, ತಬ್ಬಲಿಯಂತೆ ಬಿಕ್ಕಿ ಬಿಕ್ಕಿ ಅಳುತ್ತಿದ್ದಳು.

"ಹೇಳಿ, ಇಲ್ಲದಿದ್ದರೆ ನನ್ನ ಆತ್ಮಕ್ಕೆ ಶಾಂತಿ ಸಿಗೋದಿಲ್ಲ.'' ಪ್ರಯಾಸದಿಂದ ಕೇಳಿದಳು.

"ಪಾರ್ವತಿಯನ್ನು ಮದುವೆ ಆಗ್ತೀನಿ, ಅಯ್ಯೊ ಸುನೀ! ನನ್ನ ರಾಜಾ, ನನ್ನ ಬಿಟ್ಟು ಹೋಗಬೇಡ, ಬೇಡ ನಿನ್ನ ಬಿಟ್ಟು ನಾನಿರಲಾರೆ! ಅಯ್ಯೋ ಸುನೀ ಮಾತಾಡು ಸುನೀ ಮಾತಾಡು'' ನಿಶ್ಯಕ್ತಳಾಗಿ ನಕ್ಕಳು.

"ನಾನೆಲ್ಲೂ ಹೋಗೂದಿಲ್ಲ. ಪಾರೂ ಹೊಟ್ಟೇಲಿ ಹುಟ್ತೀನಿ. ಎಲ್ಲರಿಗೂ ಕಾಗದ ಬರೆದಿದ್ದೀನಿ. ಪಾರೂ ಪಾರಮ್ಮಾ!''

"ಅಕ್ಕಾ ಅಕ್ಕಾ ನನ್ನ ಕ್ಷಮಿಸಕ್ಕಾ. ನಿನ್ನ ಬಾಳಿಗೆ ಬೆಂಕಿಯಿಟ್ಟೆ''

"ಛೀ ಹುಚ್ಚಿ! ನಾನು ಬಾಳು ಅನುಭವಿಸಿದೆ. ಇನ್ನೇನೂ ಬೇಡ. ನೀನು ಅವರನ್ನು ಚೆನ್ನಾಗಿ ನೋಡಿಕೊ ಮಗು ನಿನ್ನದು. ಅವರು, ಮಗು ನನ್ನ ಎರಡು ಕಣ್ಣು'' ಬಹಳ ಕಷ್ಟದಿಂದ ಹೇಳಿ ಅವರಿಬ್ಬರ ಕೈಯನ್ನೂ ಸೇರಿಸಿದಳು.

"ಕಪ್ಪು ಗಂಡ ಅಲ್ವೇ ಪಾರಮ್ಮಾ?'' ನಗುತ್ತಾ ಕೇಳಿದಾಗ ಪಾರ್ವತಿ ತಡೆಯಲಾರದೆ [illegible] ಜೋರಾಗಿ ಅತ್ತಳು. ಪಾರ್ವತಿಯ ತಲೆಯ ಮೇಲೆ ಕೈಯಿಟ್ಟು ಗಂಡನ ಕಡೆ ನೋಡಿ ನಕ್ಕು ಕಣ್ಣು ಮುಚ್ಚಿದಳು. ಮುಚ್ಚಿದ ಕಣ್ಣು ತೆರೆಯಲಿಲ್ಲ.

# ರೈತರ ನೆಚ್ಚಿನ ಬೀಡಿಗಳು



ಅನೇಕ ವರ್ಷಗಳ ಅನುಭವದಿಂದ ತಯಾರು ಮಾಡಲ್ಪಟ್ಟ ಉತ್ತಮ ಬೀಡಿಗಳು. ಉಬ್ಬಸ, ಕೆಮ್ಮು ರೋಗಗಳು ಬರುವುದಿಲ್ಲ. ಉತ್ಕೃಷ್ಟ ತಂಬಾಕು ಮತ್ತು ಎಲೆಗಳಿಂದ ಪ್ರತ್ಯೇಕವಾಗಿ ರೈತ ಬಂಧುಗಳಿಗಾಗಿ ತಯಾರಿಸಲ್ಪಡುತ್ತವೆ.

ಅಧಿಕ ಉತ್ಸಾಹಕ್ಕೆ ಮತ್ತು ಇಮ್ಮಡಿ ದುಡಿಮೆಗೆ ಈ ಬೀಡಿಗಳನ್ನು ಸೇದಲೇಬೇಕು.

ಈ ದಿನವೇ ಪರೀಕ್ಷಿಸಿರಿ.

## ಅಸಲಿ ಡಬಲ್ ಸವರನ್




ಅಸಲಿ ಡಬಲ್ ಸವರನ್

## ಸವರನ್ ಬೀಡಿ ಫ್ಯಾಕ್ಟರಿ,
ಸಿ. ಬಿ., ಬಳ್ಳಾರಿ-೧.

DESAI-S. B. 6



## ನೂತನ ದೀಪಾವಳಿಯು ಸರ್ವರಿಗೂ ಲಾಭದಾಯಕವಾಗಲಿ

ARMAVEER 24-11-1965 Licence No. 30 Licensed to post without prepayment
Registered with the Registrar of Newse Pepars of India under No. 3558/57 Regd. No. BG. 39


ದೀಪಾವಳಿಯು ಸರ್ವರಿಗೂ ಸುಖದಾಯಕವಾಗಲಿ!


ಇಂದಿನ ಸಂತಸದ ಸಮಯದಲ್ಲಿ
ನಿಮ್ಮ ಮನೆ ಆಫೀಸುಗಳನ್ನು
ಪ್ರಭಾತ ಉತ್ಪಾದನೆಗಳಿಂದ ಅಲಂಕರಿಸಿರಿ






ನಮ್ಮ ಉತ್ಪಾದನೆಗಳು:
ಶ್ರೇಷ್ಠ ತರಗತಿಯ ಉಕ್ಕಿನ
★ ತಿಜೋರಿ ★ ಕಪಾಟು
★ ಕ್ಯಾಶಬಾಕ್ಸ್
ಖೋಲಿಯ ಮಜಬೂತ ಬಾಗಿಲುಗಳು
( ಸ್ಟ್ರಾಂಗ ರೂಮು ಡೋರ್ಸ್ )

ಎಲ್ಲ ನಮೂನೆಯ ಕೀಲಿ, ರೋಲಿಂಗ ಶಟರ್ಸ್, ಫರ್ನಿಚರ ಇತ್ಯಾದಿಗಳು. . . . . . . . . . .




# Prabhat & Co.



# ಪ್ರಭಾತ ಮತ್ತು ಕಂಪನಿ

ಫ್ಯಾಕ್ಟರಿ ಹಾಗೂ ಆಫೀಸ:
ಜಯಚಾಮರಾಜ ನಗರ
ಫೋನ: 3303 ಹುಬ್ಬಳ್ಳಿ

ಶೋರೂಮು:
ಸ್ಟೇಶನ್ ರೋಡ
ಹುಬ್ಬಳ್ಳಿ

ಫ್ಯಾಕ್ಟರಿ:
ಇಂಡಸ್ಟ್ರಿಯಲ್ ಇಸ್ಟೇಟ
ಫೋನ: 2514 ಹುಬ್ಬಳ್ಳಿ